# ರೂಪ ರಾಶಿಗಳ ಸಂತೆ

ಮತ್ತು

# ಇತರ ಲಲಿತ ಪ್ರಬಂಧಗಳು



ಡಾ॥ ಸಬಿತಾ ಮರಕಿಣಿ

# ರೂಪ ರಾಶಿಗಳ ಸಂತೆ

ಮತ್ತು

# ಇತರ ಲಲಿತ ಪ್ರಬಂಧಗಳು

ಡಾ॥ ಎಂ.ಬಿ.ಮರಕಿಣಿ

ಪ್ರಕಾಶಕರು
ಜಾಹ್ನವಿ ಪ್ರಕಾಶನ,
ಗಾಂಧಿನಗರ, ಮಂಡ್ಯ

# ROOPARASHIGALA SANTE

A collection of articles on Kannada literature and Tulu Gods.

by Dr.M.B Marakini at 272/15, Adarsha Nagar, Arisinakunte Post,
Nelamangala Taluk-562 123.

**PUBLISHED BY- Janhavi Prakashana,** # **2679**.3rd Cross,
Gandhi Nagar, Mandya.



First impression : 2013

Page : 7+394=399

Price : Rs. 270.00

70 GSM N.S. Maplitho - 1/8 Demy

ರೂಪ ರಾಶಿಗಳ ಸಂತೆ ಮತ್ತು ಇತರ ಲಲಿತ ಪ್ರಬಂಧಗಳು

ಲೇಖಕರು : ಡಾ॥ ಎಂ.ಬಿ.ಮರಕಿಣಿ

ಪ್ರಥಮ ಮುದ್ರಣ : 2013

ಪುಟ ಸಂಖ್ಯೆ : 7+394=399

ಬೆಲೆ : 270.00



ಮುಖಪುಟ : ಹರೀಶ್ ಕುಮಾರ

Printed at :
ಶ್ರೀರಾಮ ಪ್ರಿಂಟರ್ಸ್
ಮಂಡ್ಯ

# ಪರಿವಿಡಿ

## ಅಧ್ಯಾಯ– I : ವಿಷ ಪರಿವಾರ

# ವಿಷದ್ರವ್ಯಗಳ ವಿಶಾಲ ಪರಿವಾರ

ವಿಷಚಿಕಿತ್ಸೆ ಎಂದರೆ ತಕ್ಷಣ ಕಣ್ಣಮುಂದೆ ಹಾಯ್ದುಹೋಗುವ ಚಿತ್ರವೆಂದರೆ ಹೆಡೆ ಎತ್ತಿ ಕಡಿಯಲು ಸಿದ್ಧವಾಗಿರುವ ನಾಗರಹಾವಿನ ಚಿತ್ರ. ನಾಗರಹಾವು ಒಂದು ವಿಷಜಂತು. ಕಾಳಿಂಗ ಸರ್ಪ, ಮಂಡಲಹಾವು, ಕಟ್ಟು ಹಾವುಗಳು ಕೂಡ ವಿಷ ಸರ್ಪಗಳೇ. ಚೇಳು, ಕರಿ ಜೇಡ, ಕಣಜದ ಹುಳಗಳು ಕೂಡ ಕುಟುಕಿದರೆ ವಿಷದ ಅಪಾಯವನ್ನುಂಟುಮಾಡುತ್ತವೆ.

ಹಲವಾರು ಮನೆಮದ್ದಿನ ಗಿಡಮೂಲಿಕೆಗಳಲ್ಲಿ ಕೂಡ ವಿಷಸತ್ವವಿದೆ. ದತ್ತೂರದ ಬೀಜ, ಎಕ್ಕೆಗಿಡದ ಹಾಲು, ಕೋಳಿ ಕುಟುಮ ಗಡ್ಡೆ, ನಸುಗುನ್ನಿಯ ರೋಮಗಳು– ಹೀಗೆ ಹಲವಾರು ಔಷಧೀಯ ಸಸ್ಯಗಳಲ್ಲಿ ಕೂಡ ವಿಷದ ಅಂಶವಿದೆ ಎಂಬುದು ತಿಳಿದ ವಿಚಾರವೇ. ಕೃಷಿ ಸಂರಕ್ಷಣೆಗಾಗಿ ಬಳಸುವ ನಾನಾ ಬಗೆಯ ಕೀಟನಾಶಕಗಳು, ಕೈಗಾರಿಕೆಯಲ್ಲಿ ಉಪಯೋಗಿಸುವ ಲೋಹಗಳು, ಖನಿಜಗಳು, ರಾಸಾಯನಿಗಳು ಕೂಡ ವಿಷ ಪರಿಣಾಮಗಳನ್ನು ಉಂಟುಮಾಡುತ್ತವೆ. ಅನಿಲ ವಿಷ, ಆಹಾರ ವಿಷ, ಮದಕಾರಕ ವಿಷ, ಔಷಧಿ ವಿಷ– ಹೇಗೆ ವಿಷದ ಅಂಶವಿರುವ ದ್ರವ್ಯಗಳನ್ನು ಬರೆಯುತ್ತ ಹೋದರೆ ಅದು ಸುದೀರ್ಘವಾದ ಪಟ್ಟಿಯೇ ಆಗುತ್ತದೆ. ತಾತ್ಪರ್ಯವಿಷ್ಟೇ: ವಿಷಚಿಕಿತ್ಸೆ ಎಂದರೆ ಹಾವು ಚೇಳುಗಳಂತಹ ವಿಷಜಂತುಗಳಿಂದ ಉಂಟಾಗುವ ಅಪಾಯಕಾರಿ ಪರಿಣಾಮದ ಸೂಕ್ತ ನಿರ್ವಹಣೆ– ಔಷಧೋಪಚಾರ ಎಂದಷ್ಟೇ ಹೇಳುವುದು ಸಾಧ್ಯವಿಲ್ಲ. ವಿಷ ದ್ರವ್ಯಗಳು ಹಲವಾರು. ವಿಷ ಪರಿಣಾಮಗಳು ಅನೇಕಾನೇಕ. ಅವುಗಳನ್ನು ಸರಿಯಾಗಿ ನಿಭಾಯಿಸಿಕೊಳ್ಳದಿದ್ದರೆ ಅಪಾಯವೂ, ಆರೋಗ್ಯ ಹಾನಿಯೂ ಉಂಟಾಗಬಹುದು.

ವಿಷ ಎಂದಕೂಡಲೇ ಅಂಜಬೇಕಾಗಿಲ್ಲ. ಅವು ಅಪಾಯವನ್ನು ತರುವ ದ್ರವ್ಯಗಳಾಗಿದ್ದರೂ ಸೂಕ್ತವಾದ ಮುನ್ನೆಚ್ಚರಿಕೆಯನ್ನು ವಹಿಸಿದರೆ ಅಪಾಯವನ್ನು ತಡೆಗಟ್ಟಬಹುದು. ಆಕಸ್ಮಿಕ ಅಪಘಾತ ಸಂಭವಿಸಿದರೂ ಸರಿಯಾದ ಚಿಕಿತ್ಸೆ, ರೋಗೋಪಚಾರಗಳಿಂದ ತೊಂದರೆಗಳನ್ನು ಗುಣಪಡಿಸಬಹುದು. ಇದಕ್ಕೆ ಬೇಕಾದ

ಪ್ರಮುಖ ಅಂಶವೆಂದರೆ ವಿವಿಧ ವಿಷ ದ್ರವ್ಯಗಳ ಬಗ್ಗೆ ಸೂಕ್ತ ಮಾಹಿತಿ; ಅವುಗಳಿಂದ ಉಂಟಾಗಬಹುದಾದ ಅಪಾಯಗಳ ಬಗ್ಗೆ ತಿಳುವಳಿಕೆ; ಅಪಾಯ ಸಂಭವಿಸಿದ ತಕ್ಷಣ ನೀಡಬೇಕಾದ ಪ್ರಥಮ ಚಿಕಿತ್ಸೆ ಮತ್ತು ವೈದ್ಯ ಸಹಾಯ, ಶುಶ್ರೂಷೆಗಳ ಬಗ್ಗೆ ಪರಿಜ್ಞಾನ.

ಈ ವಿಷಯಗಳನ್ನು ತಿಳಿದುಕೊಂಡು ಎಚ್ಚರಿಕೆಯಿಂದ ಇದ್ದರೆ ವಿಷ ಅಪಘಾತ ಅಪಾಯಗಳಿಗೆ ಅಂಜುವುದು ಬೇಕಾಗಿಲ್ಲ. ಪರಿಹಾರವಿಲ್ಲದ ವಿಷ ಅಪಘಾತಗಳಿಲ್ಲ. ಉಪಚಾರವಿಲ್ಲದ ತೊಂದರೆ ಇಲ್ಲ. ಸೂಕ್ತ ತಿಳುವಳಿಕೆ, ಅಗತ್ಯವಾದ ಮುನ್ನಚ್ಚರಿಕೆ, ಅಪಘಾತದ ಪ್ರಥಮ ಚಿಕಿತ್ಸೆ ಮತ್ತು ವೈದ್ಯ ಸಹಾಯ ಚಿಕಿತ್ಸೆ, ಉಪಚಾರಗಳ ಬಗ್ಗೆ ಶ್ರದ್ಧೆವಹಿಸಿದರೆ ಅಂಜಿಕೆ ಇಲ್ಲ. ತಾತ್ಸಾರ ಮಾಡಿದರೆ ಅಪಾಯ ಸಂಭವನೀಯ ತಕ್ಕ ಮುನ್ನೆಚ್ಚರಿಕೆ ಹಾಗೂ ಸೂಕ್ತ ಚಿಕಿತ್ಸೆಯಿಂದ ಅಪಾಯದಿಂದ ವಿಮುಕ್ತಿ ಎಂಬುದು ಖಚಿತ.

ಪುರಾತನ ಕಾಲದಿಂದಲೂ ನಮ್ಮ ದೇಶದಲ್ಲಿ ವಿಷ ಚಿಕಿತ್ಸೆಯ ಬಗ್ಗೆ ಸರಿಯಾದ ತಿಳುವಳಿಕೆಯಿತ್ತು. 'ಕಾಶ್ಯಪ ಸಂಹಿತೆ' ಎಂಬ ಪ್ರಾಚೀನ ಗ್ರಂಥದಲ್ಲಿ ವಿವಿಧ ವಿಷಗಳ ವಿಚಾರವಾಗಿಯೂ, ಅವುಗಳಿಂದ ಉಂಟಾಗುವ ಅಪಾಯ ಹಾಗೂ ಅವುಗಳ ಚಿಕಿತ್ಸೆಗಳ ಬಗ್ಗೆ ವಿಸ್ತೃತವಾದ ಮಾಹಿತಿಗಳಿವೆ. ಚರಕಾಚಾರ್ಯರು, ಸುಶ್ರುತಾಚಾರ್ಯರು, ವಾಗ್ಭಟ ಆಚಾರ್ಯರು ಮೊದಲಾದ ಆಯುರ್ವೇದ ಗ್ರಂಥಕಾರರು ಕೂಟ 'ವಿಷ'ಗಳ ವಿಚಾರವಾಗಿ ತಮ್ಮ ಗ್ರಂಥಗಳಲ್ಲಿ ಬರೆದಿದ್ದಾರೆ. ಇವರಿಗೆ ಭಿಷಗಾಚಾರ್ಯರೆಂಬ ಅನ್ವರ್ಥನಾಮವೇ ಸರಿ.

ಇತಿಹಾಸ ಕಾಲದಲ್ಲಿ ಜರುಗಿದ ಒಂದು ಘಟನೆ ಉಲ್ಲೇಖಾರ್ಹ. ಅಲೆಗ್ಸಾಂಡರ್ ಭಾರತವನ್ನು ಆಕ್ರಮಿಸಲು ದೊಡ್ಡಸೇನೆಯೊಡನೆ ಬಂದಾಗ, ಪುರುಷೋತ್ತಮ ಮಹಾರಾಜನು ಅವನನ್ನು ಎದುರಿಸಿ ಯುದ್ಧ ಮಾಡಲು ಸಿದ್ಧನಾದನು. ಆ ಹೊತ್ತಿನಲ್ಲಿ ಅಲೆಗ್ಸಾಂಡರನ ಸೇನೆಯ ಪ್ರಮುಖ ಅಧಿಕಾರಿಯೊಬ್ಬನಿಗೆ ಹಾವು ಕಡಿದು ಪ್ರಾಣಾಂತಿಕ ಅಪಾಯವುಂಟಾಯಿತು. ಸೇನೆಯ ವೈದ್ಯಕೀಯ ಉಪಚಾರಗಳೆಲ್ಲ ವಿಫಲವಾದವು. ಆಗ ಅಲೆಗ್ಸಾಂಡರನು ಸೇನೆಯ ಪರವಾಗಿ ರಾಯಭಾರಿಯೊಬ್ಬನನ್ನು ರಾಜಾ ಪುರುಷೋತ್ತಮನ ಅಸ್ಥಾನಕ್ಕೆ ಕಳುಹಿಸಿ, ವಿಷ ಚಿಕಿತ್ಸಾ ತಜ್ಞರನ್ನು ಕಳುಹಿಸಿ ತನ್ನ ಸೇನಾಧಿಕಾರಿಯ ಪ್ರಾಣವನ್ನು ಉಳಿಸಲು ವಿನಂತಿಸಿದನು. ಪ್ರಾಣಿದಯಾಪರತೆಯಿಂದಲೂ, ಮಾನವೀಯ ಕಾರುಣ್ಯದಿಂದಲೂ, ವೈರಿ ಸೇನೆಯಲ್ಲಿದ್ದರೂ, ಮಾನವನೊಬ್ಬನ ಜೀವ ರಕ್ಷಣೆಗಾಗಿ ಪ್ರಾರ್ಥಿಸಿದಾಗ ನಿರಾಕರಿಸಲಾಗದೆ ತನ್ನ ಭಿಷಗ್ರತ್ನ ವೈದ್ಯನನ್ನು ಅಲ್ಲಿಗೆ ಕಳುಹಿಸಿಕೊಟ್ಟು, ಚಿಕಿತ್ಸೆಯ ಮೂಲಕ ಪ್ರಾಣ ಉಳಿಸಿ, ವಿಶ್ವ ಮಾನವತ್ವವನ್ನು ಆಚರಣೆಯಲ್ಲಿ ತೋರಿದನೆಂಬುದು

ಗ್ರೀಕ್ ದೇಶದ ದಾಖಲೆಗಳಲ್ಲಿವೆ. ಇದು ಭಾರತೀಯ ಚಿಕಿತ್ಸಾ ತಜ್ಞರ ಹಿರಿಮೆಯನ್ನೂ, ಲೋಕಹಿತ ಮನೋಧರ್ಮವನ್ನೂ ಸಾರುತ್ತದೆ.

ಸಮುದ್ರ ಮಥನ ಕಾಲದಲ್ಲಿ ಸಾಗರಿಂದ ಮೇಲೆದ್ದು ಬಂದ ಹಾಲಾಹಲವೆಂಬ ವಿಷವು ಜಗತ್ತಿನ ಜೀವಕೋಟಿಗಳಿಗೂ, ಜೀವಜಂತುಗಳಿಗೂ, ಸಸ್ಯಾದಿಗಳಿಗೂ ಅಪಾಯವನ್ನುಂಟು ಮಾಡತೊಡಗಿದಾಗ, ಪರಮೇಶ್ವರನು ಆ ಹಾಲಾಹಲವನ್ನು ಕುಡಿದು ತನ್ನ ಗಂಟಲಲ್ಲೇ ಉಳಿಸಿಕೊಂಡು ವಿಷಕಂಠ, ನಂಜುಂಡೇಶ್ವರನೆಂಬ ನಾಮಾಂಕಿತದಿಂದ ಜಗದ್ರಕ್ಷಕನಾದನೆಂಬ ಕಥೆಯನ್ನು ಕೆಲವರು ಒಪ್ಪಿಕೊಳ್ಳುವುದಿಲ್ಲ. ಆದರೆ ಈ ಆಖ್ಯಾಯಿಕೆ ಹಿಂದಿರುವ ಅರ್ಥ, ಪಲವಾರು ವಿಚಾರಗಳನ್ನು ವಿಶ್ಲೇಷಿಸಿದಾಗ 'ವಿಷ'ದ ವಿಸ್ತಾರ, ಮೂಲ, ಪರಿಹಾರಗಳ ಬಗ್ಗೆ ಅನೇಕಾನೇಕ ವಿಚಾರಗಳ ಎಳೆಗಳು ದೊರಕುತ್ತವೆ ಎಂಬುದನ್ನು ಅಲ್ಲಗಳೆಯುವುದು ಸಾಧ್ಯವಿಲ್ಲವಷ್ಟೇ! ಇರಲಿ.

13–14ನೇ ಶತಮಾನದಲ್ಲಿ ಮಂಗರಸ ಕವಿಯು ಒಂದು ಚಂಪೂ ಕಾವ್ಯವನ್ನು ರಚಿಸಿದ. ಇದು ಕನ್ನಡದ ಅಮೂಲ್ಯ ಗ್ರಂಥಗಳಲ್ಲಿ ಒಂದು. ಇದರ ಹೆಸರು ಖಗೇಂದ್ರಮಣಿದರ್ಪಣ ಎಂದು. ವಿವಿಧ ವಿಷ ಪದಾರ್ಥಗಳ ವಿಚಾರವಾಗಿ ಸಮಗ್ರವಾಗಿ ವಿವರಿಸುವ ಹಾಗೂ ಚಿಕಿತ್ಸೆಗಳನ್ನು ತಿಳಿಸುವ ವಿಶಿಷ್ಟ ಗ್ರಂಥವಿದು. 'ಸರ್ವ ಜನೋಪಕಾರ'ವೆಂದು ತನ್ನ ಕೃತಿಯನ್ನು ಕವಿ ಮಂಗರಸನು ವರ್ಣಿಸಿದ್ದು ಅತಿಶಯೋಕ್ತಿಯೇನಲ್ಲ. ಸರ್ವಜನೋಪಕಾರಮೆನ ಈ ಕೃತಿಯಿಂ ರಚಿಸಿದೆನು ಎಂದು ಧೈರ್ಯದಿಂದ ಹೇಳಿದ್ದು ಸತ್ಯವೇ.

ನಮ್ಮದೇಶದಲ್ಲಿ ಪಾರಂಪರಿಕವಾಗಿ ವಿಷಚಿಕಿತ್ಸಾ ವಿಚಾರವಾಗಿ ವಿಶೇಷ ಪರಿಣತಿಯನ್ನು ಹೊಂದಿದ ಕೆಲವು ಜನರಿದ್ದರು. ಅವರಿಗೆ ನಂಜು ಜೋಗಿಗಳೆಂಬ ಹೆಸರಿತ್ತು. ವಿವಿಧ ವಿಷಗಳಿಗೆ ಸಮರ್ಪಕವಾದ ಚಿಕಿತ್ಸೆ ನೀಡಿ, ಪ್ರಾಣ ರಕ್ಷಿಸುತ್ತಿದ್ದ ಈ ನಂಜು ಜೋಗಿಗಳ ಸೇವೆ ಸಂಪೂರ್ಣ ಉಚಿತವಾಗಿರುತ್ತಿತ್ತು. ರಾಜಮಹಾರಾಜರು ಅರಮನೆಯ ಬೊಕ್ಕಸದಿಂದ, ಶ್ರೀಮಂತರ ದಾನಧರ್ಮಗಳಿಂದ ಇವರಿಗೆ ಜೀವನ ನಿರ್ವಹಣೆಗೆ ಅಗತ್ಯವಾದ ನೆರವು ದೊರಕುತ್ತಿತ್ತು. ಕಾಲಾನುಕ್ರಮದಲ್ಲಿ ಈ ವಿಷ ಚಿಕಿತ್ಸಕರ ಪರಂಪರೆ ಕ್ಷೀಣಿಸುತ್ತಾ ಬಂದು, ಆಲಕ್ಷ್ಯಕ್ಕೂ ಒಳಗಾಗತೊಡಗಿತು. ಅದು ತೀರ ಕನಿಷ್ಠ ಹಂತಕ್ಕೆ ಈಗ ಸರಿದಿದೆ ಎಂದು ಹೇಳಬಹುದು. ಇದಕ್ಕೆ ಕಾರಣವನ್ನು ವಿಶ್ಲೇಷಿಸುವುದು ಇಲ್ಲಿನ ಉದ್ದೇಶವಲ್ಲ. ಆದರೂ ವಿಷ ಚಿಕಿತ್ಸಾ ತತ್ವವನ್ನು ಗೌಪ್ಯವಾಗಿ ಇಟ್ಟುಕೊಂಡಿದ್ದು. ಜನಸಾಮಾನ್ಯರಿಗೆ ವಿಷ ಚಿಕಿತ್ಸಾ ವಿಚಾರವಾಗಿ ಹೆಚ್ಚಿನ ವಿಚಾರ ತಿಳುವಳಿಕೆ ಇಲ್ಲದೆ ಇರುವುದೂ ಕಾರಣವೆನ್ನಲು ಅಡ್ಡಿಯಿಲ್ಲ. ಈಗಲೂ ನಮ್ಮಲ್ಲಿ ವಿಷದ ಬಗ್ಗೆ ಭಯವಿದೆ, ಅಂಜಿಕೆಯಿದೆ. ಆದರೆ

ಸರಿಯಾದ ವಿಚಾರಗಳು ಪ್ರಚಾರದಲಿಲ್ಲ. ಹಲವರಿಗೆ ಅಜ್ಞಾನ, ಕೆಲವರಿಗೆ ಅಸಡ್ಡೆ; ಇನ್ನೂ ಕೆಲವರಿಗೆ ಅರ್ಥಂಬರ್ಥ ತಿಳುವಳಿಕೆ– ಹೀಗೆ ಅಲ್ಪ ವಿದ್ಯೆಯ ಪರಿಣಾಮವಾಗಿ ಹೆದರಿಕೆಯು ಧಾರಾಳವಾಗಿ ಪ್ರಚಲಿತವಿದೆ.

'ವಿಷ'ಕ್ಕೆ ಸೊರ್ಕು (ಸೊಕ್ಕು), ಮದ, ನೋವುಂಟುಮಾಡುವಂಥಾದ್ದು ಎಂಬ ಅರ್ಥದ ಜತೆಗೆ ದೈಹಿಕ– ಮಾನಸಿಕ ನೆಮ್ಮದಿಯನ್ನು ಹಾಳುಮಾಡುವಂಥಾದ್ದು ಎಂಬ ಅರ್ಥವನ್ನು ಒಪ್ಪಿಕೊಳ್ಳಬಹುದು. ನಾನಾ ಬಗೆಯ ವಿಷಗಳ ಸಂಕ್ಷಿಪ್ತ ಪರಿಚಯ, ವಿಷ ಅಪಘಾತದಿಂದ ಉಂಟಾಗುವ ದುಷ್ಪರಿಣಾಮಗಳು, ಅವುಗಳ ಲಕ್ಷಣಗಳು, ಚಿಕಿತ್ಸಾ ವಿಚಾರಾದಿಗಳನ್ನು ಸಂಕ್ಷಿಪ್ತವಾಗಿ ಹೇಳಲು ಇಲ್ಲಿ ಪ್ರಯತ್ನಿಸಲಾಗಿದೆ. ವಿಷ ಅಪಘಾತವನ್ನು ತಡೆಗಟ್ಟುವ ಬಗ್ಗೆ ಕೂಡ ತಿಳಿಸಲಾಗಿದೆ. ಅಪಘಾತ ಸಂಭವಿಸಿದಾಗ ತಕ್ಷಣ ಕೈಗೊಳ್ಳಬೇಕಾದ ಪ್ರಥಮ ಚಿಕಿತ್ಸೆ, ಅನಂತ ಕ್ಷಿಪ್ರದಲ್ಲಿ ಒದಗಿಸಬೇಕಾದ ವೈದ್ಯ ಸಹಾಯದ ಬಗೆಗೆ ಕೂಡ ಮಾಹಿತಿ ಕೊಡಲಾಗಿದೆ. ಇಲ್ಲಿ ಒಂದೆರಡು ವಿಚಾರಗಳನ್ನು ಖಚಿತವಾಗಿ ಹೇಳಬೇಕಾಗಿದೆ.

1. ವಿಷದ ಅಪಾಯದ ಬಗ್ಗೆ ತಿಳುವಳಿಕೆ ಹೊಂದಿದ್ದು ಅಪಾಯ ಉಂಟಾಗದಂತೆ ಮುನ್ನೆಚ್ಚರಿಕೆ ವಹಿಸುವುದು ಪ್ರಾಥಮಿಕ ಹೊಣೆಗಾರಿಕೆಯ ಕೆಲಸ.

2. ಅಕಸ್ಮಾತ್ ವಿಷ ಅಪಘಾತ ಸಂಭವಿಸಿದಲ್ಲಿ ರೋಗಿಯನ್ನು ತಕ್ಷಣ ವಿಷದ ಸ್ಥಳದಿಂದ ಹೊರಗೊಯ್ದು ಮೊದಲ ತಿರುವು (ಪ್ರಥಮೋಪಚಾರ) ನಡೆಸಬೇಕು. (ಇದನ್ನು ಪ್ರಥಮ ಚಿಕಿತ್ಸೆ ಎನ್ನುತ್ತಾರೆ. ಆದರೆ ಇದು ಔಷಧೋಪಚಾರದ ಚಿಕಿತ್ಸೆ ಅಲ್ಲ) ವಿಷ ಅಪಘಾತಕ್ಕೊಳಗಾದ ವ್ಯಕ್ತಿಯನ್ನು ಸೂಕ್ತ ಚಿಕಿತ್ಸಾ ಸ್ಥಳಕ್ಕೆ/ವೈದ್ಯ ಸಹಾಯಕ್ಕೆ ತಲುಪುವ ಕಾಲದಲ್ಲಿ ಅಪಾಯವು ಹೆಚ್ಚಾಗದಂತೆ ಹಾಗೂ ರೋಗಿಯ ಬಲವು ತಗ್ಗದಂತೆಯೂ ನೀಡುವ ಸುಲಭ ಉಪಚಾರಗಳಿಗೆ ಪ್ರಥಮ ಚಿಕಿತ್ಸೆ ಎಂದು ಹೆಸರು.

ರೋಗಿಗೆ ಧೈರ್ಯ ಕೊಡುವುದು ಪ್ರಮುಖವಾದ ಪ್ರಥಮ ಚಿಕಿತ್ಸೆ.

* * *

## ಅಧ್ಯಾಯ- II

# ಮನೆಮನೆಗಳ ದಿನಬಳಕೆಯ ವಿಷದ್ರವ್ಯಗಳು

ಮನೆಯ ಸ್ವಚ್ಛತೆಯನ್ನು ಕಾಪಾಡಲು ಬಳಸುವ ಫಿನಾಯಿಲ್, ಚಿಕ್ಕಪುಟ್ಟ ಗಾಯಗಳಿಗೆ ಪಟ್ಟಿ ಹಾಕುವ ಟಿಂಚರ್ ಅಯೋಡಿನ್, ಜಿರಳೆಗಳನ್ನು ದೂರವಿಡುವ ಡಾಂಬರ್ ಗೋಲಿ, ಆರತಿ ಕರ್ಪೂರ ಹೀಗೆ ಪ್ರತಿನಿತ್ಯ ನಾವು ಬಳಸುವ ವಿವಿಧ ಗೃಹೋಪಯೋಗಿ ವಸ್ತುಗಳಲ್ಲಿ ಅಡಗಿರುವ 'ವಿಷ' ಸತ್ವದ ಬಗೆಗೆ ತಿಳಿದುಕೊಳ್ಳಬೇಕಲ್ಲವೆ? ಇವುಗಳು ಆರೋಗ್ಯ ರಕ್ಷಣೆಗೆ ಅಗತ್ಯ ಸಾಧನಗಳಾದರೂ ಅಜಾಗರೂಕತೆಯಿಂದ ಬಳಸಿದರೆ ಅಪಾಯವನ್ನು ಉಂಟುಮಾಡಬಹುದು. ಮಕ್ಕಳ ಕೈಗೆ ದೊರಕಿದರಂತೂ (ಮಕ್ಕಳಾಟಿಕೆಯಂತೆ ಬಳಸಿದಾಗ) ಅಪಾಯ ಕಟ್ಟಿಟ್ಟದ್ದು. ತಿಳಿದಿರಲಿ. ಮುನ್ನೆಚ್ಚರಿಕೆ ವಹಿಸಿದರೆ ಭಯವೆಂಬುದೇ ಇಲ್ಲ.

ಮನೆ ಮನೆಗಳ ದಿನಬಳಕೆಯ ವಿಷವಸ್ತುಗಳು

ಟಿಂಚರ್ ಅಯೋಡಿನ್

ಫಿನಾಯಿಲ್

ಡಾಂಬರು ಗೋಲಿ

ಸೀಮೆಎಣ್ಣೆ

ಬೋರಿಕ್ ಪೌಡರ್

ಪೊಟಾಸಿಯಂ ಪರಮಾಂಗನೇಟ್

ಕರ್ಪೂರ (ಆರತಿ ಕರ್ಪೂರ)

ಡಿಡಿಟಿ

ಉಪ್ಪು

ಗಾಜಿನ ಚೂರು

## ಪ್ರಾಥಮಿಕ ಚಿಕಿತ್ಸೆಗೆ ಪಾಲುಗಾರ,

## ಮಕ್ಕಳ ಕೈಯಲ್ಲಿ ಆತಂಕಕಾರಿ: ಟಿಂಚರ್ ಅಯೋಡಿನ್

ಸಂಜೆಯ ಹೊಂಬಿಸಿಲು ನವಿರಾಗಿ ಬಿದ್ದಿತ್ತು. ಮಕ್ಕಳು ಹೊರಬಯಲಲ್ಲಿ ಚೆಂಡಾಟವಾಡುತ್ತಿದ್ದರು. ಒಕ್ಕಲಗಿತ್ತಿ ನಿಂಗಿ ಸಾಹೇಬರ ಚಿಕ್ಕ ಮಗುವನ್ನು ಬಿಸಿಲಾಡಿಸುತ್ತ ಕುಳಿತಿದ್ದಳು. ಎಲೆ ಅಡಿಕೆ ಸಂಚಿ ಬಿಡಿಸಿ, ಒಂದು ಈಡು (ಚಿಟಿಕೆ) ಹೊಗೆಸೊಪ್ಪು ಸುಣ್ಣ ಹಚ್ಚಿಕೊಂಡು ಬಾಯಿಗೆ ತುರುಕಿಕೊಳ್ಳಬೇಕು; ಅಷ್ಟರಲ್ಲಿ ಮಗು ಅರುಣಾ ಕಿಟ್ಟನೆ ಕಿರುಚಿಕೊಂಡಿತು. ಮಕ್ಕಳು ಆಡಿಕೊಳ್ಳುತ್ತಿದ್ದ ಚೆಂಡನ್ನು ಹಿಡಿದುಕೊಳ್ಳಲು ಅಂಬೆಗಾಲಿನ ಮಗು ತಪ್ಪು ಹೆಜ್ಜೆ ಹಾಕುತ್ತ ಹೊರಟು, ಜಾರಿಬಿದ್ದು ಮಂಡಿ ಕಿತ್ತುಹೋಗಿತ್ತು ತುಸು ರಕ್ತಸೋರಲೂ ಪ್ರಾರಂಭವಾಗಿತ್ತು.

ಒಂದೇ ಉಸಿರಿಗೆ ಹಾರಿ ಮಗುವನ್ನು ಎತ್ತಿಕೊಂಡು ಮನೆಯೊಳಗೆ ಧಾವಿಸಿದಳು ನಿಂಗಿ. ಅಮ್ಮಾವ್ರ ಕಣ್ಣಿಗೆ ಬಿದ್ದರೆ ಬೈಗಳು ಕಟ್ಟಿಟ್ಟದ್ದೆಂಬ ಭಯವೊಂದೆಡೆ; ರಕ್ತ ಒಸರುವುದನ್ನು ನಿಲ್ಲಿಸಲು ಆದಷ್ಟು ಬೇಗನೆ ಪ್ರಯತ್ನಿಸಬೇಕೆನ್ನುವ ತವಕ ಇನ್ನೊಂಡೆಡೆ.

**ಸೀಸೆ ಉರುಳಿತು**

ಕಪಾಟಿನಲ್ಲಿದ್ದ ಅಯೋಡಿನ್ ಸೀಸೆಯನ್ನು ತಂದು ಮುಚ್ಚಳ ತೆಗೆದು ಗಾಯಕ್ಕೆ ಲೇಪಿಸಬೇಕೆಂದರಡ–ಹತ್ತಿಸಿಗಲಿಲ್ಲ. ದೇವರ ಮನೆಯಲ್ಲಿ ಹೂಬತ್ತಿ ಮಾಡಲು ಹತ್ತಿ ಇದ್ದದ್ದು ಅವಳಿಗೆ ಗೊತ್ತಿತ್ತು. ಅದರಿಂದ ಒಂದಿಷ್ಟು ಮುಡಿ ಹತ್ತಿಯನ್ನು ತರಲೆಂದು ಮಗು ಅರುಣಾಳನ್ನೂ ಔಷಧಿ ಸೀಸೆಯನ್ನೂ ಅಲ್ಲೇ ಬಿಟ್ಟು ಒಂದು ಕ್ಷಣ ಅತ್ತ ಹೋದಳು. ಮರುಗಳಿಗೆಯಲ್ಲಿ ಹಿಂಜಿದ ಹತ್ತಿ ಹಿಡಿದುಕೊಂಡು ಬಂದು ನೋಡುವಾಗ ಅರುಣಾ ಅಯೋಡಿಸ್ ಸೀಸೆಯನ್ನು ಉರುಳಿಸಿದ್ದಳು, ಮಾತ್ರವಲ್ಲದೆ ನೆಲದ ಮೇಲೆ ಚೆಲ್ಲಿದ ಔಷಧಿಯಲ್ಲಿ ಬೆರಳದ್ದಿ ಚೀಪುತ್ತಿತ್ತು ಆ ಮಗು!

"ಛೀ! ಇಸ ಕಣಮ್ಮಾ ತಾಯಿ– ಹಾಗಲ್ಲ ತಿನ್‌ಬಾರದವ" ಎಂದು ಮಗುವನ್ನೆತ್ತಿ ದೂರ ಕೂಡಿಸಿ, ನೆಲಕ್ಕೆ ಬಿದ್ದಿದ್ದ ಸೀಸೆಯನ್ನೆತ್ತಿಕೊಂಡು ಚೆಲ್ಲಿದ

ಔಷಧಿಯನ್ನು ಒಳಿಯಲು ಪ್ರಯತ್ನ ನಡೆಸುತ್ತಿದ್ದಂತೆಯೇ ಮಗು ಅರುಣಾ ಅಯೋಡಿನ್ ಹತ್ತಿದ್ದ ಕೈಯಿಂದ ಕಣ್ಣು ತಿಕ್ಕಿಕೊಂಡು ಗಟ್ಟಿಯಾಗಿ ಅಳತೊಡಗಿದಳು.

ಅಷ್ಟು ಹೊತ್ತಿಗೆ ದೊಡ್ಡವರು ಯಾರೋ ಬಂದರು. ಮಗುವನ್ನು ನೋಡಿ ಮೊದಲು ತಣ್ಣೀರಿನಿಂದ ಕಣ್ಣು ತೊಳೆದು ಪ್ರಥಮ ಚಿಕಿತ್ಸೆ ನಡೆಸಿ, ಡಾಕ್ಟರರಿಗೆ ಹೇಳಿ ಹಳುಹಿಸಿ, ಆಗಲಿದ್ದ ಮಹಾದುರಂತವನ್ನು ತಪ್ಪಿಸಿದರು.

ಟಿಂಚರ್ ಅಯೊಡಿನ್ ಒಂದು ಉಪಯುಕ್ತವಾದ ಮನೆಮದ್ದು. ಎಲ್ಲರ ಮನೆಗಳಲ್ಲಿಯೂ ಇದ್ದೇ ಇರುತ್ತದೆ. ಗಾಯದ ರಕ್ತ ಹೆಪ್ಪುಗಟ್ಟುವಂತೆ ಮಾಡಲು ಇದೊಂದು ರಾಮಬಾಣದಂಥ ಔಷಧಿ. ಗೂರಲು ಕೆಮ್ಮಿನ ಚಿಕಿತ್ಸೆಯಲ್ಲಿಯೂ ಅಯೋಡಿನ್ ಸತ್ವನ್ನು ಬಳಸುತ್ತಾರೆ. ದೇಹದ ಅಂಗಾಂಗಗಳ ಬೆಳವಣಿಗೆಯು ಪ್ರಮಾಣಬದ್ಧವಾಗಿ ಇರುವಂತೆ ನೋಡಿಕೊಳ್ಳುವ ಕಾರಣಕ್ಕೆ ನಮ್ಮ ಶರೀರದಲ್ಲಿಯೇ ಉತ್ಪನ್ನವಾಗುವ ಅಯೋಡಿನ್ ಎಂಬ ಸಂಗತಿ ಅನೇಕರಿಗೆ ತಿಳಿದಿರಲಿಕ್ಕಿಲ್ಲ.

**ಮಿತ್ರ–ಶತ್ರು**

ಮಾನವರ ಮೇಲೆ ಇದೊಂದು ಕರುಣೆ ತೋರುವ ಅಯೋಡಿನ್. ಮಾನವ ಮಿತ್ರನೂ ಹೌದು– ಒಗ್ಗದವರಲ್ಲಿ ಶತ್ರುವೂ ಹೌದು. ಸಾತ್ಮ್ಯವಿಲ್ಲದವರು ಅಯೋಡಿನ್ ಔಷಧಿಯನ್ನು ಮೂಸಿ ನೋಡಿದರೆ ಸಾಕು –ಮೂರ್ಛೆ ಹೋಗಬಹುದು! ಪ್ರಮಾಣ ತಪ್ಪಿ ಯಾವ ರೀತಿಯಾಗಿ ಅಯೋಡಿನನ್ನು ಉಪಯೋಗಿಸಿದರೂ ಅಪಾಯ ತಪ್ಪಿದ್ದಲ್ಲ. ಅಷ್ಟು ಮಾತ್ರವಲ್ಲದೆ ಚರ್ಮದ ಮೇಲೆ ಲೇಪಿಸುವ ತಯಾರಿಕೆಯನ್ನು ಸೇವಿಸಿದರೆ, ಮಿಕ್ಸ್‌ಚರ್‌ಗಾಗಿ ಸಿದ್ಧಪಡಿಸಲಾಗಿರುವ ಪುಡಿಯನ್ನು ಇಂಜೆಕ್ಷನ್ ಮೂಲಕ ತೆಗೆದುಕೊಂಡರೆ– ಹೀಗೆ ತಪ್ಪು ವಿಧಾನದಲ್ಲಿ ಬಳಸಿದರೆ ಅಯೋಡಿನ್ ಮಾರಕ ವಿಷ.

ಒಗ್ಗದವರು ಅಯೋಡಿನನ್ನು ಸೇವಿಸಿದರಂತೂ ಮುಗಿದೇಹೋಯಿತು – ಮೇಲುಸಿರು, ಮುಖ ವಿವರ್ಣ, ಕಂಪನಗಳು ಉಂಟಾಗುವುದಲ್ಲದೆ ರಕ್ತದ ಒತ್ತಡ ಕೆಳಕ್ಕಿಳಿದು ಹಠಾತ್ತನೆ ಕುಸಿದುಬಿದ್ದು ಪ್ರಾಣಾಪಾಯ ಸಂಭವಿಸಬಹುದು! ಔಷಧಿ ರೂಪದಲ್ಲಿ ಅಯೋಡಿನನ್ನು ಬಳಸುವುದಕ್ಕೆ ಮುನ್ನ ಪರೀಕ್ಷಾ ಪ್ರಮಾಣದ (ಟೆಸ್ಟ್ ಡೋಸ್) ವಿಧಾನದಿಂದ ಸಾತ್ಮ್ಯ ನಿರ್ಧಾರ ಮಾಡಿಕೊಳ್ಳುವುದು ಒಳಿತು. 30 ಗ್ರೈನ್ಸ್‌ನಷ್ಟು ಅಯೋಡಿನನ್ನು ಸೇವಿಸಿದರೆ –ಅದು ಪ್ರಾಣಾಪಾಯವನ್ನು ಉಂಟುಮಾಡಬಲ್ಲುದು. ಎರಡು– ನಾಲ್ಕು ಚಮಚಗಳಷ್ಟು ಟಿಂಚರ್ ಅಯೋಡಿನ್ ಕುಡಿದರೂ ಸಾವು ಸಂಭವಿಸಬಹುದು. ಆದರೆ ಯೋಗ್ಯ ಚಿಕಿತ್ಸೆಯನ್ನು ಸಕಾಲದಲ್ಲಿ ನೀಡಿದುದರ ಪರಿಣಾಮವಾಗಿ 6 ಔನ್ಸ್ ಟಿಂಚರ್ ಅಯೋಡಿನ್ ಕುಡಿದರೂ ಗುಣವಾದ ದಾಖಲೆಯಿದೆ.

ಟಿಂಚರ್ ಅಯೋಡಿನ್ ಕಣ್ಣಿಗೆ ಪ್ರಬಲ ಶತ್ರು. ನಾಲ್ಕಾರು ಹನಿ ಅಯೋಡಿನ್ ದ್ರಾವಕ ಕಣ್ಣಿಗೆ ಸ್ಪರ್ಶವಾದರೆ ಕಣ್ಣು ಉರಿ, ಬಾವು, ನೋವು ಉಂಟಾಗುತ್ತವೆ. ಸರಿಯಾದ ಚಿಕಿತ್ಸೆಯನ್ನು ತುರ್ತಾಗಿ ನಡೆಸದೇ ಹೋದಲ್ಲಿ ಕಣ್ಣುಕುರುಡಾಗಬಹುದು. ದುರ್ದೈವದ ಮಾತೆಂದರೆ ಟಿಂಚರ್ ಅಯೋಡಿನ್ ದ್ರಾವಕವು ಕಣ್ಣು ನೋವಿಗಾಗಿ ಬಳಸುವ ಅಂಜನ (ಐಡ್ರಾಪ್ಸ್) ದಂತೆಯೇ ಕಾಣಿಸುವುದರಿಂದ, ಪೊರಪಾಟಾಗಿ ಅಯೋಡಿನ್ ದ್ರಾವಕವನ್ನು ಕಣ್ಣಿಗೆ ಲೇಪಿಸಿಕೊಂಡು ಕೈಯಾರೆ ಕಣ್ಣು ಕಳೆದುಕೊಂಡ ಪ್ರಸಂಗಗಳು ಎಷ್ಟೋ ಸಂಭವಿಸಿವೆ.

**ಎಚ್ಚರ ಅಗತ್ಯ**

ಟಿಂಚರ್ ಅಯೋಡಿನನ್ನು ಕಣ್ಣಿನ ಔಷಧಿಯ ಬಳಿಯಲ್ಲಾಗಲಿ, ಇತರೆ ಔಷಧಿಗಳ ಜೊತೆಯಾಗಲಿ ಇಡಬಾರದು. ಪ್ರತ್ಯೇಕವಾಗಿ ಕಪಾಟಿನಲ್ಲಿಟ್ಟು ಬೀಗಹಾಕಿ ಜೋಪಾನವಾಗಿ ಇರಿಸಬೇಕು. ಕೆಮ್ಮಿನ ಮಿಕ್ಸ್‌ಚರ್ ಎಂದು ಭ್ರಮಿಸಿ ಟಿಂಚರ್ ಅಯೋಡಿನನ್ನು ಕುಡಿದು ಅಪಾಯ ತಂದುಕೊಂಡ ವೃದ್ಧರೊಬ್ಬರನ್ನು ಈಚೆಗೆ ನಾನು ಭೇಟಿ ಮಾಡಿದೆ. ನಸುಕತ್ತಲು ಮುಸುಕಿದ ಕೋಣೆಯ ಮೂಲೆಯ ಗೂಡಿನಲ್ಲಿ ಇರಿಸಿದ್ದ ಔಷಧ ಬಾಟಲಿಯನ್ನು ಎಂದಿನಂತೆಯೇ ಮದ್ದೆಂದು ಗಂಟಲಿಗೆ ಸುರಿದುಕೊಂಡಿದ್ದರು ಆ ತಾತ. ಟಿಂಚರ್ ಅಯೋಡಿನ್ ಸೀಸೆಯನ್ನು ತಂದು ಅಲ್ಲೇ ಇರಿಸಿದುದನ್ನು ನೋಡದೇ ರಾದ್ಧಾಂತವಾಗಿಹೋಯಿತು. ಆದ್ದರಿಂದ ಅಪಾಯವನ್ನು ತಡೆಗಟ್ಟಲು ಮುನ್ನೆಚ್ಚರಿಕೆಯೆಂದು ಮಕ್ಕಳ ಕೈಗೆ ಸಿಗದಂತೆ, ಬೀಗದ ಕಪಾಟಿನಲ್ಲಿಯೇ ಇರಿಸುವುದು ಅಗತ್ಯವೆಂದು ಇಲ್ಲಿ ಒತ್ತಿಹೇಳಬೇಕು.

ಔಷಧಿಯ ರೂಪದಲ್ಲಿ ಅಯೋಡಿನ್‌ಗಳು ದೀರ್ಘಕಾಲ ಹಾಗೂ ಪ್ರಮಾಣ ಮೀರಿ ಸೇವಿಸುವುದರಿಂದ ಬಾಯಿ ಹಾಗೂ ಮೂಗು ಸೋರುವುದು. ಬಾಯಿ ಕೆಡುವುದು, ಅಗ್ನಿಮಾಂದ್ಯ, ಅರುಚಿ, ಕರುಳುಬೇನೆ, ಮೈಕೈಗಳ ಮೇಲೆ ಮೊಡವೆಗಳೇಳುವುದು– ಮೊದಲಾದ ಅನೇಕ ಉಪದ್ರವಗಳು ಉಂಟಾಗುತ್ತವೆ. ನಿದ್ರೆಯೇ ಬಾರದೆ ರೋಗಿಯಲ್ಲಿ ಅಸುಖೀ ಮನೋಭಾವವು ಬೆಳೆಯುತ್ತದೆ. ಚಂಚಲ ಬುದ್ಧಿ, ನರ ದೌರ್ಬಲ್ಯ, ಶೀಘ್ರ ಕೋಪ ಹೆಚ್ಚಾಗಿ ಕಂಡುಬರುತ್ತದೆ. ವಾಕರಿಕೆ, ವಾಂತಿ ಮತ್ತು ಭೇದಿಗಳು ಪ್ರಾರಂಭವಾಗಿ ದೇಹವು ಸೊರಗಿ ಕಡ್ಡಿಯಂತಾಗುವುದು. ಹೆಣ್ಣುಮಕ್ಕಳ ಸ್ತನಗಳು ಅಕಾರಣವಾಗಿ ಜೋಲು ಬೀಳುವವು. ಗಂಡಸರ ವೃಷಣಗಳೂ ಜೋಲು ಬೀಳುವವು.

ಈ ಲಕ್ಷಣಗಳು ಪ್ರಾರಂಭವಾದ ಕೂಡಲೇ ರೋಗಿಗಳು ಅಯೋಡಿನ್ ಸೇವನೆಯಿಂದ ಸಂಪೂರ್ಣವಾಗಿ ದೂರವಿರಸಬೇಕು. ವೈದ್ಯರ ಸಲಹೆಯಂತೆ 'ಕಾರ್ಟಿಸೋನ್' ಮಾತ್ರೆಗಳನ್ನು ಸೇವಿಸಬೇಕು. ಕೆಲವು ದಿವಸ ಆಹಾರದಲ್ಲಿ ತುಸು ಹೆಚ್ಚಾಗಿ ಉಪ್ಪು ಸೇವಿಸಬೇಕು.

**ಅಪಾಯಕಾರಿ**

ಟಿಂಚರ್ ಅಯೋಡಿನ್ ಸೇವಿಸಿದೊಡನೆಯೇ ರೋಗಿಯ ನಾಲಗೆ ಮತ್ತು ಬಾಯಿಗಳಲ್ಲಿ ಕಂದು ಬಣ್ಣದ ಛಾಯೆಯೂ, ಲೋಹದ ರುಚಿ- ವಾಸನೆಗಳೂ ಗೋಚರಿಸುತ್ತವೆ. ಗಂಟಲು, ಬಾಯಿಗಳಲ್ಲಿ ವೇದನೆ, ತುರಿಕೆ ಮತ್ತು ಅಸಹ್ಯ ಭಾವನೆಗಳು ಉಂಟಾಗುತ್ತವೆ. ಹೊಟ್ಟೆ ನೋವು, ಭೇದಿ, ಬಾಯಾರಿಕೆ ಪ್ರಾರಂಭವಾಗುತ್ತವೆ. ಮೂತ್ರ ವಿಸರ್ಜನೆ ಇಲ್ಲವಾಗಿ ಕ್ರಮೇಣ ಮರಣ ಸಂಭವಿಸಬಹುದು. ಪ್ರಾಣಾಪಾಯದ ಕಾಲಾವಧಿ 48 ಗಂಟೆಗಳು.

ಅಯೋಡಿನ್ ವಿಷಪ್ರಾಶನವಾದ ರೋಗಿಗೆ ತಕ್ಷಣ ನಾಲ್ಕು ಲೋಟ ಹಾಲು ಕುಡಿಸಬೇಕು. ಹಾಲು ಸಿಗಸ ಸಮಯದಲ್ಲಿ ಕಾಲ ವಿಳಂಬಿಸದೆ ನೀರನ್ನಾದರೂ ಕುಡಿಸಬಹುದು. ನಾಲ್ಕಾರು ತತ್ತಿಗಳನ್ನು ಒಡೆದು ಬಿಳಿಯ ಲೋಳೆಗಳನ್ನು ಕುಡಿಸಬೇಕು. ಅಥವಾ ಒಂದು ಲೋಟ ನೀರಿಗೆ ನಾಲ್ಕು ಟೀ ಚಮಚ ಗೋಧಿ ಹಿಟ್ಟು ಕಲಸಿ, ಇಂತಹ ಹಿಟ್ಟನ್ನು 4 ಲೋಟಗಳನ್ನು ಕುಡಿಯಲು ಕೊಡಬೇಕು. ವಾಂತಿ ಮಾಡಿಸುವ ವಿಧಾನದಿಂದ ಹೊಟ್ಟೆಯಲ್ಲಿ ಸೇರಿಕೊಂಡಿರುವ ವಿಷದ್ರವ್ಯವನ್ನು ಕಕ್ಕಿಸಬೇಕು. ಇದಕ್ಕಾಗಿ ಒಂದು ಲೋಟ ನೀರಿಗೆ ಸ್ವಲ್ಪ ಸಾಸಿವೆ ಕಾಳನ್ನು ಅರೆದು ಹಾಕಿ ಕುಡಿಸಿ ಅಥವಾ ಗಂಟಲೊಳಗೆ ಬೆರಳು ತುರುಕಿ ಅಲ್ಲಾಡಿಸಿ ವಂತಿ ಮಾಡಿಕೊಳ್ಳಬಹುದು.

## ನೈರ್ಮಲ್ಯ ರಕ್ಷಣೆಗೆ ಸಹಕಾರಿ; ಸೇವಿಸಿದರೆ ವಿಷಕಾರಿ: ಫಿನಾಯಿಲ್

ಆಸ್ಪತ್ರೆಯಲ್ಲಿ ಮಲಗಿದ್ದ ರೋಗಿಗಳಿಗೆ ಮುಂಜಾನೆಯ ಚಹ ನೀಡುವಾಗ ದವಾಖಾನೆಯ ಕೆಲಸಗಾರರು ವಾರ್ಡನ್ನು ಗುಡಿಸಿ, ಚೊಕ್ಕಟ ಮಾಡಿ ಫಿನಾಯ್ಲ್ ಚಿಮುಕಿಸಿ ಒರಸುವ ದೃಶ್ಯ ನಿತ್ಯ ಕಣ್ಣಿಗೆ ಬೀಳುತ್ತದೆ. ಶುಚಿತ್ವದ ಕಡೆಗೆ ಈಗ ಹೆಚ್ಚು ಗಮನ ಕೊಡುತ್ತಿರುವುದರಿಂದ ಜನರು ಮನೆ- ಬಚ್ಚಲುಗಳನ್ನು ಗುಡಿಸುವಾಗ ಫಿನಾಯ್ಲು ಬಳಸುತ್ತಾರೆ. ರೈಲುಡಬ್ಬಿಗಳಲ್ಲಿಯೂ, ಪುರಸಭೆಯ ಶೌಚಕೂಪಗಳಲ್ಲಿಯೂ ಫಿನಾಯ್ಲ್ ಹಾಕಿ ತೊಳೆಯುವುದು ಸಾಮಾನ್ಯವಾಗಿವೆ.

ಅಗ್ಗದ ಬೆಲೆಯ ಫಿನಾಯ್ಲ್ ನಿತ್ಯಬಳಕೆಯ ಉಪಯುಕ್ತ ಕ್ರಿಮಿನಾಶಕ. ಎಣ್ಣೆಯಂತೆ ನಸುಕಂದು ಬಣ್ಣವಿದ್ದರೂ ನೀರು ಬೆರೆಸಿದಾಗ ಹಾಲಿನ ರೂಪದ

ಬಿಳಿ ಬಣ್ಣಕ್ಕೆ ತಿರುಗುತ್ತದೆ. ಮೂಗಿಗೆ ಬಡಿಯುವ ಗಾಟು ವಾಸನೆಯಂತೂ ಇದ್ದೇ ಇದೆ. ಇದ್ದಲು ಮೂಲದಿಂದ ಫಿನಾಯ್ಲನ್ನು ತಯಾರಿಸುತ್ತಾರೆ. ಫಿನಾಯ್ಲ್ ಹಾಗೂ ಇದೇ ವರ್ಗಕ್ಕೆ ಸೇರಿದ ಕಾರ್ಬಾಲಿಕ್ ಆಮ್ಲ ಮತ್ತು ಡಾಂಬರ್ (ತಾರು)ಗಳನ್ನು ಆಕಸ್ಮಿಕವಾಗಿ ಸೇವಿಸಿ, ಪ್ರತಿ ವರ್ಷನೂರಾರು ಮಂದಿ ಪ್ರಾಣ ಕಳೆದುಕೊಳ್ಳುತ್ತಾರೆ. ಎರಡು ಮಿಲಿ ಲೀಟರ್‌ನಷ್ಟು ಅಥವಾ 30ಗ್ರೈನ್ಸ್ ಪ್ರಮಾಣದ ಫಿನಾಯ್ಲ್ ಸೇವಿಸಿದರೆ ಪ್ರಾಣಾಪಾಯ ಸಂಭವಿಸಬಹುದು.

**ಸೂಚನೆಗಳು**

ಫಿನಾಯ್ಲ್ ಸೇವಿಸಿದ ರೋಗಿಯ ಬಾಯಿಯಲ್ಲಿ ಫಿನಾಯ್ಲಿನ ವಾಸನೆ ಗೋಚರಿಸುತ್ತದೆ. ನಾಲಿಗೆ, ಗಂಟಲು ಮತ್ತು ಬಾಯಿ ಸುಡುತ್ತದೆ. ಹೊಟ್ಟೆ ಉರಿ, ಹೊಟ್ಟೆ ಶೂಲೆ, ವಾಕರಿಕೆ, ನೊರೆ-ಶ್ಲೇಷ್ಮ ಬೆರೆತ ವಾಂತಿ ಪ್ರಾರಂಭವಾಗುತ್ತದೆ. ರೋಗಿಯ ತುಟಿಗಳೂ ಬಾಯಿಯ ಒಳಪದರೂ ಬಿಳಿಚಿಕೊಂಡು ಬಿರುಸಾಗುತ್ತದೆ. ಕ್ರಮೇಣ ಭೇದಿಗೆ ಪ್ರಾರಂಭ. ಮುಖ ಕಳೆಗುಂದಿದ್ದು, ಚರ್ಮ ಬಿರುಸುಗೊಂಡು, ಮೈ ಬೆವರುತ್ತದೆ. ಉಸಿರಾಟ ತ್ರಾಸದಾಯಕವೂ, ಮಂದವೂ ಆಗುತ್ತದೆ. ರೋಗಿಯ ಉಸಿರಿನಲ್ಲಿಯೂ ಫಿನಾಯ್ಲ್ ಘಾಟನ್ನು ಗಮನಿಸಬಹುದು. ಕೆಲವೊಮ್ಮೆ ದವಡೆ ಬಿಗಿತವೂ ಉಂಟಾಗಬಹುದು. ರೋಗಿಯ ರಕ್ತದ ಒತ್ತಡ ಇಳಿಮುಖವಾಗುವುದು. ಭಯ ವಿಹ್ವಲತೆ ವಿಕೃತ ದೈಹಿಕ ಚಟುವಟಿಕೆ ಹಾಗೂ ಮನೋಭ್ರಮೆಯ ಲಕ್ಷಣಗಳೂ ಗೋಚರಿಸಬಹುದು. ತಲೆ ತಿರುಕು, ಕಂಪನ, ಶಟೆ ಮತ್ತು ದೀರ್ಘ ಸುಪ್ತಿ (ಕೋಮ) ಸಂಭವಿಸುವವು.

ಫಿನಾಯ್ಲ್ ಸೇವಿಸಿದ ರೋಗಿಯಲ್ಲಿ ಕಾಣಿಸುವ ಮುಖ್ಯ ಉಪದ್ರವವೆಂದರೆ ಮೂತ್ರ ವಿಕಾರ- ಅಲ್ಪ ಪ್ರಮಾಣದ ಮೂತ್ರ ಅಥವಾ ಮೂತ್ರ ಲೋಪವುಂಟಾಗಬಹುದು. ಮೂತ್ರದ ವರ್ಣ ನಸುಹಸಿರು ಛಾಯೆ ಮಿಶ್ರವಾಗಿದ್ದು ಗಾಳಿ ಸ್ಪರ್ಶವಾದೊಡನೆಯೇ ಕಡು ಹಸಿರು ಅಥವಾ ಕಪ್ಪು ಬಣ್ಣಕ್ಕೆ ತಿರುಗುತ್ತದೆ. ಮೂತ್ರವನ್ನು ಪರೀಕ್ಷಿಸಿದರೆ ಆಲ್ಬುಮಿನ್ ಮತ್ತು ರಕ್ತದ ಕೆಂಪು ಕಣಗಳು ಕಾಣಿಸುವುವು. ಪ್ರಾಣಾಪಾಯದಿಂದ ಪಾರಾದ ರೋಗಿಗಳು ರಕ್ತಹೀನತೆ ಹಾಗೂ ಅರಿಶೀನ ಮಂಡಿಗೆ ರೋಗಕ್ಕೆ ತುತ್ತಾಗುವ ಭಯವಿರುತ್ತದೆ.

ಫಿನಾಯ್ಲ್ ಸೇವಿಸಿದ ರೋಗಿಗೆ ತಕ್ಷಣ ನಾಲ್ಕು ಔನ್ಸ್ ಹರಳೆಣ್ಣೆ (ಔಡಲ ಎಣ್ಣೆ) ಕುಡಿಸಬೇಕು. ಹರಳೆಣ್ಣೆಯಲ್ಲಿ ಫಿನಾಯ್ಲ್ ಕರಗುವುದರಿಂದ ಇದು ದಿವ್ಯ ಪ್ರತ್ಯಾಷಧವಾಗಿದೆ. ರೋಗಿಯ ಹೊಟ್ಟೆ ತೊಳೆದು ಭೇದಿ ಉಪ್ಪಿನಿಂದ ವಿರೇಚನ ಮಾಡಿಸಿ ಅನ್ನಕೋಶದಲ್ಲಿ ಸೇರಿದ ವಿಷವನ್ನು ಹೊರಕ್ಕೆ ಹಾಕಬೇಕು. ಸೋಡಿಯಂ ಬೈಕಾರ್ಬನೇಟ್ ಮಿಶ್ರಣವನ್ನು ನಾಲ್ಕಾರು ಬಾರಿ ಕುಡಿಸಬೇಕು. ರೋಗೋಪಚಾರದಲ್ಲಿ

ಮೂತ್ರ ವಿಸರ್ಜನೆಯು ಸರಿಯಾಗಿ ಆಗುವಂತೆ ನೋಡಿಕೊಳ್ಳುವುದು ಬಹಳ ಮುಖ್ಯ. ರೋಗಿಗೆ ಬಾರ್ಲಿ ನೀರು. ಗ್ಲೂಕೋಸ್ ನೀರು. ಎಳನೀರು ಮತ್ತು ಧಾರಾಳ ದ್ರವ ಕುಡಿಸಬೇಕು. ವೈದ್ಯರು ರಿಂಗರ್ ಸೆಲೂಷನ್ ನೀಡುತ್ತಾರೆ.

ಫಿನಾಯಿಲ್ಲನ್ನು ದೀರ್ಘಕಾಲ ಸ್ಪರ್ಶಿಸುವುದರಿಂದ ಚರ್ಮದಲ್ಲಿನವೆ, ಉರಿ. ಜೋಮು ಹಿಡಿಯುವುದು, ಸ್ಪರ್ಶಜ್ಞಾನ ಮಂದವಾಗುವುದು ಮೊದಲಾದ ತೊಂದರೆಗಳು ಉದ್ಭವಿಸುತ್ತದೆ. ಇಂತಹ ಉಪದ್ರವ ಕಾಣಿಸಿಕೊಂಡ ತಕ್ಷಣ ರೋಗಿಯನ್ನು ಫಿನಾಯಿಲ್ ಸಂಪರ್ಕದಿಂದ ಬೇರ್ಪಡಿಸಬೇಕು. ವಿಷಸ್ಪರ್ಶವಾದ ಭಾಗವನ್ನು ತಣ್ಣೀರಿನಿಂದ ತೊಳೆದು ಹರಳೆಣ್ಣೆ ಸವರಬೇಕು. ಇಪ್ಪೆ ಎಣ್ಣೆ ಶೇಕಡಾ 10ರ ಶುದ್ಧ ಮದ್ಯ ಇವುಗಳನ್ನು ಸಹ ಲೇಪಿಸಬಹುದು.

## ಮೂಸಲು ತಿನ್ನಲು ನಿಷಿದ್ಧ; ಜಿರಲೆ ಓಡಿಸಲು ಪ್ರಸಿದ್ಧ: ಡಾಂಬರ್ ಗೋಲಿ (ನೆಫ್ತಾಲಿನ್)

ಕಲ್ಲಿನ ಗಣಿ ನಮ್ಮೂರಿನ ಏಕಮಾತ್ರ ಭಾರೀ ಉದ್ಯಮ. ಗಣಿಯ ಒಡೆಯರನ್ನು 'ಮಹಾರಾಜರು' ಎನ್ನುತ್ತಾರೆ. ಅಂದು ನಮ್ಮೂರಿನ ಮಹದೇವಪ್ಪ ಮಹಾರಾಜರ ಮನೆಯಲ್ಲಿ ಲಗ್ನದ ಸಂಭ್ರಮ. ಬಂದವರಿಗೆ ರಾಜೋಪಚಾರ ನಡೆಯುತ್ತಿತ್ತು, ಒಳಗಿನ ಕೋಣೆಯಲ್ಲಿ ಮದುವೆಯ ಭಾರೀ ಸೀರೆಗಳನ್ನು ಪೆಟ್ಟಿಗೆಯಿಂದ ತೆಗೆದು ನೋಡುತ್ತಿರುವಾಗ ಮದುಮಗಳ ಪುಟ್ಟ ತಮ್ಮ ಅಂಬೆಗಾಲಿಕ್ಕುತ್ತ ಅಲ್ಲಿಗೆ ಬಂದ. ಯಾರೂ ಅವನತ್ತ ಗಮನ ಕೊಡಲಿಲ್ಲ. ಪೆಟ್ಟಿಗೆಯಲ್ಲಿದ್ದ ಡಾಂಬರ್ ಗೋಲಿಗಳು (ನೆಫ್ತಲಿನ್ ಗುಳಿಗೆಗಳು) ಅವನ ಕಣ್ಣಿಗೆ ಬಿದ್ದುವು. ಒಂದೆರಡನ್ನು ಮೆಲ್ಲನೆ ಎತ್ತಿಕೊಂಡು ಪೆಪ್ಪರ್‌ಮೆಂಟ್ ಅಂತ ಭಾವಿಸಿ, ಬಾಯಿಗೆ ತುರುಕಿಕೊಂಡು ಹೊಸದಾಗಿ ಮೊಳೆತ ಹಲ್ಲುಗಳಿಂದ ಕರಕರ ಜಗಿದ. ನಾಲಗೆಗೆ ಕಹಿ ಎನಿಸಿತೇನೋ– ಥೂ ಥೂ ಅಂತ ಉಗುಳಿದ. ವ್ಹೆಕ್ ವ್ಹೆಕ್ ಅಂತ ವಾಕರಿಸಿದ. ಆದರೂ ಒಂದಿಷ್ಟು ಹೊಟ್ಟೆಯೊಳಗೆ ಸೇರಿಕೊಂಡಿತು.

ಮದುವೆಯ ಗಡಿಬಿಡಿಯಲ್ಲಿದ್ದ ಯಾರಿಗೂ ಇತ್ತ ಗಮನ ಹರಿಯಲಿಲ್ಲ. ಎಷ್ಟೋ ಹೊತ್ತಿನ ಮೇಲೆ ಮುದುಕಿ ಚೆನ್ನಮ್ಮಾಯಿ ಅತ್ತಸುಳಿದಾಗ ಅವಳ ಕಣ್ಣಿಗೆ ಬಿತ್ತು ಈ ದೃಶ್ಯ. ಮಗುವಿಗೆ ಏನು ಸಂಭವಿಸಿದೆ ಎಂದು ಗೊತ್ತಿರದಿದ್ದರೂ ಏನೋ ಅನಾಹುತವಾಗಿದೆ ಅಂತ ಅನಿಸಿರಬೇಕು ಈ ವೃದ್ಧೆಗೆ. ಮಗುವನ್ನೆತ್ತಿ

ಎದೆಗವಚಿಕೊಂಡು ದನಿ ತೆಗೆದು "ನವ್ ಪಾರು ಹೋಯ್ತುಪ್ಪೋ" ಅಂತ ಅಳತೊಡಗಿದಳು. ಗದ್ದಲ ಕೇಳಿ ಜನ ಘೇರಾಯಿಸಿದರು.

"ನೆತ್ತಿತಟ್ಟಿರೋ, ಕಿವಿ ಊದಿರೋ, ಗಾಳಿ ಬೀಸಿರೋ, ಬೆನ್ನು ಕಾಸಿರೋ" ಜನ ತಲೆಗೊಂದು ಸಲಹೆ ನೀಡುವವರೇ. ಅಷ್ಟು ಹೊತ್ತಿಗೆ ಡಾಕ್ಟರನ್ನು 'ಭಡಾನೆ ಬಾ ಅನ್ನು' ಎಂದು ಕರೆತರಲು ಆಳುಮಗನನ್ನು ಯಾರೋ ಅಟ್ಟಿದರು. ರೋಗಿಗಳನ್ನು ಬಿಟ್ಟುಕೊಟ್ಟು ಬಂದರೂ ಎರಡು ಮೈಲಿ ದೂರದ ಮದುವೆ ಮನೆಗೆ ತಲುಪಲು ಅರ್ಧ ತಾಸು ಹಿಡಿಯಿತು. ಆ ಜನಜಾತ್ರೆಯ ನಡುವೆ ಏನು ಮಾಡುವುದಕ್ಕೂ ಸಾಧ್ಯವಾಗದೇ ರೋಗಿಯನ್ನು ದವಾಖಾನೆಗೆ ಸಾಗಿಸಿಕೊಂಡು ಬಂದು ಚಿಕಿತ್ಸೆ ಮಾಡಲು ತೊಡಗಿದೆ- ವಿಷಪ್ರಾಶನವಾಗಿ ಸರಿಯಾಗಿ ಐದು ತಾಸುಗಳ ಮೇಲೆ!

### ಎಚ್ಚರ

ನುಸಿಗೋಲಿ, ಎಕ್ಕಳೆ ಮಾತ್ರೆ, ಜಿರಳೆಬಿಲ್ಲೆ, ನೆಫ್ತಲಿನ್ ಎಂದು ನಾನಾ ಹೆಸರುಗಳಿಂದ ಕರ್ನಾಟಕದ ವಿವಿಧ ಭಾಗಗಳಲ್ಲಿ ಕರೆಯಲ್ಪಡುವ ಡಾಂಬರು ಗೋಲಿಗಳನ್ನು ಅರಿಯದವರಿಲ್ಲ. ಬಟ್ಟೆಬರೆಗಳನ್ನು ಇರುವೆ, ಗೆದ್ದಲು ಮತ್ತಿತರ ಹುಳು ಹುಪ್ಪಟೆಗಳಿಂದ ರಕ್ಷಿಸಲು ಪೆಟ್ಟಿಯೊಳಗೆ ಇರಿಸುವ ಈ ಬಿಳಿ ಗೋಲಿಗಳಿಗೆ ಮಿರಿಮಿರಿ ಮಿಂಚುವ ಹೊಳಪಿದೆ. ತಕ್ಕಮಟ್ಟಿನ ಘಾಟು ವಾಸನೆ ಇದೆ. ನೀಲಿ ಕೈಗಾರಿಕೆಯಲ್ಲಿಯೂ, ಅನೇಕ ವಿಧವಾದ ಬಣ್ಣದ ಕಾರ್ಯಗಳಲ್ಲಿಯೂ ನೆಫ್ತಲಿನ್ ಬಳಸುತ್ತಾರೆ.

ನೆಫ್ತಲಿನ್ ಗೋಲಿ ಮಾರಕ ವಿಷ. 75ರಿಂದ 225 ಗ್ರೇನುಗಳನ್ನು ವಿಷ ಸೇವಿಸಿದರೂ ಪ್ರಾಣಾಪಾಯ ಸಂಭವಿಸಬಹುದು. ಮಕ್ಕಳ ಪ್ರಾಣಾಪಾಯದ ಸೇವನಾ ಪ್ರಮಾಣ 30–40 ಗ್ರೇನ್ಸ್. ನೆಫ್ತಲೀನ್ ಸೇವನಾ ವಿಷವಷ್ಟೇ ಆಗಿರದೆ ಆಘ್ರಾಣ ಹಾಗೂ ಸ್ಪರ್ಶ ವಿಷವಾಗಿಯೂ ಪರಿಣಮಿಸಬಹುದು. ಪೆಪ್ಪರ್‌ಮೆಂಟ್‌ನಂತೆ ಕಾಣಿಸುವುದರಿಂದ ಮಕ್ಕಳು ತಿಂದು ಅಪಾಯಕ್ಕೆ ತುತ್ತಾಗುವ ಸಂಭವ ಹೆಚ್ಚು. ನೆಫ್ತಲಿನ್ ಗೋಲಿಗಳನ್ನು ಬೇಕಾಬಿಟ್ಟಿ ಒಗೆಯಲೇಬಾರದು.

### ಸೂಚನೆ

ವಿವಿಧ ಬಣ್ಣದ ಉದ್ಯಮಗಳಲ್ಲಿಯೂ ನೀಲಿ ತಯಾರಿಕೆಯಲ್ಲಿಯೂ ನೆಫ್ತಲಿನ್ ಅನ್ನು ಬೇಯಿಸುತ್ತಾರೆ. ಆಗ ಹೊರಡುವ ಹಬೆಯನ್ನು (ಹೊಗೆಯನ್ನು) ಮೂಸಿದರೆ ತೀವ್ರ ದುಷ್ಪರಿಣಾಮ ಉಂಟಾಗುತ್ತದೆ. ದೃಷ್ಟಿದೋಷ, ತಾತ್ಕಾಲಿಕ ಬುದ್ಧಿಭ್ರಮಣೆ, ತಲೆನೋವು, ತಲೆ ತಿರುಗುವುದು ಮೊದಲಾದ ಉಪದ್ರವಗಳು ಕಾಣಿಸುವುವು.

ಇಂತಹ ರೋಗಿಗಳನ್ನು ತಕ್ಷಣ ವಿಷದ ಪರಿಸರದಿಂದ ಪ್ರತ್ಯೇಕಿಸಿ ಸ್ವಚ್ಛ ಹವೆಯಾಡುವಲ್ಲಿಗೆ ಸ್ಥಳಾಂತರಿಸಬೇಕು. ನೆಫ್ತಲಿನ್ ಗೋಲಿಗಳನ್ನು ದೀರ್ಘಕಾಲ ಮೂಸುವುದರಿಂದಲೂ ಈ ಬಗೆಯ ಉಪದ್ರವ ಉಂಟಾಗಬಹುದು.

ದೀರ್ಘಕಾಲ ನೆಫ್ತಲಿನ್ ಸ್ಪರ್ಶದಿಂದ ಮೈಕೈಗಳಲ್ಲಿನವೆ, ತುರಿಕೆ ಹಾಗೂ ನೀರು ಸೋರುವ ವ್ರಣಗಳು ಕಾಣಿಸಿಕೊಳ್ಳುವುದು. ಕಣ್ಣಿಗೆ ಸ್ಪರ್ಶವಾದರೆ ಕಣ್ಣು ಕೆಂಪಾಗುವುದು. ಕಣ್ಣೀರು ಸುರಿಯುವುದು, ದೃಷ್ಟಿ ಮಂಜಾಗುವುದು. ಅಂತಹ ರೋಗಿಗಳ ಕಣ್ಣನ್ನು ಅಥವಾ ವಿಷಸ್ಪರ್ಶವಾದ ಅಂಗಾಂಗಗಳನ್ನು ತಣ್ಣೀರಿನಿಂದ ತೊಳೆದು ವ್ರಣಗಳಿಗೆ ಸೂಕ್ತ ಚಿಕಿತ್ಸೆ ನೀಡಬೇಕು.

ನೆಫ್ತಲಿನ್ ಗೋಲಿಗಳನ್ನು ಆಕಸ್ಮಿಕವಾಗಿ ಸೇವಿಸಿದರೆ ರೋಗಿಯ ಬಾಯಿಯಲ್ಲಿ ವಿಷದ ಗಾಟು ವಾಸನೆ ಕಾಣಿಸುತ್ತದೆ. ವಾಕರಿಕೆ, ವಾಂತಿ, ಭೇದಿ ಪ್ರಾರಂಭಿಸುತ್ತವೆ. ರೋಗಿಯ ಮನಸ್ಸಿನಲ್ಲಿ ಭಯ, ಭೀತಿ ಉಂಟಾಗುತ್ತದೆ. ಉದ್ವೇಗ, ಚಿತ್ರಚಾಂಚಲ್ಯ ಗೋಚರಿಸುತ್ತವೆ. ರೋಗಿಯು ಮೂತ್ರ ವಿಸರ್ಜನೆ ಮಾಡುವಾಗ ನೋವು ಕಾಣಿಸುವುದು. ಕೆಲವೊಮ್ಮೆ ಮೂತ್ರ ಲೋಪ, ಅರಿಶಿನ ಮಂಡಿಗೆ ರೋಗದ ಲಕ್ಷಣಗಳು ಸಹ ಕಾಣಿಸಬಹುದು. ಕಂಪನ, ಶಟೆ ಮತ್ತು ಮೂರ್ಛೆ ಇತ್ಯಾದಿ ತೊಂದರೆಗಳೂ ಉಂಟಾಗಬಹುದು.

**ಪ್ರತ್ಯೌಷಧ**

ನೆಫ್ತಲಿನ್ ವಿಷ ಸೇವಿಸಿದ ರೋಗಿಗೆ ಸೂಕ್ತ ವೈದ್ಯ ಸಹಾಯ ಒದಗಿಸಬೇಕು. ಸಾಧ್ಯವಾದರೆ ಆಸ್ಪತ್ರೆಗೆ ಒಯ್ಯಬೇಕು. ನೆಫ್ತಲಿನ್ ವಿಷ ನಿಧಾನವಾಗಿ ದೇಹದಿಂದ ಹೀರಲ್ಪಡುವ ಕಾರಣ ಸರಿಯಾದ ಚಿಕಿತ್ಸೆ ನಡೆಸುವುದರಿಂದ ರೋಗಿಯನ್ನು ಪ್ರಾಣಾಪಾಯದಿಂದ ತಪ್ಪಿಸಬಹುದು. ಆದ್ದರಿಂದ ವಿಳಂಬವಾದರೂ ಚಿಂತೆಯಿಲ್ಲ– ಸೂಕ್ತ ಚಿಕಿತ್ಸೆ ಮಾಡಬೇಕು.

ರೋಗಿಗೆ ವಮನ ಮಾಡಿಸಿಯಾಗಲಿ, ಹೊಟ್ಟೆ ತೊಳೆದಾಗಲಿ ಅಥವಾ ಭೇದಿ ಮಾಡಿಸಿಯಾಗಲಿ ಹೊಟ್ಟೆಯೊಳಗೆ ಸೇರಿದ ವಿಷವನ್ನು ಹೊರಕ್ಕೆ ಹಾಕಬೇಕು. ಸೋಡಿಯಂ ಬೈಕಾರ್ಬೋನೇಟ್ ಮಿಶ್ರಣ ಕುಡಿಸಬೇಕು. ನೆಫ್ತಲಿನ್ ಸತ್ವವು ತೈಲ ಮಾಧ್ಯಮದಲ್ಲಿ ಕರಗುವುದರಿಂದ ಹಾಲು, ಎಣ್ಣೆ–ತುಪ್ಪಗಳನ್ನು, ಯಾವುದೇ ಬಗೆಯ ಕೊಬ್ಬು ಪದಾರ್ಥಗಳನ್ನು ರೋಗಿಗೆ ಕೊಡಬಾರದು. ರೋಗಿಗೆ ಭೇದಿ ಮಾಡಿಸಲು ಭೇದಿ ಉಪ್ಪನ್ನೇ ಕೊಡಬೇಕು. ಹರಳೆಣ್ಣೆವರ್ಜ್ಯ. ಪ್ರಾಣಾಪಾಯದ ಕಾಲಾವಧಿ 24 ತಾಸು. ಒಟ್ಟಿನಲ್ಲಿ ತುಸು ವಿಳಂಬವಾದರೂ ಗಾಬರಿಯಾಗದೆ ಸರಿಯಾದ ಚಿಕಿತ್ಸೆ ಮಾಡಿದಲ್ಲಿ ರೋಗಿಯು ಗುಣವಾಗುವುದರಲ್ಲಿ ಸಂದೇಹವಿಲ್ಲ.

## ಲ್ಯಾಂಪಿಗು ಸ್ಟೌವಿಗು ಬೇಕೇಬೇಕು,

## ಲೇಪಕ್ಕೂ ಕುಡಿಯಲಿಕ್ಕೂ ಬೇಡವೇಬೇಡ: ಸೀಮೆಎಣ್ಣೆ

ಡಬ್ಬದಲ್ಲಿ ತುಂಬಿಸಿ ಮುಚ್ಚಳ ಮುಚ್ಚಿ ಇರಿಸಿದಾಗ ನಿರಪಾಯಕಾರಿಯಾಗಿ ಕಾಣಿಸುವ ಸೀಮೆಎಣ್ಣೆ ಅಗ್ನಿಸ್ಪರ್ಶವಾದೊಡನೆ ಭಗ್ಗನೆ ಉರಿದು ಭೀಕರ ಅಪಾಯ ಉಂಟುಮಾಡಬಲ್ಲುದೆಂದು ಎಲ್ಲರಿಗೂ ಗೊತ್ತು. ಆದರೂ ನಿತ್ಯಜೀವನದಲ್ಲಿ ನಾವು ಉರಿಸುವ ದೀಪದಿಂದ ತೊಡಗಿ ಅಡಿಗೆಯ ಸ್ಟೌವರೆಗೆ ಒಂದಲ್ಲ ಒಂದು ರೀತಿಯಲ್ಲಿ ಸೀಮೆಎಣ್ಣೆ ಬಳಸುತ್ತೇವೆ. ಸೇವಿಸಿದರೆ ಸೀಮೆಎಣ್ಣೆ ಪ್ರಾಣಾಪಾಯವನ್ನೇ ಉಂಟುಮಾಡಬಲ್ಲದು. ಅಷ್ಟು ಮಾತ್ರವಲ್ಲದೆ, ದೀರ್ಘಕಾಲದ ಸಂಪರ್ಕದಿಂದ ಸ್ಪರ್ಶವಿಷ, ಆಘ್ರಾಣ ವಿಷವಾಗಿಯೂ ಪರಿಣಮಿಸುತ್ತದೆ. ಪ್ರಾಣಾಪಾಯದ ಸೇವನಾ ಪ್ರಮಾಣ: ಸುಮಾರು 4 ಔನ್ಸ್. ಮಕ್ಕಳು ಅರ್ಧ ಔನ್ಸ್ ಸೀಮೆಎಣ್ಣೆ ಕುಡಿದರೂ ಸಾವಿಗೆ ತುತ್ತಾಗಬಹುದು.

ರೋಗ ಲಕ್ಷಣ

ಸೀಮೆಎಣ್ಣೆ ಜಾತಿಗೆ ಸೇರಿಗೆ ಪೆಟ್ರೋಲ್ ಮತ್ತು ಡೀಸೆಲ್ ಸಹ ಈ ಎಲ್ಲ ದುಷ್ಪರಿಣಾಮಗಳನ್ನು ಉಂಟುಮಾಡುವುವು. ಈ ಇಂಧನ ತೈಲಗಳ ಉತ್ಪಾದನೆ, ದಾಸ್ತಾನು ಹಾಗೂ ಸಾಗಾಣಿಕೆಯಲ್ಲಿ ನಿರತರಾದವರೂ, ತೈಲ ಶುದ್ಧೀಕರಣ ಕಾರ್ಖಾನೆಗಳ ಕಾರ್ಮಿಕರೂ, ಚಿಲ್ಲರೆ ಮಾರಾಟ ಮಾಡುವವರೂ ಸೀಮೆಎಣ್ಣೆಯ ವಾಸನೆಯನ್ನು ಸದಾ ಆಘ್ರಾಣಿಸುತ್ತಿರುವ ಕಾರಣ ಕಲಾಂತರದಲ್ಲಿ ತಲೆ ತಿರುಗುವುದು, ಉಸಿರಾಟಕ್ಕೆ ತೊಂದರೆ ಮೊದಲಾದ ಉಪದ್ರವಗಳಿಗೆ ತುತ್ತಾಗುತ್ತಾರೆ. ಕ್ರಮೇಣ ಅವರು ದುರ್ಬಲರಾಗುವರಲ್ಲದೆ, ಕೈಕಾಲುಗಳಲ್ಲಿಯೂ ಸಂದು ಕೀಲುಗಳಲ್ಲಿಯೂ ಮಂದ ವೇದನೆಯಿಂದ ನರಳುತ್ತಾರೆ. ಅಂತಹ ರೋಗಿಗಳಿಗೆ ಅನ್ನದ ಮೇಲೆ ತಿರಸ್ಕಾರ, ರುಚಿ ಇಲ್ಲದಿರುವುದು ಮುಂತಾದ ಉಪದ್ರವಗಳು ಉಂಟಾಗುತ್ತವೆ. ಈ ಲಕ್ಷಣಗಳು ಕಾಣಿಸಿಕೊಂಡ ತಕ್ಷಣ ಅವರನ್ನು ಇಂಧನ ತೈಲದ ಸಂಪರ್ಕ ತಪ್ಪಿಸಿ, ಸ್ವಚ್ಛ ಗಾಳಿಯಾಡುವಲ್ಲಿಗೆ ಸ್ಥಳಾಂತರಿಸಬೇಕು. ಮುಂದೆ ಅವರು ಯಾವ ರೀತಿಯಲ್ಲೂ ಇಂಧನ ತೈಲದ ಸಂಪರ್ಕವಾಗದಂತೆ ದೂರವಿರಬೇಕು.

ಸೀಮೆಎಣ್ಣೆಯನ್ನು ಚಿಲ್ಲರೆ ಅಂಗಡಿಯಲ್ಲಿ ಅಳೆದುಕೊಡುವವರು ಮುಂತಾಗಿ ನಿತ್ಯ ಸಂಪರ್ಕವುಳ್ಳವರು ಕೆಲವರು ಸ್ಪರ್ಶ ವಿಷಕ್ಕೂ ತುತ್ತಾಗಬಹುದು. ಅಂತಹವರಿಗೆ ಕೈ ಬೆರಳುಗಳು, ಬೆರಳ ಸಂದು ಮತ್ತು ಅಂಗ ಮುಂಗೈಗಳಲ್ಲಿ ಚರ್ಮ ಸುಲಿಯುವುದು,

ನವೆ. ತುರಿಕೆ ಮೊದಲಾದ ಚರ್ಮವ್ಯಾಧಿ ಕಾಣಿಸಿಕೊಳ್ಳಬಹುದು. ಇಂತಹ ರೋಗಿಗಳನ್ನು ಸೀಮೆಎಣ್ಣೆ ಸಂಪರ್ಕದಿಂದ ಶಾಶ್ವತವಾಗಿ ತಪ್ಪಿಸಬೇಕು.

ಸೀಮೆಎಣ್ಣೆಯ ಘಾಟು ವಾಸನೆಯನ್ನು ಮೂಸಿದಾಗ ಮಕ್ಕಳು ಸಹ ಮುಖ ತಿರುವುತ್ತಾರೆ. ಆದರೂ ಮಕ್ಕಳು ಕೆಲವು ಸಲ ದೊಡ್ಡವರೂ ಸೀಮೆಎಣ್ಣೆ ಕುಡಿದು ಅಪಘಾತಕ್ಕೆ ತುತ್ತಾಗುತ್ತಾರೆ. ಸೀಮೆಎಣ್ಣೆ ಸೇವಿಸಿದ ರೋಗಿಗಳ ಬಾಯಲ್ಲಿ ಸೀಮೆಎಣ್ಣೆ ವಾಸನೆಯಿರುತ್ತದೆ. ಅವರ ಉಸಿರಿನಲ್ಲಿಯೂ. ವಾಂತಿಯಲ್ಲಿಯೂ ಸಹ ಈ ವಾಸನೆ ಗೋಚರಿಸುತ್ತದೆ. ಅಂತಹ ರೋಗಿಗಳಲ್ಲಿ ತಲೆ ತಿರುಗುವುದು, ವಾಕರಿಕೆ, ಎದೆ ಉರಿ, ಗಂಟಲು- ನಾಲಗೆ ಕೆರೆತ, ವಾಂತಿ ಪ್ರಾರಂಭವಾಗುತ್ತದೆ. ಕ್ರಮೇಣ ಹೊಟ್ಟೆ ನೋವು, ಭೇದಿ ಉಂಟಾಗುವುದು, ತಲೆ ಭಾರ, ಮುಖ ಬಿಳುಚಿಕೊಳ್ಳುವುದು, ಮೇಲುಬ್ಬಸ, ತೂಕಡಿಕೆ ನಿದ್ರೆ ಮತ್ತು ಜ್ವರ ಕಾಣಿಸುವುದು, ಉಸಿರಾಟದ ಗತಿ ಮಂದವಾಗುವುದು, ರೋಗಿಯ ಕಣ್ಣ ಬೊಂಬೆಯು ಮೊದಲು ಕಿರಿದಾಗಿರುತ್ತದೆ. ಸ್ಮೃತಿತಪ್ಪಿದಾಗ ಅರಳುತ್ತದೆ. ಶಟೆ, ಮೂರ್ಛೆ ಮತ್ತು ಮರಣ ಮುಂದಿನ ಅವಸ್ಥೆಗಳು.

### ಪ್ರತ್ಯೌಷಧ

ಸೀಮೆಎಣ್ಣೆ ಪ್ರಾಶನವಾದ ರೋಗಿಗೆ ತಕ್ಷಣ ವೈದ್ಯ ಸಹಾಯ ನೀಡಬೇಕು. ರೋಗಿಯನ್ನು ಸುಸಜ್ಜಿತವಾದ ಆಸ್ಪತ್ರೆಗೆ ಸೇರಿಸುವುದು ಒಳ್ಳೆಯದು. ಸೋಡಿಯಂ ಬೈಕಾರ್ಬೊನೇಟ್ ದ್ರಾವಣದಿಂದ ಹೊಟ್ಟೆ ತೊಳೆಯುವುದಲ್ಲದೆ 'ಲಿಕ್ವಿಡ್ ಪ್ಯಾರಾಫಿನ್' ಕುಡಿಸಿ ಭೇದಿ ಮಾಡಿಸಬೇಕು. ಆದರೆ ರೋಗಿಯ ಹೊಟ್ಟೆಯನ್ನು ಸೇರಿದ ವಿಷವನ್ನು ಹೊರಗೆ ಹಾಕುವ ಪ್ರಯತ್ನದಲ್ಲಿ ಮತ್ತೆನುಂಗಿ -ಅದು ಅಕಸ್ಮಾತ್ ಶ್ವಾಸಕೋಶ ಸೇರಿದರೆ ತೀರಾ ದುಷ್ಪರಿಣಾಮಗಳು ಸಂಭವಿಸಬಹುದು. ರೋಗಿಯು ಚಿಕ್ಕ ಬಾಲಕರಾದ ಪಕ್ಷದಲ್ಲಿ ವಿಶೇಷ ಮುತುವರ್ಜಿವಹಿಸಬೇಕು. ರೋಗಿಗೆ ಕೃತಕ ಉಸಿರಾಟ, ಆಕ್ಸಿಜನ್ ನೀಡಿಕೆ, ರಕ್ತನಾಳದ ಮೂಲಕ ಗ್ಲೂಕೋಸ್ ಕೊಡುವುದು ಅಗತ್ಯ ಬೀಳಬಹುದು.

ರೋಗಿಗೆ ಸಂಪೂರ್ಣ ವಿಶ್ರಾಂತಿ ಅಗತ್ಯ. ಶರ್ಕ ಪಿಷ್ಟಭರಿತವಾದ ಆಹಾರವನ್ನೂ, ಬಿ ಕಾಂಪೆಕ್ಸ್ ಜೀವಾತುಗಳನ್ನೂ ನೀಡಬೇಕು. ರೋಗಿಗೆ ಧಾರಾಳವಾಗಿ ಗ್ಲೂಕೋಸ್, ಬಾರ್ಲಿ ನೀರು ಕುಡಿಸಬೇಕು. ಕೊಬ್ಬು, ತೈಲ ಪದಾರ್ಥ ಕೊಡಬಾರದು. ಪ್ರಾಣಪಾಯದ ಕಾಲಾವಧಿ 24 ತಾಸು. ಸೀಮೆಎಣ್ಣೆ ಮನೆಯಲ್ಲಿ ಮಕ್ಕಳ ಕೈಗೆ ಸಿಗುವಂತೆ ಇರಿಸಬಾರದು.

## ಮಂಗಳಾರತಿಗೆ ಯಥೇಚ್ಛ ಬಳಸಿರಿ,
## ನಾಲಿಗೆ ಸೇರಿದರೆ ಪರಿತಾಪ: ಆರತಿ ಕರ್ಪೂರ

ಹರಿಕಥೆ ಮಾಡಿ ಮಂಗಳ ಹಾಡಿದ ದಾಸರಾಯ ಆಚಾರ್ಯರು ತಟ್ಟೆಯಲ್ಲಿ ಕರ್ಪೂರದ ದೊಡ್ಡ ಬಿಲ್ಲೆಯನ್ನಿರಿಸಿ ಉರಿಸಿ, ಆರತಿ ಮಾಡಿ ಸಭಿಕರತ್ತ ಆರತಿ ತಟ್ಟೆಯನ್ನು ಮುಂದೆ ಮಾಡಿದರು. ಆರತಿಯ ಕರ್ಪೂರ ಆರುವ ತನಕ ದಕ್ಷಿಣೆಯ ನಾಣ್ಯ ಬಿದ್ದೇ ಬೀಳುತ್ತಿತ್ತು ತಟ್ಟೆಗೆ. ನಮ್ಮ ಧಾರ್ಮಿಕ ವಿಧಿಗಳಲ್ಲಿ ಕರ್ಪೂರಕ್ಕೆ ಪ್ರಮುಖ ಸ್ಥಾನ– ಪೂಜೆಯಲ್ಲಂತೂ ಅಗ್ರಸ್ಥಾನ. ಹಿತಕರವಾದ ವಾಸನೆ, ಕ್ರಿಮಿನಾಶಕ ಗುಣ, ಉರಿದ ಮೇಲೆ ಬೂದಿ ಉಳಿಯದೆ ಇರುವುದು ಕರ್ಪೂರದ ವೈಶಿಷ್ಟ್ಯ.

**ಹಲವು ಉಪಯೋಗ**

ಕರ್ಪೂರದಲ್ಲಿ ಆರತಿ ಕರ್ಪೂರ, ಪಚ್ಚಕರ್ಪೂರ ಎಂಬ ಎರಡು ಬಗೆಯ ಕರ್ಪೂರಗಳನ್ನು ಕರ್ಪೂರ ವೃಕ್ಷಗಳಿಂದ ಸಂಗ್ರಹಿಸುತ್ತಾರೆ. ಟರ್ಪೆಂಟೈನ್ ಮತ್ತು ಹೈಡ್ರೋಕ್ಲೋರಿಕ್ ಆಮ್ಲಗಳ ಸಂಯೋಗದಿಂದ ಕೃತಕ ಕರ್ಪೂರ (ಅಥವಾ ರಾಸಾಯನಿಕ ಕರ್ಪೂರ) ವನ್ನು ಸಹಾ ತಯಾರಿಸುತ್ತಾರೆ. ತೀಕ್ಷ್ಣವಾದ ವಾಸನೆಯಿಂದ ಕರ್ಪೂರದ ರುಚಿ ಕಹಿಯಾಗಿರುತ್ತದೆ. ಕರ್ಪೂರದ ಬಿಲ್ಲೆಯನ್ನು ಉರಿಸಿ ನೀರ ಮೇಲೆ ತೇಲಿಬಿಟ್ಟರೆ ನಂದುವುದಿಲ್ಲ. ಆಯುರ್ವೇದದಲ್ಲಿ ಕರ್ಪೂರವು ಕಫ ಸಂಬಂಧವಾದ ರೋಗಗಳಿಗೆ ರಾಮಬಾಣ. ಉಳುಕು ಮತ್ತು ನೋವಿನ ಶಮನಕ್ಕಾಗಿ ಕರ್ಪೂರ ಮಿಶ್ರಿತ 'ನೋವಿನ ಎಣ್ಣೆ' ತಿಕ್ಕುವರು. ಉತತಮ ಕ್ರಿಮಿನಾಶಕವಾದ ಕರ್ಪೂರವನ್ನು ವ್ಯವಸಾಯಗಾರರು ಬೆಳೆಗಳನ್ನು ನಾನಾ ಕೀಟ ಬಾಧೆಗಳಿಂದ ಪರಿಹರಿಸಲು ಉಪಯೋಗಿಸುತ್ತಾರೆ. ಸೀರೆ ಕುಪ್ಪಸಗಳನ್ನು ಗೆದ್ದಲು ಹಿಡಿಯದಂತೆಯೂ ಜಿರಳೆ ಮೊದಲಾದ ಹುಳ ಹುಪ್ಪಟೆಗಳ ಕಾಟ ಬಾರದಂತೆಯೂ ಜೋಪಾನವಾಗಿರಿಸಲು ಹಳ್ಳಿಯ ಹೆಂಗಸರು ಇಂದಿಗೂ ಕರ್ಪೂರದ ಪಕಳೆಗಳನ್ನು ಬಳಸುತ್ತಾರೆ. ಉತ್ತೇಜಕ ಗುಣವಿರುವ ಕರ್ಪೂರ ಸತ್ವವು ಆಧುನಿಕ ಚಿಕಿತ್ಸಾ ಪದ್ಧತಿಯಲ್ಲೂ ಸಾಕಷ್ಟು ಬಳಕೆಯಲ್ಲಿದೆ.

**ಸ್ಪರ್ಶ ವಿಷ**

ಕರ್ಪೂರವು ತುಸುಮಟ್ಟಿಗೆ ಸ್ಪರ್ಶ ವಿಷವೂ ಹೌದು. ಸ್ಪರ್ಶವಾದ ಭಾಗದಲ್ಲಿ ಮುಖ್ಯವಾಗಿ ಕಣ್ಣು ತುಟಿ, ನಾಲಗೆ ಇಂತಹ ಅಂಗಾಂಗಗಳಲ್ಲಿ ಉರಿ, ಊತ, ವೇದನೆ ಕಾಣಿಸುತ್ತವೆ. ಚರ್ಮ ಕೆಂಪಾಗುವುದು. 15 ಗ್ರೇನ್ಸ್‌ಗಳಷ್ಟು ಕರ್ಪೂರ ಸೇವಿಸಿದರೆ ಅದು ಪ್ರಾಣಾಪಾಯವನ್ನೂ ಉಂಟುಮಾಡಬಲ್ಲುದು. ಮಕ್ಕಳು 2–3 ಗ್ರೇನ್ಸ್ ಕರ್ಪೂರ ತಿಂದರೂ ಮಾರಕ ದುಷ್ಪರಿಣಾಮಗಳಿಂದ ನರಳಬಹುದು.

**ಲಕ್ಷಣ**

ಕರ್ಪೂರ ವಿಷಪ್ರಾಶನವಾದ ರೋಗಿಯ ಬಾಯಿಯಲ್ಲಿ ಕರ್ಪೂರದ ಘಾಟು ವಾಸನೆ ಸ್ಪಷ್ಟವಾಗಿ ಗೋಚರಿಸುತ್ತದೆ. ಬಾಯಿ, ಗಂಟಲುಗಳಲ್ಲಿ ಉರಿ, ಅಸಾಧ್ಯ ನೀರಡಿಕೆ, ವಾಕರಿಕೆ, ತಲೆ ತಿರುಗುವುದು, ವಾಂತಿ ಪ್ರಾರಂಭಿಸುವುದು. ರೋಗಿಯು ತೀರಾ ಉದ್ವೇಗಕ್ಕೊಳಗಾಗುತ್ತಾನೆ. ದೃಷ್ಟಿದೋಷವೂ ಉಂಟಾಗಬಹುದು. ಅವನ ಕಣ್ಣ ಬೊಂಬೆ ಅರಳುತ್ತದೆ, ನಾಡಿಬಡಿತ ತೀವ್ರವಾಗುತ್ತದೆ ಮತ್ತು ಉಸಿರಾಟ ಮಂದವಾಗುತ್ತದೆ. ರೋಗಿಯ ಮೈ ಕೈ ಸೆಟೆದುಕೊಂಡು ಬಡಬಡಿಸುವುದು, ಶಟೆ, ಕುಸಿತ, ಸ್ಮೃತಿ ತಪ್ಪುವುದು, ಕರ್ಪೂರ ವಿಷ ಸೇವಿಸಿದ ರೋಗಿಯ ಉಸಿರು, ಮಲಮೂತ್ರ, ವಾಂತಿಯಲ್ಲಿಯೂ ಸಹ ಕರ್ಪೂರದ ವಾಸನೆ ಇರುತ್ತದೆ.

**ಪ್ರತ್ಯೌಷಧ**

ಕರ್ಪೂರ ವಿಷಪ್ರಾಶನವಾದ ರೋಗಿಯನ್ನು ತಕ್ಷಣ ಆಸ್ಪತ್ರೆಗೆ ಸೇರಿಸಬೇಕು. ಅವನಿಗೆ ತತ್ತಿಯ ಲೋಳೆ, ಹಾಲು ಅಥವಾ ಅನ್ನ ಬಸಿದ ಗಂಜಿ ಕುಡಿಸಬೇಕು. ರೋಗಿಯ ಗಂಟಲೊಳಗೆ ಬೆರಳು ತುರುಕಿಯಾಗಲಿ, ಉಪ್ಪು ನೀರು ಕುಡಿಸಿಯಾಗಲಿ ವಾಂತಿ ಮಾಡಿಸುವುದು, ಹೊಟ್ಟೆ ತೊಳೆಯುವುದು ಮತ್ತು ಭೇದಿ ಮಾಡಿಸುವುದು ಮೊದಲಾದ ಚಿಕಿತ್ಸಾ ವಿಧಾನಗಳಿಂದ ಹೊಟ್ಟೆಯೊಳಗಿನ ವಿಷವನ್ನು ಆದಷ್ಟು ಬೇಗ ಹೊರಕ್ಕೆ ಹಾಕಬೇಕು. ಶಟೆಗಳ ನಿವಾರಣೆಗೆ ಶಾಮಕ, ಉಪಚಾರ ನಡೆಸಬೇಕು. ವಿಶ್ರಾಂತಿ, ದ್ರವ ಆಹಾರ ಮತ್ತು ಮನಸ್ಸಿಗೆ ಧೈರ್ಯ ನೀಡಬೇಕು.

ಪ್ರಾಣಾಪಾಯದ ಕಾಲಾವಧಿ 24 ತಾಸು.

ಮಕ್ಕಳ ಕೈಗೆ ಕರ್ಪೂರ ಸಿಗದಂತೆ ಇರಿಸಬೇಕು ಮತ್ತು ಕರ್ಪೂರವನ್ನು ತಿನ್ನುವ ವಸ್ತುಗಳಿಂದ ದೂರವಿರಿಸಬೇಕು.

## ಸೌಂದರ್ಯಕ್ಕೆ ಲೇಪಿಸಿರಿ, ಮುಕ್ಕಿದರೆ ದುಃಖಿಸುವಿರಿ

## ಬೋರಿಕ್ ಪೌಡರ್

ಸಾಹುಕಾರರ ಮಗಳು ಸುಜಾತಳ ಮದುವೆ ನಾಲ್ಕು ತಿಂಗಳ ಹಿಂದೆಯೇ ನಿರ್ಧಾರವಾಗಿತ್ತು. ಅವಳು ಬಿ.ಎ. ಪರೀಕ್ಷೆಗೆ ಕಟ್ಟಿದ್ದರಿಂದ ಮುಗಿಯುವುದನ್ನೇ ಎಲ್ಲರೂ ನಿರೀಕ್ಷಿಸುತ್ತಿದ್ದರು. ಆದರೆ ಇಷ್ಟು ದಿನ ಆರೋಗ್ಯವಾಗಿ ಲವಲವಿಕೆಯಿಂದಿದ್ದ ವಧು ಸುಜಾತ ದಿನದಿಂದ ದಿನಕ್ಕೆ ಸುಸ್ತಾದಳು. ಕ್ರಮೇಣ ಬಿಳಚಿಕೊಂಡಳು. ಊಟ ತಿಂಡಿ, ಕೊನೆಗೆ ಮಾತಾಡುವುದು ಸಹ ಕಮ್ಮಿಯಾಯಿತು. ಪರೀಕ್ಷೆಗಾಗಿ

ಓದುವ ನೆಪ ಒಂದಿಲ್ಲದಿದ್ದರೆ ಎಲ್ಲರೂ ಆತಂಕಪಡುತ್ತಿದ್ದರೇನೋ! ಎಲ್ಲಾ ದೃಷ್ಟಿಯಿಂದ ಅನುಕೂಲವಾದ ನಾಲ್ಕು ಅಂಕೆಯ ಪಗಾರ ತರುವ ಇಂಜಿನಿಯರ್ ವರನನ್ನು ಕೈಹಿಡಿಯಲಿದ ಸುಜಾತ ವ್ಯಾಕುಲಗೊಳ್ಳಲು ಕಾರಣವೇ ಇರಲಿಲ್ಲ!

ಸಾಹುಕಾರರಿಗೆ ಮೈ ಜಡ್ಡಾಗಿತ್ತೆಂದು ಹೇಳಿ ಕಳಿಸಿದ ಕಾರಣ ಅವರ ಮನೆಗೆ ಹೋದೆ. ಅಂದೇ ಪರೀಕ್ಷೆಯ ಕೊನೆಯ ಪೇಪರ್ ಮುಗಿಸಿದ್ದ ಸುಜಾತ ಗೆಳತಿಯರೊಂದಿಗೆ ಹೊರಗೆ ಹೊರಡುವ ಸನ್ನಾಹದಲ್ಲಿದ್ದಳು. ಬಹು ದಿನಗಳ ಮೇಲೆ ಇಂದು ಸುಜಾತ ತುಂಬಾ ಉಲ್ಲಾಸವಾಗಿರುವುದನ್ನು ನೋಡಿ ಸಂತೋಷವಾಯಿತು. ಒಂದು ಕ್ಷಣ ಅವಳ ಮೋರೆ ದಿಟ್ಟಿಸಿದೆ. ಸಿನಿಮಾಕ್ಕೆ ಹೊರಟಿದ್ದೇವೆ ಮಾವ ಎಂದು ನುಡಿದಳು.

'ವೆರಿಗುಡ್ ಸಂಗಂನಲ್ಲಿ ಒಳ್ಳೇ ಪಿಕ್ಚರ್ ಇದೆ. ಪರೀಕ್ಷೆ ಮುಗಿದದ್ದಕ್ಕೆ ಅಂತ ಕಾಣುತ್ತೆ ಒಳ್ಳೆಯದು' ಎಂದು ಹೇಳುತ್ತಿದ್ದಂತೆ ಅವಳ ತಂಗಿ ಮಾಲಾ ಸಿದ್ಧಳಾಗಿ ಬಂದು 'ಟಾಟಾ' ಎಂದು ಕೈಯಾಡಿಸಿದಳು.

'ಸುಜೀ, ತುಟಿಯಲ್ಲಿ ತುಸು ಪೌಡರ್ ಅಂಟಿಕೊಂಡಿದೆ ಒರಸಿಕೊ' ಎಂದು ಮೆಲ್ಲನೆ ಹೇಳಿದೆ.

'ಪೌಡರ್ ಮುಕ್ಕುವಾಗ ಅಂಟಿಕೊಂಡದ್ದು ಮಾಮ, ಅದು' ಎಂದು ಮಾಲಾ ವ್ಯಾಖ್ಯಾನ ಮಾಡುತ್ತಿದ್ದ ಹಾಗೇ ಸುಜಾತ ತುಟಿಯನ್ನು ಒರೆಸಿಕೊಂಡು, ತಂಗಿಯನ್ನು ಎಳೆದುಕೊಂಡು, ಗೇಟಿನ ಹೊರಗೆ ಕಾದು ನಿಂತಿದ್ದ ಗೆಳತಿಯರನ್ನು ಸೇರಿಕೊಂಡಳು.

**ವಿಷ ಲಕ್ಷಣ**

ಪೌಡರ್ ಮುಕ್ಕುವ ಹವ್ಯಾಸಕ್ಕೆ ಎಷ್ಟು ದಿನದಿಂದ ಬಲಿ ಬಿದ್ದದ್ದಳೋ – ಈಗ ಅದೊಂದು ಕೆಟ್ಟ ಚಾಳಿಯಾಗಿದೆ. ಮಾತ್ರವಲ್ಲ ದೀರ್ಘಕಾಲದ ವಿಷಲಕ್ಷಣಗಳನ್ನೂ ಬೀರಿದೆ. ನಾವು ಬಳಸುವ ಸೌಂದರ್ಯವರ್ಧಕ ಟಾಲ್ಕಾಂ – ಬೇಬಿ ಪೌಡರ್‌ಗಳಲ್ಲಿ ಕ್ರಿಮಿನಾಶಕವೆಂದು ಸೇರಿಸಿದ ಬೋರಿಕ್ ಆಸಿಡ್ ದೀರ್ಘಕಾಲದ ಬಳಕೆಯಿಂದ ಉಪದ್ರವಗಳನ್ನು ಉಂಟು ಮಾಡುವುದರಲ್ಲಿ ಸಂದೇಹವಿಲ್ಲ. ವರ್ಷಂಪ್ರತಿ ಕನಿಷ್ಠ 15 ಸಾವು ಸಂಭವಿಸುತ್ತವೆ. ಪ್ರಾಣಾಪಾಯದ ಪ್ರಮಾಣ (ಸೇವನೆ) 15 ಗ್ರೇನ್ಸ್. ಬೋರಿಕ್ ಆಸಿಡ್ಡನ್ನು ಆಹಾರ ಧಾನ್ಯಾ ಕೆಡದಂತೆ ದೀರ್ಘಕಾಲ ಜೋಪಾನವಾಗಿರಿಸುವುದಕ್ಕೂ ಬಳಸುತ್ತಾರೆ. ಬಾಯಿಹುಣ್ಣು, ಒಸಡು ಬಾವು, ಗಂಟಲು ನೋವುಗಳಿಂದ ನರಳುವ ರೋಗಿಗಳು ಬೋರಿಕ್ ಪೌಡರ್ ಕಲಿಸಿದ ಬಿಸಿ ನೀರಿನಿಂದ ಬಾಯಿ ಮುಕ್ಕಳಿಸಿದರೆ ಹುಣ್ಣಗಳು ಮಾಯವಾಗುವಂತೆ ಬೋರಿಕ್ ಪೌಡರನ್ನು ಕಲಸಿ ಹಚ್ಚುತ್ತಾರೆ.

ಪ್ರಾಣಾಪಾಯದ ಪ್ರಮಾಣದಲ್ಲಿ ಅಕಸ್ಮಾತ್ ಬೋರಿಕ್ ಪೌಡರನ್ನು ಸೇವಿಸಿದ ರೋಗಿಗಳಿಗೆ ತಕ್ಷಣ ವೈದ್ಯ ಸಹಾಯ ಒದಗಿಸಬೇಕು. ವಾಂತಿ, ರಕ್ತ ಭೇದಿಗಳಿಂದ ರೋಗಿ ನರಳುತ್ತಾನೆ. ಅವನ ಮೋರೆಯ ಮಾಂಸಖಂಡ ಸೆಳೆಯುತ್ತವೆ. ಅಲಸ್ಯ ಜ್ವರ ಕಂಡು ಬರುವುದು. ಕ್ರಮೇಣ ರೋಗಿಯ ಮೋರೆ ನೀಲಿ ಛಾಯೆಗೆ ತಿರುಗುವುದು ಮೂತ್ರದಲ್ಲಿ ಅಲ್ಬುಮಿನ್ ಮತ್ತು ಕೆಂಪು ಕಣಗಳು ಇರುತ್ತವೆ.

### ಪ್ರತ್ಯೌಷಧ

ಬೋರಿಕ್ ಆಸಿಡ್ ಸೇವಿಸಿದ ರೋಗಿಗೆ ಮೊದಲು ಸರ್ವಮಾನ್ಯ ಪ್ರತ್ಯೌಷಧವನ್ನು ಕುಡಿಸಬೇಕು (ಒಂದು ಕಪ್ ಚಹ ನಾಲ್ಕು ಔನ್ಸ್+ನಾಲ್ಕು ಔನ್ಸ್ ಮಿಲ್ಕ್ ಆಫ್ ಮೆಗ್ನೀಷಿಯಾ+ಬ್ರೆಡ್ ಸುಟ್ಟ ಕರಿ 8 ಔನ್ಸ್) ಹಾಲು, ತತ್ತಿಯ ಲೋಳೆ ಅಥವಾ ಸುಣ್ಣದ ತಿಳಿ ನೀರನ್ನು ಕುಡಿಸಬಹುದು. ರೋಗಿಯ ಗಂಟಲಲ್ಲಿ ಬೆರಳು ತುರುಕಿಸಿ ಅಥವಾ ಸಾಸುವೆ ಅರೆದು ಹಾಕಿದ ಬಿಸಿನೀರು ಕುಡಿಸಿ ವಾಂತಿ ಮಾಡಿಸಬೇಕು. ಹೊಟ್ಟೆ ತೊಳೆಯುವುದು ಭೇದಿ ಮಾಡಿಸುವುದು ಮೊದಲಾದ ವಿಧಾನಗಳಿಂದ ಹೊಟ್ಟೆಯ ವಿಷವನ್ನು ಹೊರಕ್ಕೆ ಹಾಕಬೇಕು. ಗ್ಲೂಕೋಸ್, ಉಪ್ಪುನೀರುಗಳನ್ನು ರಕ್ತನಾಳದ ಮೂಲಕ ನೀಡಬೇಕಲ್ಲದೆ ಶಟೆ ನಿವಾರಣೆಗೂ ರಕ್ತಹೀನತೆಗೂ ಸೂಕ್ತ ಚಿಕಿತ್ಸೋಪಾಯಗಳನ್ನು ಕೈಗೊಳ್ಳಬೇಕು. ವಿಶ್ರಾಂತಿ, ದ್ರವಾಹಾರ, ರೋಗಿಗೆ ಅತ್ಯಗತ್ಯ.

ಬೋರಿಕ್ ಪೌಡರನ್ನು ಹೆಚ್ಚು ಪ್ರಮಾಣದಲ್ಲಿ ಬೆರೆಸಿದ್ದ ತೀಕ್ಷ್ಣ ದ್ರಾವಕದಿಂದ ಅಕಸ್ಮಾತ್ ಬಾಯಿ ಮುಕ್ಕಳಿಸಿದರೆ ನಾಲಗೆ ಗಂಟಲು ಮತ್ತು ಬಾಯಿಯಲ್ಲಿ ಸುಟ್ಟ ಗಾಯದಂತೆ ವ್ರಣಗಳಾಗುತ್ತವೆ. ಒಸಡು ಊತ, ಬಾಯಿ ನೋವು ಕಾಣಿಸಬಹುದು. ಇದಕ್ಕೆ ಸೂಕ್ತ ಉಪಚಾರ ಮಾಡಿಸಬೇಕು.

### ಎಚ್ಚರ ಅಗತ್ಯ

ಬೋರಿಕ್ ಆಸಿಡ್ಡನ್ನು ದೀರ್ಘಕಾಲ ಅಲ್ಪ ಪ್ರಮಾಣದಲ್ಲಿ ಸೇವಿಸುವುದರಿಂದ ಅಗ್ನಿಮಾಂದ್ಯ, ಅರುಚಿ, ಅಪಚನ ಮೊದಲಾದ ಉಪದ್ರವ ಕ್ರಮೇಣ ಕಾಣಿಸುವುದು ದೇಹದ ತೂಕ ಕುಂದಿ, ಆಸಕ್ತಿ, ದೇಹಾಯಾಸ, ನಿರಾಸಕ್ತಿ ಉಂಟಾಗುತ್ತದೆ. ಭೇದಿ ಆಗುವುದುಂಟು. ಕೆಲವೊಮ್ಮೆ ಬೋರಿಕ್ ಆಸಿಡ್ ಸ್ಪರ್ಶವೂ ವಿಷವಾಗಿ ಪರಿಣಮಿಸುವುದೂ ಉಂಟು.

ಇಂತಹ ರೋಗಿಗಳನ್ನು ವಿಷ ಸಂಪರ್ಕದಿಂದ ತಪ್ಪಿಸುವುದಲ್ಲದೆ, ಮುಂದೆ ಯಾವ ರೀತಿಯಲ್ಲಿಯೂ ಬೋರಿಕ್ ಆಸಿಡ್ ಬಳಸದಂತೆ ಜಾಗ್ರತೆ ವಹಿಸಬೇಕು. ಸ್ಪರ್ಶ ವಿಷದಿಂದ ಉಂಟಾದ ಚರ್ಮರೋಗ, ವ್ರಣ ಹಾಗೂ ಹುಣ್ಣಗಳಿಗೆ ಸೂಕ್ತ ಉಪಚಾರ ನಡೆಸಬೇಕು.

ಬೋರಿಕ್ ಆಸಿಡ್ ಮಿಶ್ರವಾದ ಪೌಡರ್ ಮಕ್ಕಳ ಕೈಯಲ್ಲಿ ದುರುಪಯೋಗವಾಗುವ ಸಂದರ್ಭಗಳೂ ಇಲ್ಲದಿಲ್ಲ. ವಿಷ ಪ್ರಾಶನವಾದ ಮಕ್ಕಳಲ್ಲಿ ಶೇಕಡಾ 50ರಷ್ಟು ಬಾಲಕರು ಸಾವಿಗೆ ತುತ್ತಾಗುತ್ತಾರೆ. ಆದ್ದರಿಂದ ಈ ದ್ರವ ಮಕ್ಕಳ ಕೈಗೆ ಸಿಗದಂತೆ ಜಾಗ್ರತೆ ವಹಿಸಬೇಕು.

## ಉಗುರಿನ ಅಂದಕೆ ಲೇಪಿಸಬಹುದು

## ಸೇವಿಸಿದರೋ ಅಪಾಯ ಖಚಿತ : ಫ್ರೆಂಚ್ ಪಾಲಿಷ್

ಫ್ರೆಂಚ್ ಪಾಲಿಷ್ ಬಳಿದರೆ ಮೇಜು, ಕುರ್ಚಿಗಳು ಮಿರಿ ಮೀರಿ ಮಿಂಚುತ್ತವೆ. ಮನೆಯ ಬಾಗಿಲು, ಕಿಟಕಿ, ಬಿಸಿಲು, ಮಳೆ, ಗಾಳಿಗಳ ಹೊಡೆತವನ್ನು ಸಹಿಸಿಕೊಳ್ಳಲಿಕ್ಕೂ ಹುಳ ಹುಪ್ಪಟೆಗಳ ಹಾವಳಿಯಿಂದ ಕೆಡದಂತೆ ರಕ್ಷಿಸುವುದಕ್ಕೂ ವಾರ್ನಿಷ್ ಬಳಿದರೆ ಉಪಯುಕ್ತ. ಬಣ್ಣದ ತಯಾರಿಕೆಯಲ್ಲಿ ಸಹ ವಾರ್ನಿಷ್‌ಗೆ ಅಗ್ರಸ್ಥಾನ. ಈ ವಾರ್ನಿಷ್ ಫ್ರೆಂಚ್ ಪಾಲಿಷ್ ಉಪಯುಕ್ತ ವಸ್ತುವಾಗಿದ್ದರೂ ಆಕಸ್ಮಿಕವಾಗಿ ಸೇವಿಸಿದರೆ, ಪ್ರಾಣಾಪಾಯ ಸಂಭವಿಸಬಹುದು. ಕೆಲವೊಮ್ಮೆ ಇದು ಸ್ಪರ್ಶ ವಿಷವಾಗಿಯೂ ಆಘ್ರಾಣ ವಿಷವಾಗಿಯೂ ಪರಿಣಮಿಸುತ್ತದೆ. ಹದಿನೈದು ಗ್ರಾಮುಗಳಷ್ಟು ಎಂದರೆ ಅರ್ಧ ಔನ್ಸ್ ಪ್ರಮಾಣದಷ್ಟು ವಾರ್ನಿಷ್- ಫ್ರೆಂಚ್ ಪಾಲಿಷ್ ಸೇವಿಸಿದರೆ ಮಾರಕ ದುಷ್ಪರಿಣಾಮಗಳಿಗೆ ತುತ್ತಾಗಬಹುದು.

ವಿವಿಧ ಕೈಗಾರಿಕೆಗಳಲ್ಲಿ ವಾರ್ನಿಷ್‌ನ್ನು ಅಥವಾ ಇದೇ ವರ್ಗಕ್ಕೆ ಸೇರಿದಿ ಟರ್ಪೆಂಟೈನನ್ನು ಬೇಯಿಸುವಾಗ ಬರುವ ಹಬೆಯನ್ನು (ಹೊಗೆಯನ್ನು) ಮೂಸುವುದು ತೀರಾ ಅಪಾಯಕರ, ಅಂಥ ರೋಗಿಗಳ ಮೂಗು, ಕಣ್ಣುಗಳಲ್ಲಿ ನವೆ, ತುರಿಕೆ ಕಾಣಿಸಿಕೊಂಡು ಉಸಿರು ಕಟ್ಟಿದಂತಾಗುವುದು. ಎದೆ ಉರಿ, ಕಣ್ಣು ಕತ್ತಲು ಬರುವುದು. ಕೆಲವೊಮ್ಮೆ ಮೂರ್ಛೆ ಹೋಗಬಹುದು. ಉಸಿರಾಟ ನಾಡಿಯ ಬಡಿತದಲ್ಲಿಯೂ ಅನಿರೀಕ್ಷಿತ ಏರುಪೇರು ಉಂಟಾಗುವುವು. ಶಟೆಗಳು ಕಾಣಿಸುವುವು. ಮರಣವೂ ಸಂಭವಿಸಬಹುದು.

### ರೋಗಿಯ ಉಪಚಾರ

ಇಂತಹ ವಿಪತ್ತಿಗೆ ಸಿಕ್ಕಿದ ರೋಗಿಯನ್ನು ಮೊದಲು ವಿಷದ ಪರಿಸರದಿಂದ ಹೊರಕ್ಕೆ ಕರೆತಂದು ಸ್ವಚ್ಛ ಗಾಳಿಯಿರುವಲ್ಲಿಗೆ ಸ್ಥಳಾಂತರಿಸಬೇಕು. ರೋಗಿಯನ್ನು ಅಂಗಾತ ಮಲಗಿಸಿ, ಬಿಗಿ ಉಡಿಗೆ, ತೊಡಿಗೆಗಳನ್ನು ಸಡಿಲಿಸಿ, ಮೋರೆ ಎದೆಗಳ ಸ್ವಲ್ಪ ತಣ್ಣೀರು ಸಿಂಪಡಿಸಬೇಕು. ಅಗತ್ಯವಾದರೆ ಕೃತಕ ಉಸಿರಾಟ– ಆಮ್ಲಜನಕ ನೀಡಿಕೆಗಳನ್ನು ಪೂರೈಸಬೇಕು.

ಫ್ರೆಂಚ್ ಪಾಲಿಷ್ ಅಥವಾ ಟರ್ಪೆಂಟೈನ್ ವಿಷ ಸೇವಿಸಿದ ರೋಗಿಯ ಗಂಟಲು– ನಾಲಗೆಯಲ್ಲಿ ಕೆರೆತ, ಉರಿ ಮತ್ತು ನೋವು ಕಾಣಿಸುವುವು. ವಾಕರಿಕೆ, ವಾಂತಿ ಮತ್ತು ಭೇದಿಯಾಗುವುದು. ಹೊಟ್ಟೆ ಉರಿ, ಹೊಟ್ಟೆ ನೋವು ಮತ್ತು ಮೂತ್ರ ವಿಸರ್ಜನೆಯಲ್ಲಿ ನೋವು ಕಾಣಿಸಬಹುದು. ಉಸಿರಾಟದಲ್ಲಿಯೂ ನಾಡಿಯಲ್ಲಿಯೂ ಏರುಪೇರಾಗುವುವು. ಮುಖದ ಚಹರೆ ಬದಲಾಗಿ ವಿವರ್ಣತೆಯೂ, ನಡುಕ, ಕಂಪನ ಮತ್ತು ಶಟೆ– ಮೂರ್ಛೆ ಉಂಟಾಗುತ್ತದೆ. ರೋಗಿಯ ಮೂತ್ರದಲ್ಲಿ ಆಲ್ಬುಮಿನ್, ಹಿಮೋಗ್ಲೋಬಿನ್ ಮತ್ತು ರಕ್ತದ ಕೆಂಪು ಕಣ ತುಂಬಿರುವುದು ಕಾಣಿಸಬಹುದು.

### ಪ್ರತ್ಯೌಷಧ

ಇಂತಹ ರೋಗಿಗಳಿಗೆ ತಕ್ಷಣ ವೈದ್ಯ ಸಹಾಯ ಒದಗಿಸಬೇಕು. ಪ್ರಥಮೋಪಚಾರವಾಗಿ ರೋಗಿಗೆ ತತ್ತಿಯ ಲೋಳೆ, ಹಾಲು ಅಥವಾ ಅಳ್ಳಿಟ್ಟಿನ ರಾಡಿಯನ್ನು ಕುಡಿಸಬೇಕು. ರೋಗಿಯ ಗಂಟಲೊಳಗೆ ಬೆರಳಾಡಿಸಿ ಅಥವಾ ಬಿಸಿನೀರಿಗೆ ಸಾಸಿವೆ ಕಾಳು ಅರೆದು ಸೇರಿಸಿ ಕುಡಿಸಿ ವಾಂತಿ ಮಾಡಿಸಬೇಕು. ಭೇದಿ ಮಾಡಿಸುವುದು. ಹೊಟ್ಟೆ ತೊಳೆಯುವುದು ಮೊದಲಾದ ವಿಧಾನಗಳಿಂದ ರೋಗಿಯ ಹೊಟ್ಟೆಯಲ್ಲಿ ಇರುವ ವಿಷವನ್ನು ಹೊರಹಾಕಬೇಕು. ರೋಗಿಗೆ ಧಾರಾಳ ನೀರು, ಬಾರ್ಲಿ ಕಷಾಯ ಗ್ಲೂಕೋಸ್ ಅಥವಾ ಎಳನೀರು ಕುಡಿಸಬೇಕು. ರೋಗಿಗೆ ಹೃದಯದ ಊತ ಮತ್ತು ಮೂತ್ರ ಲೋಪದ ಉಪದ್ರವಗಳು ಕಾಣಿಸುವ ಅಪಾಯವಿದೆ. ಅವುಗಳಿಗೆ ಸೂಕ್ತ ಉಪಚಾರ ಮಾಡಬೇಕು.

ರೋಗದ ಪ್ರಾಣಾಪಾಯದ ಕಾಲಾವಧಿ 24 ತಾಸು. ಆದರೆ ಸೂಕ್ತ ಚಿಕಿತ್ಸೆಯಿಂದ ಗುಣಮುಖನಾದ ರೋಗಿಗೆ ನಾಲ್ಕಾರು ವಾರ ವಿಶ್ರಾಂತಿ ಅಗತ್ಯ.

ಮನೆಗಳಲ್ಲಿ ಅರೆ ಬಳಸಿ ಉಳಿದ ವಾರ್ನಿಷ್– ಫ್ರೆಂಚ್ ಪಾಲಿಷ್ ಡಬ್ಬಿಗಳನ್ನು ಸಿಕ್ಕಲ್ಲಿ, ಒಗೆದು ಬಿಟ್ಟು, ಅವು ಮಕ್ಕಳ ಕೈಗೆ ಸಿಕ್ಕಿ ಪ್ರಾಣಾಪಾಯ ಸಂಭವಿಸಿದ ಘಟನೆಗಳಿಗೆ ಲೆಕ್ಕವಿಲ್ಲ, ಆದ್ದರಿಂದ ವಾರ್ನಿಷ್ ಫ್ರೆಂಚ್ ಪಾಲಿಷ್ ಅಥವಾ ಟರ್ಪೆಂಟೆನ್ನುಗಳ ಖಾಲಿಯಾದ ಅಥವಾ ತುಸು ಉಳಿದ ಡಬ್ಬಿ, ಶೀಷೆ ಮಕ್ಕಳ ಕೈಗೆ ಸಿಗದಂತೆ ಮುಂಜಾಗ್ರತೆ ವಹಿಸಬೇಕು.

# ಅಲ್ಪವೆಚ್ಚದ ಸಂಜು ನಿರೋಧಕ, ಪ್ರಮಾಣ ತಪ್ಪಿದರೆ ಅತಿ ಬಾಧಕ : ಪೊಟಾಸಿಯಂ ಪರಮಾಂಗನೇಟ್

ಕೆಲವು ವರ್ಷಗಳ ಹಿಂದೆ ನಾನು ಒಂದು ಸಣ್ಣ ಹಳ್ಳಿಯಲ್ಲಿ ಪ್ರಾಕ್ಟೀಸ್ ಮಾಡುತ್ತಿದ್ದೆ. ಕಾರಣಾಂತರಗಳಿಂದ ಆ ಊರಿಗೆ ಶ್ರೀಮಂತರೊಬ್ಬರು ಬಂದು ಕೆಲವು ದಿನ ತಂಗಿದ್ದರು. ಅವರ ಮಡದಿಗೆ ಹಳ್ಳಿಯೆಂದರೆ ಭಯ. ಹಳ್ಳಿಯಲ್ಲಿ ದೊರಕುವ ಕಲ್ಮಷ– ಕ್ರಿಮಿ ಮಿಶ್ರಿತವೆಂಬ ಭಾವನೆ ಹೇಗೂ ಏನೋ ತಲೆಯೊಳಗೆ ಹೊಕ್ಕಿತ್ತು. ಆದರೆ ವಿಧಿಯಿಲ್ಲದೆ ಅವನ್ನೇ ನಚ್ಚಿಕೊಳ್ಳಬೇಕಾಗಿ ಬಂದ ತಮ್ಮ ದುರ್ದೈವವನ್ನು ಹಳಿಯುತ್ತ, ಕೋಳಿ ತತ್ತಿಯಿಂದ ತೊಡಗಿ, ಬಾಳೆಹಣ್ಣು, ಬದನೆಕಾಯಿಗಳನ್ನು ಸಹ ಕ್ರಿಮಿನಾಶಕದಲ್ಲಿ ಅದ್ದಿ ತೆಗೆದ ಮೇಲೆಯೇ ಬಳಸುತ್ತಿದ್ದರು. ಈ ಅತಿರೇಕ ಎಲ್ಲಿಗೆ ಮುಟ್ಟಿತಂದರೆ ಒಮ್ಮೆ ಅವರು ಅವಲಕ್ಕಿಯನ್ನೂ ಈ ದ್ರವ್ಯದಲ್ಲಿ ಅದ್ದಿ ಬಳಸಿದರು.

ಅವರ ದೌರ್ಭಾಗ್ಯ. ಅವಲಕ್ಕಿ ತಿಂದ ಸ್ವಲ್ಪ ಹೊತ್ತಿನಲ್ಲಿ ಅಸಾಧ್ಯವಾದ ನೀರಡಿಕೆ, ಗಂಟಲು, ನಾಲಿಗೆ ನೋವು, ನವೆ, ತುರಿಕೆ ಕಾಣಿಸಿಕೊಳ್ಳಲು ನನಗೆ ಕರೆ ಕಳುಹಿಸಿದರು. ರೋಗಿಯ ಬಾಯಿಯಲ್ಲಿ ನೇರಳೆ ಬಣ್ಣದ ಛಾಯೆ ಕಂಡುಬಂದುದರಿಂದಲೂ, ಇವರ ಕ್ರಿಮಿನಾಶಕದ ಮಡಿವಂತಿಕೆಯ ಅತಿರೇಕದ ಕತೆ ನನಗೆ ಮೊದಲೇ ತಿಳಿದಿದ್ದುದರಿಂದಲೂ ಪೊಟಾಸಿಯಂ ಪರಮಾಂಗನೇಟ್ ವಿಷ ಸೇವನೆಯಾಗಿರಬಹುದೆಂದು ಊಹಿಸಿ, ವಿಚಾರಿಸಿದಾಗ ನನ್ನ ತರ್ಕ ನಿಜವಾಯಿತು.

### ಪ್ರಾಣಾಪಾಯ

ಹಾವು ಕಡಿದ ವಿಷಕ್ಕೂ, ಚೇಳು ಕುಟುಕಿದ ಗಾಯಕ್ಕೂ ಹಾಕಿ ತಿಕ್ಕಿ ವಿಷ ಪ್ರಸಾರವನ್ನು ತಡೆಗಟ್ಟಲು ಹಳ್ಳಿಗಳು ಕೂಡಾ ಬಳಸುವ ಪೊಟಾಸಿಯಂ ಪರಮಾಂಗನೇಟ್ ಹರಳನ್ನು ಕಾಣದವರಾರು? ನೇರಳೆ ಬಣ್ಣದ ಈ ಕ್ರಿಮಿನಾಶಕವನ್ನು ಕೆರೆ ಬಾವಿಗಳ ನೀರನ್ನು ಸ್ವಚ್ಛಗೊಳಿಸಲು ಬಳಸುತ್ತಾರೆ. ಅಲ್ಪ ಪ್ರಮಾಣದಲ್ಲಿ ಎಂದರೆ 1:1000 ಪ್ರಮಾಣದಲ್ಲಿ ಪೊಟಾಸಿಯಂ ಪರಮಾಂಗನೇಟ್ ಉತ್ತಮ ಕ್ರಿಮಿನಾಶಕವಾದರೂ ತೀಕ್ಷ್ಣ ಪ್ರಮಾಣದಲ್ಲಿ ಬಳಸಿದರೆ ಸ್ಪರ್ಶ ವಿಷವಾಗಿಯೂ, ಸೇವಿಸಿದರೆ ಪ್ರಾಶನ ವಿಷವಾಗಿಯೂ ಪರಿಣಮಿಸುತ್ತದೆ.

75 ರಿಂದ 150 ಗ್ರೇನ್ಸ್ ಪೊಟಾಸಿಯಂ ಹರಳನ್ನು ನುಂಗಿದರೆ ಪ್ರಾಣಾಪಾಯ ಉಂಟಾಗಬಹುದು. ದಪ್ಪ ಮುಲಾಮು ಅಥವ ಲೇಪ ಹಚ್ಚಿದರೆ ಅಂಗಾಂಗಗಳಲ್ಲಿ ಸುಟ್ಟ ಗಾಯಗಳಂತೆ ವ್ರಣವೂ ಇತರ ನಾನಾ ಉಪದ್ರವಗಳೂ ಕಾಣಿಸಬಹುದು. ವಿಷಪ್ರಾಶನಾದ 48 ತಾಸುಗಳಲ್ಲಿ ಪ್ರಾಣಾಪಾಯ ಸಂಭವಿಸಬಹುದು ಆದರೆ ಕೆಲವೊಮ್ಮೆ ತಾಸು. ಅರ್ಧ ತಾಸಿನಲ್ಲಿಯೇ ಮರಣವುಂಟಾಗಬಹುದು.

ಪೊಟಾಸಿಯಂ ಪರಮಾಂಗನೇಟನ್ನು ಆಕಸ್ಮಿಕವಾಗಿ ಸೇವಿಸಿದ ರೋಗಿಯ ನಾಲಗೆ ಗಂಟಲು ಮತ್ತು ಬಾಯಿಯಲ್ಲಿ ನೇರಳೆ ಛಾಯೆ ಕಾಣಿಸುತ್ತದೆ. ಗಂಟಲು ಊತ, ಕೆಮ್ಮು, ನೀರಡಿಕೆ ಉಂಟಾಗುತ್ತವೆ. ಹೊಟ್ಟೆ ನೋವು ಕಾಣಿಸಬಹುದು. ಗಂಟಲು ಊತದಿಂದ ನೀರನ್ನು ಕುಡಿಯಲಿಕ್ಕೂ, ಉಸಿರಾಡಲಿಕ್ಕೂ ತೊಂದರೆಯಾಗಬಹುದು. ರಕ್ತದ ಒತ್ತಡ ಇಳಿಮುಖವಾಗುತ್ತದೆ. ನಾಡಿಯು ಮಂದವಾಗುತ್ತದೆ. ಮೂತ್ರ ಲೋಪ ಆಘಾತ, ಮತ್ತು ಅರಿಶಿನ ಮಂಡಿಗೆ ರೋಗದ ಲಕ್ಷಣಗಳು ಕಾಣಿಸಬಹುದು ಅಥವಾ ಪ್ರಾಣಾಪಾಯ ಸಂಭವಿಸಬಹುದು.

### ಪ್ರತ್ಯೌಷಧ

ಪೊಟಾಸಿಯಂ ಪರಮಾಂಗನೇಟ್ ವಿಷ ನುಂಗಿದ ರೋಗಿಗೆ ತಕ್ಷಣ 4–6 ಲೋಟ ಹಾಲು ಕುಡಿಸಬೇಕು. ಹಾಲು ಸಿಕ್ಕದಿದ್ದಲ್ಲಿ ತಣ್ಣೀರನ್ನಾದರೂ ಕುಡಿಸಬಹುದು. ಒಂದು ಕಪ್ ಜಹದಲ್ಲಿ ಎಂಟು ಔನ್ಸ್ ಬ್ರೆಡ್ ಸುಟ್ಟ ಕರಿ ಮತ್ತು ನಾಲ್ಕು ಔನ್ಸ್ ಮಿಲ್ಕ್ ಆಫ್ ಮೆಗ್ನೇಷಿಯಾ ಬೆರಸಿ ಸಿದ್ಧಪಡಿಸಿದ ಸರ್ವಮಾನ್ಯ ಪ್ರತ್ಯೌಷಧ ಕುಡಿಸಬೇಕು. ತತ್ತಿಯ ಲೋಳೆ, ಅನ್ನ ಬಸಿದ ಗಂಜಿಯನ್ನು ಸಹ ಕುಡಿಸಬಹುದು. ರೋಗಿಯನ್ನು ಆಸ್ಪತ್ರೆಗೆ ಸಾಗಿಸುವುದು ಸೂಕ್ತ. ರೋಗಿಯ ಹೊಟ್ಟೆ ತೊಳೆಯುವುದು, ವಾಂತಿ ಮಾಡಿಸುವುದು ಮತ್ತು ವಿರೇಚನ ಚಿಕಿತ್ಸೆಗಳಿಂದ ವಿಷವನ್ನು ಹೊರ ಹಾರಬೇಕು

ಗರ್ಭಪಾತ ಮಾಡುವುದಕ್ಕಾಗಿ ಪೊಟಾಸಿಯಂ ಪರಮಾಂಗನೇಟಿನ ತೀಕ್ಷ್ಣ ಸಾಂದ್ರದ ಲೇಪವನ್ನು ಸ್ತ್ರೀಯರ ಗರ್ಭಕೋಶದ ಬಾಯಿಗೆ ಕೆಲವರು ಲೇಪಿಸುತ್ತಾರೆ. ಇದು ತೀರಾ ಅಪಾಯಕಾರಿ. ಉರಿ ವೇದನೆ, ರಕ್ತಸ್ರಾವ, ಜನನೇಂದ್ರಿಯ ವ್ರಣಗಳು ಉಂಟಾಗುವುದಲ್ಲದೆ ಪ್ರಾಣಾಪಾಯ ಕೂಡ ಸಂಭವ. ಇಂತಹ ದುರ್ವ್ಯಾಪಿ ರೋಗಿಗಳನ್ನು ತಕ್ಷಣ ಆಸ್ಪತ್ರೆಗೆ ಸಾಗಿಸಬೇಕು. ಲೇಪಿಸಿದ ವಿಷವನ್ನು ತಣ್ಣೀರಿನಿಂದ ತೊಳೆದು ತುರ್ತಾಗಿ ತಂಪಿನ ಉಪಚಾರ, ಕೈಗೊಳ್ಳಬಹುದು. ವ್ರಣರೋಪಣ ಚಿಕಿತ್ಸೆ, ವೇದನಾ ಶಾಮಕ ಉಪಚಾರ, ಅಷ್ಟೇ ಅಲ್ಲದೆ ಕೆಲವು ಸಂದರ್ಭದಲ್ಲಿ ಶಸ್ತ್ರ ಕ್ರಿಯೆಯ ಅಗತ್ಯವೂ ಬೀಳಬಹುದು.

# ಕೃಷಿ ಮಿತ್ರ ಜನ ಶತ್ರು : ಡಿ.ಡಿ.ಟಿ

ಡಿ.ಡಿ.ಡಿ.ಟಿಯನ್ನು 'ಒಕ್ಕಲಿಗರ ಬಂಧು' ಎಂದು ಕರೆಯುತ್ತಾರೆ. ಸುಲಭ ಬೆಲೆಯಲ್ಲಿ ನಾನಾ ಸಾಂದ್ರತೆ, ಛಾಪು ಹಾಗೂ ವಿಧಾನಗಳಲ್ಲಿ ಮಾರುಕಟ್ಟೆಯಲ್ಲಿ ದೊರಕುವ ಈ ಕೀಟೌಷಧಿಯನ್ನು ಬೆಳಗಳನ್ನು ಹಾಳು ಮಾಡುವ ಬಗೆಬಗೆಯ ಕೀಟಗಳನ್ನು ನಿರ್ಮೂಲಗೊಳಿಸಲು ಸಿಂಪಡಿಸುತ್ತಾರೆ. ಮಲೇರಿಯಾ ಸೊಳ್ಳೆಯ ನಿರ್ಮೂಲನಕ್ಕೆ, ಇರುವೆ ನೊಣ ಜಿರಲೆಗಳ ನಾಶಕ್ಕೆ ಮುಂತಾಗಿಯೂ ಡಿ.ಡಿ.ಟಿ ಚಿಮುಕಿಸುವುದು ಸರ್ವೇ ಸಾಮಾನ್ಯವಷ್ಟೆ? ಡಿ.ಡಿ.ಟಿಯು ಮಾನವರ ಸೇವನೆಗೆ ತೀಕ್ಷ್ಣವಿಷ. ಕೆಲವೊಮ್ಮೆ ಸ್ಪರ್ಶವಿಷ ಹಾಗೂ ಮೂಸುವಿಷವಾಗಿ ಸಹ ಪರಿಣಮಿಸುವುದುಂಟು.

**ಉಪಶಮನ ಕ್ರಮ**

ಡಿ.ಡಿ.ಟಿ. ಚಿಮುಕಿಸುವುದೇ ಮೊದಲಾದ ಉದ್ಯೋಗದಲ್ಲಿದ್ದು ದೀರ್ಘಕಾಲ ಈ ಕೀಟೌಷಧಿಯ ಸ್ಪರ್ಶ– ಆಘ್ರಾಣಮಾಡುತ್ತಿರುವ ಅನೇಕ ಜನರು ಕಾಲಾಂತರದಲ್ಲಿ ಅನೇಕ ಬಗೆಯ ಉಪದ್ರವಗಳಿಗೆ ತುತ್ತಾಗಬಹುದು. ಅಂತಹ ರೋಗಿಗಳ ಅಂಗೈ ಮುಂಗೈಗಳಲ್ಲಿ ಚರ್ಮ ಸುಲಿಯುವುದು, ಬಿರುಕು, ವ್ರಣ, ನೀರುಸೋರುವ ಸಣ್ಣಪುಟ್ಟ ಗಾಯಗಳು, ಗಂದೆಗಳು ಕಾಣಿಸಿಕೊಳ್ಳಬಹುದು. ದೇಹಾಲಸ್ಯ, ಆಸಕ್ತಿ, ದೇಹದ ತೂಕ ಕಮ್ಮಿಯಾಗುವುದು ಮೊದಲಾದ ಉಪದ್ರವಗಳು ಉಂಟಾಗುವುದಲ್ಲದೆ– ಮೂಗು ಸೋರುವುದು (ನಿರಂತರ) ಕೈಕಾಲು ಜೋಮು ಹಿಡಿಯುವುದು, ಗಾಬರಿ ಗಲಿಬಿಲಿ, ಮನೋ ವ್ಯಾಕುಲತೆಗಳು ಉಂಟಾಗಿ ರೋಗಿಯು ಮನಸ್ಸಿನ ನೆಮ್ಮದಿ ಕಳೆದುಕೊಳ್ಳುತ್ತಾನೆ. ಇಂತಹ ವಿಪತ್ತಿಗೆ ತುತ್ತಾಗಿ ನರಳುವ ರೋಗಿಗಳನ್ನು ತಕ್ಷಣ ಡಿ.ಡಿ.ಟಿ ಸಂಪರ್ಕ ತಪ್ಪಿಸಿ ವಿಶ್ರಾಂತಿ ಹಾಗೂ ಸುಣ್ಣದ ಅಂಶ ಕೂಡಿದ ಪುಷ್ಟಿಯಾದ ಆಹಾರಗಳನ್ನು ಒದಗಿಸಬೇಕು ಡಿ.ಡಿ.ಟಿ.ಯು ಕಣ್ಣಿಗೆ ಸ್ಪರ್ಶವಾದ ಸಂದರ್ಭದಲ್ಲಿ ಕಣ್ಣುಗಳನ್ನು ತಣ್ಣೀರಿನಿಂದ ಚೆನ್ನಾಗಿ ತೊಳೆದುಬಿಡಬೇಕು.

ಡಿ.ಡಿ.ಟಿ ಪ್ರಾಣಾಪಾಯದ ಸೇವನಾ ಪ್ರಮಾಣವೆಂದರೆ 20 ಗ್ರಾಂ (ಸುಮಾರು 2/3 ಔನ್ಸ್‌ನಷ್ಟು). ಆದರೆ 5 ಗ್ರಾಂ ಪ್ರಮಾಣದಲ್ಲಿ ಡಿ.ಡಿ.ಟಿ ವಿಷ ಸೇವಿಸಿದರೂ ಕೂಡ ರೋಗಿಯು ತೀವ್ರ ಸ್ವರೂಪದ ವಿಷಚಿಹ್ನೆಗಳಿಂದ ನರಳುತ್ತಾನೆ. ವಿಷ ಪ್ರಾಶನವದ ಅರ್ಧತಾಸಿನೊಳಗಾಗಿ ರೋಗಿಯು ಹೆಚ್ಚಿನ ಪ್ರಮಾಣದಲ್ಲಿ ಕಾರಿಕೊಳ್ಳಲು ಪ್ರಾರಂಭಿಸುತ್ತಾನೆ; ಉದ್ರೇಕಕ್ಕೊಳಗಾಗಿದ್ದು ಭಯ ವಿಹ್ವಲತೆ– ಗಾಬರಿಗಳಿಂದ

ನರಳುತ್ತಾನೆ- ಕ್ರಮೇಣ ಅವನ ಕೈಕಾಲುಗಳು ಜೋಮು ಹಿಡಿಯುವುದಲ್ಲದೆ ಭೇದಿಯೂ ಪ್ರಾರಂಭವಾಗುತ್ತದೆ.

**ಹೆಚ್ಚು ವಿಷ ಸೇರಿದಾಗ**

ಮಾರಕ ಪ್ರಮಾಣದಲ್ಲಿ ಎಂದರೆ ಸುಮಾರು 20 ಗ್ರಾಂಗಳಷ್ಟು ಡಿ.ಡಿ.ಟಿ ಸೇವಿಸಿದ ರೋಗಿಯ ಪರಿಸ್ಥಿತಿ ತುಂಬಾ ಚಿಂತಾಜನಕವಾಗಿ ಪರಿಣಮಿಸುವುದಾದರೂ ಮೊದಮೊದಲು ಅಷ್ಟೇನೂ ದುರ್ಲಕ್ಷಣಗಳು ಕಾಣಿಸುವುದಿಲ್ಲ. ಎಂಟು ಹತ್ತು ತಾಸುಗಳ ನಂತರ ರೆಪ್ಪೆ ಹಾರುವುದು, ತಲೆ ತಿರುಗುವುದು, ಮೋರೆಸೆಳೆತ, ಕೊರಳ ನಡುಕ ಮೊದಲಾದ ಉಪದ್ರವಗಳು ಕಾಣಿಸುವುವು. ಅನಂತರ ಅದಿರುವಾಯುವು ಪ್ರಾರಂಭವಾಗಿ ನಡುಕಗಳು ಕ್ರಮೇಣ ತೀವ್ರ ಸ್ವರೂಪಕ್ಕೆ ತಿರುಗುವುವು. ರೋಗಿಯ ನಾಡಿಯಲ್ಲಿ ಏರುಪೇರುಗಳು ಗೋಚರಿಸದಿದ್ದರೂ ಉಸಿರಾಟವು ಮೊದಮೊದಲಿಗೆ ತೀವ್ರವಾಗಿದ್ದು ಕ್ರಮೇಣ ಮಂದಗತಿಗೆ ತಿರುಗುತ್ತದೆ. ಮುಂದೆ ರೋಗಿಯು ದೀರ್ಘಸುಪ್ತಿ ಮತ್ತು ಕುಸಿತಕ್ಕೊಳಗಾಗಿ ಸಾವಿಗೆ ತುತ್ತಾಗಬಹುದು.

ಡಿ.ಡಿ.ಟಿ. ವಿಷಪ್ರಯೋಗಕ್ಕೆ ತುತ್ತಾದ ರೋಗಿಯನ್ನು ವಿಷಪರಿಸರದಿಂದ ದೂರಕ್ಕೆ ಸಾಗಿಸಿ, ಮೈಕೈಗಳಿಗೆ ಹತ್ತಿಕೊಂಡಿದ್ದರೆ ಸಾಬೂನು ಹಚ್ಚಿ ನೀರಿನಿಂದ ಚೆನ್ನಾಗಿ ತೊಳೆದು ತೆಗೆಯಬೇಕು. ಅನಂತರ ತುಸು ಉಪ್ಪು ಅಥವಾ ಸಾಸಿವೆ ಕಾಳಿನ ಪುಡಿ ಬೆರೆತ ಉಗುರುಬೆಚ್ಚಗಿನ ನೀರನ್ನು ಕುಡಿಸಿ ವಾಂತಿ ಮಾಡಿಸುವುದು, ಹೊಟ್ಟೆ ತೊಳೆಸುವುದು, ಭೇದಿ ಉಪ್ಪು ವಿರೇಚನ ಮಾಡಿಸುವು ಮೊದಲಾದ ವಿಧಾನಗಳಿಂದ ವಿಷವನ್ನು ಹೊರಕ್ಕೆ ಹಾಕಲು ಪ್ರಯತ್ನಿಸಬೇಖು. ರೋಗಿಗೆ ಹಾಲನ್ನು ಕುಡಿಸಬಹುದು. ಆದರೆ ಉತ್ತೇಜಕ ಅನ್ನ ಪಾನಾದಿಗಳೂ ಉಪಚಾರಗಳೂ ವರ್ಜ್ಯ, ಕ್ಯಾಲ್ಸಿಯಂ ಗ್ಲೂಕೊನೇಟ್ ಸೂಜಿಮದ್ದು, ಗ್ಲೂಕೋಸ್ ಪೂರಣ, ಶಾಮಕ ಔಷಧಿಗಳು ಹೆಚ್ಚಿನ ನೆರವು ನೀಡುತ್ತದೆ.

## ಚಿಟಿಕೆ ತೂಕ ರುಚಿಗೆ;
## ಹಿಡಿಕೆ ಗಾತ್ರ ಅಪಾಯಕ್ಕೆ : ಉಪ್ಪು

ನಮ್ಮ ಆಹಾರದಲ್ಲಿಯೂ, ಔಷಧಿಗಳಲ್ಲಿಯೂ ಉಪ್ಪಿಗೆ ಬಹು ಮಹತ್ವದ ಸ್ಥಾನವಿದೆ. ಭೂಮಿಯೊಳಗೆ ಉಪ್ಪಿನ ನಿಕ್ಷೇಪಗಳಿದ್ದಲ್ಲಿ ಗಣಿಗಳನ್ನು ಕೊರೆದು ಉಪ್ಪು ಸಂಗ್ರಹಿಸುತ್ತಾರೆ ಹಾಗೂ ಸಮುದ್ರದ ಉಪ್ಪು ನೀರನ್ನು ಘನೀಕರಿಸಿಯೂ ಉಪ್ಪನ್ನು ತಯಾರಿಸುತ್ತಾರೆ. ಕ್ಷಾರ ತಯಾರಿಕೆಯಲ್ಲಿಯೂ ಇನ್ನಿತರ ಅನೇಕ ಉದ್ಯಮಗಳಲ್ಲಿಯೂ ಉಪ್ಪು ಉಪಯುಕ್ತವಾಗಿದೆ.

ಮಿತಿಮೀರಿ ಉಪ್ಪನ್ನು ಸೇವಿಸುವುದು ಆರೋಗ್ಯಕ್ಕೆ ಹಿತಕರವಲ್ಲ. ಮೂತ್ರಪಿಂಡದ ಕಾಯಿಲೆಗಳಲ್ಲಿ, ರಕ್ತದ ಅಧಿಕ ಒತ್ತಡ ಹಾಗೂ ಶೋಥ ರೋಗದಲ್ಲಿ ಉಪ್ಪು ವರ್ಜ್ಯ. ಒಮ್ಮೆಲೇ ಅರ್ಧ ಪೌಂಡಿನಷ್ಟು ಉಪ್ಪನ್ನು ಸೇವಿಸಿದರೆ ಪ್ರಾಣಾಪಾಯ ಉಂಟಾಗಬಹುದು.

ವಿಷಪ್ರಮಾಣದಲ್ಲಿ ಉಪ್ಪನ್ನು ಸೇವಿಸಿದ ರೋಗಿಯು ಅತಿಶಯವಾದ ನೀರಡಿಕೆ, ಉರಿ, ತಾಪಗಳಿಂದ ನರಳುತ್ತಾನೆ. ಮುಂಗೋಪ, ಗಲಿಬಿಲಿ ಮತ್ತು ಸಂಕಟ ಅವನನ್ನು ಕಾಡುತ್ತವೆ. ಪಕ್ಷಾಘಾತವೂ ಉಂಟಾಗಬಹುದು.

**ಚಿಕಿತ್ಸೆ ಮತ್ತು ಉಪಚಾರ:**

ಹೊಟ್ಟೆತೊಳೆಯುವುದು, ವಾಂತಿಮಾಡಿಸುವುದು ಮೊದಲಾದ ಲಾಕ್ಷಣಿಕ ಚಿಕಿತ್ಸೆಗಳನ್ನು ನಡೆಸಬೇಕು. ಉಪ್ಪು ವಿಷಪ್ರಯೋಗಕ್ಕೆ ತುತ್ತಾಗಿ ಪ್ರಾಣಪಾಯ ಒದಗುವ ಸಂಭವ ಕಮ್ಮಿಯಾದರೂ ದುರ್ಲಕ್ಷಣಗಳು ಕಾಣಿಸಿಕೊಂಡಾಗ ತಾತ್ಸಾರ ಮಾಡಬಾರದು.

## ಗಾಜನ ಪುಡಿ

ಹೆಚ್ಚಾಗಿ ಆತ್ಮಹತ್ಯೆಗೆ ಕೆಲವೊಮ್ಮೆ ಆಕಸ್ಮಿಕವಾಗಿ ಗಾಜಿನಪುಡಿ ಅಥವಾ ವಜ್ರದ ಪುಡಿ ಸೇವಿಸಲ್ಪಡುವುದುಂಟು. ಇವು ಸ್ವಭಾವದಿಂದ ಪ್ರಾಣಾಂತಿಕವಾಗಿವೆ. ನಯವಾದ ಗಾಜಿನ ಪುಡಿಯನ್ನು ಸೇವಿರಿದರೆ ತಕ್ಷಣ ಗಂಟಲು, ಬಾಯಿ ಮತ್ತು ನಾಲಿಗೆಗಳಲ್ಲಿ ಕೊರೆಯುವ ಉರಿವೇದನೆ ಕಾಣಿಸುತ್ತದೆ. ಹೊಟ್ಟೆಯಲ್ಲಿಯೂ, ಕರುಳಿನಲ್ಲಿಯೂ ವೇದನೆಯುಂಟಾಗುತ್ತದೆ. ವಾಕರಿಕೆ, ರಕ್ತಛಾಯೆ ಬೆರೆತ ವಾಂತಿ ಉಂಟಾಗುತ್ತದೆ. ಕೆಲವು ಸಲ ಭೇದಿಯೂ ಕೆಲವು ಸಲ ಮಲಬದ್ಧತೆಯೂ ಉಂಟಾಗುತ್ತದೆ. ಅನ್ನಕೋಶ, ಹೊಟ್ಟೆ ಕರುಳು ಮೊದಲಾದ ಅಂಗಗಳಲ್ಲಿ ಗಾಯ. ಬಿರುಕು ಮತ್ತು ವ್ರಣಗಳುಂಟಾಗಿ ರಕ್ತಸ್ರಾವ ಮತ್ತು ಅಘಾತ ಸಂಭವಿಸಿ, ರೋಗಿಯು ಪ್ರಾಣಾಪಾಯಕ್ಕೆ ತುತ್ತಾಗುವನು.

**ಚಿಕಿತ್ಸೆ**

ಗಾಜಿನಪುಡಿ ಅಥವಾ ವಜ್ರದ ಪುಡಿಯನ್ನು ನುಂಗಿದ ರೋಗಿಗೆ ಮೃದುವಾದ ವಸ್ತುಗಳನ್ನು ತಿನ್ನಿಸಬೇಕು. (ಬಾಳೆಹಣ್ಣು, ಹಾಲಲ್ಲಿ ಅದಿದ್ದ ಬ್ರೆಡ್ಡು, ಮೆತ್ತಗಿನ ಅನ್ನ ಮೊದಲಾದುದನ್ನು ತಿನ್ನಿಸಬೇಕು.) ಅನಂತರ ವಾಮತಿ– ಭೇದಿಗಳ ಮೂಲಕ ವಿಷವನ್ನು ಹೊರಗೆ ಹಾಕಬೇಕು. ಕೆಲವು ವೇಳೆ ಹೊಟ್ಟೆ ತೊಳೆಯುವುದು ಸಹ ಉಪಯುಕ್ತವಾಗಿದೆ. ರೋಗಿಗೆ ಶಾಮಕ ಉಪಚಾರ, ಮಾರ್ಫಿನ್ ಸೂಜಿಮದ್ದು ಕೊಡಬೇಕು ಮತ್ತು ಉಪದ್ರವಗಳಿಗೆ ಸೂಕ್ತ ಚಿಕಿತ್ಸೆ ನಡೆಸಬೇಕು.

## ‘ಎಂತಾದರು ಇರು, ಎಚ್ಚರದಿಂದಿರು ನೀ..’

ಅಲ್ಪ ಅಜಾಗ್ರತೆಯಿಂದ ಪ್ರತಿನಿತ್ಯ ಸಂಭವಿಸುವ ವಿಷ ಅಪಘಾತಗಳಿಗೆ ಲೆಕ್ಕವಿಲ್ಲ. ಅಸಡ್ಡೆಯಿಂದ ಅಲ್ಲಿ ಇಲ್ಲಿ ಒಗೆದುಬಿಟ್ಟ ವಿಷವಸ್ತುಗಳು ಎಳೆಯರ ಕೈಗೆ ಸಿಕ್ಕಿದಾಗ, ಆಟದ ಸಾಮಗ್ರಿಯೆಂದೋ, ತಿಂಡಿತಿನಿಸೆಂದೋ ಅಥವಾ ಬಾಲ್ಯಸಹಜ ಕುತೂಹಲದಿಂದಲೋ ಅದನ್ನು ತಿಂದು ಅಪಾಯಕ್ಕೆ ತುತ್ತಾಗುವುದುಂಟು. ಔಡಲ ಬೀಜವೋ, ಗೇರು ಕಾಯಿಯೋ ಕೈಗೆ ಸಿಕ್ಕಿದರೆ ಮಕ್ಕಳಿಗೆ ಅವು ವಿಷಫಲಗಳೆಂಬ ಕಲ್ಪನೆಯೇ ಇಲ್ಲದೆ ತಿನ್ನಬಹುದು. ತಿಂದು ಪ್ರಾಣಾಪಾಯಕ್ಕೆ ಬಲಿಯಾಗುತ್ತಾರೆ.

ಇಲಿಗಳ ಹಾವಳಿ ಮನೆಯಲ್ಲಿ ತೀರ ಅಧಿಕವಾದಾಗ ತಂದ ಇಲಿ ಪಾಷಾಣದ ಪುಡಿ ತುಸು ಉಳಿದದ್ದು ಅದು ಕೆಲಸಕ್ಕೆ ಬಾರದ ವಸ್ತುವೆಂದು ಮೂಲೆಗೆಸೆದುದನ್ನು ಮಕ್ಕಳು ಪತ್ತೆಮಾಡಿ ತಿಂದರೆ ಎಂಥ ಅನಾಹುತ ಸಂಭವಿಸಬಹುದೆಂದು ಬೇರೆ ಹೇಳಬೇಕೆ? ಅದೇ ರೀತಿ ಬಾಗಿಲು ಕಿಟಕಿಗಳಿಗೆ ಒಂದು ಕೋಟಿಂಗ್ ಬಳಿದು ವಿರಾಮದ ವೇಳೆಯಲ್ಲಿ ಕೆಲಸಗಾರರು ಉಪಹಾರಕ್ಕೆಂದು ಹೊರಗೆ ಹೋದಾಗ ಅಲ್ಲೇ ಬಿಟ್ಟುಹೋಗಿದ್ದ ವಾರ್ನಿಶ್ ಡಬ್ಬಿಯಿಂದ ಒಂದಿಷ್ಟು ರುಚಿ ನೋಡಲು ಮಕ್ಕಳು ಪ್ರಯತ್ನಿಸಿದರೆ– ಆ ತಪ್ಪು ಯಾರದೆನ್ನಬೇಕು? ಹೆಚ್ಚಿನ ಮಟ್ಟಿಗೆ ವಿಷಪ್ರಾಶನಗಳು ಅಜಾಗ್ರತೆಯಿಂದ ಇರಿಸಿ ಮಕ್ಕಳ ಕೈಗೆ ಅನಾಯಾಸವಾಗಿ ದೊರಕುವ ವಿಷದ್ರವ್ಯಗಳಿಂದಲೇ ಸಂಭವಿಸುತ್ತವೆ ಎನ್ನಬಹುದು.

**ರಮಿಸಬೇಡಿ**

ಮಕ್ಕಳಿಗೆ ಔಷಧಿ ಕುಡಿಸುವಾಗ ‘ಇದು ಸಿಹಿಯಾದ ಜೇನುತುಪ್ಪ ಚಾಕಲೇಟ್’ ಎಂಬಿತ್ಯಾದಿಯಾಗಿ ಹೇಳಬಾರದು. ಇಂಥ ಸವಿಮಾತಿನಿಂದ ರಮಿಸಿ ಔಷಧಿ ಕುಡಿದ ಮಗು ನಿಮ್ಮ ಕಣ್ಣು ಮರೆಯಲ್ಲಿ ಇಡೀ ಔಷಧಿ ಸೀಸೆಯನ್ನೇ ಜೇನುತುಪ್ಪವೆಂದು ಒಂದೇ ಬಾರಿಗೆ ಕುಡಿದುಬಿಡಬಹುದು! ಪ್ರಮಾಣ ಮೀರಿ ಸೇವಿಸಿದ್ದ ಔಷಧಿಗಿಂತಿ ಮಿಗಿಲಾದ ಭಯಂಕರ ವಿಷ ಬೇರಾವುದಿದೆ?

ವಿಷವೆಂದರೆ ವಿಷಾದವನ್ನು ಉಂಟುಮಾಡುವ ಪದಾರ್ಥ ಎಂಬುದಾಗಿ ಆಯುರ್ವೇದ ಗ್ರಂಥದಲ್ಲಿ ಹೇಳಿದೆ. ಸಮುದ್ರ ಮಥನ ಕಾಲದಲ್ಲಿ ಅಮೃತವನ್ನು ಎದುರುನೋಡುತ್ತಿದ್ದ ದೇವಾಸುರರೆಲ್ಲರಿಗೆ ದಿಗ್ಭ್ರಮೆಯಾಗುವಂತೆ ವೇದನಾಕಾರಕವಾಗಿಯೂ ಭಯಂಕರವಾಗಿಯೂ ಕಾಣಿಸುವ ವಿಕಾರ ರೂಪವೊಂದು ಉತ್ಪತ್ತಿಯಾಯಿತೆಂದೂ ಅದೇ ವಿಷವೆಂದೂ ಆಖ್ಯಾನವಿದೆ. ಈ ನಂಜನ್ನು ಲೋಕ

ಹಿತಕ್ಕಾಗಿ ತನ್ನ ಗಂಟಲಲ್ಲಿ ಮುಚ್ಚಿಟ್ಟು ಮಹದೇವ ನಂಜುಂಡೇಶ್ವರನೆನ್ನಿಸಿದ ಕತೆ ಪುರಾಣಪ್ರಸಿದ್ಧ.

ವಿಷವು ಆರೋಗ್ಯಕ್ಕೆ ಅಪಾಯಕರ ಹೌದು. ದೇಹಕ್ಕೆ ಬಾಧೆ, ಅಂಗಾಂಗಗಳಿಗೆ ಊನ, ಮನಸ್ಸಿಗೆ ವೇದನೆ, ಪ್ರಾಣಕ್ಕೆ ಸಂಚಕಾರ ತರುವಂಥ ದುರ್ಗುಣಗಳು ವಿಷದ ಪರಿಣಾಮವಾಗಿ ಉಂಟಾಗುತ್ತವೆ. ಸೇವನೆಯಿಂದ, ಸ್ಪರ್ಶದಿಂದ, ಮೂಸಿದಾಗ ದುಷ್ಪರಿಣಾಮಗಳನ್ನು ಬೀರುವ ವಿಷಗಳು ಅನೇಕ ಬಗೆಯವು.

**ನಿಧಾನ ವಿಷ**

ಹಾವು ಚೇಳಿನಂಥ ವಿಷ ಜಂತುಗಳು ಕಡಿದಾಗ ತಕ್ಷಣ ನಂಜೇರತೊಡಗಿದರೆ ಮೀನಿನ ವಿಷವು ಜೀರ್ಣವಾಗುವ ಹೊತ್ತಿನಲ್ಲಿ ಉಪದ್ರವಗಳನ್ನುಂಟುಮಾಡುತ್ತದೆ. ಹೈಡ್ರೋಸೈನೊಗ್ಯಾಸ್, ಕಾರ್ಬನ್ ಮೋನೋಕ್ಸೈಡ್‌ನಂತಹ ವಿಷ ಅನಿಲಗಳು ಕ್ಷಿಪ್ರ ಮರಣವನ್ನು ಉಂಟುಮಾಡುತ್ತವೆಯಾದರೆ ಕೇಸರಿ ಬೆಳೆಯಂತಹ ಕಲಬೆರಕೆ ಪದಾರ್ಥಗಳನ್ನು ಬಳಸಿದಾಗ, ಕಾಲಾಂತರದಲ್ಲಿ ಕಂಟಕಗಳನ್ನು ತರುತ್ತವೆ. ಸೀಮೆ ಎಣ್ಣೆ, ಸ್ಪಿರಿಟ್, ಫಿನಾಯ್ಲಿನಂತಹ ನಿತ್ಯ ಬಳಕೆಯ ಅನೇಕ ವಸ್ತುಗಳು ನಿರಪಾಯಕಾರಿಯಂತೆ ಕಾಣಿಸಿದರೂ ದುರುಪಯುಕ್ತವಾದಾಗ ಮಾರಕ ವಿಷವಾಗುತ್ತವೆ. ಉಗುರು ಬಣ್ಣ, ಕಾಡಿಗೆಯ ಸುರ್ಮಾ, 'ಹೇರ್‌ಡೈ'ಗಳಲ್ಲಿ ಅಡಗಿದ ಸೀಸದ ಅಂಶ ದೀರ್ಘಕಾಲದ ಪ್ರಯೋಗದಿಂದ ನಾನಾ ಬಗೆಯ ಉಪದ್ರವಗಳನ್ನು ತರುವುದುಂಟು. ಮುಖ ಸೌಂದರ್ಯಕ್ಕೆ ಬಳಿಯುವ ಕ್ರೀ-ಪೌಡರುಗಳು ಸೇವಿಸಿದಾಗ ಮಕ್ಕಳಿಗೆ ಮಾರಕ ವಿಷವಾಗಿಬಿಡಬಲ್ಲುವು. ಅಣಬೆ, ಬಿದಿರು ಕಳಲೆಗಳನ್ನು ಬೇಯಿಸುವುದರಲ್ಲಿ, ಶುದ್ಧಿ ಮಾಡುವುದರಲ್ಲಿ ಕಿಂಚಿತ್ ಹೆಚ್ಚುಕಮ್ಮಿಯಾದರೆ ಉಂಡವರಿಗೆ ಪ್ರಾಣಾಪಾಯ ಸಂಭವಿಸುವುದು ಅಚ್ಚರಿಯಲ್ಲ.

ಕಳ್ಳಭಟ್ಟಿ ಸೇವನೆಯಿಂದ ಸಾರಾಸಗಟು ಸಾವನ್ನಪ್ಪುತ್ತಿರುವ ಕರುಣಾಜನಕ ಕತೆ ದೆಹಲಿಯಿಂದ, ಚೆನ್ನೈನಿಂದ, ಬೆಂಗಳೂರಿನಿಂದ, ವಿಜಯವಾಡದಿಂದ- ಧಾರಾವಾಹಿ ಕಾದಂಬರಿಯಂತೆ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಲೇ ಇವೆ. ಮಿತಿಮೀರಿ ಹೆಂಡ ಕುಡಿದು ಪ್ರಾಣ ಕಳೆದುಕೊಂಡ ಹೆಂಡ ಕುಡುಕರೂ ಇಲ್ಲದಿಲ್ಲ. ಕುಡಿತದ ಚಟಕ್ಕೆ ಬಿದ್ದು ಸರ್ವನಾಶ ಮಾಡಿಕೊಂಡವರೂ, ಮಾದಕ ಬತ್ತಿಗಳನ್ನೂ ಕೊಕೇನ್, ಭಂಗಿ, ಅಫೀಮುಗಳನ್ನು ಸೇವಿಸುತ್ತ ಬಂದು ತಲೆಯ ಮೇಲೆ ಕಲ್ಲು ಚಪ್ಪಡಿಯನ್ನು ಸ್ವತಃ ಎಳೆದುಕೊಂಡ ದುರ್ದೈವಿಗಳು ಎಷ್ಟು ಜನರಿಲ್ಲ!

# ಔಷಧಂ ಜಾಹ್ನವೀ ತೋಯಂ

'ಊರಿಗೆ ಬಂದವಳು ನೀರಿಗೆ ಬಾರಳೆ?' ಎಂಬ ಜನಪದ ಗೀತೆಯ ಸೊಲ್ಲುತುಂಬ ಅರ್ಥಗರ್ಭಿತ. ಘಟನಾಚಕ್ರದ ಮೂಲ ಸೂತ್ರವನ್ನದು ಬಹು ಮಾರ್ಮಿಕವಾಗಿ ಸೂಚಿಸುತ್ತದೆ. ಕಾಲ ವಿಳಂಬವಾದರೂ ಒಮ್ಮೆ ಪ್ರಾರಂಭವಾದ ಘಟನೆ ಉತ್ತರೋತ್ತರ ಪರಿಣಾಮದ ಸರಪಣಿಯನ್ನು ಸೃಜಿಸುವುದು ಖಚಿತ ಎಂಬುದೇ ಆ ಮಾತಿನ ಹಿಂದಿರುವ ನೀತಿ.

ಬಾಯಿಗೆ ತಲುಪಿದ ವಿಷದ ಸಂಗತಿಯಾದರೂ ಅಷ್ಟೆ– ಅದು ದೇಹವನ್ನು ಸೇರದಿದ್ದೀತೆ? ಸೇರಿ. ಅನರ್ಥ ಪರಂಪರೆಗಳನ್ನು ಉಂಟುಮಾಡದೆ ಇದ್ದೀತೆ? ತುಸು ಹಿಂದೆ ಮುಂದೆ ಅಂತ ಕಾಲ ವಿಳಂಬವಾಗಬಹುದೇ ವಿನಾ ವಿಷ ತನ್ನ ದೌರ್ಜನ್ಯವನ್ನು ತೋರಿಸಿದೆ ಬಿಡದು ಎಂಬುದು ನಿರ್ವಿವಾದ

ನಾವು ಮಾಡಬೇಕಾದ ಕೆಲಸವೆಲ್ಲ ಈ 'ಎಡೆ ಹೊತ್ತಿನಲ್ಲಿ'ಯೇ ಮಾಡಬೇಕು. ವಿಷಪ್ರಾಶನಕ್ಕೂ ದುಷ್ಪರಿಣಾಮಗಳ ಪ್ರಾರಂಭಕ್ಕೂ ನಡುವೆ ಇರುವ ಅಲ್ಪಾವಧಿ ಎಡೆಹೊತ್ತನ್ನು ಬಳಸಿಕೊಂಡೇ ವೈರಿಯನ್ನು ಸದೆಬಡಿದುಬಿಡಬೇಕು. ವಿಷದ ವಿರುದ್ಧ ಜೀವರಕ್ಷಣೆಯ ನಮ್ಮ ಪ್ರಯತ್ನ, ಪ್ರಥಮ ನೆರವಿನ ರೂಪದಲ್ಲಿಯೇ ಇರಲಿ. ಪೂರ್ಣ ಚಿಕಿತ್ಸೆಯ ಉಪಚಾರದ ಮಟ್ಟದಲ್ಲಿಯೇ ಇರಲಿ. ವಿಷಪ್ರಯೋಗವಾದ ಮೇಲೆ ದೇಹದಲ್ಲಿ ವಿಷ ಪ್ರಸಾರವಾಗಿ ದುಷ್ಪರಿಣಾಮಗಳು ಗೋಚರಿಸುವುದಕ್ಕೆ ಮುಂಚಿತವಾಗಿ ಎಷ್ಟು ಕ್ಷಿಪ್ರವಾಗಿ ನಡೆಸಲ್ಪಡುತ್ತದೆಯೋ ಅಷ್ಟು ಹೆಚ್ಚು ಫಲಪ್ರದವಾಗುತ್ತದೆ.

**ಪ್ರಥಮ ಕರ್ತವ್ಯ**

ವಿಷಪ್ರಾಶನವಾದ ರೋಗಿಯನ್ನು ಮೊದಲು ಒಂದು ಸ್ವಚ್ಛ ಗಾಳಿಯಾಡುವ ಕೊಠಡಿಯಲ್ಲಿ ಮಲಗಿಸಬೇಕು. ಅವನ ಮೈಕೈಗಳಿಗೆ ಹತ್ತಿಕೊಂಡಿರಬಹುದಾದ ಅಥವಾ ಬಾಯಿಯಲ್ಲಿ ಇರಬಹುದಾದ ವಿಷದ ಅಂಶವನ್ನು ತೊಳೆದು ತೆಗೆದುಬಿಡಬೇಕಾದ್ದು ಮೊದಲ ಕೆಲಸ. ಅನ್ನಕೋಶವನ್ನು ಸೇರಿದ ವಿಷ ಅಲ್ಲಿಂದ ಮುಂದಕ್ಕೆ ಹೊರಟು ಕರುಳ ಮಾರ್ಗದಲ್ಲಿ ಸಂಚಾರಕ್ಕೆ ತೊಡಗದಂತೆ ತಡೆಗಟ್ಟಲು ಪ್ರಯತ್ನಿಸಿ, ವಿಷದ ರೆಕ್ಕೆ ಪುಕ್ಕಗಳನ್ನೆಲ್ಲ ಕತ್ತರಿಸಿಹಾಕಬೇಕಲ್ಲದೆ, ವಿಷದ ಶಕ್ತಿ ಗುಂದಿಸಿ, ಹೆಜ್ಜೆಹೆಜ್ಜೆಗೂ ಅಡ್ಡಿ ಆತಂಕಗಳನ್ನು ಒಡ್ಡಿ ಆ ಪ್ರಯಾಣ ಕಷ್ಟಸಾಧ್ಯವೂ, ನಿರುಪಯುಕ್ತವೂ ಆಗುವಂತೆ ಮಾಡಲು ಯತ್ನಿಸಬೇಕು.

ಸೇವಿಸಿದ ಹೆಚ್ಚಿನ ವಿಷ ದ್ರವ್ಯಗಳು ಸುಮಾರು ಎರಡು ತಾಸುಗಳಷ್ಟು ಹೊತ್ತು ಅನ್ನಕೋಶದಲ್ಲಿದ್ದು ಅನಂತರ ಸಣ್ಣ ಕರುಳನ್ನು ಪ್ರವೇಶಿಸುತ್ತದೆ. ಅನ್ನಕೋಶದಿಂದಲೇ ನೇರವಾಗಿ ಶರೀರವು ಹೀರಿಕೊಳ್ಳುವ ವಿಷದ ಅಂಶ ಅತ್ಯಲ್ಪ. ಆದರೆ ಅನ್ನಕೋಶ ಬಿಟ್ಟು ಮುಂದಡಿ ಇಟ್ಟು ವಿಷ ಒಮ್ಮೆ ಸಣ್ಣ ಕರುಳನ್ನು ಸೇರಿತೆಂದರೆ ಮಡುವಿನಲ್ಲಿಯ ಮೊಸಳೆಯಂತೆ ಅದು ತೀರಾ ಅಪಾಯಕಾರಿ ಪರಿಸ್ಥಿತಿಯನ್ನು ಉಂಟುಮಾಡುತ್ತದೆ. ವಿಷ ದೇಹದ ನಾನಾ ಅಂಗಗಳನ್ನು ಪ್ರವೇಶಿಸುತ್ತದೆ. ಅದಕ್ಕೆ ಅವಕಾಶ ದೊರಕದಂತೆ ಅನ್ನಕೋಶದಲ್ಲೇ ವಿಷವನ್ನು ತಡೆಹಿಡಿದು ಅದರ ತೀಕ್ಷ್ಣತೆಯನ್ನು ತಗ್ಗಿಸಲು, ಹೊರಗೆ ಹಾಕಿ ರಕ್ಷಿಸಲೂ ಪ್ರಯತ್ನಿಸಬೇಕು. ಇದನ್ನು ಲಂಬನ, ವಮನ, ಪ್ರಕ್ಷಾಳನ ಮತ್ತು ಶೋಧನ ವಿಧಾನಗಳಿಂದ ಸಾಧಿಸಬೇಕು.

ಲಂಬನ ಚಿಕಿತ್ಸೆಗೆ ಬಳಸುವ ಸಾಮಾನ್ಯ ವಸ್ತುಗಳೆಂದರೆ 120 ಮಿಲಿಲೀಟರ್ ಹಾಲು (ಒಂದು ಲೋಟ) ಅಥವಾ 8–10 ಕೋಳಿ ಮೊಟ್ಟೆಯ ಬಿಳಿ ಲೋಳೆ (ವೈಟ್ ಆಫ್ ದಿ ಎಗ್), ಸುಬ್ಬಕ್ಕಿಯ ಪಾಯಸ, ಅನ್ನ ಬಸಿದ ಗಂಜಿ (ತಿಳಿ) ಯಂಥ ಯಾವುದೇ ಪಿಚ್ಚಲ ದ್ರವವನ್ನೂ ನೀಡಬಹುದು. ನಾಲ್ಕಾರು ಆಲೂಗಡ್ಡೆಗಳನ್ನು ಚೆನ್ನಾಗಿ ಬೇಯಿಸಿ, ಸಿಪ್ಪೆ ತೆಗೆದು ನುಣ್ಣಗೆ ಅರೆದು ನೀರಲ್ಲಿ ಕಿವುಚಿ ಕುಡಿಸಬಹುದು– ಅಥವಾ ಅಳ್ಳಿಟ್ಟನ್ನು ನೀರಲ್ಲಿ ಕದಡಿ ನೀಡಬಹುದು. ಎಣ್ಣೆ– ತುಪ್ಪದಂತಹ ಜಿಡ್ಡಿನ ತೈಲ ಪದಾರ್ಥಗಳನ್ನು ಸಂದರ್ಭಾನುಸಾರ (2–3 ಔನ್ಸ್‌ನಷ್ಟು) ಬಳಸಬಹುದು. ಇವುಗಳ ಪೈಕಿ ಯಾವುದಾದರೂ ಒಂದನ್ನು ಕುಡಿಸುವುದರಿಂದ ವಿಷದ್ರವದ ಉಗ್ರತೆ, ತೀಕ್ಷ್ಣತೆಗಳು ಮಂದ ಸ್ವರೂಪಕ್ಕೆ ತಿರುಗುವುದಲ್ಲದೆ ಅನ್ನಕೋಶದ ಉರಿ ಊತಗಳು ತಗ್ಗಿ, ಕೆರಳಿದ ಅನ್ನಕೋಶ ತಂಪಾಗಲು ಸಹಕರಿಸುವುದು; ವಿಷದ ಓಟವೂ ನಿಧಾನವಾಗುವುದು.

ಮೇಲೆ ಸೂಚಿಸಿದ ಯಾವ ದ್ರವಗಳೂ ದೊರಕದಿದ್ದಾಗ ಕಾಲವಿಳಂಬ ಮಾಡದೆ ತಕ್ಷಣ ಎರಡು ಅಥವಾ ಮೂರು ಲೋಟ ನೀರನ್ನು ರೋಗಿಗೆ ಕುಡಿಸಬೇಕು.

**ಅತಿ ಬೇಡ**

ಇಲ್ಲಿ ಜ್ಞಾಪಕದಲ್ಲಿರಿಸಿಕೊಳ್ಳಬೇಕಾದ ಇನ್ನೊಂದು ಮುಖ್ಯ ಮಾತು– 'ಅತಿ ಸರ್ವತ್ರ ವರ್ಜಯೇತ್ ಕ್ಷಿಪ್ರ' ಗುಣ ಕಾಣಲೆಂಬ ಅತ್ಯಾಸೆಯಿಂದ ಅವಸರ ಮಾಡಿ ಮಿತಿಮೀರಿದ ಪ್ರಮಾಣದಲ್ಲಿ ಈ ದ್ರವ್ಯಗಳನ್ನೆಂದಿಗೂ ಸೇವಿಸಬಾರದು. ಅನ್ನಕೋಶದಲ್ಲಿ ಹಿಡಿಸಲಾರದಷ್ಟು ಹೆಚ್ಚು ದ್ರವ್ಯ ಸೇವಿಸಿದರೆ ಅನ್ನಕೋಶ ವಿಷದ್ರವವನ್ನು ಕರುಳಿನತ್ತ ಸಾಗಹಾಕಲು ಧಾವಿಸುವ ಸಂಭವವಿದ್ದು ಪರಿಣಾಮ ಹಾನಿಕಾರಕವಾಗಬಹುದು. ಬಂದ ದಾರಿಗೆ ಸುಂಕವಿಲ್ಲ. ಹೆಚ್ಚಿನ ವಿಷದ್ರವಗಳು ಆರೋಚಕ ಹಾಗೂ

ರುಚಿಯಿಲ್ಲದವಾಗಿದ್ದು, ಉಗ್ರವಾಸನೆ ಅಥವಾ ಕಹಿಯೋ ಆಗಿರುತ್ತದೆ. ಹೊಟ್ಟೆಗೆ ಅಹಿತಕರವಾದ ವಿಷ ಬಾಯಿಗೂ ಅಹಿತಕರವೇ. ಇಂಥ ದ್ರವಗಳು ಒಳಸೇರಿದಾಗ ವಾಕರಿಕೆ ಮತ್ತು ವಾಂತಿಯ ಮೂಲಕ ಹೊಟ್ಟೆ ತನ್ನ ಪ್ರತಿಭಟನೆಯನ್ನು ಸಲ್ಲಿಸಿ, ತನಗೆ ಬೇಡದ್ದನ್ನು ತನ್ನ ಸ್ವಾಸ್ಥ್ಯಹಿತಕ್ಕೆ ಕಂಟಕವಾದುದನ್ನು ಹೊರಕ್ಕೆ ತಳ್ಳಲು ಪ್ರಯತ್ನಿಸುತ್ತದೆ. ಈ ಸಹಜ ಪ್ರಕ್ರಿಯೆಗೆ ತುಸು ಕಾಲ ವಿಳಂಬವಾಗಬಹುದು– ಅಥವಾ ಸಾಕಷ್ಟು ಬಲವಾಗಿ ಆಗದೇ ಹೋಗಬಹುದು. ಎಂತಲೇ ನಾವು ವಿಷಪ್ರಾಶನ ಮಾಡಿದ ರೋಗಿಗೆ ವಮನೌಷಧಿಗಳನ್ನು ಕುಡಿಸಿ ವಾಂತಿ ಮಾಡಿಸಬೇಕು. ಹೆಚ್ಚು ಸಂಕೀರ್ಣ ಉಪಕರಣಗಳು ಬೇಕಿಲ್ಲದೆ, ಅನುಭವಸ್ಥರ ನೆರವು ದೊರಕದಿದ್ದಾಗಲೂ ವಾಂತಿ ಮಾಡಿಸಬಹುದು. ವಿಷಪ್ರಾಶನವಾದ ಒಂದೆರಡು ಗಂಟೆಗಳಲ್ಲಿ ಅನ್ನಕೋಶದಿಂದ ವಿಷವನ್ನು ಹೊರಚೆಲ್ಲಲು ಸಾಧ್ಯವಾದರೆ ಪರಿಣಾಮ ಅತ್ಯಂತ ತೃಪ್ತಿಕರವೆಂಬುದು ಖಚಿತ.

**ವಮನಕ್ಕೆ....**

ಸುಮಾರು 12 ಔನ್ಸ್ ಉಪ್ಪು ನೀರು ಅಥವಾ ಸಾಸಿವೆ ಕಾಳನ್ನು ಅರೆದು ಹಾಕಿದ ನಸು ಬೆಚ್ಚಗಿನ ನೀರನ್ನು ಕುಡಿಸಿ ವಾಂತಿ ಮಾಡಿಸುವುದು ಸರ್ವೇಸಾಮಾನ್ಯ ಪದ್ಧತಿ. ಟಿಂಚರ್ ಅಯೋಡಿನ್ ದ್ರಾವಕದ ಮೃದು ದ್ರಾವಣ (ಒಂದು ಲೋಟ ನೀರಿಗೆ 10–15 ಹನಿ) ಇಪೆಕಾಕಿನದ ಅರ್ಕಸಾರ, ಇಪೆಕಾಕಿನ ಚಕ್ಕೆಯ ಪುಡಿ ಬೆರೆಸಿದ ನೀರು ಕುಡಿಸುವುದರಿಂದಲೂ ವಾಂತಿ ಮಾಡಿಸಬಹುದು. ಹಾಗಲಕಾಯಿ ರಸ, ಕಹಿ ಸೋರೆ, ಮಗ್ಗಾರೆಗಾಯಿ ಪುಡಿ ಅಥವಾ ಲೋಧ್ರ ಚಕ್ಕೆಯ ಪುಡಿ ಹಳ್ಳಿಗಳಲ್ಲಿ ಸದಾ ಸಿಗುವುದರಿಂದ ಅವನ್ನು ಕುಡಿಸಿಯೂ ವಾಂತಿ ಮಾಡಿಸಬಹುದು.

ಇವು ಯಾವುದೂ ದೊರಕದಿದ್ದಾಗ ಸ್ವಲ್ಪ ನೀರನ್ನು ಕುಡಿಸಿ ರೋಗಿಯ ಗಂಟಲೊಳಗೆ ಬೆರಳು ತುರುಕಿಸಿ, ತುಸು ಅಲ್ಲಾಡಿಸಿ (ಟಿಕ್‌ಲ್) ಮಾಡಿಯಾದರೂ ವಾಂತಿ ಮಾಡಿಸಬೇಕು.

ವಾಂತಿ ಮಾಡಿಸುವುದಕ್ಕೆ ಮುಂಚೆ ರೋಗಿಯನ್ನು ನೆಲದ ಮೇಲಾಗಲಿ, ತುಸು ಎತ್ತರದ ಕಟ್ಟೆ ಅಥವಾ ಸ್ಟೂಲು ಕುರ್ಚಿಯಂತಹ ಆಸನಗಳ ಮೇಲಾಗಲಿ ಕೂರಿಸಬೇಕು. ರೋಗಿಯ ಭುಜವನ್ನು ಒಬ್ಬರು ಆಧರಿಸಿ ಹಿಡಿದಿರುವುದು ಒಳಿತು, ವಾಂತಿಯನ್ನು ತುಂಬಿಸಲು ಬಟ್ಟಲು, ಬೋಗುಣಿ ಅಥವಾ ಬಕೆಟಿನಂತಹ ಪಾತ್ರೆಯನ್ನು ಸಿದ್ಧವಾಗಿಟ್ಟರಬೇಕು. ಮೊದಲ ಸಲ ರೋಗಿ ವಾಂತಿ ಮಾಡಿದ ಪದಾರ್ಥವನ್ನು ರಾಸಾಯನಿಕ ವಿಶ್ಲೇಷಣೆ ಅಥವಾ ಹೆಚ್ಚಿನ ಪರೀಕ್ಷೆಗೆಂದು ತೆಗೆದಿರಿಸುವ ಉದ್ದೇಶವಿದರೆ, ರೋಗಿಗೆ ಬರಿಯ ನೀರನ್ನೇ ಕುಡಿಸಿ ವಾಂತಿ ಮಾಡಿಸಬೇಕು.

## ಎಚ್ಚರಿಕೆ

ಸಣ್ಣ ಮಕ್ಕಳಿಗೆ ವಾಂತಿ ಮಾಡಿಸುವುದು ಸುಲಭವಲ್ಲ. ಅವರು ವಾಂತಿಯ ಎಂಜಲು ಗಂಟಲಲ್ಲಿಯೇ ಮತ್ತೆ ನುಂಗಬಹುದು; ಕೆಲವೊಮ್ಮೆ ಅದು ದಾರಿ ತಪ್ಪಿ ಶ್ವಾಸನಾಳದಲ್ಲಿ ಸಾಗಿದರೆ ಅಪಾಯಕರ. ಗರ್ಭಿಣಿಯರು, ಶಟೆ ಬೇನೆಯ ರೋಗಿಗಳು, ಪ್ರಜ್ಞಾಹೀನ ಸ್ಥಿತಿಯವರೂಮ ಹೃದ್ರೋಗಿಗಳೂ, ಎಂಫಿಸೀಮಾ ಮೊದಲಾದ ಶ್ವಾಸಕೋಶದ ಕಾಯಿಲೆಗಳಿಂದ ಬಳಲುವವರು ವಮನ ಚಿಕಿತ್ಸೆಗೆ ಅನರ್ಹರು. ಎಷ್ಟೋ ವೇಳೆ ರೋಗಿಗಳು (ವಿಷಪ್ರಾಶನ ಮಾಡಿದವರು) ಅಸಹಕಾರ ಮನೋಭಾವವನ್ನು ತೋರ್ಪಡಿಸುವುದುಂಟು. ಇಂತಹ ಮೊಂಡರೂ ವಮನ ಚಿಕಿತ್ಸೆಗೆ ಯೋಗ್ಯರಲ್ಲ. ಈ ಎಲ್ಲ ಸಂದರ್ಭಗಳಲ್ಲಿ ನೇರವಾಗಿ ಕೂಡಲೇ ವೈದ್ಯರ ಸಹಾಯಕ್ಕೆ ಧಾವಿಸಬೇಕು.

ಅಧ್ಯಾಯ– III

## ವಿಷಜಂತುಗಳ ಸಂತಾನ

ಸುಮಾರು 2000 ಜಾತಿಯ ಹಾವುಗಳಿವೆ. ನಮ್ಮ ದೇಶದಲ್ಲಿ 216 ವರ್ಗದ ಹಾವುಗಳಿದ್ದು ಈ ಪೈಕಿ 52 ಜಾತಿಯವು ವಿಷ ಸರ್ಪಗಳು. ನಾಗರಹಾವು, ಮಂಡಲಹಾವು ಮತ್ತು ಕಟ್ಟುಹಾವು ಇವು ನಮ್ಮ ದೇಶದ ಪ್ರಮುಖ ವಿಷ ಸರ್ಪಗಳು. ಉತ್ತರಧ್ರುವಸಾಗರ, ಐರ್ಲೆಂಡ್ ಮತ್ತು ನ್ಯೂಜಿಲೆಂಡ್ ದೇಶಗಳನ್ನು ಬಿಟ್ಟು ಪ್ರಪಂಚದ ಎಲ್ಲ ಭಾಗಗಳಲ್ಲೂ ಹಾವುಗಳಿವೆ.

ನಮ್ಮ ದೇಶದಲ್ಲಿ ಪ್ರತಿವರ್ಷ ಸುಮಾರು 2 ಲಕ್ಷ ಜನರು ಹಾವು ಕಡಿತದ ಬಾಧೆಗೆ ಒಳಗಾಗುತ್ತಾರೆ. ಇವರಲ್ಲಿ 15 ಸಾವಿರ ರೋಗಿಗಳು ಸಾಯುತ್ತಾರೆ. ಪ್ರಾಣಾಪಾಯದ ಪ್ರಮಾಣದಲ್ಲಿ ವಿಷವು ರಕ್ತಗತವಾದರೆ ಮಾತ್ರ ಸಾವಿನ ಅಪಾಯವಿರುತ್ತದೆ. ತುರ್ತು ಪ್ರಥಮಚಿಕಿತ್ಸೆ ನೀಡಿ ವಿಳಂಬವಿಲ್ಲದೆ ವೈದ್ಯ ಸಹಾಯ ನೀಡಿದರೆ ಪ್ರಾಣಾಪಾಯದಿಂದ ಪಾರುಮಾಡಬಹುದು.

ನಾಗರಹಾವು
ಕಾಳಿಂಗ ಸರ್ಪ
ಮಂಡಲಹಾವು
ಕಟ್ಟು ಹಾವು
ಚೇಳು
ಕರಿ ಜೇಡ
ಕಣಜದ ಹುಳು
ಜೇನು ನೊಣ ಇತ್ಯಾದಿ



# ಹಾವೇ ಹಾವೇ ಹಾವೊಳು ಹೂವೇ:

## ನಾಗರಹಾವು

ಜಡೆನಾಗಣ್ಣನನ್ನು ನೋಡದವರು ವಿರಳ. ಹಾವಾಡಿಗನ ಪುಂಗಿಯ ನಾದಕ್ಕೋ ಮೈ ಕೈ ಚಲನೆಯ ಮಾಟಕ್ಕೋ- ಹೆಡೆಬಿಚ್ಚಿ ನಾದಲೋಲನಂತೆ ತಲೆದೂಗುವ ನಾಗರಹಾವು ಮತ್ತು ಕಾಳಿಂಗಸರ್ಪ ಎಂಬ ಎರಡು ಬಗೆಯ ಹಾವುಗಳು ನಮ್ಮ ದೇಶದಲ್ಲಿ ಹೆಚ್ಚಾಗಿ ಕಾಣಿಸುತ್ತವೆ. ಗೋಧಿನಾಗರ, ಕಾಳನಾಗರ ಮೊದಲಾದ ಹೆಸರಿನಿಂದ ಕರೆಯಲ್ಪಡುವ ನಾಗರಹಾವಿನ ಹೆಡೆಯಲ್ಲಿ ಸ್ವಸ್ತಿಕ ಆಕಾರದ ಮಚ್ಚೆಯಿರುತ್ತದೆ. ಅಚ್ಚ ಬಿಳಿಯ ಬಣ್ಣದ ಹಾಗೂ ಹೆಡೆಯಲ್ಲಿ ಮಚ್ಚೆ ಇಲ್ಲದ ನಾಗರಹಾವು ಕೂಡಾ ಅಪರೂಪಕ್ಕೆ ಕಾಣಿಸುವುದುಂಟು. (ಆದರೆ ಮಚ್ಚೆ ಇಲ್ಲದ ನಾಗರಹಾವು ಭಾರತದಲ್ಲಿ ಇಲ್ಲ ಬೇರೆ ದೇಶಗಳಲ್ಲಿ ಕಾಣಿಸುತ್ತವೆ.)

ನಾಗರಹಾವಿನ ವಾಸಸ್ಥಾನ ಹೊರಬಯಲಿನಲ್ಲಿ- ಹುತ್ತದಲ್ಲಿ ಎಂದು ಪ್ರತೀತಿಯಿದ್ದರೂ ಗುಡ್ಡ, ಬೆಟ್ಟ, ಗೊಂಡಾರಣ್ಯಗಳಲ್ಲಿಯೂ, ಬಯಲಿನ ಬಿಲ - ಬಿರುಕುಗಳಲ್ಲಿಯೂ, ಮುರುಕು ಮನೆ ಮಠಗಳ ಸಂದುಗೊಂದುಲುಗಳಲ್ಲಿಯೂ, ಸ್ಮಶಾನ, ಹಾಳುಬಾವಿಗಳ ಬಳಿಯಲ್ಲಿಯೂ ನಾಗರಹಾವು ತನ್ನ ಠಾವನ್ನು ಹೂಡಿರುತ್ತವೆ. ಇದು ಮರವೇರಬಲ್ಲದು; ಹಾಗೂ ಆಹಾರವಿಲ್ಲದೆ ತಿಂಗಳುಗಟ್ಟಲೇ ಉಪವಾಸ ಇರಬಲ್ಲುದು.

ಇರುಳು ಸಂಚಾರದ ಅಭ್ಯಾಸವುಳ್ಳ ನಾಗರ ಹಾವು ಬಲು ಅಂಜುಬುರಕ ಜೀವಿ. ಅಪಾಯದ ಮನ್ಸೂಚನೆ ಸಿಕ್ಕಿದ ಕೂಡಲೇ ಹರಿದೋಡಿ ತಲೆ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತದೆ. ಅಪಾಯವು ತೀರಾ ಸಮೀಪಿಸಿ, ಪಲಾಯನದ ದಾರಿ ಇಲ್ಲದಾಗಿ ವಿಧಿಯಿಲ್ಲದಾಗ ಮಾತ್ರ ಕೋಪದಿಂದ ಹೆಡೆಬಿಚ್ಚಿ, ಹೆಡೆಯನ್ನು ಹಿಂದಕ್ಕೂ ಮುಂದಕ್ಕೂ ಅಲ್ಲಾಡಿಸುತ್ತಾ ಬುಸುಗುಟ್ಟುತ್ತದೆ. ಆಗ ಮನುಷ್ಯನು ಶಿಲೆಯಂತೆ ನಿಂತರೆ ಹಾವು ಸದ್ದಿಲ್ಲದೆ ನುಣುಚಿಕೊಂಡು ಹೋಗುತ್ತದೆ. ಅಕಸ್ಮಾತ್ ತುಸು ಸಪ್ಪಳ ಮಾಡಿದರೆ ಅಥವಾ ಸ್ವಲ್ಪ ಅಲುಗಾಡಿದರೂ ಸಾಕು ಹಾವು ಮತ್ತೆ ಹೆಡೆಯೆತ್ತಿ ಕಡಿಯಲು

ಸಜ್ಜಾಗುವುದು. ನಾಗರ ಹಾವಿನ ಮರಿ ಬಹಳ ಚಂಚಲ ಜೀವಿಯಾಗಿದ್ದು ಅತಿ ಸುಲಭವಾಗಿ ಉದ್ರೇಕಗೊಂಡು ಕಡಿದು ಬಿಡುತ್ತದೆ; ಹಾಗೂ ಅದರ ವಿಷವು ತೀಕ್ಷ್ಣತೆಯಲ್ಲಿ ಕಮ್ಮಿಯೇನೂ ಅಲ್ಲ.

**ಹಾವು ಕಡಿದ ವಿಷ ಲಕ್ಷಣಗಳು :**

ಹಾವು ಕಡಿತ ಬಲು ಕ್ಷಿಪ್ರ ಕ್ರಿಯೆ. ಕ್ಷಣಾರ್ಧದಲ್ಲಿ ಹಾವಿನ ದವಡೆಯಲ್ಲಿರುವ ವಿಷ ಗ್ರಂಥಿಯಿಂದ "ಕೋರೆಹಲ್ಲು"ಗಳ ಮೂಲಕ ಗಾಯಕ್ಕೆ ವಿಷವು ಸ್ರವಿಸುವುದು. 15 ಮಿಲಿಗ್ರಾಮ್ ವಿಷವು ಪ್ರಾಣಾಪಾಯವನ್ನುಂಟು ಮಾಡಬಲ್ಲದು. ನಾಗರ ಹಾವು ಕಡಿದ 30 ನಿಮಿಷಗಳೊಳಗಾಗಿ ವಿಷ ಲಕ್ಷಣಗಳು ಕಾಣಿಸತೊಡಗುತ್ತವೆ. ಗಾಯವಾದ ಭಾಗದಲ್ಲಿ ಮೊದಲು ನೋವು, ಉರಿ ಮತ್ತು ಬಾವು ಕಾಣಿಸಿಕೊಂಡು ತುಸು ಹೆಪ್ಪುಗಟ್ಟಿದ ರಕ್ತಸ್ರಾವವು ಪ್ರಾರಂಭವಾಗುತ್ತದೆ. ಬಾವು ಕ್ರಮೇಣ ಇಡಿಯ ಅಂಗವನ್ನು ವ್ಯಾಪಿಸುತ್ತಾ ಬಂದು, ಜೋಮು ಹಿಡಿಯುವುದಲ್ಲದೆ ಗಾಯದ ಬಿಳಿಯ ಅಂಗಾಶವು ನೀಲಿ ಅಥವಾ ಗುಲಾಬಿ ವರ್ಣಕ್ಕೆ ತಿರುಗುವುದು.

ಈ ಸ್ಥಾನಿಕ ಲಕ್ಷಣಗಳ ಜೊತೆಗೆ ಕಾಣಿಸುವ ಸರ್ವಾಂಗವ್ಯಾಪಕ ಉಪದ್ರಗಳಲ್ಲಿ ಕೈಕಾಲು ಶಕ್ತಿಗುಂದುವುದು, ದೇಹಾಯಾಸ, ನಿಶ್ಶಕ್ತಿ, ಕೊರಳು ಬಲಹೀನವಾದಂತೆ ಕಾಣಿಸಿಕೊಂಡು ತಲೆಚಾಚಿ ಮಲಗಬೇಕೆನ್ನುವ ಆಸೆಯುಂಟಾಗುವುದು ಮುಖ್ಯವಾಗಿವೆ. ರೋಗಿಯ ಕಣ್ಣು ಬೊಂಬೆ ಕಿರಿದಾಗುತ್ತದೆ. ಅವನಿಗೆ ಮಾತಡಾಲಿಕ್ಕೂ ನುಂಗಲಿಕ್ಕೂ ತೊಂದರೆ ಕಾಣಿಸಿಕೊಳ್ಳುತ್ತದೆ; ಮತ್ತು ಅವನ ಕಟವಾಯಿಯಿಂದ ಜೊಲ್ಲು ಸುರಿಯತೊಡಗುತ್ತದೆ. ಕ್ರಮೇಣ ಉಸಿರಾಟದ ತೊಂದರೆಯೂ, ವಾಂತಿ-ವಾಕರಿಕೆಗಳೂ, ವಿವಿಧಾಂಗಗಳಿಂದ ರಕ್ತಸ್ರಾವವೂ ಉಂಟಾಗಿ ಸಾವು ಸಂಭವಿಸಬಹುದು. ಪ್ರಾಣಾಪಾಯದ ಕಾಲಾವಧಿ 24–64 ತಾಸುಗಳು (ಇದಕ್ಕೆ ತದ್ವಿರುದ್ಧವಾಗಿ ನಿರ್ವಿಷ ಹಾವು ಕಡಿದ ಮನುಷ್ಯನು ಕ್ಷಣಕ್ಷಣಕ್ಕೂ ಗಾಬರಿ, ಹುಚ್ಚಾಟ, ಓಡಾಟಗಳನ್ನು ಹೆಚ್ಚು ಹೆಚ್ಚಾಗಿ ಪ್ರದರ್ಶಿಸುತ್ತಿದ್ದು, ಪ್ರಕ್ಷುಬ್ಧಸ್ಥಿತಿಗೆ ತಲುಪುತ್ತಾನೆ! ವಾಸ್ತವವಾಗಿ ಅವನಿಗೆ ತನಗೆ ಕಡಿದುದು ವಿಷ ಸರ್ಪವೆಂಬ ಭ್ರಮೆಯೇ ಈ ಲಕ್ಷಣಗಳಿಗೆ ಕಾರಣವೇ ಹೊರತು ಸರ್ಪ ವಿಷವಲ್ಲ).

**ಚಿಕಿತ್ಸೆ ಮತ್ತು ಉಪಚಾರ :**

ಹಾವು ಕಡಿದ ರೋಗಿಯನ್ನು ಮೊದಲು ಹಾಸಿಗೆಯ ಮೇಲೆ ಮಲಗಿಸಬೇಕು. ಹಾವು ಕಡಿದ ಅಂಗವನ್ನು ಅಲುಗಾಡದಂತೆ ಬಂದಿಸಬೇಕು. ಆನಂತರ ಗಾಯಕ್ಕೂ

ಹೃದಯಕ್ಕೂ ನಡುವೆ ಮಾಂಸ ಪುಷ್ಟವಾದ ಭಾಗದಲ್ಲಿ (ಎಂದರೆ ಕಾಲಲ್ಲಿ ಗಾಯವಾಗಿದ್ದರೆ ತೊಡೆಯಲ್ಲಿಯೂ, ಕೈಯಲ್ಲಿ ಗಾಯವಾಗಿದ್ದರೆ ತೋಳಿನಲ್ಲಿಯೂ) ರಬ್ಬರ ಪಟ್ಟಿ ಅಥವಾ ಹುರಿಮಾಡಿದ ದಾರ, ಇಲ್ಲವೇ ಬಟ್ಟೆಯಿಂದ ಪಟ್ಟೆ ಬಿಗಿದು ಅಂಗ ಬಂಧ ಮಾಡಬೇಕು. ಈ ಕಟ್ಟನ್ನುಪ್ರತಿ 15–20 ನಿಮಿಷಗಳಿಗೊಮ್ಮೆ 2–3 ನಿಮಿಷದಷ್ಟು ಹೊತ್ತು ತುಸು ಸಡಿಲಮಾಡಿ, ಮತ್ತೆ ಬಿಗಿಗೊಳಿಸಬೇಕು. ಪ್ರತ್ಯೌಷಧ ನೀಡಿದ ಒಂದು ತಾಸಿನ ನಂತರ ಅಂಗಬಂಧವನ್ನು ಕ್ರಮೇಣ ಸ್ವಲ್ಪ ಸ್ವಲ್ಪವಾಗಿ ಸಡಿಲಿಸುತ್ತಾ ಬಂದು ಅನಂತರ ಪೂರ್ಣವಾಗಿ ತೆಗೆದು ಬಿಡಬಹುದು.

ಗಾಯವನ್ನು ನಂಜು ನಿರೋಧಕದ ದುರ್ಬಲ ದ್ರಾವಣದಿಂದ ತೊಳೆದು ಹರಿತವಾದ ಚಾಕು ಅಥವಾ ಬ್ಲೇಡನ್ನು ದೀಪದ ಉರಿಜ್ಯೋತಿಯಲ್ಲಿ ತುಸು ಹೊತ್ತು ಬಿಸಿ ಮಾಡಿ ಅನಂತರ ಉದ್ದವಾದ ಗಾಯಹಾಕಿ, ಹಾವು ಕಡಿದ ಗಾಯದಿಂದ ರಕ್ತವು ಹೊರಬಂದು ಹರಿಯುವಂತೆ ಮಾಡಬೇಕು. ಇದರಿಂದ ಗಾಯದ ಸುತ್ತು ಮುತ್ತು ಅಂಗಾಂಶಗಳಲ್ಲಿ ಸಂಚಿತವಾದ ವಿಷವು ಹೊರಬರಲು ಸಹಾಯವಾಗುತ್ತದೆ. ಆನಂತರ ಮೊಲೆ ಹಾಲು ಹೀರುವ ಪಂಪು ಇದ್ದರೆ ಅದನ್ನು ಹಚ್ಚಿ ಗಾಯದಿಂದ ವಿಷಮಿಶ್ರಿತ ರಕ್ತವನ್ನು ತೆಗೆಯಬಹುದು. ಗಾಯವನ್ನು ಕ್ರಿಮಿನಾಶಕದಿಂದ ಮತ್ತೊಮ್ಮೆ ತೊಳೆದು ಮೃದುವಾದ ಪಟ್ಟೆಕಟ್ಟಬೇಕು. ಮಂಜುಗಡ್ಡೆ (ಬರ್ಫ) ಸಿಕ್ಕಿದರೆ ಗಯದ ಸುತ್ತ ಹಚ್ಚುವುದು ಅಥವಾ ತಣ್ಣೀರಿನಲ್ಲಿ ತೊಯ್ದ ಬಟ್ಟೆಯನ್ನು ಇರಿಸುವುದು ಒಳ್ಳೆಯದು. (ಈ ವಿಧಾನದಿಂದ ಆ ಭಾಗದಲ್ಲಿ ರಕ್ತಚಲನೆಯು ಕುಂಠಿತವಾಗಿ ನಂಜೇರುವುದು ನಿಧಾನಿಸಬಹುದು. ಅಲ್ಲದೆ ಉರಿ– ವೇದನೆಗಳೂ ಕಮ್ಮಿಯಾಗುತ್ತವೆ.)

**ಪ್ರತ್ಯೌಷಧ ಮತ್ತು ಚಿಕಿತ್ಸೆ:**

ಆ್ಯಂಟಿವಿನಂ ಅಥವಾ ಪಾಲಿವಿನಂ ಎಂಬ ಸೂಜಿಮದ್ದು ಹಾವಿನ ವಿಷಕ್ಕೆ ನಿರ್ದಿಷ್ಟ ಪ್ರತ್ಯೌಷಧ. ಇದನ್ನು 50ಮಿಲಿಲೀಟರ ಪ್ರಮಾಣದಲ್ಲಿ ರಕ್ತನಾಳದ ಮೂಲಕ ನೀಡಬೇಕು. ಅಗತ್ಯವೆನಿಸಿದರೆ ಮತ್ತೆ ಕೊಡಬೇಕು. ಹೀಗೆ ಸಾಕಷ್ಟು ಪ್ರಮಾಣದಲ್ಲಿ ಮತ್ತು ವಿಳಂಬವಿಲ್ಲದೆ ಸಕಾಲದಲ್ಲಿ ಸರ್ಪವಿಷ ಪ್ರತ್ಯೌಷಧವನ್ನು ನೀಡಿದರೆ ರೋಗಿಯು ಪ್ರಾಣಾಪಾಯದಿಂದ ಪಾರಾಗುವುದರಲ್ಲಿ ಸಂದೇಹವಿಲ್ಲ. ಸೀರಂ ಪ್ರತಿಕ್ರಿಯೆ ಬಾರದಂತೆ ಸೂಕ್ತ ಮುನ್ನೆಚ್ಚರಿಕೆ ವಹಿಸಬೇಕು. ಕಾರ್ಟಿಸೋನ್, ಪೆನೆಸಿಲಿನ್ ಸೂಜಿಮದ್ದುಗಳೂ, ಗ್ಲೂಕೋಸ್ –ಉಪ್ಪು ನೀರು ಪೂರಣವೂ ಉಪಯುಕ್ತವಾಗಿವೆ. ಉಸಿರಾಟದ ತೊಂದರೆ ಉಂಟಾದರೆ ಶ್ವಾಸನಾಳವನ್ನು ಛೇದಿಸಿ ನಳಿಕೆ ನಳಿಕೆ ಹಾಕಿ ನೆರವಾಗಬೇಕು. ಹಾವುಕಡಿದ ವಿಷಕ್ಕೆ ಮಂತ್ರವಾದ, ಗಿಡಮೂಲಿಕಾ ಚಿಕಿತ್ಸೆಗಳು ಕೂಡಾ ರೂಢಿಯಲ್ಲಿವೆ.

# ದೈತ್ಯ ವಿಷದ ಸರ್ಪ : ಕಾಳಿಂಗ ನಾಗರ



ನಾಗರಹಾವಿನ ಜಾತಿಯಲ್ಲಿ ಅತ್ಯಂತ ಬಲಿಷ್ಠವಾದದ್ದುಕಾಳಿಂಗಸರ್ಪ. ಇದು 8–10 ಅಥವಾ 12 ಅಡಿ ಉದ್ದವಿರುತ್ತದೆ. ಬಣ್ಣವು ಸಾಮಾನ್ಯವಾಗಿ ನಸುಹಳದಿ. ದೇಹದ ಮೇಲೆ ಅಗಲವಾದ ಕಪ್ಪು ಅಡ್ಡಪಟ್ಟಿಗಳಿರುತ್ತದೆ. ಹೆಡೆಯಿದ್ದರೂ ಕಾಳಿಂಗಸರ್ಪವು ಅದನ್ನು ಅಷ್ಟಾಗಿ ಅರಳಿಸುವುದಿಲ್ಲ. ಹೆಡೆಯಲ್ಲಿ ಮಚ್ಚೆಯ ಗುರುತಿಲ್ಲ.

ಕಾಳಿಂಗಸರ್ಪವು ಪಶ್ಚಿಮ ಘಟ್ಟದ ಕಾಡುಗಳಲ್ಲಿ, ನೀಲಗಿರಿ, ಗೋವಾ ಮತ್ತು ಕಾರವಾರದ ಸುತ್ತಮುತ್ತಲಿನ ಅರಣ್ಯಗಳಲ್ಲಿ ಕಾಣಸಿಗುತ್ತದೆ. ಅಸ್ಸಾಂ, ಬಿಹಾರ, ಬಂಗಾಳ ಹಾಗೂ ಅಂಡಮಾನ್ ದ್ವೀಪಗಳಲ್ಲೂ ಇರುತ್ತವೆ. ಇದಕ್ಕೆ ಸಂಕಪಾಲವೆಂದೂ ಹೆಸರಿದೆ.

**ಆನೆಯನ್ನು ಕೊಲ್ಲುವಷ್ಟು ವಿಷ**

ಕಾಳಿಂಗಸರ್ಪವು ಸ್ವಭಾವತಃ ಅಂಜುಬುರುಕ ಜಂತು ಜೀವಿಯಾದರೂ ನೋಡಲು ಭಯಾನಕವಾಗಿ ಬಾಯಿ ತೆರೆದು ಉಂಟುಮಾಡುವ ಭುಸ್ ಸದ್ದು ಭೀತಿಯನ್ನು ಹುಟ್ಟಿಸುತ್ತದೆ. ಅದು ಆತ್ಮರಕ್ಷಣೆಗಾಗಿ ಕಡಿಯುತ್ತದೆ. ರೇಗಿಬಂದರೆ ಅಥವಾ ನೋವುಂಟುಮಾಡಿದರೆ ಕೂಡ ಕಡಿಯಲು ಮುಂದಾಗುತ್ತದೆ. ನಾಗರಹಾವು ಕಡಿದಾಗ ನಡೆಸುವ ಪ್ರಥಮ ಚಿಕಿತ್ಸೆ, ವೈದ್ಯಕೀಯ ಶುಶ್ರೂಷೆ.

ಕಾಳಿಂಗ ಸರ್ಪವು ಒಮ್ಮೆ ಕಡಿದರೆ ಒಂದು ಆನೆಯನ್ನು ಕೊಲ್ಲುವಷ್ಟು ವಿಷವು ಹೊರಬರುತ್ತದೆ.

**ಹಾವು ಕಡಿತಕ್ಕೆ ಬಲಿಯಾಗದಂತೆ ಮುನ್ನೆಚ್ಚರಿಕೆ**

ಮನೆ ಮತ್ತು ಪರಿಸರವನ್ನು ಚೊಕ್ಕಟವಾಗಿ ಇರಿಸಬೇಕು. ಗಿಡಗಂಟೆ, ಹುಲ್ಲು, ಪೊದೆ ದಟ್ಟವಾಗಿ ಬೆಳೆಯದಂತೆ ಆಗಾಗ ಮೊಟಕುಗೊಳಿಸುತ್ತಿರಬೇಕು. ಕಲ್ಲು, ಇಟ್ಟಿಗೆ, ಸೌದೆ ಇತ್ಯಾದಿ ತಿಂಗಳುಗಟ್ಟಲೆ ರಾಶಿಬಿದ್ದಿರಬಾರದು.

ಮನೆಯ ಆವರಣದಲ್ಲಿ ಇಲಿ, ಹೆಗ್ಗಣದ ಬಿಲವಿದ್ದರೆ ಮುಚ್ಚಿಬಿಡಬೇಕು.

ಬಚ್ಚಲು ಮೋರಿಯ ಬಾಯಿಗೆ ತಂತಿ ಜಾಲಿ ಹಾಕಿ ಭದ್ರಪಡಿಸಬೇಕು.

ಇರುಳು ಹೊಲಗದ್ದೆಗಳಲ್ಲಿ ಸಂಚರಿಸುವಾಗ, ದಾರಿಯಲ್ಲಿ ನಡೆಯುವಾಗ ಪಾದರಕ್ಷೆ ಧರಿಸುವುದು, ಕೈಟಾರ್ಚನ್ನು ಉಪಯೋಗಿಸುವುದು ಹಾಗೂ ಬಡಿಗೆಯಿಂದ ನೆಲವನ್ನು ಕುಟ್ಟುತ್ತ ಹೋಗುವುದು ಉಪಯುಕ್ತ ವಿಧಾನವಾಗಿದೆ.



**ನಾಗರಹಾವು ಕಡಿದಾಗ ಕಾಣುವ ವಿಷಲಕ್ಷಣಗಳು:**

* ಹಾವು ಕಡಿದ ಗಾಯದಲ್ಲಿ ಜುಂಜುಂ ನೋವು,

ಉರಿ, ಊತ ಪ್ರಾರಂಭವಾಗುತ್ತದೆ.

* ಕ್ರಮೇಣ ಊತ (ಬಾವು) ಹೆಚ್ಚಾಗುತ್ತದೆ, ಜೋಮು ಹಿಡಿಯುತ್ತದೆ. ಗಾಯದಿಂದ ನಸುರಕ್ತವು ಜಿನುಗುತ್ತಿರುತ್ತದೆ.

* ಗಾಯದ ಸುತ್ತಲಿನ ಚರ್ಮವು ನಸುನೀಲಿ ಅಥವಾ ಗುಲಾಬಿ ಬಣ್ಣಕ್ಕೆ ತಿರುಗುತ್ತದೆ.

* ರೋಗಿಯ ಕೈಕಾಲಲ್ಲಿ ಬಲಹೀನತೆಕಾಣಿಸುತ್ತದೆ ಮತ್ತು ಕ್ರಮೇಣ ದೇಹಾಯಾಸವು ಹೆಚ್ಚುತ್ತ ಹೋಗುತ್ತದೆ.

* ಕೊರಳು ಒಂದು ಪಾರ್ಶ್ವಕ್ಕೆ ವಾಲಿದಂತಾಗುತ್ತದೆ. ನುಂಗಲು ಕಷ್ಟವಾಗುತ್ತದೆ. ವಾಕರಿಕೆ, ವಾಂತಿ ಮತ್ತು ಕಟಬಾಯಿಯಿಂದ ಜೊಲ್ಲುಸುರಿಯತೊಡಗುತ್ತದೆ.

* ಒಮ್ಮೊಮ್ಮೆ ರಕ್ತಸ್ರಾವವೂ ಉಂಟಾಗಬಹುದು.



* ಉಸಿರಾಟಕ್ಕೆ ತೊಂದರೆ ಕಾಣಿಸಿಕೊಳ್ಳುತ್ತದೆ. ಅನಂತರ ಉಸಿರಾಟವು ಸ್ತಬ್ಧವಾಗಿ ಹೃದಯಕ್ರಿಯೆ ನಿಂತುಹೋಗುತ್ತದೆ.

## ರೋಗಿಗೆ ಹಾವು ಕಡಿದ ಪ್ರಥಮ ಚಿಕಿತ್ಸೆ

ಹಾವು ಕಡಿದ ರೋಗಿಯನ್ನು ತೆಳುವಾದ ಮೆತ್ತನೆ ಹಾಸಿಗೆ ಅಥವಾ ಚಾಪೆಯ ಮೇಲೆ ಮಲಗಿಸಬೇಕು. ಹಾವು ಕಡಿದ ಭಾಗವನ್ನು ಅಲ್ಲಾಡಿಸದಂತೆ ನೋಡಿಕೊಳ್ಳಬೇಖು. ರೋಗಿಯು ನಡೆಯುವುದು, ಓಡುವುದು ಇತ್ಯಾದಿ ಮಾಡಬಾರದು.

ಗಾಯಕ್ಕೂ, ಹೃದಯಕ್ಕೂ ನಡುವೆ ಮಾಂಸಖಂಡದ ಭಾಗದಲ್ಲಿ ಬಿಗಿಯಾದ ಒಂದು ಕಟ್ಟನ್ನು ಹಾಕಬೇಕು. (ಕಾಲಿಗೆ ಹಾವು ಹಡಿದಿದ್ದರೆ ತೊಡೆ, ಕೈಗೆ ಕಡಿದಿದ್ದರೆ ತೋಳು, ಇತ್ಯಾದಿ) ಈ ಕಟ್ಟನ್ನು ಪ್ರತಿ 15–20 ನಿಮಿಷಕ್ಕೊಮ್ಮೆ ಕೆಲವು ನಿಮಿಷ ಸಡಿಲಿಸಿ ಮತ್ತೆ ಬಿಗಿ ಮಾಡಬೇಕು.





**ಪ್ರಥಮ ಚಿಕಿತ್ಸೆ**
**ಕಟ್ಟು ವಿಧಾನಗಳು**

ಹಾವು ಕಡಿದ ಗಾಯವನ್ನು ನಂಜು ನಿರೋಧಕ ದುರ್ಬಲ ದ್ರಾವಣದಿಂದ ತೊಳೆಯಬೇಕು.

ಹೊಸ ಬ್ಲೇಡಿನಿಂದ ಹಾವು ಕಡಿದ ಗಾಯವನ್ನು ತುಸು ಕೊಯ್ದು ಅದರಿಂದ ರಕ್ತವು ಹರಿದುಹೋಗುವಂತೆ ಮಾಡಬೇಕು. ಸ್ವಲ್ಪ ಹೊತ್ತಿನ ನಂತರ ಗಾಯದಿಂದ ಒಂದಿಷ್ಟು ರಕ್ತವು ಹರಿದುಹೋದ ತರುವಾಯ ನಂಜು ನಿರೋಧಕ ದ್ರಾವಣದಿಂದ ತೊಳೆದು ಸಡಿಲವಾದ ಪಟ್ಟಿಯನ್ನು ಕಟ್ಟಬೇಕು.

ರೋಗಿಗೆ ವಿಶ್ರಾಂತಿ ಅಗತ್ಯ. ಓಡಾಡಿಸುವುದು ಸರಿಯಲ್ಲ. ಸಾಂತ್ವನ ಹೇಳಬೇಕು. ಹಾವು ಕಡಿದ ಗಾಯಕ್ಕೂ ಹೃದಯಕ್ಕೂ ನಡುವೆ ಕಟ್ಟು ಹಾಕುವುದರಿಂದ ಹಾವಿನ ವಿಷವು ರಕ್ತನಾಳದ ಮೂಲಕ ಹೃದಯಕ್ಕೆ ಸೇರದಂತೆ ತಡೆಯಲು ಸಹಕಾರಿಯಾಗುತ್ತದೆ. ಗಾಯುವನ್ನು ತುಸು ದೊಡ್ಡದಾಗಿಸಿ ರಕ್ತವು ಹರಿದುಹೋಗುವಂತೆ ಮಾಡುವುದರಿಂದ ಗಾಯದ ಸುತ್ತಮುತ್ತ ಸೇರಿದ ವಿಷವು ರಕ್ತಗತವಾಗುವುದನ್ನು ತಪ್ಪಿಸುತ್ತದೆ.

ರೋಗಿಗೆ ವಿಳಂಬವಿಲ್ಲದೆ ವೈದ್ಯಕೀಯ ಚಿಕಿತ್ಸೆ ಒದಗಿಸಬೇಕು.

**ವಿಷಹಾವುಗಳಿಂದಲೂ ಪ್ರಯೋಜನ**

ಹಾವು ಇಲಿಗಳ ಹಾವಳಿಯನ್ನು ತಗ್ಗಿಸಿ, ಹೊಲ, ಮನೆಗಳಲ್ಲಿ ಆಹಾರ ಧಾನ್ಯಗಳ ರಕ್ಷಣೆಗೆ ನೆರವಾಗುತ್ತದೆ.

ಹಾವಿನ ವಿಷವು ಕ್ಯಾನ್ಸರಿನಂತಹ ಕೆಲವು ಮಾರಕ ರೋಗಗಳ ಚಿಕಿತ್ಸೆಯಲ್ಲಿ ಉಪಯುಕ್ತವಾಗಿದೆ.

ನೆತ್ತರು ಹೆಪ್ಪುಗಟ್ಟುವ ಗುಣವಿರುವುದರಿಂದ ರಕ್ತಸ್ರಾವವನ್ನು ನಿಲ್ಲಿಸುವ ಚಿಕಿತ್ಸೆಯಲ್ಲೂ, ದಂತವೈದ್ಯದಲ್ಲೂ ಬಳಕೆಯಾಗುತ್ತದೆ.

ಹಾವನ್ನು ಕೊಲ್ಲಬೇಡಿ, ನಿಮ್ಮನ್ನು ರಕ್ಷಿಸಿಕೊಳ್ಳಿ.

## ವಿಷದ ಹಾವುಗಳು : ಕೆಲವು ಸಂದೇಹಗಳು–ಸಮಾಧಾನಗಳು

ಸಂದೇಹ : ಹಾವಿನ ದ್ವೇಷ, ಹದಿನಾಲ್ಕು ವರುಷ ಎನ್ನುತ್ತಾರಲ್ಲಾ?

ಸಮಾಧಾನ : ಅದು ಸಿನೆಮಾಗಳಲ್ಲಿ ಮಾತ್ರ (ಪುರಾಣ ಹಾಗೂ ಚಂದಮಾಮಾ ಕತೆಗಳಲ್ಲೂ ಇರುತ್ತದೆ). ಜೀವನದಲ್ಲಿ ಅಂಥಾದ್ದು ನಡೆಯುವುದಿಲ್ಲ.

ಸಂದೇಹ : ಏಳು ಹೆಡೆ ಸರ್ಪ, ಸಾವಿರ ಹೆಡೆಗಳ ಆದಿಶೇಷ, ಇತ್ಯಾದಿಗಳಿವೆಯೆನ್ನುತ್ತಾರಲ್ಲ?

ಸಮಾಧಾನ : ಶ್ರದ್ಧೆ, ನಂಬಿಕೆಗಳ ಮಾತುಗಳೆಲ್ಲಾ ವಾಸ್ತವವಾಗಿಯೇ ಇರಬೇಕೆಂದೇನೂ ಇಲ್ಲ. ಅವರವರ ನಂಬಿಕೆ ಅವರವರಿಗೆ ಅಷ್ಟೇ.

ಸಂದೇಹ : ಎರಡು ತಲೆಯ ಹಾವನ್ನು ಹಲವು ಕಡೆ ಇದ್ದುದನ್ನು ಛಾಯಾಗ್ರಾಹಕರು ಚಿತ್ರ ತೆಗೆದಿದ್ದಾರಲ್ಲಾ, ಇದರ ವಿಚಾರವೇನು?

ಸಮಾಧಾನ : ತಲೆ ಹಾಗೂ ಬಾಲ ಎರಡೂ ಸುಮಾರು ಒಂದೇ ರೀತಿ ಇರುವ ಒಂದು ಜಾತಿಯ ಹಾವಿದೆ. ಅದನ್ನೇ ಇರ್ತಲೆ (ಎರಡು ತಲೆ) ಹಾವು ಎಂದು ಹೇಳುತ್ತಾರೆ ಅಷ್ಟೇ. ಇದು ವಿಷದ ಹಾವಲ್ಲ.

ಸಂದೇಹ : ಹಾವು ಹುತ್ತದಲ್ಲಿ ಮನೆಮಾಡಿಕೊಂಡಿರುತ್ತದೆ ಎನ್ನುತ್ತಾರೆ?

ಹಾವಿನ ವಸಸ್ಥಾನ ಹುತ್ತವಲ್ಲ. ಹುತ್ತದಲ್ಲಿರುವ ಹುಳಗಳ, ಗೆದ್ದಲು (ಒರಲೆಗಳ) ಮೊಟ್ಟೆ ಕದಿಯಲು ಹಾವು ಹುತ್ತಕ್ಕೆ ಆಗಾಗ ಭೇಟಿ ನೀಡುತ್ತದೆ. ಹುತ್ತವ ಬಡಿದರೆ ಹಾವು ಸಾಯುವುದೇ ಎಂಬ ಮಾತು ಅನುಭವದ್ದು.

ಸಂದೇಹ : ಮರಿಹಾವು ವಿಷಪೂರಿತವೇ? ಅದು ಕಡಿದರೆ ಅಪಾಯವುಂಟೆ?

ಸಮಾಧಾನ : ಮರಿಹಾವು ಕೂಡ ವಿಷಪೂರಿತ ಜಂತು. ಅದು ಕಡಿದರೆ ಕೂಡ ಪ್ರಾಣಾಪಾಯ ಸಂಭವಿಸಬಹುದು. ಮರಿಹಾವು ತುಂಬಾ ಚಂಚಲ ಸ್ವಭಾವದ್ದು. ಕ್ಷುಲ್ಲಕ ಕಾರಣಕ್ಕೂ ಸಿಟ್ಟಾಗಿ ಕಡಿಯಬಹುದು.

ಸಂದೇಹ : ಹಾವಾಡಿಗನ ಪುಂಗಿಯ ನಾದಕ್ಕೆ ಹಾವು ತಲೆದೂಗುತ್ತದೆ. ಅದಕ್ಕೆ ಸಂಗೀತ ಜ್ಞಾನವಿದೆಯೇ?

ಸಮಾಧಾನ : ಪುಂಗಿಯ ನಾದಕ್ಕೆ ಹಾವು ಹೆಡೆಯಾಡಿಸುವುದಿಲ್ಲ. ಹಾವಾಡಿಗ ಊದುತ್ತ ತೊನೆದಾಡುವ ಅವನ ಪುಂಗಿಯ ಚಲನೆಯನ್ನು ಅನುಸರಿಸಿ ತಲೆ ತೂಗತ್ತದೆ. ಹಾವಿಗೆ ಕಿವಿ ಕೇಳಿಸದು. ನೆಲದಲ್ಲಾಗುವ ಕಂಪನ, ಶಬ್ದವನ್ನು ಹೆಡೆಯ ಮೂಲಕ ತಿಳಿದುಕೊಳ್ಳುತ್ತದೆ.

ಸಂದೇಹ : ಹಾವಿನ ವಿಷವನ್ನು ಸಂಗ್ರಹಿಸಿದ ನಂತರ ಅವುಗಳನ್ನು ಕೊಲ್ಲುತ್ತಾರೆಯೇ?

ಹಾವಿನ ವಿಷವನ್ನು ಸಂಗ್ರಹಿಸುವ ವನವಾಸಿಗಳು ಪಾರಂಪರಿಕವಾದ ಕಲೆ, ಕೈಚಳಕದಿಂದ ತಮಗೂ, ಹಾವಿಗೂ ಅಪಾಯವಾಗದಂತೆ ವಿಷ ಸಂಗ್ರಹಿಸುತ್ತಾರೆ. ಮತ್ತೆ ಕಾಡಿಗೆ

ಹಾವನ್ನು ಕೊಂಡೊಯ್ದು ಬಿಡುತ್ತಾರೆ. ಕೆಲಸಮಯದ ನಂತರ ಅದರ

ವಿಷ ಚೀಲ ತುಂಬಿದಾಗ ಮತ್ತೆ ಹಿಡಿದು ವಿಷ ಸಂಗ್ರಹಿಸುತ್ತಾರೆ.

ಈಜನಾಂಗವನ್ನು ತಮಿಳುನಾಡಿನಲ್ಲಿ ಇರುಳರೆಂದು

ಕರೆಯುತ್ತಾರೆ. ಇವರಿಗೆ ಸ್ವಲ್ಪ ಕನ್ನಡವೂ ತಿಳಿಯುತ್ತದೆ. (ಇವರಿಗೆ ಆರೋಗ್ಯ ರಕ್ಷಣೆಯ ಶಿಕ್ಷಣ ಶಿಬಿರವನ್ನು ಈ ಲೇಖಕ 'ತಾಮರಕ್ಕೆ ರೈ' ಯಲ್ಲಿ ಹಲವು ವರ್ಷಗಳ ಹಿಂದೆ ಸಂಘಟಿಸಿದ್ದಾನೆ.)

ಸಂದೇಹ : ಮದರಾಸಿನ 'ಹಾವಿನ ವನ'ದ ಬಗ್ಗೆ ತಿಳಿಸುತ್ತೀರಾ?

ಸಮಾಧಾನ : ಈಗಿನ ಚೆನ್ನೈ ನಗರದ 'ಗಿಂಡಿ' ಎಂಬಲ್ಲಿ ಸರ್ಪೋದ್ಯಾನವಿದೆ. ಅಲ್ಲಿ ಎಲ್ಲಾ ಬಗೆಯ ವಿಷಸರ್ಪಗಳನ್ನು ಸಾಕುತ್ತಾರೆ. ವಿಷವನ್ನು ಸಂಗ್ರಹಿಸುತ್ತಾರೆ. ಪ್ರಾಣಿಹಿಂಸೆ ಇಲ್ಲದೆ ಸ್ವಯಂ ಸೇವಾಸಂಸ್ಥೆಯ ನೆರವಿನಿಂದ ಈ ಕಾರ್ಯ ಅನೇಕ ವರ್ಷಗಳಿಂದ ನಡೆಯುತ್ತಿದೆ.

ಸಂದೇಹ : ಸಂಗ್ರಹಿಸಿದ ವಿಷವನ್ನು ಏನು ಮಾಡುತ್ತಾರೆ?

ಸಮಾಧಾನ : ಹಾವಿನ ವಿಷವನ್ನು ಅನೇಕ ಔಷಧಗಳ ತಯಾರಿಕೆಯಲ್ಲಿ ಬಳಸುತ್ತಾರೆ. ಅಲ್ಲದೆ ಹಾವು ಕಡಿತ ಚಿಕಿತ್ಸೆಗಾಗಿ ಬಳಸುವ

ವಿಷಹರ ಸೂಜಿಮದ್ದನ್ನು ಕೂಡಾ ಸಿದ್ಧಮಾಡುತ್ತಾರೆ. ಇದು ಜೀವರಕ್ಷಕ ಔಷಧಿ.

ಸಂದೇಹ : ಹಾವು ಅಂಜುಬುರುಕ ಜಂತು ಎಂದು ಹೇಳುತ್ತಾರೆ. ಮತ್ತೆ

ಅದು ಏಕೆ ಮನುಷ್ಯರನ್ನು ಕಡಿಯುತ್ತದೆ?

ಸಮಾಧಾನ : ತನಗೆ ಅಪಾಯವುಂಟಾದ ಪ್ರಸಂಗದಲ್ಲಿ ಹಾವು ಆತ್ಮರಕ್ಷಣೆಗಾಗಿ ಆಕ್ರಮಣಕಾರರನ್ನು ಕಡಿಯುತ್ತದೆ. ಅಜಾಗರೂಕತೆಯಿಂದಲೋ, ಅರಿಯದೆಯೋ ಹಾವನ್ನು ತುಳಿದಂತಹ ಅಥವಾ ಇನ್ನಾವುದೇ ರೀತಿಯಿಂದ ಗಾಯಗೊಳಿಸಿ ಅಥವಾ ನೋವುಂಟುಮಾಡಿದರೆ ಹಾವುಗಳು ಕಡಿಯುತ್ತವೆ. ಹಾವು ಅಂಜುಬುರುಕ ಜೀವಿ, ಅಷ್ಟೇ ಅಲ್ಲದೆ ಅನಿವಾರ್ಯ ಪ್ರಸಂಗದ ವಿನಃ ಕಡಿಯುವುದಿಲ್ಲ.

ಸಂದೇಹ : ಹಾವು ಪರಿಸರ ರಕ್ಷಕ ಎನ್ನುತ್ತಾರಲ್ಲ?

ಸಮಾಧಾನ : ಹೌದು. ರೈತರು ಬೆಳೆದ ನಾನಾ ಬೆಳೆಗಳನ್ನು ತಿಂದು ಕೊಚ್ಚಿಹಾಕುವ ಇಲಿ ಮೊದಲಾದ ಪ್ರಾಣಿಗಳನ್ನು ತಿನ್ನುವ ಹಾವು ರೈತ ಹಿತೈಷಿ!

**ವಿಷವಿಲ್ಲದ ಹಾವು ಕಡಿದಾಗ**

ಮನುಷ್ಯನಿಗೆ ವಿಷವಿಲ್ಲದ ಹಾವು ಕಡಿದಾಗ ಗಾಬರಿಗೊಂಡು, ಉದ್ವೇಗದಿಂದ ಕ್ಷಣಕ್ಷಣಕ್ಕೂ ಜೋರಾಗಿ ಕಿರುಚುತ್ತಾ ಓಡಾಡುವುದುಂಟು. ತನಗೆ ಕಡಿದದ್ದು ವಿಷಸರ್ಪವೆಂಬ ಭ್ರಮೆಯೇ ಇದಕ್ಕೆ ಕಾರಣ.

## ಮಂಡಲ ಹಾವು



ಮಂಡಲಸರ್ಪದ ಮೈ ಮೇಲೆ ಮೇಲಿಂದ ಕೆಳಕ್ಕೆ ಮೂರು ಸಾಲುಗಳಲ್ಲಿ ಕಪ್ಪು ಮಂಡಲಗಳು ಹೊಳೆಯುತ್ತವೆ. (ಇದರಿಂದಲೇ ಮಂಡಲ ಸರ್ಪವೆಂದು ಹೆಸರು ಬಂದಿದೆ) ಮಂಡಲಸರ್ಪವು ಕಡಿದರೆ ಗಾಯವಾದ ಭಾಗವು ಕ್ರಮೇಣ ಕೊಳೆತು ಹೋಗುವುದರಿಂದ ಕೊಳಕುಮಂಡಲವೆಂದು ಕರೆಯುತ್ತಾರೆ. ಈ ಹಾವಿನ ತಲೆಯು ಚಪ್ಪಟೆ; ಬಾಲವು ಚಿಕ್ಕದಾಗಿದ್ದು ಇದು ಹುಲ್ಲುಗಾವಲು ಮತ್ತು ಹೂದೋಟಗಳಲ್ಲಿ ಜಡವಾಗಿ ಬಿದ್ದಿರುತ್ತದೆ. ಕಡಿಯಲು ಮುಂದಾದಾಗ ಹೆಚ್ಚು ಶಕ್ತಿಯಿಂದ ತುಸು ನೆಗೆದು ಬಲವಾಗಿ ಕಡಿಯುತ್ತದೆ. ಇದು ಬುಸುಗುಟ್ಟುವ ಶಬ್ದವು ತೀರ ಭಯಾನಕವಾದುದು. ಉರಗ ವರ್ಗದಲ್ಲಿ ಇದು ಮರಿಗಳನ್ನೀಡುವ ಜಾತಿಯದು. (ನಾಗರಹಾವು ಮತ್ತು ಕನ್ನಡಿಹಾವು ಮೊಟ್ಟೆಯಿರಿಸುತ್ತವೆ.)

**ವಿಷವೇರಿದ ಲಕ್ಷಣಗಳು :**

ಮಂಡಲ ಸರ್ಪವು ಕಡಿದ ಕೂಡಲೇ ಗಾಯದಲ್ಲಿನೋವು, ಉರಿ ಮತ್ತು ಬಾವು ಕಾಣಿಸುವುದಲ್ಲದೆ ಗಾಯದ ಸುತ್ತ ಚರ್ಮ ವಿವರ್ಣವೂ ಕಾಣಿಸುತ್ತದೆ. ರಕ್ತವರ್ಣದ ಸ್ರಾವ ಮತ್ತು ತೀವ್ರ ವೇದನೆಗಳೂ ಉಂಟಾಗುತ್ತವೆ. ಪ್ರಾಣಾಪಾಯದ ಕಾಲಾವಧಿ 24 ಗಂಟೆಗಳಿಂದ 3 ದಿವಸ. ಆದರೆ ಕೆಲವು ಸಲ 2–3 ವಾರಗಳಷ್ಟು ವಿಳಂಬಿಸಿ ಪ್ರಾಣಾಪಾಯ ಸಂಭವಿಸುವುದೂ ಉಂಟು. ಮಂಡಲಸರ್ಪವು ಕಡಿದ ಭಾಗ (ಎಂದರೆ ಬೆರಳು ಇತ್ಯಾದಿ ಅಂಗಕ್ಷಯವಾಗುವ ಸಂಭವವಿದೆ.

### ಚಿಕಿತ್ಸೆ ಮತ್ತು ಉಪಚಾರ

ಮಂಡಲಹಾವು ಕಡಿದ ರೋಗಿಯನ್ನು ಪ್ರತ್ಯೇಕವಾದ ಕೊಠಡಿಯಲ್ಲಿ ಮಲಗಿಸಿ ಗಾಯವನ್ನು ನಂಜುನಿರೋಧಕದ ದುರ್ಬಲ ದ್ರಾವಣದಿಂದ ತೊಳೆದು ಬ್ಲೇಡು ಅಥವಾ ಹರಿತವಾದ ಚಾಕುವನ್ನು ಬೆಂಕಿಯಲ್ಲಿ ಕಾಸಿ ಶುದ್ಧ ಮಾಡಿ ಉದ್ದನೆ ಗಾಯ ಹಾಕಿ ರಕ್ತಹರಿಸಿ ಅಂಗಬಂಧ ಮಾಡುವುದಲ್ಲದೆ, ಗಾಯದ ಮೇಲೆ ಮಂಜುಗಡ್ಡೆಯನ್ನು ಇರಿಸಿ ವಿಷಪ್ರಸಾರವನ್ನು ತಡೆಗಟ್ಟಲು ಪ್ರಯತ್ನಿಸಬೇಕು. ಗಾಯದ ಮೇಲೆ ಈಥೈಲ್ ಕ್ಲೋರೇಡ್ ಸಿಂಪರಣೆ ಕೂಡಾ ಉಪಯುಕ್ತವಾಗಿದೆ. ಮಂಡಲಸರ್ಪ ವಿಷಸ ಸಿದ್ಧಪ್ರತ್ಯೌಷಧವನ್ನು ರಕ್ತನಾಳದ ಮೂಲಕ ಸಾಕಷ್ಟು ಪ್ರಮಾಣದಲ್ಲಿ ಕೊಡಬೇಕು. ಕಾರ್ಟಿಸೋನ್ ಮತ್ತು ಪೆನಿಸಿಲಿನ್ ಸೂಜಿಮದ್ದುಗಳೂ, ಗ್ಲೂಕೋಸ್, ಉಪ್ಪುನೀರು ಪೂರಣವೂ ಉಪಯುಕ್ತವಾಗಿದೆ.

## ಕಟ್ಟ ಹಾವು



ಕನ್ನಡಿಹಾವು ಮತ್ತು ಪಟ್ಟೆ ಕನ್ನಡಿ ಹಾವು (ಕಡಂಬಳ- ಪಟ್ಟೆ ಕಡಂಬಳ) ಎಂಬ ಎರಡು ಜಾತಿಯ ವಿಷ ಉರಗಗಳು ಗಾತ್ರದಲ್ಲಿ ಚಿಕ್ಕದಾಗಿದ್ದರೂ ಭಯಂಕರ ವಿಷ ಸರ್ಪಗಳಾಗಿವೆ. ಇವುಗಳ ವಿಷ ನಾಗರಹಾವಿನ ವಿಷಕ್ಕಿಂತ ಮೂರು ಪಾಲು ಅಧಿಕ ತೀಕ್ಷ್ಣತೆಯಿಂದ ಕೂಡಿದೆ. ಈ ಹಾವಿನ ಮೈಮೇಲೆ ಅಚ್ಚ ಬಿಳಿಯ ರೇಖೆಗಳು ಕಮಾನಿನಂತೆ ತಲೆಯಿಂದ ಬಾಲದ ತುದಿಯವರೆಗೂ ಅಡ್ಡಡ್ಡವಾಗಿ ಇರುತ್ತವೆ. ಕನ್ನಡಿಹಾವಿನ ವಾಸಸ್ಥಾನ ಜನನಿಬಿಡ ಸ್ಥಳವೇ ಆಗಿದ್ದು, ಮನೆಯ ಸೂರಲ್ಲೋ (ಛಾವಣಿ), ಬಚ್ಚಲು-ಜಗಲಿಗಳ ಅಂಚಿನಲ್ಲೋ, ಬೀರು, ಕಪಾಟುಗಳ ಸಂಧಿನಲ್ಲೋ ಅಥವಾ ತೋಟ ಬಯಲುಗಳ ನೆರಳಲ್ಲೋ ಅವಿತಿದ್ದು ಆಹಾರವನ್ನರಸುತ್ತರಾತ್ರಿ ಸಂಚಾರಕ್ಕೆ ಹೊರಡುತ್ತದೆ. ಕನ್ನಡಿಹಾವಿನ ವಿಶೇಷ ಅಭ್ಯಾಸವೆಂದರೆ ಗಂಡು- ಹೆಣ್ಣು ಜೊತೆಯಾಗಿ ಸಂಚರಿಸುವುದು. ಆದ್ದರಿಂದ ಒಂದು ಹಾವನ್ನು ಕೊಂದಾಗ ಸಂಗಾತಿಯನ್ನೂ ಅರಸಿಕೊಲ್ಲಬೇಕು.

**ವಿಷಲಕ್ಷಣ**

ವಿಶೇಷ ರಕ್ತಸ್ರಾವವಾಗುವುದು ಈ ಹಾವುಕಡಿದ ಲಕ್ಷಣಗಳಲ್ಲಿ ಪ್ರಮುಖವಾದುದು. ಕಡಿದ ಗಾಯದಿಂದ ಮಾತ್ರವಲ್ಲದೆ, ರೋಗಿಯ ಮೂಗು, ಬಾಯಿ ಮತ್ತು ಜನನೇಂದ್ರಿಯ ದ್ವಾರಗಳಿಂದಲೂ ರಕ್ತಸ್ರಾವವಾಗುವುದು. ಕೆಲವೊಮ್ಮೆ ಹೊಟ್ಟೆಯೊಳಗೆ ಕೂಡಾ ರಕ್ತಸ್ರಾವವಾಗಿ ಗಡ್ಡೆ ಕಟ್ಟಬಹುದು. ಅಂತಹ ರೋಗಿಯು ಅತಿಶಯವಾದ ಹೊಟ್ಟೆ ನೋವಿನಿಂದ ನರಳುತ್ತಾನೆ. ಪ್ರಾಣಾಪಾಯದ ಕಾಲಾವಧಿ 6–24 ತಾಸು. ಆದರೆ ಕೆಲವೊಮ್ಮೆ ಒಂದು ವಾರದ ನಂತರ ಪ್ರಾಣಪಾಯ ಸಂಭವಿಸುವುದೂ ಉಂಟು. ಪಟ್ಟೆ ಕನ್ನಡಿ ಹಾವಿನ ವಿಷವು ಇನ್ನಷ್ಟು ಭೀಕರ ಸ್ವರೂಪದ್ದಾಗಿದ್ದು ನಾಗರಹಾವಿನ ವಿಷಕ್ಕಿಂತ 16 ಪಟ್ಟು ಅಧಿಕ ತೀಕ್ಷ್ಣತೆಯುಳ್ಳದ್ದಾಗಿದೆ.

**ಚಿಕಿತ್ಸೆ ಮತ್ತು ಉಪಚಾರ**

ಕನ್ನಡಿಹಾವು ಕಡಿತ ರೋಗಿಯನ್ನು ಪ್ರತ್ಯೇಕವಾದ ಕೊಠಡಿಯಲ್ಲಿ ಮಲಗಿಸಬೇಕು. ಅನಂತರ ಗಾಯವನ್ನು ನಂಜು ನಿರೋಧಕ ದ್ರಾವಕದಿಂದ ತೊಳೆದು, ಬ್ಲೇಡು ಅಥವಾ ಹರಿತವಾದ ಚಾಕುವಿನ ಅಲಗನ್ನು ದೀಪದ ಬೆಳಕಿಗೆ ಹಿಡಿದು ತುಸು ಬಿಸಿ ಮಾಡಿ ಗಾಯ ಹಾಕಿ, ವಿಚಭರಿತ ದುಷ್ಟರಕ್ತವು ಹರಿಯುವಂತೆ ಮಾಡಬೇಕು. ಅಂಗಬಂಧ ಹಾಕುವುದು, ಗಾಯದ ಮೇಲೆ ಮಂಜುಗಡ್ಡೆ ಹಚ್ಚುವುದು ಮೊದಲಾದ ಉಪಾಯಗಳಿಂದ ವಿಷ ಪ್ರಸಾರವನ್ನು ಸಾಧ್ಯವಾದಷ್ಟು ಮಟ್ಟಿಗೆ ತಡೆಗಟ್ಟಬೇಕು. ಈಥೈಲ್ ಕ್ಲೋರೈಡ್ ಸಿಂಪರಣೆಯಿಂದ ವೇದನೆಯು ತುಸು ಮಟ್ಟಿಗೆ ಉಪಶಮನವಾಗುತ್ತದೆ. ಸಿದ್ಧ ಪ್ರತ್ಯೌಷಧವನ್ನು ರಕ್ತನಾಳದ ಮೂಲಕ ರೋಗಿಗೆ ಕೊಡುವುದಲ್ಲದೆ ವಿಟಮಿನ್ ಕೆ, ಕಾರ್ಟಿಸೋನ್ ಸೂಜಿ ಮದುಗಳೂ. ಗ್ಲೂಕೋಸ್. ಉಪ್ಪು ನೀರಿನ ಪೂರಣಗಳು ಉಪಯುಕ್ತವಾಗಿವೆ.



## ಜೇಡ

ಮನೆಯ ಕತ್ತಲು ಕೋಣೆಯ ಮೂಲೆಗಳಲ್ಲಿ, ಮಹಡಿಯ ಸಂದಿಗೊಂದುಗಳಲ್ಲಿ ತೋಟದ ಗಿಡಮರಗಳಲ್ಲಿ ಮತ್ತು ಬಯಲಿನ ಹುಲ್ಲು ಹಾಸುಗಳೆಡೆಯಲ್ಲಿ ನವಿರಾದ ಎಳೆಗಳಿಂದ ರಂಜಿಸುವ ಪುಟ್ಟ ಬಲೆಗಳನ್ನು ನೇಯ್ದು ಹುಳ ಹುಪ್ಪಟೆಗಳನ್ನು ಆಹ್ವಾನಿಸಿ ಕೊಳ್ಳೆಯು ಬಲೆಗೆ ಅಂಟಿಕೊಂಡಾಗ ಸಂತೋಷದಿಂದ ಭಕ್ಷಿಸುವ ಜೇಡವು ಕೀಟ ವರ್ಗದಲ್ಲೇ ತುಂಬಾ ವಿಚಿತ್ರವಾದ ಜಂತು. ಪಕ್ಷಿಜೇಡ, ಏಡಿಜೇಡ, ತೋಟಜೇಡ, ಬೋನು ಬಾಗಿದ ಜೇಡ, ಮೊದಲಾದ ಅನೇಕ ಜಾತಿ ಭೇದಗಳುಳ್ಳ ವಿಸ್ತಾರವಾದ ಜೇಡ ಸಂತಾನ ಬಹುಮಟ್ಟಿಗೆ ನಿರುಪದ್ರವಿ ಜೀವಿಗಳು. ಆದರೆ ತೋಳ ಜೇಡ ಮತ್ತು ಕರಿ ವಿಧವೆ

ಜೇಡ ಎಂಬ ವರ್ಗದ ಜೇಡಗಳು ಮಾತ್ರ ಅತ್ಯಂತ ಅಪಾಯಕಾರಿ ವಿಷ ಜಂತುಗಳು. ಉಳಿದ ಜೇಡಗಳಲ್ಲಿಯೂ ವಿಷ ಗ್ರಂಥಿಗಳಿದ್ದರೂ ಅವು ಕೊಳ್ಳೆಯನ್ನು ಸಾಯಿಸಲು ಮಾತ್ರ ನೆರವಾಗುತ್ತವೆ (ಆದರೂ ಕೆಲವೊಮ್ಮೆ ಈ ಜೇಡಗಳು ಕಡಿದು ಹೆಚ್ಚಿನ ಪ್ರಮಾಣದಲ್ಲಿ ವಿಷವನ್ನು ಪಸರಿಸಿದಾಗ ತುಸುಮಟ್ಟಿಗೆ ಉಪದ್ರವಗಳು ಕಾಣಿಸಿಕೊಳ್ಳುವುದು ಇಲ್ಲವೆಂದಿಲ್ಲ).

**ವಿಷ ಲಕ್ಷಣಗಳು**

ಜೇಡ ಕಡಿದ ಗಾಯವು ಮೊದಲಿಗೆ ಅಷ್ಟೇನೂ ಗಾಬರಿ ಹುಟ್ಟಿಸುವುದಿಲ್ಲವಾದರೂ ಕ್ರಮೇಣ ನೋವು, ಉರಿ, ಊತಗಳು ಕಾಣಿಸಿಕೊಂಡು ಸ್ಥಳೀಯವಾಗಿ ವರ್ಣ ವ್ಯತ್ಯಾಸವುಂಟಾಗುವುದಲ್ಲದೆ, ಕ್ರಮೇಣ ವೇದನೆ ಹೆಚ್ಚುತ್ತ ಹೋಗುತ್ತದೆ. ರೋಗಿಯ ಬಾಯಲ್ಲಿ ಜೊಲ್ಲು ಸುರಿಯತೊಡಗುವುದು, ಮೈ ಬೆವರುವುದು, ವಾಕರಿಕೆ, ಹೊಟ್ಟೆ ನುಲಿತ, ಮೈ ಕೈ ತೊಂದರೆ ಮೊದಲಾದ ಉಪದ್ರವಗಳು ಕಾಣಿಸಿಕೊಂಡು ರೋಗಿಯು ಚಡಪಡಿಸುತ್ತಾನೆ.

**ಚಿಕಿತ್ಸೆ**



ಇಂತಹ ರೋಗಿಯನ್ನು ತಕ್ಷಣ ಹಾಸಿಗೆಯ ಮೇಲೆ ಮಲಗಿಸಿ ಗಾಯವನ್ನು ನಂಜು ನಿರೋಧಕದಿಂದ ತೊಳೆದು, ಅದರ ಮೇಲೆ ಮಂಜುಗೆಡ್ಡೆ ಹಚ್ಚಿ ವಿಷ ಪ್ರಸಾರವನ್ನು ತಡೆಗಟ್ಟಲು ಪ್ರಯತ್ನಿಸಬೇಕು. ಅಂಗಬಂಧದಿಂದಲೂ ಹೆಚ್ಚಿನ ಪ್ರಯೋಜನ ದೊರಕುತ್ತದೆ. ಮಾರ್ಫಿನ್ ಸಲ್ಫೇಟ್, ಕ್ಯಾಲ್ಸಿಯಂ ಗ್ಲೂಕೋ ನೇಟ್ ಸೂಚಿಮದ್ದುಗಳೂ ಆ್ಯಂಟಿ ಹಿಸ್ಟಾಮಿನ್ ವರ್ಗದ ಔಷಧಿಗಳೂ ಹೈಡ್ರೋಕಾರ್ಟಿಸೋನ್‌ಗಳೂ ಉಪಯುಕ್ತವಾಗಿವೆ.

ಆಯುರ್ವೇದ ಶಾಸ್ತ್ರದಲ್ಲಿ ಜೇಡರ ಹುಳಕಡಿತದ ವಿಷಕ್ಕೆ, ಹುಳ ಕಡಿದ ಭಾಗವನ್ನು ಚಾಕುವಿನಿಂದ ಸಿಗಿದು (ಸೀಳಿ) ಅಗ್ನಿ ಕರ್ಮದ ಮೂಲಕ ಉರಿಸಬೇಕೆಂದು ಹೇಳಿದೆ. ಅನಂತರ ವಿವಿಧ ಔಷಧಿಯುಕ್ತ ಕಷಾಯದಿಂದ ಗಾಯವನ್ನು ತೊಳೆದು ಘೃತ ಲೇಪನವನ್ನೂ, ಸರ್ಪ ಗಂಧದ ಬೇರು, ಚಕ್ರಾಣಿಕೆಯ ಬೇರು, ಚಳ್ಳೆಗಿಡದ ತೊಗಟೆಗಳನ್ನು ಲಿಂಬೆ ರಸದಲ್ಲಿ ಲೇಪ ಹಾಕುವ ಪರಿಪಾಠ ಹಳ್ಳಿಗಳಲ್ಲಿ ರೂಢಿಯಲ್ಲಿದೆ.

## ಚೇಳು



ಚೇಳು ಕುಟುಕಿದಾಗ ಅದರ ಕೊಂಡಿಯಿಂದ ಹೊರಸೂಸುವ ವಿಷವು ಭಯಂಕರ ವೇದನೆಯನ್ನೂ ಕೆಲವೊಮ್ಮೆ ಪ್ರಾಣಾಂತಿಕ ಅಪಾಯವನ್ನೂ ಉಂಟುಮಾಡಬಲ್ಲದು. ಮಕ್ಕಳ ಪಾಲಿಗಂತೂ ಚೇಳಿನ ವಿಷ ತೀರ ಅಪಾಯಕಾರಿ. ಪ್ರತಿ ವರ್ಷ 150 ಸಾವುಗಳು ಚೇಳಿನ ಕಡಿತದಿಂದ ಸಂಭವಿಸುತ್ತಿದ್ದು ಈ ಪೈಕಿ ಹೆಚ್ಚಿನವು ಬಾಲಕರ ಮರಣ ಎಂಬ ಸಂಗತಿಯು ತುಂಬಾ ಆತಂಕಕಾರಿಯೇ ಸರಿ.

ಕಸಕಡ್ಡಿಗಳ ತಿಪ್ಪೆಯಲ್ಲಿ, ಮರಮುಟ್ಟುಗಳ ಸಂದಿನಲ್ಲಿ, ಕತ್ತಲು ಕೋಣೆಯ ಮೂಲೆಯಲ್ಲಿ, ಛಾವಣಿಯ ಸಂದುಗೊಂದುಗಳಲ್ಲಿ ಅವಿತಿದ್ದು ಮನುಷ್ಯ ಸಂಪರ್ಕ ಬಂದಾಗ ತಟಕ್ಕನೆ ಕುಟುಕಿಬಿಡುವ ಚೇಳಿನ ಬಾಲದ ತುದಿಯ ಕೊಂಡಿಯು ಪೊಳ್ಳಾಗಿದ್ದು ವಿಷಗ್ರಂಥಿಯಿಂದ ಸರಬರಾಜಾಗುವ ವಿಷವು ಕ್ಷಣಾರ್ಧದಲ್ಲಿ ಗಾಯವನ್ನು ಸೇರಿಬಿಡುತ್ತದೆ. ವಾಸ್ತವವಾಗಿ ಚೇಳಿನ ವಿಷವು ಹಾವಿನ ವಿಷಕ್ಕಿಂತಲೂ ಹೆಚ್ಚು ಘಾತಕವಾದುದಾದರೂ ಒಮ್ಮೆ ಕುಟುಕಿದಾಗ ಪ್ರಸಾರವಾಗುವ ವಿಷದ ಪ್ರಮಾಣವು ಅಲ್ಪವಾದುದರಿಂದ ರೋಗಿಯಲ್ಲಿ ಉಂಟಾಗುವ ಅಪಾಯದ ತೀವ್ರತೆ ಅಷ್ಟು ಭೀಕರವಾಗಿ ಕಾಣಿಸುವುದಿಲ್ಲ. ಆದರೂ ಕೂಡ ಚೇಳಿನ ವಿಷವು ಪ್ರಾಣಾಪಾಯವನ್ನು ತರಬಲ್ಲದು ಎಂಬುದನ್ನು ಮರೆಯಬಾರದು.

### ವಿಷ ಲಕ್ಷಣಗಳು

ಚೇಳು ಕುಟುಕಿದ ರೋಗಿಗೆ ತಕ್ಷಣ ನೋವು (ಸ್ಥಳೀಯ ನೋವು), ತಲೆ ತಿರುಗುವುದು, ಕಣ್ಣು ಕತ್ತಲೆ ಬರುವುದು, ಸಂಕಟ, ಆಯಾಸ, ವಾಂತಿ-ಭೇದಿ ಮೊದಲಾದ ಉಪದ್ರವಗಳು ಉಂಟಾಗುತ್ತವೆ. ಕೆಲವೊಮ್ಮೆ ಅದಿರುವಾಯು ಬುದ್ಧಿಭ್ರಮೆ ಸಹ ಉಂಟಾಗಬಹುದು. ರೋಗಿಯಲ್ಲಿ ಬಾಯಿ ಒಣಗುವುದು, ನಾಲಗೆ ದಪ್ಪವಾಗುವುದು, ಹೊಟ್ಟೆ ಚಳಕು, ಉಸಿರಾಟದ ತೊಂದರೆ ಮೊದಲಾದ ಉಪದ್ರವಗಳು ಕಾಣಿಸಿಕೊಂಡು ಚಡಪಡಿಕೆ ಹೆಚ್ಚಾಗುತ್ತದೆ. ಕೆಲವೊಮ್ಮೆ ಚೇಳು ಕುಟುಕಿದ ಅಂಗವು ಬೆರಳು ಇತ್ಯಾದಿ ಒಣಗಿ ನಿರುಪಯುಕ್ತವಾಗಬಹುದು. ಪ್ರಾಣಾಪಾಯದ ಕಾಲಾವಧಿ 24 ತಾಸು.

### ಚಿಕಿತ್ಸೆ

ಚೇಳು ಕುಟುಕಿದ ರೋಗಿಯನ್ನು ಹಾಸಿಗೆಯ ಮೇಲೆ ಮಲಗಿಸಿ, ಗಾಯವನ್ನು ಪೊಟಾಸಿಯಂ ಪರಮಾಂಗನೇಟ್ ದುರ್ಬಲ ದ್ರಾವಣದಿಂದ ತೊಳೆಯಬೇಕು.

ಗಾಯದ ಮೇಲೆ ಮಂಜುಗಡ್ಡೆ ಹಚ್ಚುವುದು, ಅಂಗಬಂಧ ಹಾಕುವುದು ಮೊದಲಾದ ವಿಧಾನಗಳಿಂದ ವಿಷ ಪ್ರಸಾರವನ್ನು ನಿಧಾನಗೊಳಿಸಬಹುದು. ಗಾಯದ ಸುತ್ತ ಕೊಕೇನ್ ಅಥವಾ ಜೈಲೋಕೇನ್ ಸೂಜುಮದ್ದನ್ನು ಚುಚ್ಚುವುದು ಅಥವಾ ಈಥರ್ ಕ್ಲೋರೈಡ್ ಸಿಂಪರಿಸುವುದು ವೇದನೆಯ ಉಪಶಮನಕ್ಕೆ ಸಹಾಯಕವಾಗುತ್ತವೆ. ಆ್ಯಂಟಿ ಹಿಸ್ಟಾಮಿನ್ ದ್ರವ್ಯಗಳು, ಹೈಡ್ರೋಕಾರ್ಟಿಸೋನ್, ಕ್ಯಾಲ್ಸಿಯಂ ಗ್ಲೂಕೋನೇಟ್ ಮೊದಲಾದ ಔಷಧಿಗಳು ಉಪಯುಕ್ತವಾಗಿವೆ. ಶಾಮಕ ಔಷಧಿಗಳನ್ನೂ, ಉಪ್ಪುನೀರಿನ ಪೂರಣವನ್ನೂ ಅಗತ್ಯ ನೋಡಿ ಒದಗಿಸಬೇಕು.

ಆಯುರ್ವೇದ ವೈದ್ಯರು ಚೇಳು ಕುಟುಕಿದ ಗಾಯಕ್ಕೆ ಬಿಸಿ ತುಪ್ಪದ ಧಾರೆ ಹಿಡಿಯುವುದು, ತುಳಸಿ ತೆನೆ, ಮಾತುಲುಂಗ ರಸ ಮತ್ತು ಗೋಮೂತ್ರ ಮಿಶ್ರಿತ ಕಲ್ಕವನ್ನು ಲೇಪಿಸುವುದು ಮೊದಲಾದ ಬಾಹ್ಯ ಚಿಕಿತ್ಸೆಯನ್ನೂ ಸಕ್ಕರೆ–ತುಪ್ಪ ಬೆರೆಸಿದ ಹಾಲು ಸೇವನೆಯನ್ನೂ ಉಪದೇಶಿಸುತ್ತಾರೆ.

## ಕಣಜನ ಹುಳ, ಜೇನು ಹುಳ ಮತ್ತು ತುಂಬಿ ಕೀಟ ವಿಷ

ಕಣಜದ ಹುಳ, ಜೇನು ನೊಣ, ತುಂಬಿ ಮೊದಲಾದ ಕೀಟಗಳು ಕೊಂಡಿಯಿಂದ ಚುಚ್ಚಿದಾಗ ಸಣ್ಣಗಾಯವಾಗಿ ಉರಿ, ವೇದನೆ ಹಾಗೂ ಚಿಕ್ಕ ಗಂದೆಗಳು ಕಾಣಿಸಿಕೊಂಡು ಹೆಚ್ಚಿನ ಉಪದ್ರವವಿಲ್ಲದೆ ಮಾಸಿಹೋಗುವುದು ಸಾಮಾನ್ಯ ಸಂಗತಿಯಾದರೂ ಕೆಲವೊಮ್ಮೆ ಪ್ರಾಣಾಪಾಯ ಸಂಭವಿಸಬಹುದಾದಷ್ಟು ತೀವ್ರ ದುಷ್ಪರಿಣಾಮಗಳು ಈ ಕೀಟವಿಷದಿಂದ ಉಂಟಾಗಬಹುದು. ಈ ಕೀಟಗಳು ಚುಚ್ಚಿದಾಗ 'ಹಿಸ್ಟಾಮಿನ್' ಜಾತಿಯ ವಿಷವು ದೇಹದಲ್ಲಿ ಪ್ರಸಾರವಾಗುತ್ತದೆ. ಜೇನು ನೊಣವು ಕುಟುಕಿದಾಗ ಅದರ ಕೊಂಡಿಯ ಸೂಜಿ ಮೊನೆಯಂತಹ ತುದಿಯ ಚರ್ಮದೊಳಗೆ ನೆಟ್ಟುಬಿಡುತ್ತವೆ. ಇದರಿಂದಾಗಿ ಮತ್ತೆ ಆ ನೊಣವು ಕುಟುಕುವುದಿಲ್ಲ. ಆದರೆ ಇತರ ಕೀಟಗಳು ಮುಖ್ಯವಾಗಿ ಕಣಜದ ಹುಳ ಮತ್ತೆ ಮತ್ತೆ ಅನೇಕ ಸಲ ದಾಳಿ ಮಾಡಬಹುದು. ಹೆಮೊಪ್ರೇರಾ ವರ್ಗದ ಕಣಜದ ಹುಳುಕಿಗಳು ಕುಟುಕಿದಾಗ ಭಯಂಕರ ವಿಷ ಲಕ್ಷಣಗಳು ಕಾಣಿಸುತ್ತವೆ.

### ವಿಷ ಲಕ್ಷಣಗಳು

ಕೀಟ ವಿಷ ಬಾಧೆಗೆ ಗುರಿಯಾದ ರೋಗಿಯು ತಲೆ ತಿರುಗುವುದು, ಸ್ಥಾನಿಕವಾಗಿ ಉರಿ, ವೇದನೆ, ಎದೆ ಹಿಡಿದುಕೊಳ್ಳುವುದು ಮೊದಲಾದ ಉಪದ್ರವಗಳಿಂದ ನರಳುತ್ತಾನೆ. ರೋಗಿಯ ಮುಖವು ವಿವರ್ಣವಾಗುವುದು ಮತ್ತು ಮೈಮೇಲೆ ಹೈತ್ತಿಕ ಗಂದೆಗಳು ಏಳುವುವು. ಉಸಿರಾಟದ ತೊಂದರೆ ಕಾಣಿಸಿಕೊಳ್ಳುವುದಲ್ಲದೆ ಚರ್ಮವು ತಣ್ಣಗೆ ಜಿಡ್ಡು ಜಿಡ್ಡಾಗುವುದು. ಹೃದಯ ವಿಕಾರ,

ಮೂರ್ಛೆ ತಪ್ಪುವುದು, ಅನೈಚ್ಛಿಕವಾಗಿ ಮಲ–ಮೂತ್ರ ವಿಸರ್ಜನೆಯಾಗುವುದು ಮೊದಲಾದ ಉಪದ್ರವಗಳು ಕಾಣಿಸಿಕೊಳ್ಳುವುದಲ್ಲದೆ ಸಾವು ಕೂಡಾ ಸಂಭವಿಸಬಹುದು. ತೀವ್ರ ಪರಿಣಾಮ ಕಾಣಿಸಿಕೊಂಡ ಅನೇಕ ರೋಗಿಗಳಲ್ಲಿ ಮೋರೆ ಊದಿಕೊಳ್ಳುವುದು. ಗಾಯವಾದ ಭಾಗದಲ್ಲಿ ಹೆಚ್ಚಿನ ಬಾವು ಉರಿ ಮತ್ತು ನೋವು ಸ್ಥಾನಿಕವಾಗಿ ಉಂಟಾಗುವುವು. ಅಸಾತ್ಮ್ಯವುಳ್ಳವರಲ್ಲಿ ಕಣಜದ ಹುಳ ಕಡಿದರೆ ಅತಿ ಕ್ಷಿಪ್ರವಾಗಿ ಸಾವು ಸಂಭವಿಸಬಹುದು.

**ಚಿಕಿತ್ಸೆ ಮತ್ತು ಉಪಚಾರ**

ಎಡ್ರಿನಾಲಿನ್ ಸೂಜಿಮದ್ದು ಕೀಟ ವಿಷಗಳಿಗೆ ಮುಖ್ಯವಾಗಿ ಕಣಜದ ಹುಳ ಕಡಿತಕ್ಕೆ ಪ್ರತ್ಯೌಷಧ. ಆ್ಯಂಟಿಹಿಸ್ಟಾಮಿನ್ (ಹಿಸ್ಟಾಮಿನ್ ನಿರೋಧಕ) ಔಷಧಿಗಳು



ಹೆಜ್ಜೇನು



ಕೆಲಸಗಾರ ಜೇನು ನೊಣ



ಕಣಜದ ಹುಳ

ಕಾರ್ಟಿಸೋನ್ ವರ್ಗದ ದ್ರವ್ಯಗಳು ಹೆಚ್ಚಿನ ಸತ್ಪರಿಣಾಮ ಬೀರುತ್ತವೆ. ಜೇನು ನೊಣ ಚುಚ್ಚಿದ ಕೊಂಡಿಯನ್ನು ತೆಗೆಯಲು ದೀಪದ ಉರಿಯಲ್ಲಿ ಸೂಜಿಯನ್ನು ತುಸು ಹೊತ್ತು ಕಾಯಿಸಿ, ಶುದ್ಧಮಾಡಿ, ಗಾಯವನ್ನು ಚುಚ್ಚಿ ತೆಗೆಯಬೇಕು. ಅಮೋನಿಯಾ ದ್ರಾವಕ ಅಥವಾ ವಿನೆಗರ್ (ಹುಣಸೆಗೊಜ್ಜು) ದುರ್ಜಲ ದ್ರಾವಣ ಲೇಪನದಿಂದ ಉರಿ, ವೇದನೆ ಶಮನವಾಗುತ್ತದೆ. ಅನಿಷ್ಟ ಲಕ್ಷಣಗಳು ಕಾಣಿಸಿದರೆ ವೈದ್ಯರ ಸಹಾಯಕ್ಕೆ ಧಾವಿಸಬೇಕು. ಕುಟುಕಿದುದು ಕ್ಷುದ್ರ ಕೀಟವೆಂದು ಕಡೆಗಣಿಸಬಾರದು.



ತುಂಬಿ



ಕರಿಕಣಜ



ಕುಂಬಾರ ಕಣಜ

# ಸಸ್ಯ ವಿಷ

## ಗಿಡಮೂಲಿಕೆಗಳಲ್ಲಿ ಅಡಗಿದ ವಿಷಸತ್ವ

ಪ್ರತಿಯೊಂದು ಗಿಡಮೂಲಿಕೆಯೂ ಔಷಧೀಯ ಸಸ್ಯವೇ ಎಂದು ಹೇಳುತ್ತಾರೆ. ಇದು ಬಹಳಷ್ಟು ನಿಜವಾದರೂ ಕೆಲವು ಸಸ್ಯಗಳಲ್ಲಿ ವಿಷಸತ್ವಗಳು ಇರುತ್ತವೆ. ಕೆಲವು ಸಸ್ಯಗಳನ್ನು ಮುಟ್ಟಿದರೆ ಮನೆ, ತುರಿಕೆ, ದದ್ದು ಮೊದಲಾದ ತೊಂದರೆಗಳನ್ನು ಉಂಟುಮಾಡುವ ಮುಟ್ಟು ವಿಷ ಸಸ್ಯಗಳು. ಇನ್ನೂ ಕೆಲವು ಮೂಸಿದರೆ ಅಹಿತಕರ ಪರಿಣಾಮ ಬೀರುತ್ತವೆ. ಸೇವನೆ ಮಾಡಿದರೆ ನಾನಾ ಬಗೆಯ ಅಪಾಯವನ್ನುಂಟುಮಾಡುವ ಇನ್ನೂ ಹಲವು ಸಸ್ಯಗಳಿವೆ. ಇವುಗಳಲ್ಲಿ ಹೆಚ್ಚಿನ ಗಿಡಮೂಲಿಕೆಗಳು ಬೇರೆ ಬೇರೆ ರೋಗಗಳನ್ನು ಗುಣಪಡಿಸುವ ಔಷಧೀಯ ಸತ್ವವುಳ್ಳವೂ ಆಗಿರುತ್ತವೆ ಎಂಬುದು ಸೋಜಿಗವಾದರೂ ವಿಶೇಷದ ಸತ್ಯ ಸಂಗತಿ. ಇನ್ನೂ ಕೆಲವು ಸಸ್ಯಗಳು ಸ್ಪರ್ಷಿಸಿದರೆ ಅಪಾಯಕಾರಿ. ಒಣ ಬೀಜಗಳನ್ನು ಹುರಿದು ಪುಡಿಮಾಡಿ ಸಕ್ಕರೆ ಸೇರಿಸಿ ಕಾಫಿಯಂತೆ ಕುಡಿಯಲು ರುಚಿಕರವಾಗಿರುವ ಹೂವುಂಟು.

ಇಲ್ಲಿ ಪ್ರಸ್ತಾಪಿಸುವ ಮುಖ್ಯವಾದ ವಿಚಾರವೆಂದರೆ, ಸಸ್ಯಗಳಲ್ಲಿ ಇರುವ ಅಹಿತಕರ 'ವಿಷ'ವನ್ನು ಗುರುತಿಟ್ಟುಕೊಂಡು ಅವುಗಳನ್ನು ಚಿಕಿತ್ಸೆಗೆ ಬಳಸಬಾರದು ಎಂಬುದನ್ನು ಮನದಟ್ಟು ಮಾಡುವುದಕ್ಕಾಗಿ ವೈದ್ಯರು ಅಂತಹ ಔಷಧ ವಿಷಗಳನ್ನು ಸಂಸ್ಕರಣೆಗೊಳಿಸಿ, ಶುದ್ಧ ಮಾಡಿ ಔಷಧೀಕರಿಸಿ ರೋಗ ಚಿಕಿತ್ಸೆಗೆ ಬಳಸುತ್ತಾರೆಂಬುದು ನಿಜ. ಆದರೆ ಜನಸಾಮಾನ್ಯರು ಅವುಗಳನ್ನು ಶುದ್ಧೀಕರಿಸದೆ ಅಥವಾ ಇತಿಮಿತಿ ತಿಳಿದಿರದೆ ಬಳಸಿದರೆ ಅಪಾಯವುಂಟಾಗಬಹುದೆಂಬುದನ್ನು ಸ್ಪಷ್ಟವಾಗಿ ತಿಳಿಸಬೇಕಾಗಿದೆ. ವಿಷ ಸಸ್ಯಗಳು ಕೂಡ ವೈದ್ಯರ ಕೈಯಲ್ಲಿ 'ಸಂಜೀವಿನಿ' ಆಗಬಲ್ಲುದು. ಆದರೆ ಜನಸಾಮಾನ್ಯರು ಮಾತ್ರ ತಾವಾಗಿ ಅಂತಹ ಸಸ್ಯಗಳನ್ನು ಬಳಸುವ ಸಾಹಸಕ್ಕೆ ಹೋಗಬಾರದು. ಮಕ್ಕಳ ಕೈಗೆ ಸಿಕ್ಕಿದರೆ ತೀರ ಅಪಾಯವೆಂದು ಹೇಳಬೇಕಿಲ್ಲವಷ್ಟೆ?

* ದತ್ತೂರ ಬೀಜ
* ಎಕ್ಕೆಗಿಡ
* ಕಾಸರಕ ಮರ
* ಗುಲಗುಂಜಿ
* ಕರವೀರ ಗಿಡ
* ಜಯಪಾಲ (ಜಾಪಾಳ)
* ನಸುಗುನ್ನಿ (ನಾಯಿಸೊಣಂಗ್)
* ಕೋಳಿಕುಟುಮ ಗಡ್ಡೆ (ಲಾಂಗಲಿ)
* ಚಿತ್ರಮೂಲ (ಚಿತ್ರಕ)
* ಹರಳು (ಔಡಲ)
* ಹೊಗೆಸೊಪ್ಪು (ತಂಬಾಕು)
* ಗೇರು ಮತ್ತು ಕೇರು
* ಸರ್ಪಗಂಧ
* ಕೇಸರಿ
* ಹಾವುಮೆಕ್ಕೆ
* ಕಾಡುಹೊಗೆಸೊಪ್ಪು
* ಅಂಟುವಾಳ
* ಬಿದಿರು ಕಳಲೆ

## ತಿಪ್ಪೆಯಲ್ಲೂ ಬೆಳೆಯುವ ಸಸ್ಯ ಹೂ ಪೂಜೆಗೆ ಸಲ್ಲ – ಬೀಜ ತಿನ್ನಲು ಹೊಲ್ಲ : ಹತ್ತೂರ ಬೀಜ



[ಇಂಗ್ಲೀಷ್ : Thorn Apple, Stramony ಸಸ್ಯಶಾಸ್ತ್ರದ ಹೆಸರು Datura Stramonium (Datura Dastosa) ಕನ್ನಡ : ದತ್ತೂರ, ಮದುಗುಣಿಕೆ, ಮುದ್ದುಗುಣಿಕೆ, ಉಮ್ಮತ್ತಿ, ಸಂಸ್ಕೃತ : ಧತ್ತೂರ, ಕನಕ, ಮಾತುಲಾ. ತುಳು : ಉಂಬೆ. ತಮಿಳು : ಉಮ್ಮತ್ತೈ. ತೆಲುಗು: ದತ್ತೂರಮು. ಕೊಂಕಣಿ: ದತ್ತೂರೊ. ಹಿಂದಿ: ಧತೂರಾ]

ವರ್ಷವಿಡೀ ಹೂ ಬಿಡುವ ದತ್ತೂರವು ಒಂದು ಸಣ್ಣ ಗಿಡಮೂಲಿಕೆಯಾಗಿದೆ. ಮಳೆಗಾಲದಲ್ಲಿ ಬಯಲು ಪ್ರದೇಶದಲ್ಲಿ ದತ್ತೂರವು ಹುಲುಸಾಗಿ ಬೆಳೆಯುತ್ತದೆ. ಇದರ ಹೂ ಗಂಟೆಯಾಕಾರಕ್ಕಿದ್ದು ತುಸು ಉದ್ದವಾಗಿರುತ್ತದೆ. ಕಾಯಿಯು ಚಿಕ್ಕದಾಗಿದ್ದು, ಒರಟು ಕವಚದಲ್ಲಿ ಚೂಪಾದ ಮುಳ್ಳು ಕಣಿಗಳಿಂದ ಆವೃತವಾಗಿದ್ದು, ಕಾಯಿಯೊಳಕ್ಕೆ ನಸು ಹಳದಿ ಬಣ್ಣದ ಚಿಕ್ಕ ಚಿಕ್ಕ ಬೀಜಗಳಿರುತ್ತವೆ. ನಸು ಕಂದು ಬಣ್ಣದ ಹೂ

ಬಿಡುವ ಕರಿ ದತ್ತೂರ ಮತ್ತು ಅಚ್ಚ ಬಿಳಿ ಹೂ ಬಿಡುವ ಬಿಳಿ ದತ್ತೂರ ಎಂಬ ಎರಡು ಪ್ರಭೇದಗಳಿದ್ದು ಈ ಪೈಕಿ ಕರಿ ದತ್ತೂರವು ಹೆಚ್ಚು ವಿಷಪೂರಿತ ಸಸ್ಯವಾಗಿದೆ. ದತ್ತೂರ ಬೀಜವು ತೀರ ಕಹಿಯಾಗಿರುತ್ತವೆ.

ದತ್ತೂರ ಗಿಡವು ಸರ್ವಾಂಗ ವಿಷ. ಇದರ ಬೀಜವು ತೀಕ್ಷ್ಣ ವಿಷ. ಬೀಜದಲ್ಲಿ ಹಯೋಸಿಸ್ ಮತ್ತು ಹಯೋಸಿಯೋಮೈನ್ ಎಂಬ ಎರಡು ಪ್ರಬಲ ವಿಷ ಸತ್ವಗಳೂ, ತುಸು ಪ್ರಮಾಣದಲ್ಲಿ ಎಟ್ರೋಪಿನ್ ಸತ್ವವೂ ಇದೆ. ಪ್ರಾಣಾಪಾಯದ ಕಾಲಾವಧಿ ಸುಮಾರು 24 ತಾಸು. ದತ್ತೂರ ಬೀಜದ ವಿಷ ಸೇವನೆಯಿಂದ ಪ್ರತಿ ವರ್ಷ ಕನಿಷ್ಠ 10 ಸಾವುಗಳು ಸಂಭವಿಸುತ್ತವೆ. ವಿಷ ಪ್ರಾಶನವಾದ ಮರುಗಳಿಗೆಯಲ್ಲಿಯೇ (ಕೆಲವೊಮ್ಮೆ 4–6 ತಾಸುಗಳ ನಂತರ) ಉಪದ್ರವಗಳು ಕಾಣಿಸಿಕೊಳ್ಳುತ್ತವೆ. ದತ್ತೂರವನ್ನು ಹಳ್ಳಿಯ ಜನರು ನಂಜು, ನೋವು, ಮತ್ತು ಬಾವುಗಳ ಚಿಕಿತ್ಸೆಗೆ ಉಪಯೋಗಿಸುತ್ತಾರೆ. ಕರಿ ಉಮ್ಮತ್ತದ ಎಲೆಯ ರಸವನ್ನು ವಿವಿಧ ಅನುಪಾನಗಳೊಂದಿಗೆ ಹುಚ್ಚು ನಾಯಿ ಕಡಿದ ಚಿಕಿತ್ಸೆಗಾಗಿ ಹಳ್ಳಿಗರೂ ಇಂದಿಗೂ ಬಳಸುತ್ತಾರೆ. ಆಯುರ್ವೇದ ವೈದ್ಯರು, ದತ್ತೂರ ಬೀಜವನ್ನು ಶುದ್ಧಮಾಡಿ ನಾನಾ ರೋಗ ಚಿಕಿತ್ಸೆಗಾಗಿ ಬಳಸುತ್ತಾರೆ.

ಪ್ರಾಣಾಪಾಯದ ಪ್ರಮಾಣ (ಸೇವನೆ) : 10 ಮಿಲಿಗ್ರಾಂ

### ವಿಷಪ್ರಾಶನದ ಲಕ್ಷಣಗಳು

ದತ್ತೂರ ಬೀಜವನ್ನು ನುಣ್ಣಗೆ ಪುಡಿಮಾಡಿ ಪಾನಕದಲ್ಲಿ ಬೆರಸಿ ಕುಡಿಸಿದರೆ ತಕ್ಷಣ ವಾಂತಿಯಾಗಲು ಪ್ರಾರಂಭವಾಗುತ್ತವೆ ಮತ್ತು ನಾಲಗೆ ಒಣಗುವುದು, ಗಂಟಲು ಬಿಗಿಯುವುದು, ಜೊಲ್ಲು ಬತ್ತಿದಂತಾಗುವುದು ಹಾಗೂ ಹೊಟ್ಟೆ ಉರಿ ಮೊದಲಾದ ಉಪದ್ರವಗಳು ಕಾಣಿಸುತ್ತವೆ. ಮೈಮೇಲೆ ಪಿತ್ತಗಂದೆಗಳು ಸಹ ಏಳಬಹುದು. ಕ್ರಮೇಣ ಗಂಟಲು ನೋವಿನಿಂದಾಗಿ ರೋಗಿಗೆ ನುಂಗಲು ಮತ್ತು ಮಾತನಾಡಲು ಕಷ್ಟವಾಗುವಾಗುತ್ತದೆ. ತಲೆ ತಿರುಗುವುದು, ಮೈ ಜೋಲಿ ಹೋಗುವುದು, ಸ್ನಾಯುಗಳು ತೂಕ ತಪ್ಪುವುದು, ಮುಖ ಒಣಗುವುದು, ಕಣ್ಣು ಕೆಂಪಾಗುವುದು, ಕಣ್ಣು ಬೊಂಬೆ ಅರಳುವುದು, ತಾತ್ಕಾಲಿಕ ಕುರುಡು, ಚರ್ಮ ಒಣಗಿದಂತಾಗುವುದು, ಬೆಚ್ಚಗಾಗುವುದು ಮೊದಲಾದ ತೊಂದರೆಗಳು ಕಾಣಿಸಿಕೊಳ್ಳುವುವು. ರೋಗಿಗೆ ಜ್ವರವು ಏರಬಹುದು. ರೋಗಿಯು ಗಾಬರಿಗೊಂಡು ಬಡಬಡಿಸುವುದು, ಅಸ್ಪಷ್ಟ ಒದರಾಟ, ಜಿಗಿದಾಟ, ಸಿಕ್ಕಿಸಿಕ್ಕಿದಲ್ಲಿ ಓಡಲೆಳೆಸುವುದು, ಕೆಟ್ಟದಾಗಿ ಚೀರುವುದು ಮುಂತಾದ ಮತಿಭ್ರಮೆಯ ಚಿಹ್ನೆಗಳು ಕಾಣಿಸುತ್ತವೆ. ಅವನ ನಾಡಿಯು ತೀವ್ರವಾಗುವುದಲ್ಲದೆ ಪ್ರಜ್ಞೆ ತಪ್ಪುವುದು, ಅದಿರುವಾಯು, ಉಸಿರಾಟಕ್ಕೆ ತೊಂದರೆ ಮೊದಲಾದ ಉಪದ್ರವಗಳು ಉಂಟಾಗಿ ಸಾವು ಸಂಭವಿಸಬಹುದು.

ರೋಗಮುಕ್ತರಾದರೂ ಕೂಡಾ ಕೆಲವರು ಆಗಾಗ ಬಡಬಡಿಸುವುದುಂಟು. ಅಲ್ಲದೆ ರೋಗಿಗೆ ಸಂಪೂರ್ಣ ಎಚ್ಚರ ಬಂದ ಮೇಲೆ ತಾನು ಅನುಭವಿಸಿದ್ದ ಸಂಕಟಗಳ ಜ್ಞಾಪಕವೇ ಇರುವುದಿಲ್ಲ. ಮಾತ್ರವಲ್ಲದೆ ತನ್ನನ್ನು ಆಸ್ಪತ್ರೆಗೆ ಏಕೆ ಸೇರಿಸಿದ್ದು ಎಂದು ಅಚ್ಚರಿಪಡುತ್ತಾರೆ.

ಶರಬತ್ತಿನಲ್ಲಿ ಅಥವಾ ಮದ್ಯದಲ್ಲಿ ದತ್ತೂರ ಬೀಜವನ್ನು ಅರೆದು ಕುಡಿಸಿದಾಗ ಕ್ಷಣಾರ್ಧದಲ್ಲಿ ಸ್ಮೃತಿ ತಪ್ಪಿದ ದಾಖಲೆಯಿದೆ.

**ಚಿಕಿತ್ಸೆ ಮತ್ತು ಉಪಚಾರ**

ದತ್ತೂರ ವಿಷ ಸೇವಿಸಿದ ರೋಗಿಯನ್ನು ಪೊಟ್ಯಾಸಿಯಂ ಪರಮಾಂಗನೇಟ್ ದುರ್ಬಲ ದ್ರಾವಣದಿಂದ ಹೊಟ್ಟೆ ತೊಳೆಯಬೇಕು. ಕ್ಲೋರಲ್ ಹೈಡ್ರೇಟ್ ವೆರಲ್‌ಡಿಹೈಡ್ ಅಥವಾ ಬ್ರೊಮೈಡ್ ವರ್ಗದ ಶಾಮಕ ಔಷಧವನ್ನು ನೀಡಿ ಉನ್ಮಾದಕ್ಕೆ ಉಪಚಾರ ನಡೆಸಬೇಕು (ಮಾರ್ಫಿಯಾ ವರ್ಜ್ಯ). ಕೇಫಿನ್ ಕೃತಕ ಉಸಿರಾಟ, ಆಮ್ಲಜನಕ ನೀಡಿಕೆಗಳನ್ನು ಅಗತ್ಯ ನೋಡಿಕೊಂಡು ನೀಡಬೇಕು. ವಿಚಕಾರಿಯ ಮೂಲಕ ವಸ್ತಿ (ಎನಿಮಾ) ಕೊಟ್ಟು ಮಲ ಶೋಧನೆ ಮಾಡಿಸಬೇಕು.

ದತ್ತೂರ ವಿಷಕ್ಕೆ ಪ್ರತ್ಯೌಷಧ ಪ್ರೊಸ್ಟಿಗ್ಮಿನ್ ಸೂಜಿ ಮದ್ದು.

ಆಯುರ್ವೇದ ವೈದ್ಯರು ದತ್ತೂರ ವಿಷ ಪ್ರಾಶನವಾದ ರೋಗಿಗೆ ಈ ಕೆಳಗಿನ ಚಿಕಿತ್ಸೆಗಳನ್ನು ನಡೆಸುತ್ತಾರೆ.

(1) ಸಮುದ್ರ ಫಲವನ್ನು ಗೋಮೂತ್ರದಲ್ಲಿ ಅರೆದು ಕುಡಿಸುವುದು.

(2) ಬಜೆಯ ಚೂರ್ಣವನ್ನು ಮೊಸರಿನಲ್ಲಿ ಕಲೆಸಿ ಸೇವಿಸುವುದು.

(3) ಆಕಳ ಹಾಲಿಗೆ ಸಕ್ಕರೆ ಬೆರೆಸಿ ಕುಡಿಸುವುದು.

(4) ಮಜ್ಜಿಗೆ, ನಿಂಬೆ ಹಣ್ಣಿನ ರಸ, ಕಮಲದ ನಾಳ, ತಿಂತ್ರಿಣಿ ಹರಳು ಬೇರು, ಅತ್ತಿಬೇರು (ಅಥವಾ ಅತ್ತಿಗಿಡದ ಹಾಲು) ಇವುಗಳ ಪೈಕಿ ಒಂದನ್ನು ನೀರಿನಲ್ಲಿ ಅರೆದು ಕುಡಿಸುವುದು (ಈ ಚಿಕಿತ್ಸೆಗಳ ಪೈಕಿ ಒಂದನ್ನು ಮಾತ್ರ).

**ಟಿಪ್ಪಣಿ**

ಮುಗ್ಧಜನರನ್ನು ವಂಚಿಸಿ ಲಾಭ ಪಡೆಯಲು ಸಮಾಜಘಾತುಕ ವ್ಯಕ್ತಿಗಳು ಬಳಸುವ ನಾನಾ ವಿಧಾನಗಳಲ್ಲಿ ದತ್ತೂರ ಬೀಜವನ್ನು ತಿಂಡಿ ತೀರ್ಥಗಳಲ್ಲಿ, ಪ್ರಸಾದ ಪನಿವಾರಗಳಲ್ಲಿ, ಪಾನ್ ಬೀಡಾಗಳಲ್ಲಿ, ನಾನಾ ಪೇಯ ಪಾನೀಯಗಳಲ್ಲಿ, ಚಹ, ಕಾಫಿ, ಚಪಾತಿ, ಅನ್ನ-ತರಕಾರಿ ಮೊದಲಾದ ಉಣಿಸು- ತಿನಿಸುಗಳಲ್ಲಿ

ತಿನ್ನಿಸಿ ಎಚ್ಚರ ತಪ್ಪಿಸುವುದು ಪ್ರಮುಖವಾದ ವಿಧಾನವಾಗಿದೆ. ಗಾಂಜಾ ಅಥವಾ ಮದ್ಯದೊಂದಿಗೆ ಬೆರೆಸಿ ನೀಡಿದಾಗ ದತ್ತೂರವು ತೀರ ಉಲ್ಬಣ ವಿಷವಾಗಿ ಪರಿಣಿಮಿಸುತ್ತದೆ. ದತ್ತೂರ ಬೀಜವು ಗೋಧಿ, ಜೋಳ, ಬಾಜರಾ ಮುಂತಾದ ಧಾನ್ಯಗಳೊಂದಿಗೆ ಕಲಬೆರಕೆಯಾಗಿ ತಿಳಿಯದೆ ಬಳಸಲ್ಪಟ್ಟು ಅನಾಹುತ ಸಂಭವಿಸಿದ ಘಟನೆಗಳಿಗೆ ಲೆಕ್ಕವಿಲ್ಲ. ಕೆಲವೊಮ್ಮೆ ಒಣ ದತ್ತೂರದ ಬೀಜವನ್ನು ಬೇರೆ ಯಾವುದೋ ಬೀಜವೆಂದು ತಪ್ಪಾಗಿ ಗುರುತಿಸಿ ಹಳ್ಳಿ ವೈದ್ಯರೂ ಜನಗಳೂ ಬಳಸಿ ಅಪಾಯ ಉಂಟಾದ ನಿದರ್ಶನಗಳಿವೆ. ಆತ್ಮಹತ್ಯೆ, ಕೊಲೆ ಮತ್ತು ವಂಚನೆಗಳ ದುರುದ್ದೇಶದಿಂದ ದತ್ತೂರ ಬೀಜವು ದುರುಪಯೋಗವಾಗುವ ಸಂಭವ ಹೆಚ್ಚು

## ಪೂಜೆಗೆ ಸಲ್ಲುವ ಪವಿತ್ರ ಹೂವು ಕಿತ್ತಾಗ ಸುರಿಸುತ್ತದೆ ವಿಷದ ಹಾಲು : ಎಕ್ಕೆಗಿಡ



(ಇಂಗ್ಲೀಷ್: Gigantic swallow wort akdu ಸಸ್ಯ ಶಾಸ್ತ್ರದ ಹೆಸರು: Calotropis Gigantea ಕನ್ನಡ : ಎಕ್ಕೆಗಿಡ, ಎಕ್ಕಮಾಲೆ ಸಂಸ್ಕೃತ : ಅರ್ಕಾ, ಅರ್ಕ ಪರ್ಣಾ. ತುಳು : ಎಕ್ಕಮಾಲೆ, ತಮಿಳು : ಎರುಕ್ಕು, ಬಡಾಬಡಂ, ತೆಲಗು: ಅರ್ಕಮು, ಮಂದಾರಮಂ ಜಿಲ್ಲೇಡು. ಮಲಯಾಳಂ: ಎರಿಕ್ಕು; ಎರಿ. ಹಿಂದಿ : ಮದಾರ್).

ಬಯಲು ಪ್ರದೇಶದಲ್ಲಿ ತಾನೇ ತಾನಾಗಿ ಬೆಳೆಯುವ ಹೆಚ್ಚು ಎತ್ತರವಲ್ಲದ ಪುಟ್ಟ ಎಕ್ಕೆಗಿಡದಲ್ಲಿ ನೇರಳೆ ಹಾಗೂ ಬಿಳಿಬಣ್ಣದ ಹೂಬಿಡುವ ಉಪಭೇದವಿದ್ದರೂ ಇತರ ಲಕ್ಷಣಗಳೆಲ್ಲ ಸಾಮಾನ್ಯವಾಗಿವೆ. ಗಿಡದ ತೊಗಟೆ, ಎಲೆ ಅಥವಾ ಹೂವಿನ ದೇಟನ್ನು ಗಾಯ ಮಾಡಿದರೆ ಬಿಳಿಯ ಹಾಲಿನಂತಹ ದ್ರವವು ತೊಟ್ಟಿಕ್ಕುತ್ತದೆ. ಇದು ಸ್ಪರ್ಶ ಹಾಗೂ ಸೇವನಾ ವಿಷ.

**ಸ್ಪರ್ಶ ವಿಷ ಲಕ್ಷಣ– ಚಿಕಿತ್ಸೆ :**

ಎಕ್ಕೆ ಹಾಲು ಸ್ಪರ್ಶವಾದರೆ ಚರ್ಮವು ಕೆಂಪಾಗಿ ಊದಿಕೊಳ್ಳುತ್ತದೆ; ಮತ್ತುನವೆ, ತುರಿಕೆ ಹಾಗೂ ಚಿಕ್ಕ ಚಿಕ್ಕ ಗುಳ್ಳೆಗಳು ಏಳುತ್ತವೆ. ಕೆಲವೊಮ್ಮೆ ಅಲ್ಲಿ ಹುಣ್ಣು ಸಹ ಉಂಟಾಗಬಹುದು. ಎಕ್ಕೆ ಹಾಲು ಕಣ್ಣಿಗೆ ಸ್ಪರ್ಶವಾದರೆ ಕಣ್ಣು ಉರಿ ಮತ್ತು ಬಾವು ಕಾಣಿಸಿಕೊಂಡು ಧಾರಾಕಾರವಾಗಿ ಕಣ್ಣೀರು ಸುರಿಯತೊಡಗುವುದಲ್ಲದೆ ಕೆಲವೊಮ್ಮೆ ದೃಷ್ಟಿ ಮಾಂದ್ಯವೂ ಉಂಟಾಗಬಹುದು.

ಎಕ್ಕೆಯ ಸ್ಪರ್ಶ ವಿಷವನ್ನು ತಣ್ಣೀರಿನಿಂದ ತೊಳೆಯಬೇಕು. ಚರ್ಮದಲ್ಲಿ ಗುಳ್ಳೆಗಳೆದ ಭಾಗಕ್ಕೆ ಹುಣಸೆ ಎಲೆಯನ್ನಾಗಲಿ, ನೇರಳೆಗಿಡದ ತೊಗಟೆಯನ್ನಾಗಲಿ ಅರೆದು ಲೇಪಿಸಬೇಕು. ಜೇಷ್ಟಮಧುವನ್ನು ಆಕಳ ಹಾಲಿನಲ್ಲಿ ಅರೆದು ಲೇಪಿಸಬೇಕು; ಹಾಗೂ ಇದನ್ನು ರೋಗಿಗೆ ಕುಡಿಯಲು ಕೂಡಾ ಕೊಡಬೇಕು. ಅನುಪಾನವಾಗಿ ಧಾರಾಳ ಮಜ್ಜಿಗೆ ಕುಡಿಸಬೇಕು. ಕಣ್ಣಿಗೆ ಎಕ್ಕೆ ವಿಷವು ಸ್ಪರ್ಶವಾದರೆ ಹುಣಸೆ ಹಣ್ಣನ್ನು ತಣ್ಣೀರಿನಲ್ಲಿ ಕಿವುಚಿ ಅಥವಾ ಹುಣಸೆ ಎಲೆಯನ್ನು ತಣ್ಣೀರಿನಲ್ಲಿ ಅರೆದು ಲೇಪಿಸಬೇಕೆಂದು ಆಯುರ್ವೇದ ವೈದ್ಯರು ಸೂಚಿಸುತ್ತಾರೆ.

**ವಿಷಪ್ರಾಶನದ ಲಕ್ಷಣಗಳು**

ಎಕ್ಕೆ ವಿಷ ಸೇವಿಸಿದ ರೋಗಿಯ ಬಾಯಲ್ಲಿ ಮೊದಲು ಕಹಿರುಚಿಯು ಕಾಣಿಸುವುದು. ಆನಂತರ ಗಂಟಲು ನೋವು ನಾಲಗೆ, ಬಾಯಿ, ಎದೆ ಮತ್ತು ಹೊಟ್ಟೆಯಲ್ಲಿ ಉರಿ- ವೇದನೆ ನೋವು ಮತ್ತು ಬಾವು ಉಂಟಾಗುತ್ತವೆ. ಅವನ ಬಾಯಿಯಿಂದ ಜೊಲ್ಲು ಸುರಿಯತೊಡಗುವುದು. ಬಾಯಿ ಮತ್ತು ನಾಲಗೆಯಲ್ಲಿ ವ್ರಣಗಳು ಉಂಟಾಗುತ್ತವೆ. ರೋಗಿಯ ಕಣ್ಣು ಬೊಂಬೆ ಅರಳುವುದು, ವಾಂತಿ, ಭೇದಿ ಬಡ ಬಡಿಸುವುದು, ಅದಿರುವಾಯು ಮೊದಲಾದ ಉಪದ್ರವಗಳು ಉಂಟಾಗುತ್ತವೆ. ಪ್ರಾಣಪಾಯದ ಕಾಲಾವಧಿ 30 ನಿಮಿಷದಿಂದ 8 ತಾಸುಗಳು.

**ಚಿಕಿತ್ಸೆ ಮತ್ತು ಉಪಚಾರ**

ಎಕ್ಕೆ ವಿಷ ಸೇವಿಸಿದ ರೋಗಿಗೆ ಹೊಟ್ಟೆ ತೊಳೆಯುವುದು, ವಾಂತಿ ಮಾಡಿಸುವುದು ಮೊದಲಾದ ಸಾಂಪ್ರದಾಯಿಕ ಚಿಕಿತ್ಸೆಗಳನ್ನು ನಡೆಸಬೇಕು. ತತ್ತಿಯ ಲೋಳೆ ಹಾಲು ಅಥವಾ ಬೆಣ್ಣೆ ಸೇವನೆ ಹೆಚ್ಚು ಉಪಯುಕ್ತವಾಗಿದೆ. ಅದಿರುವಾಯು ನಿರೋಧಕ ಹಾಗೂ ವೇದನಾ ಶಾಮಕ ಚಿಕಿತ್ಸೆಯನ್ನು ನಡೆಸಬೇಕು. ಆಯುರ್ವೇದ ವೈದ್ಯರು ಈ ಕೆಳಗಿನ ಚಿಕಿತ್ಸೆಗಳನ್ನು ಸೂಚಿಸುತ್ತಾರೆ.

1) ಎಳ್ಳು ಮತ್ತು ಬೆಲ್ಲವನ್ನು ಅರೆದು ಪ್ರತಿ ನಾಲ್ಕು ತಾಸಿಗೊಮ್ಮೆ ತಿನ್ನಿಸುವುದು. 2) ಮರದ ಅರಿಶಿಣ, ನೀಲಿ ಗಿಡದ ರಸ, ಬಿಲ್ವ ಪತ್ರೆ ಕಾಯಿಯ ತಿರುಳು, ಚಳ್ಳೆ ಮರದ ತೊಗಟೆ ಇವುಗಳಲ್ಲಿ ಒಂದನ್ನು ನೀರಿನಲ್ಲಿ ಅರೆದು ಕುಡಿಸುವುದು. ಆಕಳ ತುಪ್ಪ, ಕೊಬ್ಬರಿ ಎಣ್ಣೆ ಅಥವಾ ಹರಳೆಣ್ಣೆ ಸೇವನೆಯು ವೇದನಾಯುಕ್ತವಾದ ಭೇದಿಯನ್ನು ನಿಲ್ಲಿಸುತ್ತದೆ.

**ಟಿಪ್ಪಣಿ :**

ಎಕ್ಕೆ ತೀಕ್ಷ್ಣವಾದ ಪಶುವಿಷ. ಕಿಡಿಗೇಡಿಗಳು ಎಕ್ಕೆಯ ಚೂರ್ಣವನ್ನು ಪಶುಗಳ ಮೇವಿನಲ್ಲಿ ಬೆರೆಸುವುದುಂಟು ಅಥವಾ ಎಕ್ಕೆ ಹಾಲಿನಲ್ಲಿ ತೋಯಿಸಿ

ಅರಳೆ ಮುದ್ದೆಯನ್ನು ಪ್ರಾಣಿಗಳ ಮಲದ್ವಾರದಲ್ಲಿ ಇರುಸುತ್ತಾರೆ. ಇದಕ್ಕೆ ಪಶುವೈದ್ಯರಿಂದ ಸೂಕ್ತ ಚಿಕಿತ್ಸೆ ನಡೆಸಬೇಕು.

## ವೈದ್ಯರ ಕೈಯಲ್ಲಿ ಸಂಜೀವಿನಿ ಮುಗ್ಧರ ಬಾಯಲ್ಲಿ ಸಾವಿನ ಕರೆಯೋಲೆ : ಕಾಸರಕ ವೃಕ್ಷ



(ಇಂಗ್ಲೀಷ್: Nux Vomica ಸಸ್ಯ ಶಾಸ್ತ್ರದ ಹೆಸರು: Strychnos Nuxvomica. ಕನ್ನಡ : ಕಾಸರಕ, ಹೆಮ್ಮುಷ್ಠಿ ಮರ, ನಂಜಿನ ಕೊರಡಿನ ಮರ. ಸಂಸ್ಕೃತ : ಕಾರಸ್ಕತ ವೃಕ್ಷ. ವಿಷ ಮುಷ್ಠಿವೃಕ್ಷ. ತುಳು: ಕಾಯೆರ್, ತಮಿಳು: ಕಾಕುಡಿ. ತೆಲುಗು: ಮುಸುಡಿ, ಮಲಯಾಳಂ: ಕಾಞಿರಮ್ ಕೊಂಕಣಿ : ಕಾರ್ಯರೂಕು, ಹಿಂದಿ ಕುಚಿಲ ಗೋಗರಿ ಲಕಡಿ)

ಅರಣ್ಯಗಳಲ್ಲಿಯೂ ಬಯಲು ಪ್ರದೇಶಗಳಲ್ಲಿಯೂ ಹುಲುಸಾಗಿ ಬೆಳೆಯುವ ಕಾಸರಕ ಮರವು ವಿಶಾಲವಾದ ವೃಕ್ಷವಾಗಿದ್ದು ಕೊಂಬೆ, ರೆಂಬೆ, ಹಸುರೆಲೆ ಹಾಗೂ ದೊಡ್ಡದಾದ ನಂಜು ಮುಳ್ಳುಗಳಿಂದ ಕೂಡಿರುತ್ತದೆ. ಇದರ ಹಸುರೆಲೆ ತೆಂಗಿನ ಕೃಷಿಗೆ ಉತ್ತಮ ಹಸಿರು ಗೊಬ್ಬರ; ಮರಮಟ್ಟು ಗಟ್ಟಿಯಾದ ಬಳಕೆಯ ಕಟ್ಟಿಗೆ ಕಾಸರಕ ವೃಕ್ಷವು ಮಾರ್ಗಶಿರ, ಪುಷ್ಯ ಮಾಸದಲ್ಲಿ ಹೂ ಬಿಟ್ಟು ಬೇಸಿಗೆಯಲ್ಲಿ ಫಲ ಬಿಡುತ್ತದೆ.

ಕಾಸರಕ ಮರದ ಎಲೆ, ತೊಗಟೆ, ಬೇರು ಮುಂತಾದ ಪ್ರತಿಯೊಂದು ಭಾಗವೂ ವಿಷ ಪೂರಿತವಾಗಿರುತ್ತದೆ. ಕಾಸರಕ ಬೀಜ ತೀಕ್ಷ್ಣ ವಿಷ. ಇದರ ರುಚಿಯೂ ತೀರ ಕಹಿ. ಉರುಟಾದ ಕಾಯಿಗಳ ಹೊರ ಮೈ ತುಸುಬಿರುಸಾಗಿದ್ದು, ಅವು ಬಲಿತಾಗ ಸಣ್ಣ ಕಿತ್ತಳೆ ಹಣ್ಣುಗಳಂತೆ ಕಂಗೊಳಿಸುತ್ತವೆ. ಬೀಜವು ಅರ್ಧ ರೂಪಾಯಿ ನಾಣ್ಯದಂತೆ ದುಂಡಗೆ ಬಿಳಿಯ ಹೊಳಪಿನಿಂದ ಕೂಡಿದ್ದು 3 ಸೆಂಟಿಮೀಟರ್ ಅಗಲ, 4–6 ಮಿಲಿಮೀಟರ್ ದಪ್ಪವಾಗಿದ್ದು ಹೊರ ಮೈಯಲ್ಲಿ ಕಿರು ರೋಮಗಳ ಪದರು ಇರುತ್ತದೆ.

ಕಾಸರಕ ಬೀಜದಲ್ಲಿ ಸ್ಟ್ರಿಕ್‌ನಿನ್ ಮತ್ತು ಬ್ರೂಸೀನ್ ಎಂಬ ವಿಷ ಸತ್ವಗಳಿವೆ. ಗಿಡದ ಬೇರು ತೊಗಟೆಗಳಲ್ಲೂ ಬ್ರೂಸಿನ್ ಸತ್ವವಿದೆ. ಉಸಿರಾಟದ ಉತ್ತೇಜನಕ್ಕೂ

ಕೃತಕವಾಗಿ ವಾಂತಿ ಮಾಡಿಸಲಿಕ್ಕೂ ಸ್ಟ್ರಿಕ್‌ನಿನ್ ಔಷಧಿಯನ್ನು ಆಧುನಿಕ ವೈದ್ಯರು ಬಳಸುತ್ತಾರೆ. ಸ್ಟ್ರಿಕ್‌ನಿನ್ ಸತ್ವವು ಅನೇಕ ಬಗೆಯ ಔಷಧಿಗಳಲ್ಲಿ ಹಾಸುಹೊಕ್ಕಾಗಿರುತ್ತದೆ. ಹಳ್ಳಿಯ ಜನಗಳೂ ಆಯುರ್ವೇದ ವೈದ್ಯರೂ ನಾನಾ ಬಗೆಯ ಜ್ವರ, ಸಂಧಿ, ವಾತ, ಕುಷ್ಟ ರೋಗ ಹಾಗೂ ಪಕ್ಷಪಾತ ಚಿಕಿತ್ಸೆಗಳಲ್ಲಿ ಕಾಸರಕ ಬೀಜವನ್ನೂ ಎಲೆಯನ್ನೂ ಉಪಯೋಗಿಸುತ್ತಾರೆ.

ಪ್ರಾಣಾಪಾಯದ ಪ್ರಮಾಣ (ಸೇವನೆ) 15–30 ಮಿಲಿ ಗ್ರಾಂ. ಪ್ರಾಣಾಪಾಯದ ಕಾಲಾವಧಿ 6 ತಾಸು. (ವಿಷ ಪ್ರಾಶನವಾದ 5 ನಿಮಿಷಗಳಲ್ಲಿ ಮರಣ ಸಂಭವಿಸಿದ ದಾಖಲೆ ಇದೆ.) ಇದು ಪಶುವಿಷ.

**ವಿಷ ಪ್ರಯೋಗದ ಲಕ್ಷಣಗಳು :**

ಕಾಸರಕ ವಿಷ ಸೇವಿಸಿದ ರೋಗಿಯ ಬಾಯಲ್ಲಿ ಕಹಿ ರುಚಿ ಕಾಣಿಸುವುದಲ್ಲದೆ ನಾಲಗೆಯು ಒರಟಾಗುವುದು. ಕ್ರಮೇಣ ಗಂಟಲು ಬಿಗಿಯ ತೊಡಗಿ ಕೊರಳು ಮತ್ತು ಮೋರೆಯ ಮಾಂಸ ಖಂಡಗಳು ಸೆಟೆದುಕೊಳ್ಳುವವು. ಉಸಿರಾಟದ ತೊಂದರೆಯುಂಟಾಗಿ ಮೇಲುಸಿರು ಪ್ರಾರಂಭವಾಗುವುದು. ರೋಗಿಯು ಭಯಂಕರ ಚಿಂತೆ ಹಾಗೂ ಮನೋವ್ಯಾಕುಲ ಪೀಡಿತನಾಗಿ ಕಂಗೆಡುತ್ತಾನೆ. ಅವನ ಕೈಕಾಲುಗಳು ಕೊಕ್ಕೆ ಕಟ್ಟುವವು; ಮುಷ್ಟಿಗಳು ಬಿಗಿದುಕೊಳ್ಳುವವು. ಅದಿರುವಾಯುವು ಪ್ರಾರಂಭವಾಗಿ ಆಕ್ಷೇಪಕ ತರಂಗಗಳೆದ್ದು ಕ್ರಮೇಣ ಇಡೀ ದೇಹವನ್ನು ಆಕ್ರಮಿಸುತ್ತದೆ; ಹಾಗೂ ಪೂರ್ಣಕಾಲ ಇದೇ ಸ್ಥಿತಿಯಲ್ಲಿ ಉಳಿದು ಬಿಡುತ್ತದೆ. ಕ್ರಮೇಣ ಅತ್ಯಲ್ಪ ಉದ್ರೇಕದಿಂದಲೂ, ಬೆಳಕು ಶಬ್ದಗಳಿಂದಲೂ ಸಹ ಸೆಟೆಗಳು ಉಂಟಾಗಬಹುದು. ರೋಗಿಯ ಕಣ್ಣು ಬೊಂಬೆ ಅರಳಿರುತ್ತದೆ. (ಕಾಸರಕ ವಿಷ ಚಿಕಿತ್ಸೆ ಮಾಡುವ ಮುನ್ನ ವಿಷ ಲಕ್ಷಣಗಳನ್ನು ಟೆಟರಸ್, ಹಿಸ್ಟಿರೀಯಾ, ಭ್ರಮೆ, ಉನ್ಮಾದ ಮೊದಲಾದ ರೋಗ ಲಕ್ಷಣಗಳಿಂದ ಪ್ರತ್ಯೇಕಿಸಿ ಗುರುತಿಸುವುದು ಅಗತ್ಯ)

**ಚಿಕಿತ್ಸೆ ಮತ್ತು ಉಪಚಾರ:**

ಕಾಸರಕ ವಿಷ ಪ್ರಯೋಗಕ್ಕೆ ತುತ್ತಾದರ ರೋಗಿಯನ್ನು ಮೊದಲು ನಿಶ್ಯಬ್ದವಾದ ಕತ್ತಲು ಕೋಣೆಯೊಳಕ್ಕೆ ಸಾಗಿಸಿ ಪ್ರತ್ಯೇಕವಾಗಿ ಮಲಗಿಸಿ, ಸಂಪೂರ್ಣ ವಿಶ್ರಾಂತಿ ನೀಡಬೇಕು. ಅದಿರುವಾಯು ಏಳುತ್ತಿದ್ದರೆ ಕ್ಲೋರೋ ಫಾರಂ ಮೂಸಲು ಕೊಡಬೇಕು; ಅಥವಾ ಇತರ ನಿದ್ರಾಪ್ರದ– ಶಾಮಕ ಔಷಧಿಗಳನ್ನು ನೀಡಬೇಕು. ಉಸಿರಾಟದ ತೊಂದರೆ ಕಾಣಿಸಿದರೆ, ಆಮ್ಲಜನಕ, ನೀಡಿಕೆ, ಕೃತಕ ಉಸಿರಾಟಗಳನ್ನು ಒದಗಿಸಬೇಕು. ಹೊಟ್ಟೆ ತೊಳೆಯುವುದು, ವಮನ– ವಿರೇಚನ ಮಾಡಿಸುವುದು ಮೊದಲಾದ

ಸಾಂಪ್ರದಾಯಿಕ ಚಿಕಿತ್ಸೆಗಳನ್ನು ನಡೆಸಬೇಕು. ಕಾಸರಕ ವಿಷ ಪ್ರಯೋಗವಾದ ರೋಗಿಗಳಿಗೆ ವೀಳ್ಯದೆಲೆ ರಸ, ನೇರಳೆ ರಸ ಅಥವಾ ಆಕಳ ತುಪ್ಪ ಸೇವನೆ ಹಿತಕವೆಂದು ಆಯುರ್ವೇದ ವೈದ್ಯರ ಅಭಿಮತ.

## ಕೆಂಪು ಮೈಮೇಲೊಂದು ಕಪ್ಪು ಚುಕ್ಕೆ ತಿರುಳಲ್ಲಿ ಅಡಗಿದೆ ವಿಷಸತ್ವ : ಗುಲಗಂಜಿ



(ಇಂಗ್ಲೀಷ್: Wild Liquorice- Indian Liquorice ಸಸ್ಯ ಶಾಸ್ತ್ರದ ಹೆಸರು: Arbus Precatorius. ಕನ್ನಡ : ಗುಲಗಂಜಿ, ಗುಲುಗುಂಜಿ, ಗುರುಗುಂಜಿ, ಗುಂಜಿ, ಗುಲಗಂಜಿ. ಸಂಸ್ಕೃತ: ಗುಂಜಾ, ರಕ್ತಿಕಾ. ತುಳು: ಗುರುಗೊಂಜಿ. ತಮಿಳು: ಖುನ್ರಿ, ಗಂಡುಮಣಿ. ತೆಲುಗು: ಗುರಿಗಿಂಜಾ, ಕುಕ್ಕುಟಮು. ಮಲೆಯಾಳಂ: ಕುನ್ನಿ. ಕೊಂಕಣಿ: ಗುರಗುಂಜಿ. ಹಿಂದಿ: ಗುಂಜಾ, ರತಿ.

ಕರಾವಳಿಗಳಲ್ಲಿಯೂ ಒಳನಾಡಿನ ಕಾಡುಗಳಲ್ಲಿಯೂ ಬೆಳೆಯುವ ಹತ್ತು ಹನ್ನೆರಡು ಅಡಿ ಎತ್ತರಕ್ಕೆ ಹಬ್ಬುವ ಚಿಕ್ಕ ಲತೆ ಗುಲುಗಂಜಿ. ಈ ಬಳ್ಳಿಯು ಚೈತ್ರದಿಂದ ಆಶ್ವೀಜ ಮಾಸದವರೆಗೆ ಹೂ ಬಿಡುತ್ತದೆ ಮತ್ತು ಸಣ್ಣ ಸಣ್ಣ ಕೋಡುಗಳಲ್ಲಿ, ಕೋಳಿ ಮೊಟ್ಟೆಯ ಆಕಾರದ ಚಿಕ್ಕ ಚಿಕ್ಕ ಬೀಜಗಳಿರುತ್ತವೆ. ಬೀಜವು ಕೆಂಪು ಅಥವಾ ಗುಲಾಬಿ ವರ್ಣಕ್ಕಿದ್ದು, ಒಂದು ತುದಯಲ್ಲಿ ಕಪ್ಪು ಬೊಟ್ಟನ್ನು ಹೊತ್ತಿರುತ್ತದೆ. ಪೂರ್ಣ ಬಿಳಿ ಅಥವಾ ಪೂರ್ಣ ಕಪ್ಪು ವರ್ಣಕ್ಕೆ ಇರುವ ಹಾಗೂ ಬೊಟ್ಟಿಲ್ಲದ ಗುಲಗಂಜಿ ಬೀಜಗಳು ಸಹ ಕ್ವಚಿತ್ತಾಗಿ ಕಾಣಸಿಗುತ್ತವೆ. ಒಂದು ಗುಲಗಂಜಿ ಬೀಜದ ತೂಕ 1.75 ಗ್ರೇನ್. ಹಳ್ಳಿಯ ಅಕ್ಕಸಾಲಿಗರು ಇಂದಿಗೂ ಚಿನ್ನದ ತೂಕಕ್ಕೆ ಇದನ್ನೇ ಮಾಪನವಾಗಿ ಇರಿಸುತ್ತಾರೆ.

ಗುರುಗಂಜಿಯಲ್ಲಿ ಎಡ್ರಿನ್ ಎಂಬ ವಿಷ ಸತ್ವವಿದೆ. ಆಯುರ್ವೇದ ವೈದ್ಯರು ಗುಲುಗುಂಜಿ ಬೀಜವನ್ನು ಹಾಲಿನಲ್ಲಿ ಬೇಯಿಸಿ ಶುದ್ಧ ಮಾಡಿ ಅನೇಕ ರೋಗಗಳ ಚಿಕಿತ್ಸೆಗೂ, ಕಾಮೋತ್ತೇಜಕ ದ್ರವ್ಯವಾಗಿಯೂ ಬಳಸುತ್ತಾರೆ. ಗುಲಗುಂಜಿಯು ಪ್ರಾಣಿಗಳಿಗೂ ಸಹ ವಿಷವಾಗಿದೆ.

ಗಾಯ ಮಾಡಿದಾಗ ಬಿಳಿಹಾಲು ಜಿನುಗುತ್ತದೆ. ಕರವೀರದ ಎಲೆ, ಬೇರು, ಹೂ ಮತ್ತು ಬೀಜ ಎಲ್ಲವೂ ಸೇವನಾ ವಿಷ, ಹಾಲು ಸ್ಪರ್ಷ ವಿಷ. ಕರವೀರದಲ್ಲಿ ನೆರಿನ್, ಥೆವಟಿನ್ ಮತ್ತು ಸೆಥೆಬ್ರಿನ್ ಎಂಬ ವಿಷ ಸತ್ವಗಳಿವೆ.

ಪ್ರಾಣಾಪಾಯದ ಪ್ರಮಾಣ (ಸೇವನೆ) : ಬಿಳಿ ಕರವೀರ ಬೇರಿನ ಚೂರ್ಣ ಸುಮಾರು 16 ಗ್ರಾಮ ಅರಸಿನ ಕಣಗಿಲದ ಬೀಜ 8 ಪ್ರಾಣಾಪಾಯದ ಕಾಲಾವಧಿ 3–4 ತಾಸು. (ಆದರೆ ಕೆಲವೊಮ್ಮೆ ಎರಡು, ಮೂರು ದಿನಗಳ ನಂತರ ಸಾವು ಸಂಭವಿಸಿದ್ದೂ ಉಂಟು.)

**ವಿಷ ಪ್ರಾಶನದ ಲಕ್ಷಣಗಳು :**

ಬಿಳಿ ಕರವೀರ ವಿಷ ಸೇವಿಸಿದ ರೋಗಿಗೆ ಗಂಟಲು, ನಾಲಗೆ ಮತ್ತು ಬಾಯಯಿಲ್ಲಿ ನೋವು ಕಾಣಿಸುತ್ತದೆ. ಮತ್ತು ಅವನಿಗೆ ನುಂಗಲು ಕಷ್ಟವಾಗುತ್ತದೆ. ಹೊಟ್ಟೆನೋವು, ವಾಂತಿ, ಭೇದಿ ಮತ್ತು ಬರುಗು ಮಿಶ್ರಿತ ಜೊಲ್ಲು ಸುರಿಯಲು ಪ್ರಾರಂಭವಾಗುತ್ತದೆ. ರೋಗಿಯ ನಾಡಿಯು ಮೊದಲು ನಿಧಾನವಾಗಿ ಬಡಿಯುತ್ತಿದ್ದು ಕ್ರಮೇಣ ತೀವ್ರಗತಿಗೆ ತಿರುಗುತ್ತದೆ. ಉಸಿರಾಟವು ಜೋರಾಗುತ್ತದೆ. ತೂಕಡಿಕೆ, ನಿದ್ರೆ, ಅದಿರುವಾಯು, ದೀರ್ಘಸುಪ್ತಿ ಮೊದಲಾದ ಉಪದ್ರವಗಳು ಸಂಭವಿಸುವವು; ಮತ್ತು ಸಾವು ಉಂಟಾಗಬಹುದು.

ಅರಸಿಣ ಕರವೀರ ಸೇವಿಸಿದ ರೋಗಿಯ ಬಾಯಿ, ನಾಲಗೆ ಮತ್ತು ಗಂಟಲಲ್ಲಿ ನೋವು, ಉರಿ ಕಾಣಿಸಿಕೊಂಡು ಗಂಟಲು ಬತ್ತುವುದು. ನಾಲಗೆ ನಿಶ್ಚೇತನವಾಗುವುದು ತಲೆನೋವು, ತಲೆತಿರುಗುವುದು, ವಾಕರಿಕೆ, ವಾಂತಿ ಮೊದಲಾದ ಉಪದ್ರವಗಳು ಉಂಟಾಗುವವು. ಅವನ್ನ ಕಣ್ಣು ಬೊಂಬೆ ಅರಳುತ್ತದೆ. ನಾಡಿಯು ಮೊದಲ ನಿಧಾನವಾಗಿದ್ದು ಕ್ರಮೇಣ ತೀವ್ರ– ವಕ್ರಗತಿಗೆ ತಿರುಗುತ್ತದೆ. ರೋಗಿಯು ಮೂರ್ಛೆ ತಪ್ಪುವನು; ಹೃದಯವಿಕಾರ, ಕುಸಿತ, ಅದಿರುವಾಯು ಮೊದಲಾದ ಉಪದ್ರವಗಳಿಂದ ನರಳುವುದಲ್ಲದೆ ಸಾವಿಗೂ ತುತ್ತಾಗಬಹುದು.

**ಚಿಕಿತ್ಸೆ ಮತ್ತು ಉಪಚಾರ**

ವಾಂತಿ ಮಾಡಿಸುವುದು, ಹೊಟ್ಟೆ ತೊಳೆಯುವುದು ಮೊದಲಾದ ಸಾಂಪ್ರದಾಯಿಕ ಚಿಕಿತ್ಸೆ ಮಾಡುವುದಲ್ಲದೆ ಇತರ ಉಪದ್ರವಗಳಿಗೆ ಸೂಕ್ತ ಚಿಕಿತ್ಸೆ ನಡೆಸಬೇಕು. ಆಯುರ್ವೇದ ವೈದ್ಯರು ನಿಂಬೆಹಣ್ಣಿನರಸ, ಹತ್ತಿಕಾಯಿಯರಸ ಅಥವಾ ನೇರಳೆ ರಸವನ್ನು ಕುಡಿಸಬೇಕು ಎಂದು ಸೂಚಿಸುತ್ತಾರೆ.

## ಜಾಪಾಳ ಮಾತ್ರೆ ವೈಕುಂಠ ಯಾತ್ರೆ
## ಮಿತವರಿತು ಬಳಸಿದರೆ ಹಿತ ದೇಹಕ್ಕೆ

(ಇಂಗ್ಲೀಷ್: Croton. ಸಸ್ಯ ಶಾಸ್ತ್ರದ ಹೆಸರು: Crotontiglium ಕನ್ನಡ : ಜಾಪಾಳೆ, ಜಯಪಾಲ, ನೇರ್ವಾಳ. ಸಂಸ್ಕೃತ : ಜಯಫಲ, ತಿತ್ತಿರೀ ಫಲ, ನೇಪಾಳ ತುಳು : ಬ್ಯಾರಿಬಿತ್ತು; ತಮಿಳು : ಚೆಂದಿ, ಚಿದುರಂ. ತೆಲಗು : ನೇಪಾಳ.... ಮಲಯಾಳಂ: ನಿರ್ವಾಳಂ. ಕೊಂಕಣಿ; ಜಾಫಲ, ಹಿಂದಿ : ಜಮಾಲಗೋಟ್)

ಜಾಪಾಳ ಗಿಡದಷ್ಟು ಕೆಟ್ಟ ಹೆಸರು ಹೊತ್ತ ವನೌಷಧಿ ಬೇರೊಂದಿಲ್ಲ. ಜಾಪಾಳ ಮಾತ್ರೆ ವೈಕುಂಠ ಯಾತ್ರೆ ಎಂಬ ಗಾದೆಯೇ ಇದೆ! ಜಾಪಾಳ ಬೀಜದ ತೈಲ ಹಾಗೂ ಬೇರಿನ ಪುಡಿ ಉತ್ತಮ ವಿರೇಚಕ ದ್ರವ್ಯಗಳು; ಆದರೆ ಶುದ್ಧ ಮಾಡದೆ ಉಪಯೋಗಿಸಿದರೆ ಮಾರಕ ವಿಷ. ಆಯುರ್ವೇದ ವೈದ್ಯರು ಜಾಪಾಳವನ್ನು ಪಂಚಗವ್ಯದಲ್ಲಿ ಬೇಯಿಸಿ ಶುದ್ಧ ಮಾಡುತ್ತಾರೆ. ಜಾಪಾಳ ಬೀಜದಲ್ಲಿ ಕ್ರೋಟಿನ್ ಎಂಬ ವಿಷ ಸತ್ವವಿದೆ. ಜಾಪಾಳ ತೈಲವು ಕೆಟ್ಟ ವಾಸನೆಯುಳ್ಳದ್ದಾಗಿದ್ದು ಸ್ಪರ್ಶ ಹಾಗೂ ಸೇವನಾ ವಿಷ.

ಪ್ರಾಣಾಪಾಯದ ಪ್ರಮಾಣ (ಸೇವನೆ) : ಬೀಜದ ತೈಲ 20–30 ಬಿಂದು. ಕೇವಲ ಒಂದು ಜಾಪಾಳ ಬೀಜವನ್ನು ತಿಂದು ಸಾವು ಸಂಭವಿಸಿದ ದಾಖಲೆಯಿದೆ. ಪ್ರಾಣಾಪಾಯದ ಕಾಲಾವದಿ 4–6 ತಾಸು (ಆದರೆ ಕೆಲವು ಸಂದರ್ಭದಲ್ಲಿ 3–4 ದಿವಸಗಳಷ್ಟು ವಿಳಂಬವಾಗಿಯೂ ಮರಣ ಸಂಬವಿಸಬಹುದು).

**ವಿಷಪ್ರಾಶನದ ಲಕ್ಷಣಗಳು :**

ಜಾಪಾಳ ವಿಷ ಪ್ರಯೋಗಕ್ಕೆ ತುತ್ತಾದ ರೋಗಿಯ ನಾಲಗೆ, ಗಂಟಲು ಮತ್ತು ಬಾಯಿ ಉರಿಯುವುದು, ಜೊಲ್ಲು ಸುರಿಯುವುದು, ವಾಕರಿಕೆ, ವಾಂತಿ ಮೊದಲಾದ ಉಪದ್ರವಗಳಿಂದ ನರಳುತ್ತಾನೆ. ಅವನ ಹೊಟ್ಟೆಯ ಹಿಚುಗಿದಂತಾಗಿ ತೀವ್ರವಾದ ಹೊಟ್ಟೆ ಶೂಲೆ, ಭೇದಿ ತಲೆತಿರುಗುವುದು, ಸಂಕಟ ಮತ್ತು ವೇದನೆಗಳು ಉಂಟಾಗುತ್ತವೆ; ಕುಸಿತ ಮತ್ತು ಸಾವು ಸಂಭವಿಸಬಹುದು.

**ಚಿಕಿತ್ಸೆ ಮತ್ತು ಉಪಚಾರ :**

ಹೊಟ್ಟೆ ತೊಳೆಯುವುದು, ವಾಂತಿ ಮಾಡಿಸುವುದು ಮೊದಲಾದ ಸಾಂಪ್ರದಾಯಿಕ ಚಿಕಿತ್ಸೆಯನ್ನು ನಡೆಸಬೇಕು. ತತ್ತಿಯ ಲೋಳೆ ಕುಡಿಸುವುದು ಹೆಚ್ಚು ಉಪಯುಕ್ತವಾಗಿದೆ. ಗ್ಲೂಕೋಸ್ ನೀಡಿಕೆ ಮತ್ತು ಉತ್ತೇಜಕ ಔಷಧ ಪಾನೀಯಗಳು ಹೆಚ್ಚಿನ ಪರಿಣಾಮ ನೀಡುತ್ತವೆ.

ಆಯುರ್ವೇದ ವೈದ್ಯರು ಈ ಕೆಳಗಿನ ಚಿಕಿತ್ಸೆಗಳನ್ನು ಸೂಚಿಸುತ್ತಾರೆ : 1 ಯಾಲಕ್ಕಿ ಪುಡಿಯನ್ನು ಮೊಸರಿನಲ್ಲಿ ಕಲಸಿ ಸೇವಿಸುವುದು. 2 ಹವೀಜ ಕೊತ್ತಂಬರಿ ಬೀಜದ ಪುಡಿಯನ್ನು ಕಲ್ಲು ಸಕ್ಕರೆ ಬೆರಸಿ ತಿನ್ನಿಸುವುದು. 3. ದಾಳಿಂಬದ ಚಿಗುರಿನ ರಸ ಹಿಂಡಿ ಕುಡಿಸುವುದು. 4. ನಿಂಬೆಹಣ್ಣಿನ ರಸ ಅಥವಾ ಮಜ್ಜಿಗೆ ಸೇವನೆ ಇವುಗಳಲ್ಲಿ ಯಾವುದಾದರೂ ಒಂದು.

ಜಾಪಾಳ ಸ್ಪರ್ಶ ವಿಷಕ್ಕೆ ತುತ್ತಾದ ರೋಗಿಯ ಚರ್ಮವು ಕೆಂಪಾಗಿ ಉರಿಯತೊಡಗುವುದಲ್ಲದೆ ಸಣ್ಣ ಸಣ್ಣ ಗುಳ್ಳೆಗಳು ಏಳುತ್ತವೆ. ಹುಣ್ಣುಗಳು ಮಾಯವಾದರೂ ಕಲೆಯು ಶಾಶ್ವತವಾಗಿ ಉಳಿಯುತ್ತದೆ. ಇದಕ್ಕೆ ಸೂಕ್ತ ವ್ರಣರೋಪಣ ಚಿಕಿತ್ಸೆಯನ್ನು ನಡೆಸಬೇಕು.

## ಬೀಜದಿಂದ ಮಧುರ ಪಾನೀಯ

## ಸಿಪ್ಪೆ ಮುಟ್ಟಿದರೆ ಉರಿ, ಉರಿ, ಉರಿ :

## ನಸುಗುನ್ನಿ (ಸಿಪ್ಪೆ ಮಟ್ಟದಿರಿ ಜೋಕೆ)



(ಇಂಗ್ಲೀಷ್: Cowhage, Cowitch. ಸಸ್ಯ ಶಾಸ್ತ್ರದ ಹೆಸರು: Maeunapruriens ಕನ್ನಡ : ನಸುಗುನ್ನಿ, ಕಾಡವರೆ, ತುರುಡೆ, ನಾಯಿ ಸೊಣಗು, ಸಂಸ್ಕೃತ : ಕಪಿಕಚ್ಚು ತುಳು : ನಾಯಿ ಸೊನಂಗ್, ತಮಿಳು : ಮೊನ್ಯೆಕ್ಕಾಲಿ. ತೆಲುಗು : ಪಿಲಿಯಡುಗು ಮಲಯಾಳಂ : ನಾಯಿ ಕರುಣ, ಚೊರಿವಳ್ಳಿ]

ನಸುಗನ್ನಿ ಎಲೆಗಳಲ್ಲೂ ಗಿಡ ದಲ್ಲಿಯೂ ಸೂಕ್ಷ್ಮ ರೋಮಗಳಂತಹ ಕಿರುಮುಳ್ಳುಗಳಿರುತ್ತವೆ. ಸ್ಪರ್ಶವಾದೊಡನೆಯೇ ಈ ರೋಮಗಳ ಬುಡದಲ್ಲಿರುವ ಪುಟ್ಟ ಕೋಶ ಒಡೆದು ಒಳಗೆ ಸಂಚಿತವಾದ ವಿಷದ್ರವ್ಯವು ಹೊರಕ್ಕೆ ಚೆಲ್ಲಿಬಿಡುತ್ತದೆ. ಇದು ಅತಿಶಯವಾಗಿ ನವೆ, ವೇದನೆ ಮತ್ತು ತುರಿಕೆಯನ್ನು ಉಂಟುಮಾಡುವ ತೀಕ್ಷ್ಣವಾದ ಸ್ಪರ್ಶವಿಷ. ನಸುಗುನ್ನಿಯ ಬೀಜವನ್ನು ಶುದ್ಧಮಾಡಿ ಕಾಫಿಯಂತೆ ಬಳಸುವುದೂ ಉಂಟು. ಇದು ನಿರುಪಾಯಕಾರಿ.

**ವಿಷ ಪ್ರಯೋಗದ ಲಕ್ಷಣಗಳು :**

ನಸುಗುನ್ನಿ ವಿಷವು ಸ್ಪರ್ಶವಾದರೆ ಅತಿಶಯವಾದ ನೋವು, ಉರಿ, ಸಹಿಸಲು ಅಸಾಧ್ಯವಾದ ತುರಿಕೆ ಆರಂಬವಾಗುತ್ತದೆ; ಮತ್ತು ಆ ಭಾಗದಲ್ಲಿ ಚರ್ಮವು

ಕೆಂಪಾಗುತ್ತದೆ. ಕೆಂಪಾದ ತದ್ದು-ಗಂದೆಗಳು ಹಾಗೂ ಬಾವುಗಳು ಕಾಣಿಸಿಕೊಂಡು ಕ್ರಮೇಣ ಅವು ವ್ರಣವಾಗಿ ಪರಿಣಮಿಸಬಹುದು.

ನಸುಗುನ್ನಿಯನ್ನು ನೀರಲ್ಲಿ ಬೆರಸಿ ಸೇವಿಸಿದರೆ ರೋಗಿಯ ಗಂಟಲು, ನಾಲಗೆ ಮತ್ತು ಬಾಯಿ ತುರಿಸಲು ಪ್ರಾರಂಭವಾಗುತ್ತದೆ. ಇದರ ಚೂರ್ಣವನ್ನು ಆಘ್ರಾಣಿಸಿದರೆ ಮೂಗು ಸೋರುವುದು, ಶ್ವಾಸಕೋಶದ ಕೆರೆತ, ಊತಗಳು ಕಾಣಿಸಿಕೊಂಡು ಉಸಿರಾಟಕ್ಕೆ ತೊಂದರೆ ಉಂಟಾಗುತ್ತದೆ.

**ಚಿಕಿತ್ಸೆ ಮತ್ತು ಉಪಚಾರ :**

ಸೇವನಾ ವಿಷಕ್ಕೆ ಹೊಟ್ಟೆ ತೊಳೆಯುವುದು, ವಾಂತಿ ಮಾಡಿಸುವುದು ಮೊದಲಾದ ಸಾಂಪ್ರದಾಯಿಕ ಚಿಕಿತ್ಸೆ ನಡೆಸಬೇಕು. ಲಿಕ್ವಿಡ್ ಪ್ಯಾರಾಫಿನ್ ಅಥವಾ ಇಪ್ಪೆ ಎಣ್ಣೆಯನ್ನು ರೋಗಿಗೆ ಕುಡಿಸಬೇಕು. 'ಎಫಿಡ್ರಿನ್ ಹೈಡ್ರೋಕ್ಲೋರೈಡ್', ಲ್ಯೂಮಿನಾಲ್ ಔಷಧಿಗಳೂ, ಆ್ಯಂಟಿಹಿಸ್ಟಾಮಿನ್ ವರ್ಗದ ಔಷಧಿಗಳೂ ಉಪಯುಕ್ತವಾಗಿವೆ. ವಿಷ ಸ್ಪರ್ಶವಾದ ಭಾಗದಲ್ಲಿನವೆ ಮೊದಲಾದ ಉಪದ್ರವಗಳು ಉಂಟಾದಾಗ ಸೋಡಿಯಂ ಬೈ ಕಾರ್ಬೋನೇಟ್ ಮಿಶ್ರಣದಿಂದ ತೊಳೆಯಬೇಕು. ಅನಂತರ ಆ್ಯಂಟಿಹಿಸ್ಟಾಮಿನ್ ವರ್ಗದ ಔಷಧಿಗಳನ್ನು ನೀಡಿ ಚಿಕಿತ್ಸೆ ಮಾಡಬೇಕು.

ಆಯುರ್ವೇದ ವೈದ್ಯರು ನಸುಗುನ್ನಿ ಸ್ಪರ್ಶ ವಿಷಕ್ಕೆ ಶ್ರೀಗಂಧದ ಲೇಪ ಅಥವಾ ಮೊಸರು ಲೇಪ ಉಪಯುಕ್ತವೆಂದು ಹೇಳುತ್ತಾರೆ. ಸೇವನಾ ವಿಷಕ್ಕೆ ರೋಗಿಯು ಬಾಳೆಹಣ್ಣು, ಅತ್ತಿಯ ಎಲೆಯ ರಸ ಅಥವಾ ಆಕಳ ತುಪ್ಪ ಸೇವನೆ ಮಾಡಬೇಕೆಂದು ಹೇಳುತ್ತಾರೆ.

## ಬಣ್ಣದ ಬೆಡಗಿನ ಸಿಂಗಾರಿ

## ಬೇರಲಿ ತುಂಬಿದೆ ವಿಷಭಾರಿ : ಕೋಳಿ ಕುಟುಮ (ಗೌರಿಹೂ)



[ಇಂಗ್ಲೀಷ್: Gloriosa. ಸಸ್ಯ ಶಾಸ್ತ್ರದ ಹೆಸರು: Gloricsa superba. ಕನ್ನಡ: ಕೋಳಿ ಕುಟುಮ, ಲಾಂಗಲಿ, ಲಾಂಗುಲಿ ಗೌರಿ ಹೂವಿನ ಗಿಡ. ಸಂಸ್ಕೃತ ಲಾಂಗುಲಿಕಾ, ಅಗ್ನಿಶಿಖಾ ಅಗ್ನಿ ಜಿಹ್ವಾ, ಗರ್ಭಪಾತಿನಿ. ತುಳು ಬಲಿಪಹೂ, ಕೆಂಕಣ್ಣಿದಪೂ. ತಮಿಳು ಕಾಂದಳ್, ಕಾರ್ತಿಕೈ ಪೂ ತೊಂದಿ ತೆಲಗು : ಲಾಮಗಲಿ]

ಕೋಳಿಕುಟುಮವು ಗಿಡಮರಗಳನ್ನು ಆಶ್ರಯಿಸಿ ಹಬ್ಬುವ ಬಳ್ಳಿ ವರ್ಗದ ಸಸ್ಯ. ಇದು ದೇಶದ ಎಲ್ಲಾ ಭಾಗಗಳಲ್ಲಿಯೂ ಬೆಳೆಯುತ್ತದೆ. ಬಳ್ಳಿಯಲ್ಲಿ ವಿಚಿತ್ರ ಆಕಾರದ ಸುಂದರವಾದ ಕೆಂಪು ಅರಶಿನ ಮಿಶ್ರ ಬಣ್ಣದ ಹೂಗಳು ಶ್ರಾವಣದಿಂದ ಆಶ್ವಿಜಧವರೆಗೆ ಅರಳುತ್ತವೆ. ಇದರ ಗಡ್ಡೆತೀಕ್ಷ್ಣ ವಿಷ. ಕುರುಗಳಿಗೆ ಗಡ್ಡೆಯ ಲೇಪ ಹಚ್ಚುತ್ತಾರೆ. ಗಡ್ಡೆಗೆ ಗರ್ಭಪಾತಿನೀ ಎಂಬ ಅಡ್ಡ ಹೆಸರೇ ಇದೆ. ಗಡ್ಡೆಯು ರಸಭರಿತವಾಗಿದ್ದು 'ಸುಪರಬೈನ್' ಎಂಬ ವಿಷಸತ್ವದಂತೆ ಕೂಡಿದೆ. ಗಡ್ಡೆಯು ಚೂರ್ಣವನ್ನು 0.5 ಗ್ರಾಂ ನಷ್ಟು ಸೇವಿಸಿದರೆ ಪ್ರಾಣಾಪಾಯ ಉಂಟಾಗಬಹುದು.

**ವಿಷ ಪ್ರಯೋಗದ ಲಕ್ಷಣಗಳು :**

ಕೋಳಿಕುಟುಮಿನಗಡ್ಡೆ ವಿಷ ಸೇವಿಸಿದ ರೋಗಿಯಲ್ಲಿ ಬಾಯಿ ಬತ್ತುವದು, ವಾಕರಿಕೆ, ತೀವ್ರ ವಾಂತಿ ಮೈ ಬೆವರುವುದು, ಸಂಕಟ ಮೊದಲಾದ ಉಪದ್ರವಗಳು ಕಾಣಿಸಿಕೊಳ್ಳುತ್ತವೆ. ಕ್ರಮೇಣ ನಡುಕ, ಅದಿರುವಾಯು, ಕುಸಿತ ಮತ್ತು ಸಾವು ಸಂಭವಿಸಬಹುದು.

**ಚಿಕಿತ್ಸೆ ಮತ್ತು ಉಪಚಾರ :**

ಹೊಟ್ಟೆ ತೊಳೆಯುವುದು, ವಾಂತಿ ಮಾಡಿಸುವುದು ಮೊದಲಾದ ಸಾಂಪ್ರದಾಯಿಕ ಚಿಕಿತ್ಸೆ ಮಾಡಬೇಕು. ಹಾಲು, ತುಪ್ಪ, ಕೋಳಿಯ ತತ್ತಿಸೇವನೆ ರೋಗಿಗೆ ಹಿತಕರವಾಗಿದೆ. ಇತರ ಉಪದ್ರವಗಳಿಗೆ ಲಕ್ಷಣಾನುಸಾರ ಚಿಕಿತ್ಸೆ ನಡೆಸಬೇಕು.

**ಟಿಪ್ಪಣಿ**

ಕೋಳಿಕುಟುಮಿನ ಗಡ್ಡೆಯನ್ನು ಅರೆದು ಗರ್ಭದ್ವಾರಕ್ಕೆ ಲೇಪಿಸಿ ಗರ್ಭಪಾತ ಮಾಡಲು ಹಳ್ಳಿಗಳಲ್ಲಿ ಪ್ರಯತ್ನಿಸುತ್ತಾರೆ. ಇದು ತೀರಾ ಅಪಾಯಕಾರಿಯಾಗಿದೆ. ಅಂತಹ ರೋಗಿಗಳಲ್ಲಿ ಜನನೇಂದ್ರಿಯ ಹಾಗೂ ಗರ್ಭಕೋಶಗಳಲ್ಲಿ ಹುಣ್ಣು, ಬಾವು ನೋವು ಮೊದಲಾದ ಉಪದ್ರವಗಳು ಕಾಣಿಸಿಕೊಂಡು ಅವರು ತೀವ್ರ ಅಪಾಯಕ್ಕೆ ಗುರಿಯಾಗಬಹುದು. ಇದರ ಗಡ್ಡೆಯ ಚೂರ್ಣವನ್ನು ಸೇವಿಸುವುದರಿಂದ ಹೆರಿಗೆಯಾದ ನಂತರ ಮಾಸು ಹೊರಗೆ ಬೀಳುವುದಕ್ಕೆ ಸುಲಭವೆಂದು ಅನೇಕರ ಭಾವನೆ ಇರುತ್ತದೆ. ಅದಕ್ಕಾಗಿ ಔಷಧಿಯೆಂದು ಇದನ್ನು ಸೇವಿಸಿದಾಗ ಕೆಲವೊಮ್ಮೆ ವಿಷ ಅಪಘಾತ ಸಂಭವಿಸುವುದುಂಟು.

# ಆಮೋದ ಪ್ರಮೋದದ ಸುರುಳಿಗೆಳೆಯ ಸೇದಿದರೆ ನಾನಾ ರೋಗಗಳಿಗೆ ಆಹ್ವಾನ : ಹೊಗೆಸೊಪ್ಪು (ತಂಬಾಕು)



(ಇಂಗ್ಲೀಷ್: Tobacco. ಸಸ್ಯ ಶಾಸ್ತ್ರದ ಹೆಸರು: Nicotiana Tobacum. ಕನ್ನಡ : ತಂಬಾಕು, ಹೊಗೆಸೊಪ್ಪು. ಸಂಸ್ಕೃತ: ತಾಮ್ರಕೂಟ, ತುಳು: ಪುಗೆರೆ. ತಮಿಳು: ಪುಗೈಯಿರೈ. ತೆಲುಗು: ಪೊಗಾಕು. ಮಲಯಾಳಂ: ಕಳಜಂ. ಹಿಂದಿ: ತಂಬಾಕು]

ಮೂಲತಃ ಅಮೆರಿಕಾದಿಂದ ಬಂದು ಬೇರೂರಿದರೂ ಈಗ ತಂಬಾಕನ್ನು ನಮ್ಮ ದೇಶದಲ್ಲಿ ರೊಕ್ಕದ ಬೆಳೆಯಾಗಿ ಬೆಳೆಯುತ್ತಾರೆ. ತಂಬಾಕಿನ ಎಲೆಯಿಂದ ಬೀಡಿ, ಸಿಗರೇಟು ಮುಂತಾದ ಹೊಗೆಬತ್ತಿಗಳನ್ನು ಸಿದ್ಧಪಡಿಸುತ್ತಾರೆ. ತಂಬಾಕಿನ ಎಲೆಯನ್ನು ಹುರಿದುಪುಡಿಮಾಡಿ, ನಾಸೀಚೂರ್ಣ ತಯಾರಿಸಿ ಆಘ್ರಾಣಿಸುತ್ತಾರೆ. ತಂಬಾಕು ಎಲೆಯನ್ನು ಚಿಕ್ಕದಾಗಿ ಕತ್ತರಿಸಿ ಪಾನ್ ಬೀಡಾದಲ್ಲಿ ಸೇವಿಸಿ ಮೆಲ್ಲುತ್ತಾರೆ. ಕಡ್ಡಿಪುಡಿ, ಜರದಾ ಮೊದಲಾದ ರೂಪದಲ್ಲಿಯೂ ಕೂಡಾ ತಂಬಾಕನ್ನು ಬಳಸುತ್ತಾರೆ. ಹಳ್ಳಿಯ ಜನರು ವಾತದ ಉಪದ್ರವಗಳಿಗೂ ಹಲ್ಲುನೋವು, ನಂಜು ಚಿಕಿತ್ಸೆಗಳಿಗೆ ಇದನ್ನು ಬಳಸುತ್ತಾರೆ. ತಂಬಾಕು ಸತ್ವವನ್ನು ಕ್ರಿಮಿನಾಶಕಗಳ ತಯಾರಿಕೆಗಾಗಿಯೂ ಉಪಯೋಗಿಸುತ್ತಾರೆ.

ತಂಬಾಕಿನಲ್ಲಿ ನಿಕೋಟಿನ್ ನಿಕೋಟಿಯಾನೀನ್ ಎಂಬ ವಿಷಸತ್ವಗಳಿವೆ. ಗಿಡದ ಎಲ್ಲಾ ಭಾಗಗಳು ವಿಷಯುಕ್ತವಾಗಿದ್ದರೂ ಎಲೆಗಳು ಹೆಚ್ಚು ಪ್ರಮಾಣದಲ್ಲಿ ವಿಷಯುಕ್ತವಾಗಿವೆ. ಹೊಗೆಸೊಪ್ಪು ಎಲೆಯನ್ನು ಒಣಗಿಸಿದಾಗ ವಿಶಿಷ್ಟವಾದ ಗಾಟುವಾಸನೆ ಕಾಣಿಸುತ್ತದೆ. ಇದಕ್ಕೆ ಒಗರು ರುಚಿಯಿದೆ. ತಂಬಾಕು ಸೇವಿಸುವ ಚಟಕ್ಕೆ ಬಿದ್ದವರು ಕಾಲಾನುಕ್ರಮದಲ್ಲಿ ಶ್ವಾಸಕೋಶದ ಉಪದ್ರವ, ಹೃದ್ರೋಗ ಹಾಗೂ ಏಡಿಗಂತಿ (ಕ್ಯಾನ್ಸರ್) ರೋಗಗಳಿಗೆ ಬಲಿಯಾಗುವ ಸಂಭವ ಹೆಚ್ಚಾಗಿದೆ ಎಂದು ಕಂಡುಬಂದಿದೆ.

**ಪ್ರಾಣಾಪಾಯದ ಪ್ರಮಾಣ**

ಸೇವನೇ: 40–60 ಮಿಲಿಗ್ರಾಮ್. ಎರಡು ಸಿಗರೇಟಿನಲ್ಲಿ ಅಥವಾ ಒಂದು ಹನಿ ಶುದ್ಧ ನಿಕೋಟಿನ್ ಸತ್ವದಲ್ಲಿ ಇಷ್ಟು ವಿಷ ಅಡಕವಾಗಿರುತ್ತದೆ. (ಅದರೆ ಸಿಗರೇಟನ್ನು ಉರಿಸುವಾಗ ಈ ವಿಷದ ಹೆಚ್ಚಿನ ಪಾಲಿ ಭಸ್ಮವಾಗುತ್ತದೆ)

ತಂಬಾಕು ವಿಷ ಪ್ರಯೋಗಕ್ಕೆ ನೇರವಾಗಿ ತುತ್ತಾಗಿ ಪ್ರತಿವರ್ಷ ಕನಿಷ್ಠ ಪಕ್ಷ ನೂರು ಸಾವುಗಳು ಸಂಭವಿಸುತ್ತವೆ. ತಂಬಾಕು ಸಂಗ್ರಹಿಸುವ, ಶುದ್ಧಮಾಡುವ ಹಸನುಗೊಳಿಸುವ, ಸಾಗಿಸುವ ಕೆಲಸಗಳಲ್ಲಿ ನಿರತರಾದ ಕಾರ್ಮಿಕರು ತಂಬಾಕಿನ ದೀರ್ಘಕಾಲ ವಿಷಕ್ಕೆ ತುತ್ತಾಗುವ ಸಂಭವವಿರುತ್ತದೆ. ಹೊಗೆಬತ್ತಿಯ ಚಟವಿದ್ದವರಂತೂ ಒಂದಲ್ಲ ಒಂದು ದಿನ ದೃಷ್ಟಿ ದೋಷ, ಎದೆನೋವು, ಕೆಮ್ಮು, ದಮ್ಮು, ಮೈ ಚಳಕು, ಮರೆವು, ದೇಹಾಲಸ್ಯ, ಮೈ ಕೈ ನಡುಕ ಮೊದಲಾದ ಉಪದ್ರವಗಳಿಗೆ ತುತ್ತಾಗುವುದು ಖಚಿತ.

## ವಿಷಪ್ರಯೋಗದ ಲಕ್ಷಣಗಳು

ಹೊಗೆಸೊಪ್ಪು ವಿಷವನ್ನು ಸ್ಪರ್ಶಿಸಿದರೆ, ಆಘ್ರಾಣಿಸಿದರೆ ಅಥವಾ ಸೇವಿಸಿದರೆ ರೋಗಿಯು ಗಂಟಲು, ಬಾಯಿ ಮತ್ತು ಎದೆ ಉರಿಯುತ್ತದೆ ಹಾಗೂ ಜೊಲ್ಲುಸುರಿಯುವುದು, ಮೈ ಬೆವರುವುದು, ತಲೆ ತಿರುಗುವುದು, ಕಣ್ಣುಕತ್ತಲೆ ಬರುವುದು ಮೊದಲಾದ ಉಪದ್ರವಗಳು ಕಾಣಿಸುತ್ತವಲ್ಲದೆ ದೇಹಾಲಸ್ಯವು ನಡುಕವು ಉಂಟಾಗಬಹುದು. ಅವನ ಮೈ ತಣ್ಣಗಾಗುತ್ತದೆ, ದೃಷ್ಟಿ ಹಾಗೂ ಶ್ರವಣಶಕ್ತಿ ಕುಂದುವುದು. ಅವನ ಕಣ್ಣು ಬೊಂಬೆ ಮೊದಲಿಗೆ ಕಿರಿದಾಗಿದ್ದು ಅನಂತರ ಅರಳುತ್ತದೆ. ಪ್ರಾರಂಭದಲ್ಲಿ ನಾಡಿ ನಿಧಾನವಾಗಿದ್ದು ಕ್ರಮೇಣ ತೀವ್ರಗತಿಗೆ ತಿರುಗುತ್ತದೆ. ಉಸಿರಾಟವು ಮೊದಲು ಉದ್ವೇಗಪೂರ್ಣವಾಗಿದ್ದು ಕ್ರಮೇಣ ಮಂದವಾಗುತ್ತದೆ. ರೋಗಿಯು ಬಡಬಡಿಸುವನು ಹಾಗೂ ಸ್ಮೃತಿ ತಪ್ಪುವುದು; ಸಾವು ಕೂಡಾ ಸಂಭವಿಸಬಹುದು. ವಿಷ ಪ್ರಾಶನವಾದ 10 ನಿಮಿಷಗಳೊಳಗಾಗಿ ಪ್ರಾಣಾಪಾಯ ಸಂಭವಿಸಿದ ದಾಖಲೆ ಇದೆ. ಸಾಮಾನ್ಯವಾಗಿ ಪ್ರಾಣಾಪಾಯದ ಕಾಲಾವಧಿ 4–6 ತಾಸು.

## ಚಿಕಿತ್ಸೆ ಮತ್ತು ಉಪಚಾರ

ತಂಬಾಕು ವಿಷ ಪ್ರಾಶನವಾದ ರೋಗಿಯನ್ನು ವಿಷ ಸಂಪರ್ಕ ಮತ್ತು ಸೇವನೆಗಳಿಂದ ಪ್ರತ್ಯೇಕಿಸಿ, ಪೊಟಾಸಿಯಂ ಪರಮಾಂಗನೇಟನ್ನು ಬಿಸಿನೀರಿನಲ್ಲಿ ಕರಗಿಸಿ ಹೊಟ್ಟೆ ತೊಳೆಯುವುದು, ವಾಂತಿ ಮಾಡಿಸುವುದು, ಭೇದಿ ಉಪ್ಪಿನಿಂದ ವಿರೇಚನ ಮಾಡಿಸುವುದು ಮೊದಲಾದ ಚಿಕಿತ್ಸೆ ನಡೆಸಬೇಕು. ತಂಬಾಕು ವಿಷಕ್ಕೆ ಉಪಯುಕ್ತ ಪ್ರತ್ಯಾಷಧಿ. ರೋಗಿಗೆ ಆಮ್ಲಜನಕ ನೀಡಿಕೆ ಅಥವಾ ಕೃತಕ ಉಸಿರಾಟ ಪೂರೈಸಬೇಕು. ಇತರ ಉಪದ್ರವಗಳಿಗೆ ಲಕ್ಷಣಾನುಸಾರ ಚಿಕಿತ್ಸೆ ಮಾಡಬೇಕು.

## ಮಿತವಾಗಿ ಬಳಸಿದರೆ ಹಿತವಾದದ್ದು ಮಿತಿ ತಪ್ಪಿದರೆ ಒದ್ದಾಟ ಸಿದ್ಧ : ಔಡಲ (ಹರಳು) ಬೀಜ



(ಇಂಗ್ಲೀಷ್: Castor oil seed ಸಸ್ಯ ಶಾಸ್ತ್ರದ ಹೆಸರು: Ricines Communis ಔಡಲ ಬೀಜ, ಔಡಲ ಬೀಜ, ಹರಳು ಬೀಜ, ಸಂಸ್ಕೃತ : ಏರಂಡಮ್, ಗಂಧರ್ವ ಹಸ್ತಕ, ವಾತಾರಿ, ತುಳು: ಅಲಂಬುಡ, ತಮಿಳು : ಅವುಡಕ್ಕು ಅಂದಗಂ, ತೆಲಗು : ಅಮುದಾಲಚೆಟ್ಟು, ಮಲಯಾಳಂ : ಚಿಟ್ವಾ ಮಣಿಕ್ಕು, ಕೊಂಕಣಿ : ಏರಂಡಿ, ಹಿಂದಿ : ಏರಂಡಿ.

ಮನೆಯ ಹಿತ್ತಲಲ್ಲಿ, ಕೈ ತೋಟದಲ್ಲಿ ಹಾಗೂ ಹೊಲ ಗದ್ದೆ ಬಯಲುಗಳಲ್ಲಿ ನೆಟ್ಟು ಬೆಳೆಸುವ ಎಣ್ಣೆ ಕಾಳಿನ ಗಿಡ ಔಡಲ. ಗಿಡಕ್ಕೆ ಅಗಲವಾದ ಎಲೆಗಳಿದ್ದು ಗೊಂಚಲು ಹೂ ಮತ್ತು 6 ಭಾಗಗಳು ಅಂಟಿಕೊಂಡ ಮುಳ್ಳು ಮುಳ್ಳಾದ ಕವಚವುಳ್ಳ ಗಟ್ಟಿಯಾದ ಕಾಯಿಗಳಿದ್ದು, ಕಾಯಿಯೊಳಕ್ಕೆ ಚಿಕ್ಕ ಚಿಕ್ಕ ಬೀಜಗಳಿರುತ್ತವೆ. ಬೀಜದಿಂದ ತಯಾರಿಸಲ್ಪಡುವುದೇ ಸುಖ ಬೇಧಿಗೆ ನಾವು ಸೇವಿಸುವ ಔಡಲ ಎಣ್ಣೆ.

ಔಡಲ ಬೀಜದಲ್ಲಿ 'ರಿಸಿನ್' ಎಂಬ ವಿಷ ಸತ್ವವಿದೆ. ಬೀಜವನ್ನು ಶುದ್ಧ ಮಾಡಿದ ನಂತರ ತೆಗೆದ ಎಣ್ಣೆ ನಿರ್ವಿಷವಾಗಿರುತ್ತದೆ. ಆದರೆ ಔಡಲ ಹಿಂಡಿಯಲ್ಲಿ ವಿಷದ ಅಂಶವಿರುವುದರಿಂದ ಅದನ್ನು ಸೇವಿಬಾರದು; ಹಾಗೂ ಪ್ರಾಣಿಗಳಿಗೆ ಕೂಡಾ ನೀಡಬಾರದು. ಇಡಿಯ ಔಡಲ ಬೀಜವನ್ನು ನುಂಗಿದರೂ ಸಹ ಪರಿಣಾಮವುಂಟಾಗುತ್ತದೆ.

ಪ್ರಾಣಾಪಾಯದ ಪ್ರಮಾಣ (ಸೇವನೆ) : 6 ಮಿಲಿ ಗ್ರಾಮ, (ವಿಷ ಸತ್ವ) ಸುಮಾರು 10 ಬೀಜಗಳನ್ನು ತಿಂದರೆ ಪ್ರಾಣಾಪಾಯ ಸಂಭವಿಸುತ್ತದೆ. (ಕೇವಲ ಒಂದೆರಡು ಬೀಜಗಳನ್ನು ಸೇವಿಸಿದರೂ ತೀವ್ರ ದುಷ್ಪರಿಣಾಮುಗಳು ಉಂಟಾಗಬಹುದು)

**ವಿಷ ಪ್ರಯೋಗದ ಲಕ್ಷಣಗಳು :**

ಔಡಲ ವಿಷ ಸೇವಿಸಿದ ರೋಗಿಗೆ ಗಂಟಲು ನೋವು, ಉರಿ, ವಾಕರಿಕೆ, ನೀರಡಿಕೆ, ವಾಂತಿ ಮೊದಲಾದ ಉಪದ್ರವಗಳು ಉಂಟಾಗುತ್ತದೆ. ತಲೆ ತಿರುಗುವುದು, ಹೊಟ್ಟೆ ನುಲಿತ, ಚರ್ಮ ಮರಗಟ್ಟುವುದು, ಮೈ ತಣ್ಣಗಾಗುವುದು. ಮೊದಲಾರ ತೊಂದರೆಗಳು ಕಾಣಿಸಿಕೊಂಡು ಅವನ ದೇಹದ ದ್ರವಾಂಶವು ಬತ್ತು ಹೋಗುವುದು. ಕ್ಷೀಣ ನಾಡಿ, ಮೂತ್ರವಿಕಾರ, ಕುಸಿತ ಮತ್ತು ಸಾವು ಸಂಭವಿಸಬಹುದು.

**ಚಿಕಿತ್ಸೆ ಮತ್ತು ಉಪಚಾರ :**

ಔಡಲ ವಿಷ ಸೇವಿಸಿದ ರೋಗಿಯನ್ನು ಹೊಟ್ಟೆ ತೊಳೆಯುವುದು, ವಾಂತಿ ಮಾಡಿಸುವುದು ಮೊದಲಾದ ಸಾಂಪ್ರದಾಯಿಕ ವಿಧಾನಗಳಿಂದ ಚಿಕಿತ್ಸೆ ನಡೆಸಬೇಕು. ಅವನಿಗೆ ಸೋಡಿಯಂ ಬೈ ಕಾರ್ಬೋನೇಟ್ ಮಿಶ್ರಣ ಕುಡಿಸುವುದು, ರಕ್ತನಾಳದ ಮೂಲಕ ಗ್ಲೂಕೋಸ್, ಉಪ್ಪು ನೀರು ಪೂರಣ ಮತ್ತು ಇತರ ಉಪದ್ರವಗಳಿಗೆ ಲಕ್ಷಣಾನುಸಾರ ಚಿಕಿತ್ಸೆ ನಡೆಸಬೇಕು. ತುಳಸಿ ಎಲೆಯ ರಸ, ಬೆಲ್ಲ ಮತ್ತು ಸಕ್ಕರೆಗಳನ್ನು ಸೇವಿಸುವುದು ಸೂಕ್ತವೆಂದು ಆಯುರ್ವೇದ ವೈದ್ಯರ ಅಭಿಮತ.

ಹರಳು ಬೀಜದ ಧೂಳು ಕಣ್ಣಿಗೆ ಸ್ಪರ್ಶ ವಿಷ. ಧೂಳನ್ನು ಆಘ್ರಾಣಿಸಿದರೆ ಮೂಗು, ಗಂಟಲು ಕೆರೆತ ತುರಿಕೆ ಮೊದಲಾದ ಒಗದಿರುವಿಕೆಯ ಲಕ್ಷಣಗಳೂ, ಉಬ್ಬಸವೂ ಕಾಣಿಸಬಹುದು. ಅಂತಹ ರೋಗಿಯ ಕಣ್ಣು, ಮೂಗು, ಬಾಯಿಯನ್ನು ತಣ್ಣೀರಿನಿಂದ ಚೆನ್ನಾಗಿ ತೊಳೆಯಬೇಕು. ಮತ್ತು ರೋಗಿಯನ್ನು ಔಡಲ ಬೀಜದ ಸಂಪರ್ಕದಿಂದ ಖಾಯಂ ಆಗಿ ದೂರ ಇರಿಸಬೇಕು.

**ಟಿಪ್ಪಣಿ :**

ಹರಳು ಗಿಡದ ಎಲೆ, ಬೇರು ಮತ್ತು ಎಣ್ಣೆಗಳನ್ನು ಹಳ್ಳಿಯ ಜನರು ನಾನಾ ರೋಗಗಳ ಚಿಕಿತ್ಸೆಗಾಗಿ ಬಳಸುತ್ತಾರೆ. ಆಯುರ್ವೇದ ಹಾಗೂ ಆಧುಕಿನ ವೈದ್ಯ ಪದ್ಧತಿಗಳಲ್ಲಿ ಹರಳೆಣ್ಣೆ (ಔಡಲ ಎಣ್ಣೆಯು) ಉತ್ತಮ ವಿರೇಚಕ ದ್ರವ್ಯವಾಗಿ ಬಳಸಲ್ಪಡುತ್ತದೆ. ಆದರೆ ಹರಳು ಬೀಜವು ಮಾತ್ರ ತೀವ್ರ ವಿಷವಾಗಿರುವುದರಿಂದ ಅದನ್ನು ಶುದ್ಧ ಮಾಡದೆ ಸೇವಿಸಬಾರದು. ಹಿತ್ತಲು ಮನೆಗಳಲ್ಲಿ ಹರಳು ಗಿಡ ಬೆಳೆಸುವವರು ಮತ್ತು ಹರಳು ಬೀಜದ ವ್ಯವಸಾಯದಲ್ಲಿ ನಿರತರಾದ ಮನೆಯವರು ಮಕ್ಕಳಿಗೆ ಸೂಕ್ತ ಮುನ್ನೆಚ್ಚರಿಕೆ ನೀಡುವುದಲ್ಲದೆ ಅವರ ಕೈಗೆ ಹರಳು ಬೀಜ ಸಿಗದಂತೆ ಜಾಗ್ರತೆ ವಹಿಸಬೇಕು.

# ಸವಿಯಲು ರುಚಿಕರ ತಿರುಳು

## ಎಣ್ಣೆರಸ ಮುಟ್ಟಿದರೆ ಅಪಾಯ :

## ಗೇರುಕೇರು



(ಇಂಗ್ಲೀಷ್: Marking Nut ಇಂಗ್ಲೀಷ್ (ಗೇರು) Cashew Nut ಸಸ್ಯ ಶಾಸ್ತ್ರದ ಹೆಸರು: (ಕೇರು) Semecarpus Anacardium. ಸಸ್ಯಶಾಸ್ತ್ರದ ಹೆಸರು : (ಗೇರು) Anacardium Ocel Dentale. ಕನ್ನಡ : (ಕೇರು) ಗೇರ್ಕಾಯಿ, ಕೇರು, ಕೇರರಳು, ಚೇರಾ, ಕನ್ನಡ : (ಗೇರು) ಕಾಜು, ಗೇರು, ಬೀಜ, ಗೇರುಬೀಜ, ಸಂಸ್ಕೃತ : (ಕೇರು) ಭಲ್ಲಾತಕ, ಅಗ್ನಿ, ಮುಖಿ, (ಗೇರು) ಶೋಫಹರ, ತುಳು: (ಕೇರು) ತೇರೆ, ಚೇರೆ (ಗೇರು) ಗೋಂಕು. ತಮಿಳು : (ಕೇರು) ಶೆಂಗೋಟ್ಟೈ (ಗೇರು) ಮುಂದುರಿಕ್ಕೈ. ತೆಲಗು : (ಕೇರು) ಜೇಡಿಬೆಟ್ಟು, ಭಲ್ಲಾತಕಮು. (ಗೇರು) ಜೇಡಿ ಮಾಮಿಡಿ ಮಲಯಾಳಂ : (ಕೇರು) ಚೇರು. (ಗೇರು) : ಕಪ್ಪು ಮಾವು ಹಿಂದಿ : (ಗೇರು) ಭಾಲವಾನ್, ಕಾಜೂ)

ಸಮುದ್ರ ತೀರದ ಬಯಲು ಗುಡ್ಡಗಳಲ್ಲಿಯೂ ಒಳನಾಡಿನ ಕಾಡುಗಳಲ್ಲಿಯೂ ಬೆಳೆಯುವ ಗೇರು ಮರಗಳನ್ನು ಈಚೆಗೆ ತೋಟಗಳಲ್ಲಿ ನೆಟ್ಟು ರೊಕ್ಕದ ಬೆಳೆಯಾಗಿ ಬೆಳೆಸುವುದಕ್ಕೆ ತೊಡಗಿದ್ದಾರೆ. ಪುಷ್ಯ –ಮಾಘ ಮಾಸಗಳಲ್ಲಿ ಗೇರುಹೂ ಬಿಡುತ್ತದೆ. ಫಲದ ಒಂದು ತುದಿಯಲ್ಲಿ ಬೀಜವು ಅಂಟಿಕೊಂಡಿರುತ್ತದೆ. ಗೇರು ಹಣ್ಣು ತಿನ್ನಲು ಸವಿಯಾಗಿರುತ್ತದೆ. ಗೇರು ಬೀಜದ ಹೊರ ಮೈ ಗಟ್ಟಿಯಾದ ಚಿಪ್ಪಿನಿಂದ ನಿರ್ಮಿತವಾಗಿದ್ದು, ಒಳಗೆ ರುಚಿಕರವಾದ ದ್ವಿದಳ ತಿರುಳು ಇರುತ್ತದೆ ಇದೇ ಬೆಲೆಯುಳ್ಳ ಸುಪ್ರಸಿದ್ಧ ಗೇರು ಪಪ್ಪು (ಗೋಡಂಬಿ, ಕಾಜು). ವಿಶ್ವ ವಿಖ್ಯಾತವಾದ ಗೋವಾ- ಮದ್ಯ ಫೇನಿಯನ್ನು ಗೇರು ಹಣ್ಣಿನಿಂದ ತಯಾರಿಸುತ್ತಾರೆ. ಗೇರು ಮರದಿಂದ ಸ್ರವಿಸುವ ಅಂಟು ತುಸು ಮಟ್ಟಿಗೆ ಸ್ಪರ್ಶ ವಿಷವಾಗಿದ್ದರೂ ಉತ್ತಮವಾದ ಗೋಂದು. ಗೇರು ಬೀಜದ ಸಿಪ್ಪೆಯ ಎಣ್ಣೆಯನ್ನು ನಾನಾ ಉದ್ಯಮಗಳಲ್ಲಿ ಉಪಯೋಗಿಸುತ್ತಾರೆ;

ಮತ್ತು ಮರಮಟ್ಟುಗಳ ಬಾಳಿಕೆ ಹೆಚ್ಚಿಸಲು ವಾರ್ನಿಷ್‌ನಂತೆ ಬಳಿಯುವುದುಂಟು. ಈ ಎಣ್ಣೆಯು ಸ್ಪರ್ಶ ಹಾಗೂ ಸೇವನಾ ವಿಷ.

ಕೇರು ಮರ ಕಾಡುಗಳಲ್ಲಿಯೂ ಬೆಳೆಯುವ ದೊಡ್ಡ ವೃಕ್ಷ. ಇದರ ತೊಗಟೆಯನ್ನು ಗಾಯ ಮಾಡಿದಾಗ ಒಸರುವ ದ್ರವವು ತೀಕ್ಷ್ಣವಾದ ಸ್ಪರ್ಷ ವಿಷ. ಕೇರು ಬೀಜ ತಿರುಳನ್ನು ಗಾಳಿಗೊಡ್ಡಿದಾಗ ಕಪ್ಪಾಗುತ್ತದೆ. ತೈಲ ಭರಿತವಾದ ಈ ಬೀಜಗಳನ್ನು ಬಟ್ಟೆಗೆ ಗುರುತು ಹಾಕಲು ಅಗಸರು ತಲೆ ತಲಾಂತರದಿಂದ ಉಪಯೋಗಿಸುತ್ತಾರೆ. ಹಳ್ಳಿಗಳಲ್ಲಿ ಅನೇಕ ರೋಗ ಚಿಕಿತ್ಸಾ ವಿಧಾನಗಳೆಂದು ಹೊಟ್ಟೆ, ಎದೆ, ದವಡೆ, ಭುಜ, ತೊಡೆ ಮೊದಲಾದ ನಾನಾ ಅವಯವಗಳ ಮೇಲೆ ಬರೆ ಎಳೆಯಲು (ಸುಡಿಸುವುದು ಎಂದು ಹೇಳುತ್ತಾರೆ) ಕೇರು ಬೀಜವನ್ನು ಉಪಯೋಗಿಸುತ್ತಾರೆ. ಆಯುರ್ವೇದ ವೈದ್ಯರು ಕೇರುಬೀಜವನ್ನು ಶುದ್ದ ಮಾಡಿ ನಾನಾ ರೋಗಗಳ ಚಿಕಿತ್ಸೆಗಳಿಗಾಗಿ ಬಳಸುತ್ತಾರೆ. ಕೇರು ಸ್ಪರ್ಷ ಹಾಗೂ ಸೇವಾನ ವಿಷ.

**ಪ್ರಾಣಾಪಾಯದ ಪ್ರಮಾಣ (ಸೇವನೆ): 1.50 ಮಿಲಿ ಗ್ರಾಂ. (ಅಶುದ್ದ)**

**ವಿಷ ಪ್ರಯೋಗ ಲಕ್ಷಣಗಳು :**

ಕೇರುವಿಷವನ್ನು ಸೇವಿಸಿದ ರೋಗಿಯು ಗಂಟಲಿನಲ್ಲಿ ತುರಿಕೆ, ನವೆ ಕಾಣಿಸಿಕೊಂಡು ಗುಳ್ಳೆಗಳು ಏಳುವವು. ಅವನ ನಾಲಗೆ, ಬಾಯಿ, ದವಡೆ ಮತ್ತು ಹಲ್ಲಿನ ಸಂದಿಗಳಲ್ಲಿಯೂ, ವಸಡಿನಲ್ಲಿಯೂ ಉರಿ, ನೋವು ಮತ್ತು ಹುಣ್ಣುಗಳು ಉಂಟಾಗುವುವು. ಮೈ ಕೈ ನವೆ, ತುರಿಕೆ, ಕರಳು ಉರಿ ಮೊದಲಾದ ಉಪದ್ರವಗಳು ಉಂಟಾಗುತ್ತದೆ. ರೋಗಿಯ ಮನಸ್ಸಿನಲ್ಲಿ ಸಾವಿನ ಭಯ ಕಾಣಿಸಿಕೊಂಡು ಹೆಚ್ಚಿನ ಮಾನಸಿಕ ವೇದನೆಯಿಂದ ಅವನು ನರಳುತ್ತಾನೆ. ಅವನ ಕಣ್ಣುಬೊಂಬೆ ಅರಳುವುದು; ಮುಖವು ನೀಲೀ ಛಾಯೆಗೆ ತಿರುಗುವುದು; ರಕ್ತದ ಒತ್ತಡ ಇಳಿಯುವುದು. ಕ್ರಮೇಣ ಬಡಬಡಿಕೆ, ದೀರ್ಘಸುಪ್ತಿ ಮೊದಲಾದ ತೊಂದರೆಗಳು ಕಾಣಿಸಿಕೊಂಡು ಸಾವು ಸಂಭವಿಸಬಹುದು.

ಗೇರುಬೀಜದ ಕವಚದಿಂದ ಹೊರಡುವ ಎಣ್ಣೆಯೂ ಗಿಡದ ಮೇಣವು ಸ್ಪರ್ಷ ವಿಷವಾಗಿರುವುದರಿಂದ ಮೈ ಕೈಗಳಿಗೆ ಸ್ಪರ್ಶವಾದರೆ ಗಂದೆ, ನೀರು ಸೋರುವ ಸುಟ್ಟ ವ್ರಣ ಮೊದಲಾದ ಉಪದ್ರವಗಳು ಕಾಣಿಸುತ್ತವೆ. ಕೇರು ಬೀಜದಿಮದ ತರಡಿಗೆ ಬರೆ ಹಾಕಿದರೆ ರೋಗಿಯು ಕ್ಷಿಪ್ರ ಮರಣಕ್ಕೆ ತುತ್ತಾಗುವ ಸಂಭವವಿದೆ. ಈ ಬಗೆಯ ವಿಷ ಪ್ರಯೋಗಕ್ಕೆ ತುತ್ತಾದ ರೋಗಿಯಲ್ಲಿ ಜ್ವರ, ಮೂತ್ರ ವಿಸರ್ಜನೆಯ ಕಾಲದಲ್ಲಿ ವೇಬನೆ ಮೊದಲಾದ ಉಪದ್ರವಗಳು ಕಾಣಿಸುವವು.

**ಚಿಕಿತ್ಸೆ ಮತ್ತು ಉಪಚಾರ**

ಕೇರು – ವಿಷ ಪ್ರಾಶನವಾದ ರೋಗಿಗೆ ಬೆಣ್ಣೆ, ತೈಲ, ಅಥವಾ ತುಪ್ಪ ಇವುಗಳಲ್ಲಿ ಒಂದನ್ನು ಕುಡಿಸಬೇಕು; ಹಾಗೂ ವೇದನಾಶಾಮಕ ಚಿಕಿತ್ಸೆ ಮಾಡಬೇಕು. ಹೊಟ್ಟೆ ತೊಳೆಯುವುದೂ, ವಾಂತಿ ಮಾಡಿಸುವುದೂ ಮೊದಲಾದ ಸಾಂಪ್ರದಾಯಿಕ ಚಿಕಿತ್ಸೆಗಳನ್ನು ನಡೆಸಬೇಕು.

ಆಯುರ್ವೇದ ಗ್ರಂಥಗಳಲ್ಲಿ ಈ ಕೆಳಗಿನ ಚಿಕಿತ್ಸೆ ಉಲ್ಲೇಖಿತವಾಗಿದೆ. 1) ಬೆಣ್ಣೆ ಮತ್ತು ಎಳ್ಳು ಅರೆದು ಸೇವಿಸುವುದು 2) ವಿಭೀತಕಿ ವೃಕ್ಷದ ಬೇರಿನ ಪುಡಿಯನ್ನು ಬೆಣ್ಣೆಯಲ್ಲಿ ಕಲಸಿ ಸೇವಿಸುವುದು 3) ಯಾಲಕ್ಕಿಯನ್ನು ಮಜ್ಜಿಗೆಯಲ್ಲಿ ಅರೆದು ಕುಡಿಸುವುದು 4) ಹಿಪ್ಪಲಿ ಚೂರ್ಣವನ್ನು ಕಲಗಜ್ಜಿನಲದಲಿ ಕಲಸಿ ಸೇವಿಸುವುದು (ಇವುಗಳ ಪೈಕಿ ಯಾವುದಾದರೂ ಒಂದು). ಮೈ ಉರಿಯ ಶಮನಕ್ಕಾಗಿ ತಾರೆ ಕಾಯಿಯ ತಿರುಳನ್ನು ಅಥವಾ ಒಣ ಕೊಬ್ಬರಿಯನ್ನು ನೀರಿನಲ್ಲಿ ಅರೆದು ಲೇಪಿಸಬೇಕು. ಸ್ಪರ್ಶ ವಿಷಕ್ಕೆ ಕೊಬ್ಬರಿ ಎಣ್ಣೆ ಸವರುವುದು. ತೆಂಗಿನಕಾಯಿಯ ತುರಿಯನ್ನು ರಸ ತೆಗೆದು ಲೇಪಿಸುವುದೂ, ಆಕಳ ಹಾಲು ಇಲ್ಲವೆ ಹುಣಸೆ ಎಲೆ ರಸ ಕುಡಿಸುವುದೂ ಉಪಯುಕ್ತ ಚಿಕಿತ್ಸೆಗಳಾಗಿವೆ.

## ಕೋಪತಾಪಗಳ ಪರಿಹಾರಿ ಮಿತಿಮೀರಿ ತಿಂದರೆ ತಪ್ಪದು ಅಪಾಯ ಭಾರಿ : ಸರ್ಪಗಂಧಿ



[ಇಂಗ್ಲೀಷ್: Rauvolfia ಸಸ್ಯ ಶಾಸ್ತ್ರದ ಹೆಸರು: Rauvol Fiaserpentina ಕನ್ನಡ ಗರುಡುಪಾತಾಳ, ಪಾತಾಳ ಗರುಡ, ಸರ್ಪಗಂಧಿ, ಸಂಸ್ಕೃತ : ಸರ್ಪಗಂಧಾ, ಚಂದ್ರಿಕಾ, ಸರ್ಪಾರೀ, ಪಾತಾಳಭೇದಿ, ತಮಿಳು : ಕೀರಿಪೂಣ್ಣು. ತೆಲಗು : ಸರ್ಪಾರಿ ಬೆಟ್ಟು, ಮಲಯಾಳು: ಅವಿಲ್‌ಪುರಿ, ಹಿಂದಿ: ಚೋಟಾಚಾಂದ್]

ಬಹು ಪ್ರಾಚೀನ ಕಾಲದಿಂದಲೂ ಹಾವು ಕಡಿದ ವಿಷ ಚಿಕಿತ್ಸೆಗೂ, ಉನ್ಮಾದ, ಕುಷ್ಟ ಮೊದಲಾದ ರೋಗೋಪಚಾರಕ್ಕೂ ಬಳಸುತ್ತಿದ್ದ ಸರ್ಪಗಂಧಿ ಬೇರನ್ನು

ಆಧುನಿಕ ಸಂಶೋಧನೆಯ ಮೂಲಕ ಆಧುನಿಕ ವೈದ್ಯರು ರಕ್ತದ ಅಧಿಕ ಒತ್ತಡದ ಚಿಕಿತ್ಸೆಗೆ ದಿವ್ಯೌಷಧಿ ಎಂದು ತೀರ್ಮಾನಿಸಿ ಈ ವನೌಷಧಿಗೆ ಪುನರ್ಜನ್ಮ ನೀಡಿದಂತಾಗಿದೆ. ಹಿಮಾಲಯದ ತಪ್ಪಲಿನಲ್ಲಿಯೂ ಸಹ್ಯಾದ್ರಿ ಶ್ರೇಣಿಗಳಲ್ಲಿಯೂ ಹೆಚ್ಚಾಗಿ ಬೆಳೆಯುವ ಈ ಗಿಡಮೂಲಿಕೆಯನ್ನು ಈಗ ವೈದ್ಯಕೀಯ ಬಳಕೆಗಾಗಿಯೂ ಪರದೇಶಕ್ಕೆ ರಫ್ತು ಮಾಡುವುದಕ್ಕಾಗಿಯೂ ವಿಶಾಲವಾದ ತೋಡಗಳಲ್ಲಿ ನೆಟ್ಟು ಬೆಳೆಸುವ ಕೃಷಿ ಪ್ರಾರಂಭವಾಗಿದೆ 30–75 ಸೆಂ.ಮೀ. ಎತ್ತರಕ್ಕೆ ಬೆಳೆಯುವ ಈ ಗಿಡದಲ್ಲಿ ಬಿಳಿ ಅಥವಾ ನಸು ಕೆಂಬಣ್ಣದ ಹೂಗಳೂ ನೇರಳೆ- ಕಪ್ಪು ಬಣ್ಣದ ಫಲಗಳೂ ಇರುತ್ತವೆ. ಗಿಡದ ಬೇರು ಮತ್ತು ತೊಗಟೆಯನ್ನು ಹೆಚ್ಚಾಗಿ ಔಷಧಕ್ಕೆ ಉಪಯೋಗಿಸುತ್ತಾರೆ. ಪ್ರಮಾಣತಪ್ಪಿ ಸೇವಿಸಿದರೆ ತೀವ್ರ ದುಷ್ಪರಿಣಾಮಗಳು ಉಂಟಾಗಬಹುದು.

**ವಿಷ ಪ್ರಯೋಗದ ಲಕ್ಷಣ ಮತ್ತು ಚಿಕಿತ್ಸೆ:**

ಅಪಾಯದ ಪ್ರಮಾಣದಲ್ಲಿ ಸರ್ಪಗಂಧಿ ಔಷಧಿಯನ್ನು ಸೇವಿಸಿದ ರೋಗಿಯ ರಕ್ತದ ಒತ್ತಡವು ತೀರ ಕೆಳಮಟ್ಟಕ್ಕೆ ಇಳಿಯುವುದು; ಅವನಲ್ಲಿ ದೇಹಾಯಾಸ, ಸಂಕಟ, ತೂಕಡಿಕೆ, ಅಶಾಂತಿ ಮೊದಲಾದ ಉಪದ್ರವಗಳು ಕಾಣಿಸುವವಲ್ಲದೆ ಅಂತಹ ರೋಗಿಗೆ ನಿದ್ರೆಯಲ್ಲಿಟ್ಟು ಕನಸುಗಳು ಬೀಳುತ್ತವೆ. ನೀರಡಿಕೆ, ಭೇದಿ, ನಡುಕ ಮಾಂಸಖಂಡಗಳ ಸೆಳೆತ ಮತ್ತು ಉಸಿರಾಟಕ್ಕೆ ತೊಂದರೆ ಕಾಣಿಸುತ್ತವೆ. ಇಂತಹ ರೋಗಿಯನ್ನು ತಕ್ಷಣ ವಿಷ ಸೇವನೆಯಿಂದ ಬಿಡಿಸಬೇಕು. ಹೊಟ್ಟೆ ತೊಳೆಯುವುದು, ವಾಂತಿಮಾಡಿಸುವುದು ಮೊದಲಾದ ಸಾಂಪ್ರದಾಯಿಕ ಚಿಕಿತ್ಸೆಗಳನ್ನು ನಡೆಸಬೇಕು; ಮತ್ತು ಉತ್ತೇಜಕ ಔಷಧ- ಪಾನೀಯಗಳನ್ನು ನೀಡಬೇಕು.

## ಬಣ್ಣದ ಹಣ್ಣಿನ ಕುರುಚಲು ಗಿಡ
## ಬೇರಲಿ ಹಣ್ಣಲಿ ತುಂಬಿದೆ ನಂಜಿನ ಮೂಲ : ಚಿತ್ರ (ಚಿತ್ರಮೂಲ)

[ಇಂಗ್ಲೀಷ್: Lead wort. ಸಸ್ಯಶಾಸ್ತ್ರದ ಹೆಸರು: Plumbago rosea- plumbago zeylancia ಕನ್ನಡ : ಚಿತ್ರ ಮೂಲ, ಚಿತ್ರಕ, ಸಂಸ್ಕೃತ : ಚಿತ್ರಕ, ಚಿತ್ರಮೂಲ ತುಳು : ಚಿತ್ರಮೂಲ, ತಮಿಳು: ಚಿತ್ತರಮೂಲಂ, ಆದಿಕನಾರಿ. ತೆಲಗು : ಚಿತ್ರ ಮೂಲಮು ಹಿಂದಿ : ಲಾಲ್ ಚಿತ್ರಾ]

ವಿಷಪೂರ್ಣವಾದ ಬೇರುಗಳಿರುವ ಚಿತ್ರಮೂಲವು ಸಣ್ಣ ಗಿಡಮೂಲಿಕೆಯಾಗಿದ್ದು ಇದರಲ್ಲಿ ಕೆಂಪು ಹೂ ಬಿಡುವ ಚಿತ್ರ ಮೂಲ ಮತ್ತು

ಬಿಳಿ ಹೂ ಬಿಡುವ ಚಿತ್ರ ಮೂಲ ಎಂಬ ಎರಡು ಉಪಜಾತಿಗಳಿವೆ. ಇವುಗಳಲ್ಲಿ ಕೆಂಪು ಚಿತ್ರಮೂಲವು ಹೆಚ್ಚು ತೀಕ್ಷ್ಣ ವಿಷಯುಕ್ತವಾಗಿದೆ. ಚಿತ್ರಮೂಲದ ಬೇರಿನಲ್ಲಿ ಪ್ಲಂಬಾಗಿನ್ ಎಂಬ ವಿಷ ಸತ್ವವಿದೆ. ಹಳ್ಳಿಯ ಜನರು ಇವುಗಳನ್ನು ವಿವಿಧ ರೋಗಗಳ ಚಿಕಿತ್ಸೆಗಾಗಿ ಬಳಸುತ್ತಾರೆ. ಆಯುರ್ವೆದ ಶಾಸ್ತ್ರದಲ್ಲಿ ಗರ್ಭಪಾತ ಮಾಡಿಸುವ ಗುಣವಿದೆ ಎಂದು ಚಿತ್ರಮೂಲವು ವರ್ಣಿತವಾಗಿದೆ. ಚಿತ್ರಕವು ಸ್ಪರ್ಶ ಹಾಗೂ ಸೇವಾನ ವಿಷ.

**ವಿಷ ಪ್ರಯೋಗದ ಲಕ್ಷಣಗಳು ಮತ್ತು ಚಿಕಿತ್ಸೆ :**

ಚಿತ್ರಕದ ಬೇರನ್ನು ಸೇವಿಸಿದ ರೋಗಿಯಲ್ಲಿ ಬಾಯಾರಿಕೆ, ಹೊಟ್ಟೆ ನೋವು, ವಾಕರಿಕೆ, ವಾಂತಿ ಮೊದಲಾದ ಉಪದ್ರವಗಳು ಉಂಟಾಗುತ್ತವೆ. ವಾಂತಿ ಮಾಡಿಸುವುದು, ಹೊಟ್ಟೆ ತೊಳೆಯುವುದು ಮೊದಲಾದ ಸಾಂಪ್ರದಾಯಿಕ ಚಿಕಿತ್ಸೆಗಳನ್ನು ಚಿಕಿತ್ಸೆಗಳನ್ನು ನಡೆಸುವುದಲ್ಲದೆ ತತ್ತಿಯ ಲೋಳೆ ಮತ್ತು ಹಾಲು ಕುಡಿಸಬೇಕು. ಇತರ ಉಪದ್ರವಗಳಿಗೆ ಸೂಕ್ತ ಚಿಕಿತ್ಸೆ ನಡೆಸಬೇಕು. ಇಂತಹ ರೋಗಗಳಿಗೆ ಎಳ್ಳು ಮತ್ತು ಬೆಲ್ಲ ಅರೆದು ತಿನ್ನಿಸಬೇಕು ಎಂಬುದಾಗಿ ಆಯುರ್ವೇದ ವೈದ್ಯರು ಹೇಳುತ್ತಾರೆ.

ಚಿತ್ರಕ ವಿಷ ಸ್ಪರ್ಶವಾದ ರೋಗಿಗೆ ತುರಿಕೆ, ನವೆ, ಮೊದಲಾದ ಉಪದ್ರವಗಳು ಉಂಟಾಗುತ್ತವೆ. ಆ ಭಾಗದ ಚರ್ಮವು ಕೆಂಪಾಗುತ್ತದೆ; ಮತ್ತು ಗಂದೆಗಳು ಏಳುತ್ತವೆ. ತಕ್ಷಣ ತಣ್ಣೀರಿನಿಂದ ಆ ಭಾಗವನ್ನು ತೊಳೆದು ತುಪ್ಪ ಸವರಬೇಕು. ಚಿತ್ರ ಮೂಲದ ಚೂರ್ಣವನ್ನು ಅರಳೆಯ ಬತ್ತಿಯಲ್ಲಿ ಸೇರಿಸಿ ಗರ್ಭಕೋಶದ ಬಾಯಿಗೆ ಇರಿಸಿ ಗರ್ಭಪಾತ ಮಾಡಲು ಯತ್ನಿಸುವ ಕ್ರಮವಿರುತ್ತದೆ. ಇದು ತೀರ ಅಪಾಯಕಾರಿಯಾಗಿದ್ದು, ರೋಗಿಯು ಜನನೇಂದ್ರಿಯ ಹಾಗೂ ಗರ್ಭಕೋಶದ ವ್ರಣ, ವೇದನೆ, ರಕ್ತಸ್ರಾವ ಮೊದಲಾದ ಉಪದ್ರವಗಳಿಂದ ನರಳಿ ಪ್ರಾಣಾಪಾಯಕ್ಕೆ ತುತ್ತಾಗಬಹುದು.

## ಇಂದ್ರವಾರುಣಿ (ಹಾವುಮೆಕ್ಕೆ)

ಇಂದ್ರವಾರುಣಿ ಹಣ್ಣಿನ ತಿರುಳು ತೀರಾ ಕಹಿಯಾಗಿದ್ದು ವಿಷಮಯವಾಗಿರುತ್ತದೆ. ಇದನ್ನು ಸೇವಿಸಿದ ರೋಗಿಯು ಹೊಟ್ಟೆನೋವು, ಅರಿಸಿನ ಬಣ್ಣದ ವಾಂತಿ, ಭೇದಿ ಮೊದಲಾದ ಉಪದ್ರವಗಳಿಂದ ನರಳುತ್ತಾನೆ. ಪ್ರಾಣಾಪಾಯದ ಪ್ರಮಾಣ (ಸೇವನೆ) 0.25 ರಿಂದ 0.5 ಗ್ರಾಂ. ಚಿಕಿತ್ಸೆ: ವಮನ, ವಿರೇಚನ ಮತ್ತು ಹೊಟ್ಟೆ ತೊಳೆಯುವುದು ಇತ್ಯಾದಿ.

## ಸೂರಣ ಮತ್ತು ಕೇಸುವು



ಇದನ್ನು ರುಚಿಕರ ವ್ಯಂಜನವಾಗಿ ಉಪಯೋಗಿಸುತ್ತಾರೆ. ಕೆಸುವಿನ ಎಲೆ ಹಾಗೂ ಸುವರ್ಣಗಡ್ಡೆಯಿಂದ ಪಲ್ಯ, ಹುಳಿ ಇತ್ಯಾದಿ ಅಡಿಗೆ ತಯಾರಿಸುತ್ತಾರೆ. ಬೇಯಿಸುವುದರಲ್ಲಿ ಹೆಚ್ಚು ಕಡಿಮೆಯಾದರೆ ಅಥವಾ ಒಗದಿರುವವರಲ್ಲಿ ಮೈ ಕೈ ತುರಿಕೆ, ಗಂಟಲು ಕೆರೆತ, ನಾಲಗೆ ದಪ್ಪವಾಗುವುದು, ಮೈಮೇಲೆ ಗಂದೆಗಳು ಏಳುವುದು ಮೊದಲಾದ ಉಪದ್ರವಗಳು ಕಾಣಿಸುತ್ತವೆ. ಇಂತಹ ರೋಗಿಗೆ ಹುಣಸೆ ಹಣ್ಣನ್ನಾಗಲೀ ಕೊಬ್ಬರಿ ಎಣ್ಣೆಯನ್ನಾಗಲೀ ಕುಡಿಸಬೇಕು.

## ಕಾಡುಹೊಗೆಸೊಪ್ಪು

ಹೆಚ್ಚಾಗಿ ಪಶ್ಚಿಮಘಟ್ಟದ ಕಾಡುಗಳಲ್ಲಿ ಬೆಳೆಯುವ 2–2.5 ಮೀಟರ್ ಎತ್ತರದ ಕಾಡು ಹೊಗೆಸೊಪ್ಪು ಗಿಡವನ್ನು ಮುಟ್ಟಿದರೆ, ಮೂಸಿದರೆ ಹಾಗೂ ಸೇವಿಸಿದರೆ ದುಷ್ಪರಿಣಾಮಗಳು ಕಾಣಿಸಿಕೊಳ್ಳುತ್ತವೆ. ಮಲೆನಾಡು ಹಾಗೂ ಕಾಫೀ ತೋಟಗಳಲ್ಲಿ ಕೆಲಸ ಮಾಡುವ ಕೂಲಿಯಾಳುಗಳು ಹಾಗೂ ಇತರರು ರಕ್ತಹೀರುವ ಜಿಗಣೆಗಳ ಬಾಧೆಯನ್ನು ತಪ್ಪಿಸಲು ಕಾಡುಹೊಗೆಸೊಪ್ಪಿನ ಎಲೆಗಳನ್ನು ಉಪಯೋಗಿಸುತ್ತಾರೆ. ಅತ್ಯಂತ ಜಾಗ್ರತೆಯಿಂದ ಬಳಸಿದರೆ ಪ್ರಮಾದವನ್ನು ತಪ್ಪಿಸಬಹುದು.

## ಅಂಟುವಾಳ (ನೊರೆಕ್ಕಾಯಿ)

ಹಳ್ಳಿಗಳಲ್ಲಿ ಈಗಲೂ ಬಟ್ಟೆ ಒಗೆಯಲು ಹಾಗೂ ಮಹಿಳೆಯರು ತಲೆಕೂದಲನ್ನು ತೊಳೆಯಲು ಬಳಸುವ ಅಂಟುವಾಳವು ಸುಲಭದಲ್ಲಿ ದೊರಕುವುದರಿಮದ ಅವರು ಉಪಯೋಗಿಸುತ್ತಾರೆ. ಇದರ ನೊರೆ ಕಣ್ಣಿಗೆ ತಗುಲಿದರೆ ಕಣ್ಣು ಕೆಂಪಾಗುವುದು, ನೋವು, ಬಾವು ಮೊದಲಾದ ತೊಂದರೆಗಳುಂಟಾಗುತ್ತದೆ. ಮಕ್ಕಳ ಕಣ್ಣಿಗೆ ತಗುಲಿದರೆ ಇನ್ನಷ್ಟು ಹೆಚ್ಚು ಅಪಾಯಕಾರಿ. ಅಂತಹ ಕಣ್ಣನ್ನು ತಣ್ಣೀರು ಸಿಂಚನೆ ಮೂಲಕ ತೊಳೆದು ನಂತರ ವೇದನಾಶಕ ಕಣ್ಣಿನ ಮುಲಾಮು ಅಥವಾ ಹನಿಗಳನ್ನು ಹಾಕಬೇಕು.

ಒಂದು ದಿನದ ಮಟ್ಟಿಗೆ ಬಿಸಿಲಿಗೆ ಬರಿಗಣ್ಣಿನಲ್ಲಿ ತಿರುಗಾಡುವುದನ್ನು ನಿಲ್ಲಿಸಿದರೆ ಉಪಯಕ್ತ.

## ಕಳ್ಳಿ



ಬೇಲಿ ಕಳ್ಳಿ, ಕೋಲು ಕಳ್ಳಿ, ಗೂಟ ಕಳ್ಳಿ ಹೀಗೆ ನಾಲ್ಕಾರು ಜಾತಿಯ ಕಳ್ಳಿಗಳಿವೆ. ಕಳ್ಳಿಯು ಹೆಚ್ಚಾಗಿ ಬೇಲಿಗಳ ನಡುವೆ ನೆಟ್ಟು ಬೆಳೆಸುತ್ತಾರೆ. ಇದರ ಎಲೆಗಳು ದಪ್ಪ. ಕೆಲವು ಮುಳ್ಳು, ಎಲೆ ಹಾಗೂ ಸಸ್ಯದ ಯಾವುದೇ ಭಾಗವನ್ನು ಗೀರಿದರೂ ಬಿಳಿಯಾದ ಹಾಲು ತೊಟ್ಟಿಕ್ಕುತ್ತದೆ. ಇದು ಮುಟ್ಟಿದರೆ, ಕುಡಿದರೆ ತೀರಾ ಅಪಾಯಕಾರಿ. ಕಣ್ಣಿಗೆ ಕೂಡಾ ಅಪಾಯಕಾರಿ.

## ಸುವರ್ಣಗಡ್ಡೆ ಇತ್ಯಾದಿ

ಸುವರ್ಣಗೆಡ್ಡೆ, ಕೆಸವು, ಕಾಡುಕೆಸವು, ಮೊದಲಾದವುಗಳ ಎಲೆ, ಗೆಡ್ಡೆ ಮೊದಲಾದವನ್ನು ಹಸಿಯಾಗಿ ಬಳಸಿದರೆ ಬಾಯಿ ತುರಿಕೆ, ಹೊಟ್ಟೆ ನೋವು, ವಾಂತಿ ಮೊದಲಾದ ತೊಂದರೆಗಳು ಉಂಟಾಗುತ್ತವೆ. ಈ ಗೆಡ್ಡೆ ಗೆಣಸುಗಳನ್ನು ಕರಿದು ಶುದ್ಧೀಕರಿಸಿದಾಗ ಮಾತ್ರ ತಿನ್ನಲು ಯೋಗ್ಯ ಎಂಬುದನ್ನು ಗಮನದಲ್ಲಿ ಇಟ್ಟುಕೊಳ್ಳಬೇಕು.





## ಅಧ್ಯಾಯ– V

# ಆಹಾರ ವಿಷ

ಹಳಸಿದ ಅನ್ನವನ್ನು ಉಂಡರೆ ವಾಂತಿ, ಭೇದಿಗಳಾಗುವ ಸಂಗತಿ ಎಲ್ಲರಿಗೂ ತಿಳಿದಿದೆ. ಆದರೆ ಕೆಲವು ಸಲ ಕೆಟ್ಟು ಹೋದ ಯಾವ ಸೂಚನೆಯೂ ಹೊರ ನೋಟಕ್ಕೆ ಕಾಣಿಸದೇ ದುರ್ವಾಸನೆಯಾಗಲಿ ರುಚಿ ಕೆಟ್ಟ ಲಕ್ಷಣವಾಗಲಿ ಗೋಚರಿಸದೆ ಇರುವ ಕೆಲವೊಂದು ಆಹಾರ ಪದಾರ್ಥಗಳನ್ನು– ತಿಂಡಿ ತಿನಿಸುಗಳನ್ನೂ ಸೇವಿಸಿ, ಪ್ರಾಣಾಂತಿಕ ಅಪಾಯಕ್ಕೆ ತುತ್ತಾಗುವುದುಂಟು. ಇದನ್ನು ವಿಷಮ ಆಹಾರ ಅಥವಾ ವಿಷ ಆಹಾರ (ಆಹಾರ ವಿಷ) (Food Poisoning) ಎನ್ನುತ್ತಾರೆ.

ಹಿಮೋಲೈಟಿಕ್ ಸ್ಟೆಪ್ಟೋಕೋಕ್ಕೈ ಮತ್ತು ಸ್ಟೆಪಿಲೋ ಕೋಕ್ಕೈ ಎಂಬ ಸೂಕ್ಷ್ಮ ಅಣುರೂಪದ ಅಗೋಚರ ಶತ್ರುಗಳು ಆಹಾರದಲ್ಲಿ ಉದ್ಭವಿಸಿದಾಗ ಆ ಆಹಾರವು ವಿಷವಾಗಿ ಪರಿಣಿಸಿ ಸೇವಿಸಿದ ಇಡೀ ಮನೆಯವರು ಅಥವಾ ಭೋಜನ ಕೂಟಕ್ಕೆ ಬಂದ ಅತಿಥಿ ವೃಂದದವರು ಸಾರಾಸಗಟು ನರಳುತ್ತಾರೆ. ಕೆಲವು ಸಲ ಆಹಾರವನ್ನು ಎಷ್ಟೇ ಸರಿಯಾಗಿ ಬೇಯಿಸಿ ಸಿದ್ಧಪರಿಸಿದರೂ ಸಹ ಈ ಚುರುಕಾದ ಸೂಕ್ಷ್ಮ ವಿಷ ಜೀವಿಗಳು ಚಟುವಟಿಕೆಯಿಂದ ಉಳಿದು ಬಿಡುತ್ತವೆ! ಮುಖ್ಯವಾಗಿ ತತ್ತಿ, ಹಾಲು, ಹಣ್ಣು ಹಂಪಲು ಅದರಲ್ಲಿಯೂ ಡಬ್ಬಿಯಲ್ಲಿ ಶೇಖರಿಸಿ ಇಟ್ಟ ಹಣ್ಣುಗಳು, ಗಿಣ್ಣು, ಆಯಿಸ್‌ಕ್ರೀಂ ಮತ್ತು ಮಾಂಸಗಳಲ್ಲಿ ಈ ಬಗೆಯ ವಿಷ ಅಣುಗಳು ಹೆಚ್ಚಾಗಿ ಕಾಣಿಸುತ್ತವೆ.

**ವಿಷ ಪ್ರಯೋಗದ ಲಕ್ಷ್ಣಗಳು :**

ಈ ಬಗೆಯ ಅಗೋಚರ ವಿಷಭರತ ಆಹಾರವನ್ನು ಸೇವಿಸಿದ ರೋಗಿಯಲ್ಲಿ ಊಟವಾದ ಒಂದೆರಡು ತಾಸುಗಳಲ್ಲಿ (ಕೆಲವೊಮ್ಮೆ ಆರೆಂಟು ತಾಸುಗಳಷ್ಟು ವಿಳಂಬವಾಗಿ) ಉಪದ್ರವಗಳು ಕಾಣಿಸಿಕೊಳ್ಳುತ್ತವೆ. ತಲೆನೋವು, ತಲೆ ತಿರುಗುವುದು, ಮತ್ತು ಅಸಾಧ್ಯ ನೀರಡಿಕೆ ರೋಗಿಯಲ್ಲಿ ಕಾಣಿಸುವ ಪ್ರಾರಂಭಿಕ ಲಕ್ಷಣಗಳು. ಹೊಟ್ಟೆ ನುಲಿತ, ವಾಂತಿ ಭೇದಿ ಮತ್ತು ಮೈ ಚಳಕು, ಜ್ವರ, ಹಾಗೂ ಅದಿರು

ಅರಳುತ್ತದೆ; ಚರ್ಮವು ತಣ್ಣಗೆ ಜಿಡ್ಡಾಗಿರುತ್ತದೆ. ನಿತ್ರಾಣ, ಕೈಕಾಲು ಸೆಳೆತ, ಆಘಾತ ಮತ್ತು ದೇಹದಲ್ಲಿನ ದ್ರವಾಂಶವು ಕಮ್ಮಿಯಾಗಿ ಮಂದವಾದ ನಾಡಿ, ಹೃದಯ ವಿಕಾರ ಮೊದಲಾದ ಉಪದ್ರವಗಳು ಕಾಣಿಸಿಕೊಳ್ಳುವವು. ಸಾವು ಕೂಡಾ ಸಂಭವಿಸಬಹುದು.

**ಚಿಕಿತ್ಸೆ ಮತ್ತು ಉಪಚಾರ :**

ಹೊಟ್ಟೆ ತೊಳೆಯುವುದು, ವಾಂತಿ ಮಾಡಿಸುವುದು, ಭೇದಿ ಮಾಡಿಸುವುದು ಮೊದಲಾದ ಸಾಂಪ್ರದಾಯಿಕ ಚಿಕಿತ್ಸೆಗಳೂ, ಗ್ಲೂಕೋಸ್ ಉಪ್ಪು ನೀರುಗಳ ಪೂರಣ ಹಾಗೂ ಉತ್ತೇಜಕ ಉಪಚಾರಗಳು ಹಿತಕರವಾಗಿರುತ್ತವೆ. ಕೋಡಿನ್, ಎಟ್ರೋಪಿನ್ ಔಷಧಿಗಳು ಹೆಚ್ಚಿನ ಪರಿಣಾಮ ಬೀರುತ್ತವೆ. ವಿಶ್ರಾಂತಿ, ದ್ರವ ಆಹಾರ ಮತ್ತು ಮನೋನೆಮ್ಮದಿಯ ವಾತಾವರಣವು ಅಗತ್ಯ.

**ಟಿಪ್ಪಣಿ :**

ಒಗ್ಗದ ಆಹಾರ ಸೇವನೆಯಿಂದಲೂ ಆಹಾರ ವಿಷ ಲಕ್ಷಣಗಳು ಕಾಣಿಸಬಹುದು. ಅಂತಹ ಸಂದರ್ಭದಲ್ಲಿ ರೋಗಿಗೆ ಒಗ್ಗದಿರುವ ಆಹಾರವನ್ನು ವರ್ಜಿಸಬೇಕು.

## ಡಬ್ಬಿ ಶೇಖರಣೆಯ ಆಹಾರ ವಿಷ

ಹಸಿರು ತರಕಾರಿಗಳನ್ನು, ಮಾಗಿದ ಹಣ್ಣು ಹಂಪಲುಗಳನ್ನು ಅಥವಾ ಮಾಂಸ ಮೀನಿನಂತಹ ಖಾದ್ಯ ಪದಾರ್ಥಗಳನ್ನು ಕೆಡದಂತೆ ದೀರ್ಘಕಾಲ ದಾಸ್ತಾನು ಇರಿಸುವುದಕ್ಕೆ 'ಡಬ್ಬಿ ಶೇಖರಣೆ' ಮಾಡುತ್ತಾರಷ್ಟೆ? ಈ ಡಬ್ಬಿ ಶೇಖರಣೆಯ ವಿಧಾನದಲ್ಲಿ ಅಥವಾ ಸಂಸ್ಕರಣೆಯಲ್ಲಿ ತುಸು ಲೋಪ ದೋಷಗಳು ಸಂಭವಿಸಿದರೆ, ಡಬ್ಬಿಗಳೊಳಗಣ ಪದಾರ್ಥಗಳು ಕೆಡುವವು, ವಿಷಪೂರಿತವಾಗುವವು. ಆದರೆ ಹೊರ ನೋಟಕ್ಕೆ ಯಾವುದೇ ಬಗೆಯ ವರ್ಣ ವ್ಯತ್ಯಾಸವಾಗಲಿ, ರುಚಿ ವಾಸನೆಯಲ್ಲಿ ಕುಂದಾಗಲಿ ಕಂಡುಬರುವುದಿಲ್ಲ. 'ಕ್ಲೊಸ್ಟ್ರೋಡಿಯಂ ಬೋಟಲಿನಂ' ಎಂಬ ವಿಷ ಅಣುಗಳು ಡಬ್ಬಿ ಶೇಖರಣೆಯ ದ್ರವ್ಯಗಳು ಕೆಡಲು ಕಾರಣ.

ಪ್ರಾಣಾಪಾಯದ ಪ್ರಮಾಣ (ಸೇವನೆ) : 5 ಮಿಲಿ ಲೀಟರ್, ಪ್ರಾಣಾಪಾಯದ ಕಾಲಾವಧಿ 24 ತಾಸುಗಳು.

**ವಿಷ ಲಕ್ಷಣಗಳು ಮತ್ತು ಚಿಕಿತ್ಸೆ :**

ಈ ವಿಷ ಪ್ರಯೋಗಕ್ಕೆ ತುತ್ತಾದ ರೋಗಿಯಲ್ಲಿ ಬಾಯಿ ಬತ್ತುವುದು, ವಾಕರಿಕೆ, ನಾಲಗೆ ಗಂಟಲು ಒಣಗುವುದು ಮೊದಲಾದ ಉಪದ್ರವಗಳು ಕಂಡು ಬರುವುವು. ಹೊಟ್ಟೆಯಲ್ಲಿ ತಳಮಳ, ಹೊಟ್ಟೆ ನೋವು ನುಂಗಲು ಮಾತಾಡಲು ಕಷ್ಟವಾಗುವುದು, ಉಸಿರಾಟಕ್ಕೆ ತೊಂದರೆ, ಭೇದಿ ಮತ್ತು ವಾಂತಿ ಉಂಟಾಗುತ್ತವೆ; ಅವನ ಕಣ್ಣು ಬೊಂಬೆ ಅರಳುತ್ತವೆ; ದೇಹ ದೌರ್ಬಲ್ಯ, ಮಂದವಾದ ನಾಡಿ, ಮುಖದ ಮೇಎ ನೀಲಿ ಛಾಯೆ, ಹೆಚ್ಚಿನ ಜ್ವರ, ಬಡಬಡಿಸುವುದು ಮತ್ತು ದೀರ್ಘ ಸುಪ್ತಿಗಳಿಂದ ರೋಗಿಯು ನರಳಿ ಸಾವಿಗೆ ತುತ್ತಾಗಬಹುದು. ಕೆಲವು ರೋಗಿಗಳಲ್ಲಿ ಒಂದುವಾರ ಈ ಉಪದ್ರವಗಳು ಇದ್ದು ಅನಂತರ ಸಾವು ಸಂಭವಿಸುವುದೂ ಉಂಟು.

ಹೊಟ್ಟೆ ತೊಳೆಯುವುದು, ವಾಂತಿ ಮಾಡಿಸುವುದು ಮತ್ತು ವಿರೇಚನೆ ಮೊದಲಾದ ಸಾಂಪ್ರದಾಯಿಕ ಚಿಕಿತ್ಸೆ ನಡೆಸಬೇಕು. ಎಂಟಿ ಬೊಟುಲಿನಲ್ ಸೆರೊಮ ಸೂಜಿ ಮದ್ದು, ಮಾರ್ಫಿಯಾ ಮತ್ತು ಗ್ಲೂಕೋಸ್ ಪೂರಣಗಳು ಉಪಯುಕ್ತವಾಗಿವೆ. ಅಗತ್ಯ ಬಿದ್ದರೆ ರೋಗಿಗೆ ಕೃತಕ ಉಸಿರಾಟವನ್ನೂ ಆಮ್ಲಜನಕ ನೀಡಕೆಯನ್ನೂ ಒದಗಿಸಬೇಕು. ಧಾರಾಳ ದ್ರವವೂ ಉತ್ತೇಜಕ ಆಹಾರವೂ ಉಪಯುಕ್ತ.

**ಮುನ್ನೆಚರಿಕೆ :**

ಡಬ್ಬಿ ಶೇಖರಣೆಯ ಖಾದ್ಯಗಳನ್ನು 15 ನಿಮಿಷ ಚೆನ್ನಾಗಿ ಬೇಯಿಸುವುದರಿಂದ ಈ ವಿಷಾಣುಗಳು ನಿರ್ನಾಮ ಹೊಂದುತ್ತವೆ. ವಿಷ ಪ್ರಯೋಗಕ್ಕೆ ತುತ್ತಾದವರಲ್ಲಿ ಶೇಕಡಾ 60 ಜನ ಪ್ರಾಣಾಪಾಯಕ್ಕೆ ತುತ್ತಾಗುವುದರಿಂದ ಡಬ್ಬಿ ಶೇಖರಣೆಯ ಆಹಾರವನ್ನು ಸೇವಿಸುವುದಕ್ಕೆ ಮುನ್ನ ಕಡ್ಡಾಯವಾಗಿ ಕುದಿಸಿ ಸೇವಿಸುವುದು ಕ್ಷೇಮ.

## ಅಣಬೆ [ನಾಯಿ ಕೊಡೆ]

ಹಳ್ಳಿಗಾಡಿನ ಜನರು ಅಣಬೆಯನ್ನು ಬೇಯಿಸಿ ತಿನ್ನುತ್ತಾರೆ. ಇತ್ತೀಚೆಗೆ ರುಚಿಕರವಾದ ಖಾದ್ಯವನ್ನೂ ಸವಿಯಾದ ಮದ್ಯವನ್ನೂ ತಯಾರಿಸಲು ತೊಡಗಿದ ಮೇಲೆ ಅನೇಕರು ಅಣಬೆಯ ತೋಟಗಳನ್ನೇ ನಿರ್ಮಿಸಲು ಪ್ರಾರಂಭಿಸಿದ್ದು ಅದೊಂದು ರೊಕ್ಕದ ಬೆಳೆಯ ಉದ್ಯಮವಾಗಿ ರೂಪುಗೊಳ್ಳುತ್ತಿದೆ. ಪೊಳ್ಳಾದ ದೇಟು, ದಪ್ಪ ಕಾಂಡ, ಕೊಡೆಯ ಆಕಾರದ ರುಂಡ ಕವಚ (ಟೊಪ್ಪಿಗೆ ಇರುವ ಈ ಪುಟ್ಟ ಸಸ್ಯವು ನೋಟಕ್ಕೆ ಅಂದವಾಗಿದೆ; ಆಕರ್ಷಕವಾಗಿದೆ. ಮಳೆ ಬಿದ್ದ ಕೂಡಲೇ ಕಸ–ಕಡ್ಡಿಗಳ ರಾಶಿಯ ಮೇಲೆ, ಗಿಡಮರಗಳ ಸಂದು ಗೊಂದಿನಲ್ಲಿ, ತೆಂಗು ಕಂಗು,

ಗರಿ ಹೊದೆಸಿದ ಮನೆಯ ಛಾವಣಿಗಳಲ್ಲಿ, ಹಿತ್ತಲ ಮೂಲೆ ಮಡುಕುಗಳಲ್ಲಿ- ಎಲ್ಲೆಂದರಲ್ಲಿ ಹುಟ್ಟಿ ಬೆಳೆಯುವ ಅಲ್ಪ ಕಾಲಾವಧಿಯ ಈ ಸಸ್ಯವನ್ನು ಅಣಬೆ, ನಾಯಿಕೊಡೆ, ಆಳಂಬು ಮೊದಲಾದ ಹೆಸರುಗಳಿಂದ ಕರೆಯುತ್ತಾರೆ.



ಅಣಬೆ : ರುಚಿಕರ ಖಾದ್ಯ



ಅಮನೀಟಾ ಮಸ್ಕಾರಿಯಾ



ಅಮನೀಟಾ ಪಲೋಡಸ್

ಕೆಲವು ಜಾತಿಯ ಅಣಬೆಗಳು ವಿಷ ವರ್ಗಕ್ಕೆ ಸೇರಿದ ಸಸ್ಯಗಳಾದರೆ, ಇನ್ನು ಕೆಲವು ಬಗೆಯ ಅಣಬೆಗಳು ಬೇಯಿಸಿದಾಗ ವಿಷ ಪೂರ್ಣವಾಗಿ ಮಾರ್ಪಟ್ಟು ಸೇವನೆಗೆ ಅನರ್ಹವಾಗುತ್ತವೆ. ವಿಷಯುಕ್ತವಾದ ಕೆಲವು ಬಗೆಯ ಅಣಬೆಗಳನ್ನು ಉಪ್ಪು ನೀರಿನಲ್ಲಿ ಅಥವಾ ಹುಣಸೆ ಗೊಜ್ಜಿನಲ್ಲಿ ತುಸು ಹೊತ್ತು ನೆನಸಿಟ್ಟರೆ ತಿನ್ನಲು ಅಡ್ಡಿ ಇಲ್ಲ, ವಿಷ ರಹಿತವಾದ ಇನ್ನೂ ಕೆಲವು ಜಾತಿಯ ಅಣಬೆಯನ್ನು ಬೇಯಿಸದೇ ಹಸಿಯಾಗಿ ಸೇವಿಸಬಹುದು. ಹೀಗೆ ಅಣಬೆಗಳಲ್ಲಿ ವಿಷ- ನಿರ್ವಿಷ ವರ್ಗವುಂಟು.

ಅಮನೀಟಾ ಪಲೋಡಸ್ ಮತ್ತು ಅಮನೀಟಾ ಮಸ್ಕಾರಿಯಾ ಎಂಬ ಎರಡು ಬಗೆಯ ಅಣಬೆಗಳು ತೀಕ್ಷ್ಣ ವಿಷ ಭರಿತ ಸಸ್ಯಗಳು. ಇವುಗಳಲ್ಲಿ ಮಸ್ಕರಿನ್ ಎಂಬ ವಿಷ ಸತ್ವವಿದೆ. ಮಸ್ಕಾರಿಯಾ ಅಣಬೆ ಉಸುಕು ಮಣ್ಣಿನಲ್ಲಿ ಒಂಟಿಯಾಗಿ ಬೆಳೆಯುವ ದೊಡ್ಡ ಆಕೃತಿಯ ಅಣಬೆಯಾಗಿದ್ದು ಅದಕ್ಕೆ ಟೊಳ್ಳಾದ ಕಾಮಡ, ತುದಿಯಲ್ಲಿ ಅಗಲವಾದ, ಅರಸಿನ ಅಥವಾ ಕಿತ್ತಳೆ ಬಣ್ಣದ ಕೊಡೆಯಾಕಾರದ

ಟೊಪ್ಪಿಗೆ, ದೇಟಿನ ಎರಡೂ ಪಕ್ಕಗಳಲ್ಲಿ ಕೊಡೆಗೆ ಸಮೀಪಿಸಿ ಬಿಳಿಯ ಪುಪ್ಪುಸಗಳಿರುತ್ತವೆ. ಪಲೋಡಸ್ ಅಣಬೆಯು ಬಿಳಿಯ ಬಣ್ಣದಿದ್ದು ಗಿಡ ಮರಗಳ ಮೇಲೆ ನಾಲ್ಕು ಆರು ಅಂಗುಲ ಎತ್ತರಕ್ಕೆ ಬೆಳೆಯುತ್ತದೆ. ಇದರ ಕಾಂಡವು ಪೊಳ್ಳಾಗಿದ್ದರೂ ಮೇಲ್ತುದಿಯಲ್ಲಿ ಬಟ್ಟಲಿನಂತೆ ಮೇಲ್ಮುಖವಾಗಿ ತೆರೆದ ಕವಚವಿರುತ್ತದೆ. ದಿನಕಳೆದಂತೆ ದುರ್ವಾಸನೆ ಬೀರುವುದೂ ಈ ವರ್ಗದ ನಾಯಿಕೊಡೆಯ ಲಕ್ಷಣ.

**ಪ್ರಾಣಾಪಾಯದ ಪ್ರಮಾಣ (ಸೇವನೆ) 0.25 ಗ್ರಾಂ**

**ವಿಷ ಪ್ರಯೋಗದ ಲಕ್ಷಣಗಳು (ಸೇವನೆ) :**

ಅಣಬೆ ವಿಷ ಸೇವಿಸಿದ ರೋಗಿಗೆ ಕೆಲವೊಮ್ಮೆ 6 ಗಂಟೆಗಳಲ್ಲಿ, ಕೆಲವೊಮ್ಮೆ ಎರಡು ದಿನಗಳೊಳಗಾಗಿ ವಿಷ ಲಕ್ಷಣಗಳು ಕಾಣಿಸಿಕೊಳ್ಳುವವು. ಅಂತಹ ರೋಗಿಯಲ್ಲಿ ಚರ್ಮ ಕೆರಳುವುದು, ಗಂಟಲು ಕಟ್ಟುವುದು, ಹೊಟ್ಟೆ ಉರಿ, ನೋವು, ನೀರಡಿಕೆ, ವಾಕರಿಕೆ ಮತ್ತು ರಕ್ತ ಮಿಶ್ರಿತ ಭೇದಿಗಳು ಉಂಟಾಗುವುದು. ಕೆಲವೊಮ್ಮೆ ಮೈಕೈಗಳ ಮೇಲೆ ಹೃತ್ತಿಕೆಯ ಗಂದೆಗಳೂ ಏಳಬಹುದು. ರೋಗಿಯ ಮುಖವು ನೀಲಿ ಛಾಯೆಗೆ ತಿರುಗುವುದು ಮತ್ತು ಮೂತ್ರದಲ್ಲಿ ರಕ್ತ ಹಾಗೂ ಅಲ್ಬಮಿನ್ ಕಾಣಿಸುವುದು. ಕೆಲವರಲ್ಲಿ ಕಾಮಿಲಾ ವಿಕಾರಗಳೂ ಉಂಟಾಗಬಹುದು. ಮಂದವಾದ ನಾಡ, ಅಸ್ತವ್ಯಸ್ತಗೊಂಡ ಉಸಿರಾಟ ಹಾಗೂ ಹೃದಯದ ಬಡಿತ ಇವುಗಳಲ್ಲದೆ ಮೈ ಬೆವರುವುದು. ಅದಿರುವಾಯಿ ಮೊದಲಾದ ಉಪದ್ರವಗಳು ಉಂಟಾಗಬಹುದು. ಮತ್ತು ಸಾವು ಸಂಭವಿಸಬಹುದು. ಇನ್ನು ಕೆಲವು ರೋಗಿಗಳಲ್ಲಿ ಇಷ್ಟೆಲ್ಲ ಲಕ್ಷಣಗಳು ಕಾಣಿಸದೆ ತಲೆನೋವು, ತಲೆ ತಿರುಗುವುದು, ಮೈಕೈಸೆಳೆತ, ಜೊಲ್ಲುಸುರಿಯುವುದು. ಕಣ್ಣು ಬೊಂಬೆ ಕಿರಿದಾಗುವುದು, ಬಡಬಡಿಕೆ, ಹೃದಯ ವಿಕಾರ, ದೀರ್ಘಸುಪ್ತಿ ಮತ್ತು ಸಾವು ಸಂಭವಿಸಬಹುದು.

**ಪ್ರತ್ಯೌಷಧ ಮತ್ತು ಚಿಕಿತ್ಸೆ:**

ಎಟ್ರೋಪಿನ್ ಸೂಜಿ ಮದ್ದು ಅಣಬೆ ವಿಷಕ್ಕೆ ದಿವ್ಯ ಪ್ರತೌಷಧ. ಹೊಟ್ಟೆ ತೊಳೆಯುವುದು, ವಾಂತಿ ಮಾಡಿಸುವುದು ಲವಣ ವಿರೇಚನೆ ಮಾಡಿಸುವುದು ಮೊದಲಾದ ಸಾಂಪ್ರದಾಯಿಕ ವಿಧಾನಗಳಿಂದ ರೋಗಿಯನ್ನು ಚಿಕಿತ್ಸೆ ಮಾಡಬೇಕು. ಅವನಿಗೆ ಹಾಲು ಹಣ್ಣಿನ ರಸ, ಗ್ಲೂಕೋಸ್ ಮೊದಲಾದ ದ್ರವಗಳನ್ನು ಸಾಕಷ್ಟು ನೀಡಬೇಕು. ಇತರ ಉಪದ್ರವಗಳಿಗೆ ಲಕ್ಷಣಾನುಸಾರ ಚಿಕಿತ್ಸೆ ಮಾಡಬೇಕು.

## ಕೇಸರಿಬೇಳೆ



ತೊಗರಿಬೇಳೆಯೊಂದಿಗೆ ಕಲಬೆರಕೆ ಮಾಡಿ ಮಾರುವ ಕೇಸರಿಬೇಳೆ ಉತ್ತರ ಪ್ರದೇಶ, ಮಧ್ಯ ಪ್ರದೇಶ ಮತ್ತು ಬಿಹಾರದ ಅನೇಕ ಭಾಗಗಳಲ್ಲಿ ಬೆಳೆಯುತ್ತದೆ. ಮೇಲುನೋಟಕ್ಕೆ ತೊಗರಿ ಬೇಳೆಯಂತೆಯೇ ಕಾಣಿಸುವುದರಿಂದ ಕೇಸರಿ ಬೇಳೆಯು ದುರ್ಮಿಶ್ರಣಕಾರರಿಗೆ ಸುಲಭಮಾರ್ಗವನ್ನು ತೆರೆದಿಟ್ಟು ಆಹ್ವಾನ ನೀಡಿದಂತೆ ಇದು. ಸಸ್ಯಶಾಸ್ತ್ರದಲ್ಲಿಲ್ಲ ಕೇಸರಿ ಬೇಳೆಯನ್ನು ಲ್ಯಾಥರಸ್ ಸಾತಿಮಸ್ ಎಂದು ಕರೆಯುತ್ತಾರೆ.

ಕೇಸರಿ ಬೇಳೆ ಸ್ವಯಂ ವಿಷಭರಿತವಾದ ಧಾನ್ಯವಲ್ಲವೆಂದೂ, ಕೇಸರಿ ಬೇಳೆ ಬೆಳೆಯುವ ಹೊಲಗಳಲ್ಲಿ ಕೊಳ್ಳುವ ವಿವಿಯಸಾತಿವಾ ಎಂಬ ವಿಷಸಸ್ಯದ ಆಟ್‌ಕಾ ಎಂಬ ವಿಷಸತ್ವದೊಂದಿಗೆ ಸಂಪರ್ಕಹೊಂದುವುದರಿಂದ ದುಷ್ಪರಿಣಾಮಗಳು ಉಂಟಾಗುತ್ತವೆಯೆಂದೂ ಅನೇಕ ಪರಿಣಿತರ ಅಭಿಮತ. ಆದರೆ ಈ ವಿಷ ಸಸ್ಯದ ಸಂಪರ್ಕವಿಲ್ಲದ ಕೇಸರಿಬೇಳೆಯನ್ನು ಉಪಯೋಗಿಸುವುವವರಲ್ಲಿಯೂ ಕೂಡ ರೋಗ ಚಿನ್ಹೆಗಳು ಗೋಚರಿಸುವುದರಿಮದ ಅಗೋಚರ ವಿಷವು ಕೇಸರಿಬೇಳೆಯಲ್ಲಿಯೇ ಸೇರಿಕೊಂಡಿದೆ ಎಂಬುದಾಗಿ ಈಗ ನಂಬಲಾಗಿದೆ. ಕೇಸರಿಬೇಳೆಯನ್ನು ನಿತ್ಯ ಉಣ್ಣುವವರಲ್ಲಿ ಎ. ಜೀವಾತುವಿನ ಕೊರತೆಯು ಕಾಣಿಸುತ್ತದೆ. ದೇಹ ಪೋಷಣೆಗೆ ಅಗತ್ಯವಾದ ಟ್ರೈಪ್ಟೋಫಾನ್ ಎಂಬ ಅಮೈನೋ ಆ್ಯಸಿಡ್ ಸಂಪೂರ್ಣ ಲೋಪವಾಗಿ ಬಿಡುವುದು ಮಾತ್ರವಲ್ಲದೆ ಸಸಾರಜನಕದ ಸತ್ವದ ಕೊರತೆಯೂ ಸಹ ಉಂಟಾಗುತ್ತದೆ. ಒಟ್ಟಿನ ಮೇಲೆ ರೋಗಿಯ ದೇಹದಲ್ಲಿ ಹೆಚ್ಚಿನ ದುಷ್ಪರಿಣಾಮಗಳು ಕಾಣಿಸುತ್ತವೆ. ದುರ್ದೈವವಶಾತ್ ಈ ಕೇಸರಿಬೇಳೆಯ ವಿಷ ಲಕ್ಷಣಗಳು ಸೇವಿಸಿದ ಅಲ್ಪಕಾಲದಲ್ಲಿಯೇ ಕಾಣಿಸದೇ ಕಾಲಾಂತರದಲ್ಲಿ ತಲೆದೋರುವುದರಿಂದ ಇದರ ಕಡೆಗೆ ನೇರವಾಗಿ ಗಮನ ಬೀಳುವುದಿಲ್ಲ.

**ವಿಷ ಪ್ರಯೋಗದ ಲಕ್ಷಣಗಳು :**

ದೀರ್ಘಕಾಲ ಕೇಸರಿ ಬೇಳೆಯನ್ನು ನಿತ್ಯ ಆಹಾರದಲ್ಲಿ ಬಳಸುವವರು ದೀರ್ಘಕಾಲದ ವಿಷ ಪ್ರಯೋಗದ ಉಪದ್ರವಗಳಿಗೆ ತುತ್ತಾಗುತ್ತಾರೆ. ಅಂತಹ ರೋಗಿಯಲ್ಲಿ ಬೆನ್ನುನೋವು, ಕೈಕಾಲು ನಿತ್ರಾಣ ಮೊದಲಾದ ಲಕ್ಷಣಗಳು

ಇದ್ದಕ್ಕಿದಂತೆಯೇ ಹೊಲದಲ್ಲಿ ದಿಢೀರಾಗಿ ಕಾಣಿಸಿಕೊಳ್ಳಬಹುದು. ಅಥವಾ ಸುಖನಿದ್ರೆ ಮಾಡಿ ಬೆಳಿಗ್ಗೆ ರೋಗಿಯು ಮುಂಜಾನೆ ಎದ್ದು ಹಾಸಿಗೆಯ ಮೇಲೆ ಕುಳಿತುಕೊಳ್ಳಲು ಪ್ರಯತ್ನಿಸಿದಾಗ ಕೈಕಾಲು ಛಳಕು ಹೊಡೆದಂತೆ ಕಾಣಿಸಿಕೊಂಡು, ರೋಗಿಯು ಚಡಪಡಿಸುತ್ತಾನೆ; ಕಷ್ಟಪಟ್ಟು, ಚಕ್ಕಳಮಕ್ಕಳ ಹಾಕಿ ಕುಳಿತರೂ, ಮೇಲೇಳಲು ಪ್ರಯಾಸ ಪಡಬೇಕಾಗುತ್ತದೆ. ಕಷ್ಟಪಟ್ಟು ಎದ್ದರೂ ಊರು ಗೋಲಿನ ಸಹಾಯವಿಲ್ಲದೆ ಒಂದು ಹೆಜ್ಜೆಊರಲೂ ಸಾಧ್ಯವಾಗದಂತಹ ದುರವಸ್ಥೆ ಉಂಟಾಗುವುದು.) ಕೈಕಾಲುಗಳು ಬಲಹೀನವಾಗಿ ಗಡಗಡ ನಡುಗುತ್ತವೆ; ಮತ್ತು ಪಾದಗಳನ್ನು ಅಡ್ಡಡ್ಡವಾಗಿ ಇರಿಸಿ ಎಳೆದೆಳೆದು ಹೆಜ್ಜೆ ಇರಿಸಬೇಕಾಗುತ್ತದೆ; ಕ್ರಮೇಣ ಪಾರ್ಶ್ವವಾಯು ಹಿಡಿದು, ಎರಡೂ ಕಾಲುಗಳು ಶಕ್ತಿಹೀನವಾಗುತ್ತವೆ. ಆದರೆ ಮಾಂಸಖಂಡಗಳಲ್ಲಿ ಸಂಜ್ಞಾಶಕ್ತಿಯು ಉಳಿದಿದ್ದು ರೋಗಿಯು ಸಹಿಸಲಸಾಧ್ಯವಾದ ನೋವನ್ನು ಅನುಭವಿಸಬೇಕಾಗುತ್ತದೆ. ಅವನು ಸಂಪೂರ್ಣ ಹಾಸಿಗೆ ಹಿಡಿಯುತ್ತಾನೆ; ಹಾಗೂ ಅನಿಚ್ಛಿತವಾಗಿ ಮಲಮೂತ್ರ ವಿಸರ್ಜನೆಯಾಗುತ್ತದೆ.

**ಚಿಕಿತ್ಸೆ ಮತ್ತು ಉಪಚಾರ :**

ರೋಗಿಗೆ ಕೇಸರಿಬೇಳೆ ವರ್ಜ್ಯ ಮಾಡಿ ಎ. ಜೀವಾತು ಕೆರೋಟಿನ್ ಸತ್ವವುಳ್ಳ ಶಕ್ತಿವರ್ಧಕ ಅನ್ನ- ಆಹಾರಗಳನ್ನು ಸಂಪೂರ್ಣ ವಿಶ್ರಾಂತಿಯನ್ನು ನೀಡಬೇಕು. ಕಾಲುಗಳಿಗೆ ವಿದ್ಯುದಾಘಾತ ಚಿಕಿತ್ಸೆಯು ಪರಿಣಾಮಕಾರಿಯಾಗಿದೆ. ಪಿಂಡತೈಲ, ಬಲಾದಿ ತೈಲ, ತ್ರಿಫಲಾ ತೈಲಗಳ ಪೈಕಿ ಒಂದನ್ನು ಅಂಗಮರ್ದನ ಮಾಡುವುದು ಹೆಚ್ಚಿನ ಫಲದಾಯಕವಾಗಿದೆ. ಚಿಕಿತ್ಸೆಗೆ ತಜ್ಞರ ನೆರವು ಅಗತ್ಯ.

ಅಧ್ಯಾಯ- VI

# ಪಾನ-ಪೇಯ ವಿಷ

## ಶುದ್ಧ ಮದ್ಯ (ಧಾನ್ಯ ಮದ್ಯ)

ಹಣ್ಣುಗಳಿಂದ, ಧಾನ್ಯಗಳಿಂದ ಅಥವಾ ರಾಸಾಯನಿಕ ಸಂಯೋಜನೆಯಿಂದ ತಯಾರಿಸಿದ ಕುಡಿಯುವ ಮದ್ಯವನ್ನು ಶುದ್ಧ ಮದ್ಯ ಅಥವಾ ಧಾನ್ಯ ಮದ್ಯವೆಂದು ಕರೆಯುತ್ತಾರೆ. ಇದು ಬಣ್ಣವಿಲ್ಲದ ದ್ರವವಾಗಿದ್ದರೂ ವಿವಿಧ ಛಾಪುಗಳಲ್ಲಿ ಹಾಗೂ ರೂಪುಗಳಲ್ಲಿ ಸಿದ್ಧಗೊಂಡಾಗ ಬೇರೆ ಬೇರೆ ಬಣ್ಣವನ್ನೂ ವಿವಿಧ ಪ್ರಮಾಣದಲ್ಲಿ ಮಾದಕ ಸತ್ವವನ್ನೂ ಹೊಂದಿದ್ದು ಮದ್ಯದ ವಿಶಿಷ್ಟ ವಾಸನೆಯನ್ನೂ ಒಳಗೊಂಡಿರುತ್ತದೆ.

ಬೀರ್‌ನಲ್ಲಿ ಶೇಕಡಾ 3–6 ಪಾಲು, ಜಿಂಜರ್ ಬೀರ್‌ನಲ್ಲಿ ಶೇಕಡಾ 1–3 ಪಾಲು, ಪೋರ್ಟರ್‌ನಲ್ಲಿ ಶೇಕಡಾ 3–7 ಪಾಲು, ಎಲ್‌ನಲ್ಲಿ ಶೇಕಡಾ 3–7 ಪಾಲು ಶಾಂಪೇನ್‌ನಲ್ಲಿ ಶೇಕಡಾ 10–13 ಪಾಲು, ಕ್ಲಾರೆಟ್‌ನಲ್ಲಿ ಶೇಕಡಾ 8–12 ಪಾಲು, ಪೋರ್ಟ್‌ವೈನ್‌ನಲ್ಲಿ ಶೇಕಡಾ 18–20 ಪಾಲು, ಬ್ರಾಂಡಿಯಲ್ಲಿ ಶೇಕಡಾ 40–50 ಪಾಲು, ಜಿನ್‌ನಲ್ಲಿ ಶೇಕಡಾ 51–59 ಪಾಲು, ವಿಸ್ಕಿಯಲ್ಲಿ ಶೇಕಡಾ 40–50 ಪಾಲು, ರಮ್‌ನಲ್ಲಿ ಶೇಕಡಾ 51–59ಪಾಲು – ಹೀಗೆ ವಿವಿಧ ತರಗತಿಯ ಮದ್ಯಗಳಲ್ಲಿ ಬೇರೆ ಬೇರೆ ಪ್ರಮಾಣದ ಮಾದಕ ಅಂಶವಿರುತ್ತದೆ.

ಮದ್ಯದ ಪ್ರಭಾವವು ಕಾಣಿಸಬೇಕಾದರೆ ಕುಡಿದ ಮದ್ಯದ ಪ್ರಮಾಣವೆಷ್ಟೆಂಬುದು ಪ್ರಧಾನವಲ್ಲ. ಸೇವಿಸಿದ್ದರಲ್ಲಿ ಎಷ್ಟು ಪಾಲು ಮದ್ಯವು (ಮಾದಕ ಅಂಶವು) ರಕ್ತಗತವಾಗಿ ದೇಹದಲ್ಲಿ ಸಂಚಿತಗೊಂಡಿದೆ ಎಂಬುದು ಮುಖ್ಯ. ಹಸಿದ ಹೊಟ್ಟೆಯಲ್ಲಿ ಸೇವಿಸಿದ ಅಲ್ಪಾಂಶ ಮದ್ಯವೂ ಕೂಡಾ ತೀರ ಚುರುಕಾಗಿ ಕೆಲಸ ಮಾಡಿದರೆ, ಹೊಟ್ಟೆ ತುಂಬ ಉಂಡ ಮೇಲೆ ಸ್ವೀಕರಿಸಿದ ಮದ್ಯವು ಕಮ್ಮಿ ಪ್ರಭಾವವನ್ನು ಬೀರುತ್ತದೆ. ಇಷ್ಟು ಮಾತ್ರವಲ್ಲದೆ ಸೇವಿಸಿದ ಮದ್ಯದಲ್ಲಿ ಇರುವ ಮದ್ಯದ ಅಂಶವೆಷ್ಟು ಎಂಬುದು ಕೂಡಾ ಇಲ್ಲಿ ಗಮನಾರ್ಹವಾದುದು. ಚೆನ್ನಾಗಿ ಕುಡಿಯುವ ಅಭ್ಯಾಸವುಳ್ಳವರು ನಿಧಾನವಾಗಿ ಪಾನಮಾಡುತ್ತ ಕುಳಿತಾಗ ಬಹಳಷ್ಟು ಮದ್ಯವನ್ನು ದಕ್ಕಿಸಿಕೊಳ್ಳಬಲ್ಲರು. ರೋಗಿಗಳು, ದೇಹಾಯಾಸದಿಂದ ಬಳಲುವವರು, ಹಸಿದವರು, ವೃದ್ಧರು, ಮೊದಲಾದ

ಅಶಕ್ತವರ್ಗಕ್ಕೆ ಸೇರಿದವರು, ಅಲ್ಪ ಪ್ರಮಾಣದ ಮದ್ಯವನ್ನು ಸೇವಿಸಿದರೂ ಕೂಡ ಅಪಾಯ– ಉಪದ್ರವಗಳು ಕಾಣಿಸಿಕೊಳ್ಳಬಹುದು.

ಪ್ರಾಣಾಪಾಯದ ಪ್ರಮಾಣ (ಸೇವನೆ) 300–400 ಮಿಲಿ ಲೀಟರ್ (ಸುಮಾರ್ 10 ರಿಂದ 14 ಔನ್ಸ್) ಶುದ್ಧ ಮದ್ಯವನ್ನು 1 ತಾಸಿನಲ್ಲಿ ಕುಡಿದರೆ ಪ್ರಾಣಾಪಾಯವನ್ನುಂಟುಮಾಡಬಹುದು.

**ಮದ್ಯಪಾನದ ಲಕ್ಷಣಗಳು :**

ಮದ್ಯಪಾನ ಮಾಡಿದ ರೋಗಿಯ ರಕ್ತದಲ್ಲಿ ಸಂಚಿತವಾದ ಮದ್ಯದ ಪ್ರಮಾಣವನ್ನು ಗುರುತಿಸಿ, ಮೂರು ವರ್ಗಗಳನ್ನಾಗಿ ವಿಂಗಡಿಸುತ್ತಾರೆ. ರಕ್ತದಲ್ಲಿ ಶೇಕಡಾ 0 ಅಂಶದಿಂದ 0.05 ಅಂಶದ ತನಕ ಮದ್ಯದ ಪ್ರಮಾಣವಿದ್ದರೆ ಸಾಮಾನ್ಯ ಮದ್ಯಪಾನ ಸ್ಥಿತಿ ಎಂದು ಹೇಳುತ್ತಾರೆ. ರಕ್ತದಲ್ಲಿ ಶೇಕಡಾ 0.15 ಅಂಶದಿಂದ 0.30 ಅಂಶದ ತನಕ ಮದ್ಯದ ಪ್ರಮಾಣವಿದ್ದರೆ 'ವಿಶೇಷ ಮದ್ಯಪಾನ ಸ್ಥಿತಿ' ಎಂದು ಹೇಳುತ್ತಾರೆ. ರಕ್ತದಲ್ಲಿ 0.5 ಅಂಶ ಮತ್ತು ಅದಕ್ಕಿಂತ ಹೆಚ್ಚು ಅಂಶ ಮದ್ಯವಿದ್ದರೆ 'ತೀವ್ರಾವಸ್ಥೆ;ಯೆಂದು ಕರೆಯುತ್ತಾರೆ.

1. ಸಾಮಾನ್ಯ ಮದ್ಯಪಾನ ಸ್ಥಿತಿಯಲ್ಲಿ ರೋಗಿಯು ಮದ್ಯಪಾನದ ಪರಿಣಾಮವಾಗಿ ತನ್ನಲ್ಲಿದ್ದ ಭಯ– ಸಂಕೋಚಗಳನ್ನು ಕಳೆದು ಉತ್ಸಾಹಿತನಾಗುತ್ತಾನೆ. ಅವನ ಮನಸ್ಸು ಸಂತೋಷಗೊಂಡು ಕುಣಿದಾಡುತ್ತದೆ. ಕೇಂದ್ರ ನರಮಂಡಳದ ಹತೋಟಿಯು ಕುಂಠಿತಗೊಂಡಿರುವುದರ ಪರಿಣಾಮವಾಗಿ ಸ್ವಯಂ ಶ್ರೇಷ್ಠತೆಯ ಮನೋಭಾವವು ಉಂಟಾಗಿ ಭಾವೋದ್ವೇಗಕಾರಿಯಾದ ಮಾತುಕತೆಗಳೂ ಎತ್ತರಿಸಿದ ಧ್ವನಿಯಲ್ಲಿ ಸಂಭಾಷಣೆಯೂ ಮೊದಲಾಗುತ್ತದೆ. ಅವನ ಬುದ್ಧಿ ಮತ್ತು ವಿವೇಚನೆ ಲಗಾಮು ತಪ್ಪಿರುವುದರಿಂದ ಇತರ ಸಂದರ್ಭಗಳಲ್ಲಿ ಮಾಡಲೆಳಸದ ಕೆಲಸಗಳನ್ನೆಲ್ಲ ಯಾವ ಮುಲಾಜು ಇಲ್ಲದೆ ಮಾಡಲು ಮುಂದಾಗುತ್ತಾನೆ. ತಾನು ಮಾಡುತ್ತಿರುವುದೆಲ್ಲ ಧೀರೋಧಾತ್ತ ಸಾಹಸದ ಮಹತ್ಕಾರ್ಯವೆಂಬ ಭ್ರಮೆ ಇರುತ್ತದೆ. ವಿವೇಕವೂ ತಾರಮ್ಯಜ್ಞಾನವೂ ತಾತ್ಕಾಲಿಕವಾಗಿ ವಿಶ್ರಾಂತಿ ತೆಗೆದುಕೊಂಡಿರುವುದರಿಂದ ಅವನ ತನ್ನ ಶಕ್ತಿ ಸಾಮರ್ಥ್ಯಗಳ ಮಿತಿಯನ್ನು ಮರೆತು ಬಿಡುತ್ತಾನೆ.

ಮೊದಲಿಗೆ ಉದ್ರೇಕ ಹಾಗೂ ಮುದಗೊಳಿಸುವ ಅಹ್ಲಾದ ಮನೋಸ್ಥಿತಿ ಉಂಟಾದರೂ ಮದ್ಯಪಾನದ ಮದವು ಕ್ರಮೇಣ ಅವನಲ್ಲಿ ಜಡತ್ವವನ್ನು ಉಂಟು ಮಾಡುತ್ತದೆ. ದೃಷ್ಟಿ ಶಕ್ತಿಯಲ್ಲಿ ತುಸು ಏರುಪೇರು ಉಂಟಾಗುವುದು. ಬೆಳಕಿಗೆ ಕಣ್ಣಿನ ಪ್ರತಿಕ್ರಿಯೆ ವಿಳಂಬವಾಗುವುದು. ಮೈ ಕೈ ತುಸು ಜೋಲಾಡುವುದು ಮತ್ತು ಮಾತಿನ ಸರಣಿ ತಪ್ಪುವುದು ಮೊದಲಾದ ಅಸ್ತವ್ಯಸತ್ತೆಗಳು ತಲೆ ಹಾಕುವುವು.

2. ವಿಶೇಷ ಮದ್ಯಪಾನ ಸ್ಥಿತಿಗೆ ಮುಟ್ಟಿದ ರೋಗಿಯಲ್ಲಿ ಮೇಲೆ ಹೇಳಿದ ಲಕ್ಷಣಗಳಲ್ಲದೆ ಮೈ ಕೈ ಜೋರಾಗಿ ಜೋಲಿ ಹೊಡೆಯುವುದು, ಯದ್ವಾತದ್ವಾ ಮಾತು, ಅಡ್ಡಾತಿಡ್ಡೆ ಹೆಜ್ಜೆ ಹಾಕುತ್ತಾ ನಡೆಯುವುದು ಮತ್ತು ತೂಕಡಿಕೆಗಳು ಕಾಣಿಸುತ್ತದೆ. ದೃಷ್ಟಿ ದೋಷವು ಈಗ ಸ್ಪಷ್ಟವಾಗಿ ಉಂಟಾಗಿರುತ್ತದೆ; ಹಾಗೂ ಸ್ಪರ್ಶ ಜ್ಞಾನವು ಕಮ್ಮಿಯಾಗಿರುತ್ತದೆ. ಈ ಸ್ಥಿತಿಯಲ್ಲಿ ರೋಗಿಯು ವಿಚಿತ್ರ ಮನೋಭಾವವನ್ನು ಹೊಂದಿರುತ್ತಾನೆ.

3. ತೀವ್ರಾವಸ್ಥೆಗೆ ತಲುಪಿದ ರೋಗಿಯು ಪ್ರಜ್ಞಾಶೂನ್ಯನಾಗುತ್ತಾನೆ. ಅವನಿಗೆ ದೇಹ ಪ್ರತಿಕ್ರಿಯೆಗಳೂ ಸ್ಪರ್ಶಜ್ಞಾನವೂ ಇರುವುದಿಲ್ಲ; ಉಸಿರಾಟವು ಮಂದವಾಗಿರುತ್ತದೆ. ದೀರ್ಘವಿಸ್ಮೃತಿ ಹಾಗೂ ಸಾವು ಸಂಭವಿಸಬಹುದು.

**ಚಿಕಿತ್ಸೆ ಮತ್ತು ಉಪಚಾರ**

ಮದ್ಯಪಾನ ವಿಷದಿಂದ ನರಳುವ ರೋಗಿಯನ್ನು ಹೊಟ್ಟೆ ತೊಳೆಯುವುದು, ವಾಂತಿ ಮಾಡಿಸುವದು ಮೊದಲಾದ ಸಾಂಪ್ರದಾಯಿಕ ವಿಧಾನಗಳಿಂದ ಚಿಕಿತ್ಸೆ ಮಾಡಬೇಕು. ಮೊದಲು ರೋಗಿಯನ್ನು ಸ್ವಚ್ಛವಾದ ಹವೆಯಿರುವ ಕೊಠಡಿಯಲ್ಲಿ ಮಲಗಿಸಬೇಕು. ಸೋಡಿಯಂ ಬೈ ಕಾರ್ಬೋನೇಟ್ ಮಿಶ್ರಣವನ್ನು ತಾಸಿಗೊಮ್ಮೆ ಕುಡಿಸುವುದರಿಂದ ಮೂತ್ರವಿಸರ್ಜನೆ ಕ್ರಮಬದ್ಧವಾಗುವುದು. (ಆದರೆ ರೋಗಿಗೆ ಹೆಚ್ಚು ಪ್ರಮಾಣದಲ್ಲಿ ದ್ರವವನ್ನು ಕುಡಿಸಬಾರದು). ಕೆಫಿನ್, ಸೋಡಿಯಂ ಬೆಂಜನೇಟ್ ಸೂಜಿಮದ್ದನ್ನೂ, ಮಿಶ್ರಣಗಳನ್ನೂ ಕೊಡಬೇಕು. ಬಿಸಿಯಾದ ತೀಕ್ಷ್ಣ ಕಾಫಿಯನ್ನು ಕುಡಿಸಬಹುದು. ನಿದ್ರೆಬರಿಸುವ ಹಾಗೂ ಶಾಮಕ ಚಿಕಿತ್ಸೆ ಉಪಚಾರಗಳು ನಿಶಿದ್ಧ.

**ದೀರ್ಘಕಾಲದ ವಿಷ ಲಕ್ಷಣಗಳು ಮತ್ತು ಚಿಕಿತ್ಸೆ :**

ದೀರ್ಘಕಾಲದಿಂದ ಮದ್ಯಪಾನಮಾಡುವ ಚಟಕ್ಕೆ ಬಿದ್ದ ರೋಗಿಯ ದೇಹವು ಕ್ಷೀಣವಾಗಿ, ಮುಖವು ನೇರಿಗೆ ಬಿದ್ದು, ಕಣ್ಣು ಆಳಕ್ಕೆ ಇಳಿದು, ಅಧಃಪತನದ ಕರಿನೆರಳು ಪ್ರತ್ಯಕ್ಷವಾಗಿ ಅವನ ಮೋರೆಯ ಮೇಲೆ ಗೋಚರಿಸುತ್ತದೆ. ಅನ್ನಾಹಾರಗಳ ಮೇಲೆ ಇಚ್ಛೆಯು ಲೋಪವಾಗಿರುತ್ತದೆ; ನೆನಪಿನಶಕ್ತಿಯು ಕುಂದಿರುತ್ತದೆ; ಮತ್ತು ದೃಷ್ಟಿದೋಷವು ಉಂಟಾಗಿರುತ್ತದೆ. ಬುದ್ಧಿಮಾಂಧ್ಯ, ಅಶಾಂತಿ, ಭ್ರಮೆಗಳು ಉಂಟಾಗುವವಲ್ಲದೆ ವಿವೇಕ, ವಿವೇಚನಾ ಶಕ್ತಿಗಳು ಶೂನ್ಯವಾಗಿ ಬಿಡುತ್ತವೆ. ಕೆಲವೊಮ್ಮೆ ಅದಿರುವಾಯು ಬಡಬಡಿಸುವದು ಮೊದಲಾದ ಉಪದ್ರವಗಳೂ ಉಂಟಾಗಬಹುದು.

ಮದ್ಯಪಾನದ ಚಟಕ್ಕೆ ಬಿದ್ದು ದೀರ್ಘಕಾಲದ ವಿಷ ಪರಿಣಾಮಗಳಿಂದ ನರಳುವ ರೋಗಿಯ ಚಿಕಿತ್ಸೆಗೆ ತಜ್ಞರ ನೆರವನ್ನು ಪಡೆಯಬೇಕು. ತಾತ್ಕಾಲಿಕ ಉಪಶಮನಕ್ಕಾಗಿ ಪೆರಲ್‌ಡಿಹೈಡ್ ಸೂಜಿ ಮದ್ದನ್ನು ನೀಡಬಹುದು. ಬಿ1 ಸಿ

ಜೀವಾತುಗಳು ನಿಕೋಟಿನಿಕ್ ಅಸಿಡ್ ಮತ್ತು ಗ್ಲೂಕೋಸ್ ಸೇವನೆ ಉಪಯುಕ್ತವಾಗಿವೆ.

ಆ್ಯಂಟಿಬುಸ್, ಟೆಂಪೋನಿಲ್ ಮೊದಲಾದ ಔಷಧಿಗಳನ್ನು ತಜ್ಞರ ನೇತೃತ್ವದಲ್ಲಿ ತಿಂಗಳುಗಟ್ಟಲೆ ನೀಡುವುದರಿಂದ ರೋಗಿಯು ಮದ್ಯಪಾನದ ಬಗ್ಗೆ ತಿರಸ್ಕಾರ ಹೊಂದುತ್ತಾನೆ. ಈ ಚಿಕಿತ್ಸೆಯನ್ನು ತಜ್ಞರ ನೇತೃತ್ವದಲ್ಲೇ ನಡೆಸಬೇಕು. ಹಾಗೂ ರೋಗಿಯ ದೃಢ ನಿರ್ಧಾರ- ಸಹಕಾರವೂ ಅಗತ್ಯ.

**ಅಶುದ್ಧಮದ್ಯ (ಸಸ್ಯ ಮದ್ಯ) ಮತ್ತು ಕಳ್ಳಭಟ್ಟಿ**

ಬಣ್ಣದ ಕೈಗಾರಿಕೆಯಲ್ಲಿ, ವಾರ್ನಿಸ್ ತಯಾರಿಕೆಯಲ್ಲಿ ಹಾಗೂ ರಾಸಾಯನಿಕ ಮಿಶ್ರಣಗಳಲ್ಲಿ ಉಪಯೋಗಿಸುವ ಅಶುದ್ಧ ಮದ್ಯವನ್ನು ಸಸ್ಯ ಮದ್ಯವೆಂದೂ ಕರೆಯುತ್ತಾರೆ. ಇದು ಸೇವನೆಗೆ ಅನರ್ಹವಾಗಿದ್ದು, ಕುಡಿದರೆ ತೀಕ್ಷ್ಣವಿಷವಾಗಿ ಪರಿಣಮಿಸುತ್ತದೆ. ಈ ವರ್ಗಕ್ಕೆ ಸೇರಿದ 'ಡಿನೇಚರ್ಡಸ್ಪಿರಿಟನ್ನು' ನಸುಕೆಂಪು ಅಥವಾ ಕಂದು ಬಣ್ಣದ ಬಾಟಲಿಯಲ್ಲಿ ತುಂಬಿಸಿ, ಅಪಾಯ ಸೂಚಕವಾದ ತಲೆ ಬುರುಡೆ ಮತ್ತು ಎಲುಬುಗಳ ಅಡ್ಡ ಚಿತ್ರವನ್ನು ಕೆಂಬಣ್ಣದಲ್ಲಿ ಮುದ್ರಿಸಿ 'ಸೇವನೆ ನಿಶಿದ್ದ' ಎಂಬ ಸೂಚನೆಯನ್ನು ಕೂಡ ಅಚ್ಚು ಮಾಡಿದ ಚೀಟಿಯನ್ನು ಅಂಟಿಸಿ ಮಾರುಕಟ್ಟೆಗೆ ಬಿಡುಗಡೆ ಮಾಡಬೇಕೆಂಬ ನಿಯಮವಿದೆ.

ಸರಕಾರವು ಪಾನನಿರೋಧ ಕಾರ್ಯಕ್ರಮವನ್ನು ಜಾರಿಗೆ ತಂದಾಗಿನಿಂದ ಸೇವನಾರ್ಹವಲ್ಲದ ಈ ಅಶುದ್ಧ ಮದ್ಯವನ್ನು ಕುಡಿಯುವ ಪ್ರಸಂಗಗಳು ಹೆಚ್ಚಾಗತೊಡಗಿದವು. ಕಳ್ಳಭಟ್ಟಿಯನ್ನು ಹೊಲಸು ವಾತಾವರಣದಲ್ಲಿ ಕದ್ದು ಮುಚ್ಚಿ ಅಶುದ್ಧವಾದ ಹಾಗೂ ಆರೋಗ್ಯಕ್ಕೆ ಹಾನಿಕರವಾದ ವಸ್ತುಗಳ ಮಿಶ್ರಣದಿಂದ ತಯಾರಿಸುವುದಷ್ಟೇ ಅಲ್ಲದೇ ಮತ್ತೇರಿಸಲು ವಿಷ ದ್ರವ್ಯಗಳನ್ನು ಸಹ ಕಲಬೆರೆಕೆ ಮಾಡುವುದು ಅಬಾಧಿತವಾಗಿ ನಡೆದಿದೆ. ಇಂತಹ ವಿಷವನ್ನು ಸೇವಿಸಿ ಪ್ರಾಣಾಪಾಯಕ್ಕೆ ಜನರು ತುತ್ತಾಗುತ್ತಿರುವ ವರದಿಗಳು ದಿನನಿತ್ಯ ವೃತ್ತ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುತ್ತವೆ.

ಪ್ರಾಣಾಪಾಯದ ಪ್ರಮಾಣ (ಸೇವನೆ) 100–250 ಮಿಲೀಲೀಟರ್.

ವಿಷಪ್ರಾಶನವಾದ ಒಂದು ತಾಸಿನೊಳಗೆ ವಿಷಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ಕೆಲವೊಮ್ಮೆ 48 ತಾಸುಗಳಷ್ಟು ವಿಳಂಬವಾಗಿ ಕಾಣಿಸುವುದೂ ಇದೆ. ಅಶುದ್ಧ ಮದ್ಯವು ಸೇವನೆ ಹಾಗೂ ಆಘ್ರಾಣ ವಿಷ. ಅಶುದ್ಧ ಮದ್ಯ ಸೇವನೆಯ ದುಷ್ಪರಿಣಾಮವಾಗಿ ಕಣ್ಣುಗಳು ಸಂಪೂರ್ಣ ಕುರುಡಾಗಬಹುದು. ವಿಷಪ್ರಯೋಗಕ್ಕೆ ತುತ್ತಾದ ರೋಗಿಗಳಲ್ಲಿ ಶೇಕಡಾ 25 ಮಂದಿ ಪ್ರಾಣ ಕಳೆದುಕೊಳ್ಳುತ್ತಾರೆ.

**ವಿಷ ಪ್ರಾಶನದ ಲಕ್ಷಣಗಳು :**

ಅಶುದ್ಧ ಮದ್ಯವನ್ನು ಸೇವಿಸಿದ ರೋಗಿಯಲ್ಲಿ ತಲೆತಿರುಗುವುದು, ತಲೆನೋವು ವಾಕರಿಕೆ, ವಾಂತಿ, ಹೊಟ್ಟೆ ನುಲಿತ, ಹೊಟ್ಟೆನೋವು, ಸಂಕಟ, ನಿಶ್ಯಕ್ತಿ, ದೃಷ್ಟಿದೋಷ, ಉಸಿರಾಟಕ್ಕೆ ತೊಂದರೆ, ಮೋರೆ ನೀಲಿಗಟ್ಟುವುದು, ಬಡಬಡಿಕೆ ಮೊದಲಾದ ಉಪದ್ರವಗಳು ಕಾಣಿಸುತ್ತವೆ. ಅವನ ರಕ್ತವ ಒತ್ತಡವು ಇಳಿಮುಖವಾಗುತ್ತದೆ. ಕಣ್ಣುಗುಡ್ಡೆ ಅರಳುತ್ತದೆ. ಅದಿರುವಾಯು, ದೀರ್ಘಸುಪ್ತಿ ಮೊದಲಾದ ಉಪದ್ರವಗಳು ಕ್ರಮೇಣ ಉಂಟಾಗಿ ಸಾವು ಸಂಭವಿಸಬಹುದು –ಬದುಕಿ ಉಳಿದರೂ ಕೂಡಾ ಕಣ್ಣು ಕುರುಡಾಗುವ ಸಂಭವವಿದೆ.

**ಪ್ರತ್ಯೌಷಧ ಚಿಕಿತ್ಸೆ ಮತ್ತು ಉಪಚಾರ :**

ಅಶುದ್ಧ ಮದ್ಯ ವಿಷಕ್ಕೆ ಸಿದ್ಧಪ್ರತ್ಯೌಷಧ – ಶುದ್ಧ ಮದ್ಯ. ವಿಷಪ್ರಾಶನವಾದ ಎರಡು ಗಂಟೆಗಳೊಳಗಾಗಿ ರೋಗಿಗೆ ಚಿಕಿತ್ಸೆ ನೀಡುವುದು ಸಾಧ್ಯವಾದರೆ ಅವನನ್ನು ಪ್ರಾಣಾಪಾಯದಿಂದ ಪಾರು ಮಾಡಬಹುದು. ಶುದ್ಧ ಮದ್ಯವನ್ನು 5–20 ಮಿಲಿ ಲೀಟರ್ ಪ್ರಮಾಣದಲ್ಲಿ ಪ್ರತಿ 2 ತಾಸಿಗೊಮ್ಮೆ ಕುಡಿಸಬೇಕು. ಸೋಡಿಯಂ ಬೈ ಕಾರ್ಬೋನೇಟ್ ದ್ರಾವಣದಿಂದ ಹೊಟ್ಟೆ ತೊಳೆಸಬೇಖು. ದೇಹದ ಶಾಖ ರಕ್ಷಣೆಗೂ, ರಕ್ತಾಮ್ಲತೆಯನ್ನು ತಡೆಗಟ್ಟುವುದಕ್ಕೂ ಸೂಕ್ತ ಚಿಕಿತ್ಸೆ ನಡೆಸಬೇಕು. ರೋಗಿಗೆ ಧಾರಾಳ ದ್ರವ, ಪೌಷ್ಟಿಕ, ಆಹಾರ ಹಾಗೂ ವಿಶ್ರಾಂತಿಯನ್ನು ನೀಡಬೇಕು. ಅವನ ಕಣ್ಣುಗಳನ್ನು ಬೆಳಕಿನಿಂದ ತಾತ್ಕಾಲಿಕವಾಗಿ ಮರೆಮಾಡುವಂತೆ ಪಟ್ಟಿ ಕಟ್ಟಬೇಕು. ಬಡಬಡಿಸುವುದು, ಅದಿರುವಾಯು ಮೊದಲಾದ ಉಪದ್ರವಗಳು ಕಾಣಿಸಿಕೊಂಡಲ್ಲಿ ಸೂಕ್ತ ಚಿಕಿತ್ಸೆ ನಡೆಸಬೇಕು.

## ಅಫೀಮು



ಅಫೀಮು ವೈದ್ಯರ ಕೈಯಲ್ಲಿ ಸಂಜೀವಿನಿ; ಆದರೆ ದುರುಪಯೋಗದಿಂದ ಮಾರಕ ವಿಷ. ವೇದನಾಶಾಮಕ, ಕಫಕರ, ಮಲ ಬಂಧಕ ಹಾಗೈ ರಕ್ತಸ್ರಾವ ನಿರೋಧಕ ಔಷಧಿಯಾಗಿ ಸಾವಿರಾರು ವರ್ಷಗಳಿಂದ ಆಯುರ್ವೇದ ವೈದ್ಯರು ಅಹಿಫೇನವನ್ನು (ಅಫೀಮನ್ನು) ಶುದ್ಧ ಮಾಡಿ ಬಳಸುತ್ತಾ ಬಂದಿದ್ದಾರೆ. ಅಫೀಮು, ಅಫೀನಿ, ಅಫು, ಓಪಿಏವಮ್, ಅಹಿಫೇನ, ಅಪೊಕ ಮೊದಲಾದ ಹೆಸರುಗಳಿಂದ ಕರೆಯಲ್ಪಡುವ ಈ ಅಮಲು ದ್ರವ್ಯ ಹಿಮಾಲಯದ ತಪ್ಪಲಿನಲ್ಲಿಯೂ,

ಕಾಶ್ಮೀರದಲ್ಲಿಯೂ, ಉತ್ತರ ಹಿಂದೂಸ್ಥಾನದ ಅನೇಕ ಭಾಗಗಳಲ್ಲಿಯೂ ಬೆಳೆಯುವ ಅಫೀಮು ಗಿಡದ ದೋರೆಗಾಯಿ 'ಪೋಸ್ತುಫಲ'ದ ನಿರ್ಯಾಸವಾಗಿ ಸಂಗ್ರಹಿಸಲ್ಪಡುವ ದ್ರವ್ಯ ಈ ಕಾಯಿಗಳ ಬೀಜಗಳು ನಾವು ಪಾಯಸಕ್ಕೆ ಬಳಸುವ ರುಚಿಕರವಾದ ಗಸಗಸೆ; ಇದರ ಬೀಜದಿಂದ ಖಸ್‌ಖಸ್ ಎಂಬ ಎಣ್ಣೆಯನ್ನೂ ತೆಗೆಯುತ್ತಾರೆ. ಇವೆರಡೂ ನಿರಪಾಯಕರವಾಗ ನಿರ್ವಿಷ ದ್ರವ್ಯಗಳು.

ಅಫೀಮು ಮೂಲರೂಪದಲ್ಲಿ ಅಸಹ್ಯ ವಾಸನೆಯುಳ್ಳ ಕಹಿ ಮೇಣದ ಮುದ್ದೆ. ಇದನ್ನು ಸೇವಿಸುವ ಚಟಕ್ಕೆ ಬಲಿಯಾದವರು ತಮ್ಮ ತಲೆಯ ಮೇಲೆ ತಾವೇ ಕಲ್ಲು ಚಪ್ಪಡಿಯನ್ನು ಎಳೆದುಕೊಳ್ಳುತ್ತಾರೆ. ದಿನದಿಂದ ದಿನಕ್ಕೆ ತಾನು ಸೇವಿಸುವ ಅಫೀಮಿನ ಪ್ರಮಾಣವನ್ನು ಅವರು ಹೆಚ್ಚಿಸುತ್ತಲೇ ಹೋಗುತ್ತಾರೆ. ಕೊನೆಗೆ ಏನೇ ಆಗಲಿ ಒಂದರೆಗಳಿಗೆಯೂ ಅಫೀಮಿನ ನಶೆಯನ್ನು ಬಿಟ್ಟಿರಲಾಗದು ಎನ್ನುವಷ್ಟು ಮಟ್ಟಿಗೆ ಚಟದ ಗುಲಾಮರಾಗುತ್ತಾರೆ. ಸಟ್ಟಾ, ಜುಗಾರಿ, ಮಟಕಾ ದುರ್ವ್ಯಸನಗಳಲ್ಲಿ ಸರ್ವನಾಶ ಮಾಡಿಕೊಂಡವರೂ, ಅನಿರೀಕ್ಷಿತ ಸೋಲು ನಿರಾಶೆಗಳನ್ನು ಎದುರಿಸಬೇಕಾಗಿ ಬಂದ ಅಂಜುಬುರುಕರೂ, ವಿಫಲ ಸಾಹಸಗಳಿಂದ ನೊಂದವರೂ, ದೀರ್ಘಕಾಲ ವ್ಯಾಧಿಪೀಡಿತರಾಗಿ ನರಳುವವರೂ, ಪ್ರಣಯಭಂಗಕ್ಕೆ ತುತ್ತಾದವರೂ, ಪ್ರಾಣ ಕಳೆದುಕೊಳ್ಳಲು ಮೊರೆಹೋಗುವ ಸುಲಭ ಸಾಧನಗಳಲ್ಲಿ ಅಫೀಮು ಮುಖ್ಯ ವಸ್ತುವಾಗಿದೆ. ಕೊಲೆ, ಸುಲಿಗೆ, ಮತ್ತು ವಂಚನೆಗಳ ದುರುದ್ದೇಶದಿಂದ ಅಫೀಮನ್ನು ದುರುಪಯೋಗಿಸುವುದೂ ಉಂಟು. ಮಕ್ಕಳು, ಎಳೆಗೂಸುಗಳು ಹಾಗೂ ಸ್ತ್ರೀಯರು ಸಹ ಅಫೀಮು ವಿಷಕ್ಕೆ ತುತ್ತಾಗುತ್ತಾರೆ. ಅಫೀಮು ಪ್ರಾಣಿ ಪಕ್ಷಿಗಳಿಗೂ ಕೂಡ ವಿಷ. ಅಫೀಮನ್ನು ನಾನಾ ರೂಪದಲ್ಲಿ ಸೇವಿಸುತ್ತಾರೆ. ಗುಳಿಗೆಗಳನ್ನು ಮಾಡಿ, ಲೇಹ್ಯ, ಶರಬತ್ತುಗಳ ರೂಪದಲ್ಲಿ ಬಳಸುವುದು ಸರ್ವ ಸಾಮಾನ್ಯ ಪದ್ಧತಿ. ಸೂಜಿಮದ್ದಿನ ಪ್ರಯೋಗವೂ ಇದೆ.

ಪ್ರಾಣಾಪಾಯದ ಪ್ರಮಾಣ (ಸೇವನೆ) : ಕೋಡಿನ್ 60–120 ಮಿಲಿಗ್ರಾಂ, ಹೆರೋಯಿನ್ 0.2 ಗ್ರಾಂ., ಮಾರ್ಫಿನ್ 0.2 ಗ್ರಾಂ., ಅಫೀಮು 0.3 ಗ್ರಾಂ. ಕಪೂರದ ಅರ್ಕದಲ್ಲಿ 60 ಗ್ರಾಂ, ಚಟಕ್ಕೆ ಬಿದ್ದವರು ಇದಕ್ಕಿಂತ ಅಧಿಕ ಪ್ರಮಾಣದ ಅಫೀಮನ್ನು ಅರಗಿಸಿಕೊಳ್ಳಬಲ್ಲರು. ಹಸಿದ ಹೊಟ್ಟೆಯಲ್ಲಿ ಅಥವಾ ಮದ್ಯದಲ್ಲಿ ಬೆರಸಿದ ಅಫೀಮು ಅತ್ಯಲ್ಪ ಪ್ರಮಾಣದಲ್ಲಿ ಕೂಡಾ ಹೆಚ್ಚು ದುಷ್ಪರಿಣಾಮವುಂಟು ಮಾಡಬಲ್ಲದು.

**ದೀರ್ಘಕಾಲದ ವಿಷ ಪ್ರಯೋಗದ ಲಕ್ಷಣಗಳು :**

ಅಫೀಮು ವಿಷ ಪ್ರಯೋಗಕ್ಕೆ ದೀರ್ಘಕಾಲ ತುತ್ತಾದ ರೋಗಿಯು – ಮುಖ್ಯವಾಗಿ ಅಫೀಮು ತಿನ್ನುವ ಅಥವಾ ಅಫೀಮ ಸೂಜಿಮದ್ದು ತೆಗೆದುಕೊಳ್ಳುವ

ಚಟಕ್ಕೆ ಬಿದ್ದವನು – ಅನೇಕ ದುಷ್ಪರಿಣಾಮಗಳಿಗೆ ಬಲಿಯಾಗುತ್ತಾನೆ. ಅವನ ದೇಹವು ಸೊರಗಿ, ಕೂದಲು ಒಣಗಿ, ಚರ್ಮವೂ ಒಣಗಿ ಸುಕ್ಕುಗಟ್ಟುತ್ತದೆ. ಅವನ ಕೆನ್ನೆ, ಹುಬ್ಬು, ರೆಪ್ಪೆ ಮತ್ತು ಬಾಯಿಯ ಸುತ್ತು ಒಣಮಚ್ಚೆಗಳು ಕಾಣಿಸುತ್ತವೆ. ನಾಲಗೆ ಹೊಲಸಾಗುತ್ತದೆ. ಮಲಬದ್ಧತೆ, ಅಗ್ನಿಮಾಂದ್ಯ, ಅರುಚಿ ಮತ್ತು ವಾಕರಿಕೆಗಳು ಉಂಟಾಗುತ್ತವೆ. ಅವನ ಚರ್ಮವು ಬಿಳಿಸಿಚಿಕೊಳ್ಳುತ್ತದೆ. ಉಗುರುಗಳು ಸೀಳುತ್ತವೆ ಹಾಗೂ ಕೂದಲುಗಳು ಉದುರುವುವು. ಬಾಯಿ ಒಣಗುವುದು, ನೀರಡಿಕೆ ಮತ್ತು ಕೆಲವು ಸಲ ತಡೆಯಲಾರದಂತಹ ಹಸಿವು ಕಾಡುತ್ತದೆ. ಛಳಿ, ಜ್ವರ, ತಲೆನೋವು, ಎದೆಭಾರ, ಕರುಳುನುಲಿತ ಹಾಗೂ ರಕ್ತಮಿಶ್ರಿತ ಭೇದಿ ಸಹ ಉಂಟಾಗಬಹುದು. ನೀರಡಿಕೆ ಮತ್ತು ಕೆಲವು ಸಲ ತಡೆಯಲಾರದಂತಹ ಹಸಿವು ಕಾಡುತ್ತದೆ. ಛಳಿ, ಜ್ವರ, ತಲೆನೋವು, ಎದೆಭಾರ, ಕರುಳಿನುಲಿತ ಹಾಗೂ ರಕ್ತಮಿಶ್ರಿತ ಭೇದಿ ಸಹ ಉಂಟಾಗಬಹುದು. ಕೆಲವೊಮ್ಮೆ ಮೂತ್ರವಿಕಾರವೂ ಕಾಣಿಸಬಹುದು. ರೋಗಿಯ ಕಣ್ಣುಬೊಂಬೆಯು ಕಿರಿದಾಗಿರುತ್ತದೆ. ಕಣ್ಣುಉರಿ, ಕಣ್ಣೀರು ಸುರಿಯುವುದು ಮೊದಲಾದ ಉಪದ್ರವಗಳು ಪ್ರಾರಂಭವಾಗುವುದು. ಕೆಮ್ಮು, ನೀರಾದ ಕಫ ಮೊದಲಾದ ತೊಂದರೆಗಳು ಉಂಟಾಗುತ್ತವೆ. ರೋಗಿಯಲ್ಲಿ ಮೊದಲಿಗೆ ಅತಿಶಯವಾಗಿ ಕಾಣಿಸಿಕೊಂಡ ಕಾಮಾಸಕ್ತಿಯು ಕ್ರಮೇಣ ಕಮ್ಮಿಯಾಗುತ್ತ ಬಂದು, ಕೊನೆಗೆ ಸಂಪೂರ್ಣ ನಾಶವಾಗುತ್ತದೆ. ಸ್ತ್ರೀಯರಲ್ಲಿ ಋತುಸ್ರಾವದ ಏರುಪೇರು ಉಂಟಾಗುತ್ತದೆ. ಭ್ರಮೆ ಮತ್ತು ಬುದ್ಧಿ ವಿಕಾರಗಳು ಸಹ ಕಾಣಿಸಬಹುದು. ಹುಚ್ಚುಹುಚ್ಚಾದ ವರ್ತನೆ, ತೊದಲುಮಾತು ಮತ್ತು ಸರ್ವಾಂಗ ವೇದನೆಯಿಂದ ನರಳುವಂತೆ ದುಃಖಿಸುತ್ತ ರೋಗಿಯು ಆತಂಕಪಡುತ್ತಿದ್ದು ಈ ಸ್ಥಿತಿಯಲ್ಲಿ ಅವನ ಏಕೈಕ ಉದ್ದೇಶವೆಂದರೆ ಹೇಗಾದರೂ ಮಾಡಿ ಅಫೀಮನ್ನು ಗಿಟ್ಟಿಸಿಕೊಂಡು ಮುಕ್ಕುವುದೊಂದೇ ಎಂಬಷ್ಟು ಹೀನಾವಸ್ಥೆಗೆ ತಲುಪಿರುತ್ತದೆ.

ಅಫೀಮು ಸೇವನೆಯ ಚಟಕ್ಕೆ ಬಿದ್ದ ರೋಗಿಗೆ ಚಿಕಿತ್ಸೆಯೆಂದು ತಕ್ಷಣ ಅಫೀಮನ್ನು ವರ್ಜಿಸಬಾರದು. ರೋಗಿಯು ಅಧಃಪತನದಿಂದ ತಪ್ಪಿಸಲು ದೃಢ ನಿರ್ಧಾರ ಕೈಗೊಂಡು, ಪರಿಣಿತ ವೈದ್ಯರ ಸಹಲಹೆ ಹಾಗೂ ಮೇಲ್ವಿಚಾರಣೆಯಲ್ಲಿ ಚಿಕಿತ್ಸೆ ನಡೆಸಿದರೆ ಅವನು ಚಟಮುಕ್ತನಾಗುವುದು ಸಾಧ್ಯ.

**ವಿಷಪ್ರಯೋಗದ ಲಕ್ಷಣಗಳು :**

ವಿಷಪ್ರಮಾಣದಲ್ಲಿ ಅಫೀಮನ್ನು ಸೇವಿಸಿದರೆ ಅರ್ಧತಾಸಿನೊಳಗಾಗಿ ಕೆಲವೊಮ್ಮೆ ಸೇವಿಸಿದ ಕೆಲವೇ ನಿಷಿಮಗಳೊಳಗಾಗಿ ಉಪದ್ರವಗಳು ಕಾಣಿಸುತ್ತವೆ. ಮೊದಲು ರೋಗಿಯು ಉದ್ರೇಕಾವಸ್ಥೆಯನ್ನು ಅನುಭವಿಸುತ್ತಾನೆ. ಹೃದಯದ ಚಟುವಟಿಕೆ

ಹೆಚ್ಚಿ ಅವನು ಅತ್ಯಂತ ಉಲ್ಲಾಸಭರಿತನಾಗುತ್ತಾನೆ. ಅವನ ಮೋರೆಯು ಕೆಂಪೇರುತ್ತದೆ. ಕ್ರಮೇಣ ತಳಮಳವೂ, ಅಸಂಬದ್ಧ ಮಾತುಗಳೂ ಪ್ರಲಾಪವೂ ತೊಡಗಿ ರೋಗಿಯು ಅಶಾಂತಿಯ ತುಮುಲಕ್ಕೆ ಬಲಿಯಾಗುತ್ತಾನೆ. (ಕೆಲವರಲ್ಲಿ ಈ ಸ್ಥಿತಿಯು ಕ್ಷಣಕಾಲ ಇರಬಹುದು, ಇನ್ನು ಕೆಲವರಲ್ಲಿ ತುಸು ಹೆಚ್ಚು ಹೊತ್ತು ಇರಬಹುದು.)

ರೋಗಿಯು ತೂಕಡಿಕೆಯ ಸ್ಥಿತಿಗೆ ಮುಟ್ಟುವುದು ಎರಡನೆಯ ಹಂತ. ತಲೆನೋವು, ಬಾಯಾರಿಕೆ, ವಾಕರಿಕೆ, ವಾಂತಿ, ಕಣ್ಣುಕತ್ತಲು ಬರುವುದು, ಆಯಾಸ ಮತ್ತು ಹೆಚ್ಚಿನ ತೂಕಡಿಕೆ ಮತ್ತು ನಿದ್ರಿಸುವ ಉತ್ಕಟ ಅಪೇಕ್ಷೆಗಳು ಉಂಟಾಗುತ್ತದೆ. ಅವನ ಮುಖವು ನಿಸ್ತೇಜವಾಗಿ, ಕಣ್ಣು ಬೊಂಬೆಯು ತೀರ ಕಿರಿದಾಗುತ್ತದೆ. ಮೈತುರಿಕೆ (ನವೆ) ಉಂಟಾಗುತ್ತದೆ. ರೋಗಿಯ ನಾಡಿ ಮತ್ತು ಉಸಿರಾಟ ಈ ಹಂತದಲ್ಲಿ ಕೂಡಾ ಏರುಪೇರಾಗಿರುವುದಿಲ್ಲ.

ಮುಂದಿನ ಅವಸ್ಥೆ ಮೂರ್ಛಾವಸ್ಥೆ. ಈಗ ರೋಗಿಯನ್ನು ಎಚ್ಚರಿಸುವುದು ಸಾಧ್ಯವಾಗುವುದಿಲ್ಲ. ಅವನ ಕಣ್ಣುಗಳು ಬೆಳಕಿಗೆ ಪ್ರತಿಸ್ಪಂದಿಸುವುದಿಲ್ಲ, ಶೀತೋಷ್ಣಸ್ಪರ್ಶಗಳಿಗೆ ಇಂದ್ರಿಯ ಪ್ರತಿಕ್ರಿಯೆಗಳು ಲೋಪವಾಗಿರುತ್ತವೆ. ಅವನ ರಕ್ತದ ಒತ್ತಡವು ಇಳಿಮುಖವಾಗಿ ಉಸಿರಾಟದ ಗತಿಯು ತೀರ ಮಂದವಾಗುತ್ತ ಒಂದು ನಿಮಿಷಕ್ಕೆ ಕೇವಲ 2–3 ಸಲ ಉಸಿರಾಡುವುದೂ ಉಂಟು. ಚರ್ಮತಣ್ಣಗೆ ಜಿಡ್ಡಾಗಿರುತ್ತದೆ. ಈ ವಿಷಮ ಪರಿಸ್ಥಿತಿಯಲ್ಲಿಯೂ ಸಹ ಸೂಕ್ತ ಚಿಕಿತ್ಸೆ ನೀಡಿದರೆ ರೋಗಿಯನ್ನು ಪ್ರಾಣಾಪಾಯದಿಂದ ಕಾಪಾಡಬಹುದು. ಇಲ್ಲವಾದರೆ ನಾಡಿಯು ಕ್ಷೀಣವಾಗಿ ವಕ್ರವಗುವುದಲ್ಲದೆ ಉಸಿರಾಟವೂ ಕೂಡ ತೀರ ಅಸ್ತವ್ಯಸ್ತಗೊಂಡು ಜ್ವರ, ಭೇದಿ ಮತ್ತು ಅದಿರುವಾಯು ಕಾಣಿಸಿಕೊಳ್ಳಬಹುದು. ಈ ಹಂತದಲ್ಲಿ ಕಣ್ಣು ಗೊಂಬೆ ಅರಳುತ್ತದೆ ಮತ್ತು ಮರಣ ಸಂಭವಿಸುತ್ತದೆ. ರೋಗಿಯ ಉಸಿರಿನಲ್ಲಿ ಅಫೀಮಿನ ವಾಸನೆ ಬೆರೆತಿರುವುದು ನಿಜವಾದರೂ ಮದ್ಯಪಾನವೂ, ರೋಗಿಯು ಸೇವಿಸಿದ ತಂಬಾಕು, ಸುಗಂಧದ್ರವ್ಯ ಮೊದಲಾದವುಗಳು ಈ ವಾಸನೆಯಲ್ಲಿ ಮರೆಮಾಡಬಹುದು.

ರೋಗಿಯನ್ನು ಉಗುರು ಬೆಚ್ಚಗಿನ ನೀರಿನಿಂದ ಮೊದಲು ಹೊಟ್ಟೆ ತೊಳೆದು ರಾಸಾಯನಿಕ ವಿಶ್ಲೇಷಣೆಗೆ ಅಗತ್ಯವೆನಿಸಿದರೆ ಅದನ್ನು ತೆಗೆದಿರಿಸಬೇಕು. ಅನಂತರ ಪೊಟಾಸಿಯಂ ಪರಮಾಂಗನೇಟಿನ ದುರ್ಬಲ ದ್ರಾವಣದಿಂದ ಅದು ದೊರಕದಿದ್ದರೆ ಚಹದಿಂದ ಹೊಟ್ಟೆ ತೊಳಯುವುದ, ವಮನ ಮಾಡಿಸುವುದು ಹಾಗೂ ವಿರೇಚನ ಚಿಕಿತ್ಸೆ ನಡೆಸಬೇಕು. ಕೃತಕ ಉಸಿರಾಟ ಮತ್ತು ಆಮ್ಲಜನಕ ನೀರಡಿಕೆಗಳನ್ನು ಅಗತ್ಯ ಬಿದ್ದರೆ ಒದಗಿಸಬೇಕು. ರೋಗಿಯ ದೇಹದ ಶಾಖವನ್ನು ಕಾಪಾಡಲು

ಸೂಕ್ತ ಉಪಚಾರವನ್ನು ಕೈಗೊಳ್ಳಬೇಕು. ಎಫಿಡ್ರಿನ್, ಎಡ್ರಿನಾಲಿನ್, ಎಟ್ರೋಪಿನ್ ಮತ್ತು ಕೊರಾಮಿನ್ ಸೂಜಿಮದ್ದುಗಳು ಉಪಯುಕ್ತವಾಗಿವೆ.

ಅಫೀಮು, ವಿಷಕ್ಕೆ ಪ್ರತ್ಯೌಷಧ ನಲ್ಲಿನೇ ಸೂಜಿಮದ್ದು ಮತ್ತು ಎಟ್ರೋಫಿನ್ ಸಲ್ಫೇಟ್.

**ಟಿಪ್ಪಣಿ**

ಅಫೀಮು ವಿಶಪ್ರಾಶನದ ಹಿನ್ನೆಲೆಯಲ್ಲಿ ಆತ್ಮಹತ್ಯೆ ಅಥವಾ ಕೊಲೆಯ ಹಿನ್ನೆಲೆಯಿರಬಹುದು ಎಂಬುದನ್ನು ಸದಾ ಜ್ಞಾಪಕದಲ್ಲಿ ಇಟ್ಟುಕೊಳ್ಳಬೇಕು. ಸಣ್ಣ ಮಕ್ಕಳಿಗೆ ಅವು ನೀಡಿ ತಾಯಂದಿರು ಕೆಲಸಗಳಿಗೆ ನಿರ್ಯೋಚನೆಯಿಂದ ಹೋಗುವ ಪರಿಪಾಠವಿದೆ. ಇದನ್ನು ಕೈಬಿಡಬೇಕು.

## ಬಂಗಿ

ಹಿಮಾಲಯದ ತಪ್ಪಲಿನಲ್ಲಿ ಬೆಳೆಯುವ ಬಂಗಿ ಗಿಡ ಉದ್ದವಾದ ಹಸಿರೆಲೆ, ನಸುಹಳು, ಹಸುರು ಹೂವಿನ ಸಣ್ಣಗಿಡಮೂಲಿಕೆಯಾಗಿದೆ. ಬಂಗಿ ಗಿಡವನ್ನು ನೆಟ್ಟು ಬೆಳೆಸಲು ಸರಕಾರದ ಪರವಾನಿಗೆ ಪಡೆಯಬೇಕೆಂಬ ನಿಯಮವಿದೆ. ಬಂಗಿಯನ್ನು ಗಾಂಜಾ ಎಂದೂ ಕರೆಯುತ್ತಾರೆ. ಬಂಗಿಯಲ್ಲಿ 'ಕೆನ್ನಾಬಿನಾಲಿ' ಎಂಬ ವಿಷ ಸತ್ವವಿದೆ.



ಬಂಗಿ ಗಿಡದ ಎಲೆ, ಮೃದುಟೊಂಗೆ, ಕಡ್ಡಿ, ಹೂವು, ಹೀಚು ಮೊದಲಾದವನ್ನು ಶುದ್ಧಮಾಡಿ ತಾಂಬೂಲದೊಡನೆ ಸವಿಯುತ್ತಾರೆ. ಹಾಲು, ಸಕ್ಕರೆ ಬೆರೆಸು ಹೀರುತ್ತಾರೆ. ಬೆಣ್ಣೆಗುಳಿಗೆ ಮಾಡಿ ಮೆಲ್ಲುತ್ತಾರೆ. ಇಷ್ಟು ಮಾತ್ರವಲ್ಲದೆ ಇನ್ನೂ ನಾನಾ ಬಗೆಗಳಿಂದಲೂ ಬಳಸುತ್ತಾರೆ. ಸೂಜಿ ಮದ್ದಿನಂತೆ ಸ್ವೀಕರಿಸುವುದೂ ಉಂಟು.

ಬಂಗಿಯನ್ನು ಹೊಟ್ಟೆ ಹಸಿದಿದ್ದಾಗ ಸೇವಿಸಿದರೆ ಅರ್ಧ ತಾಸಿನೊಳಗಾಗಿಯೂ, ಇನ್ನು ಕೆಲವುಸಲ (ಊಟ ಮಾಡಿದ ನಂತರ ಇತ್ಯಾದಿ) 4–6 ತಾಸುಗಳಷ್ಟು ದೀರ್ಘಾವಧಿಯ ಮೇಲೂ ವಿಷ ಪರಿಣಾಮಗಳು ಕಾಣಿಸುತ್ತವೆ. ಮೊದಮೊದಲು

ಅತ್ಯತ್ತೇಜನ, ವಿಲಕ್ಷಣ ಸ್ಫೂರ್ತಿ, ಧೈರ್ಯ ಹಾಗೂ ಆನಂದೋಲ್ಲಾಸಗಳು ಕಾಣಿಸಿಕೊಳ್ಳುವವು. ಕಾಮೋತ್ತೇಜನಗೊಳ್ಳುವುದಲ್ಲದೆ ತುದಿ, ಮೊದಲಿಲ್ಲದ ಮನಸೋಕ್ತ ಮಾತುಗಳಿಗೆ ಮೊದಲಾಗುತ್ತದೆ. ಒಟ್ಟಿನಲ್ಲಿ ಬಂಗಿ ಕುಡಿದವನು ಸ್ವರ್ಗಸುಖವನ್ನು ಅನುಭಸುತ್ತಿರುವಂತೆ ಆನಂದೋನ್ಮತ್ತನಾಗಿ ಇದ್ದುಕ್ರಮೇಣ ನಿಶ್ಶಕ್ತಿ, ತೂಕಡಿಕೆ, ನಿದ್ರೆ ಮತ್ತು ಸುಷಪ್ತಿ ಸ್ಥಿತಿಗೆ ತಲುಪುತ್ತಾನೆ. ಬಂಗಿಯ ಮದವು 3–4 ತಾಸುಗಳಷ್ಟು ಹೊತ್ತು ಇರುತ್ತದೆ.

ಗಾಂಜಾದ ಒಣಗಿದ ಎಲೆ, ಕಡ್ಡಿ, ಹೀಚುಗಳನ್ನು ಬೇಯಿಸಿ ಕಷಾಯಮಾಡಿ, ಕಾಳುಮೆಣಸು ಮತ್ತು ಕಲ್ಲುಸಕ್ಕರೆ ಬೆರಸಿ 'ಬಂಗಿ ಪಟ್ಟಿ–ಸಬ್ಜಿ' ಎಂಬ ಹೆಸರಿನ ಸಣ್ಣಸಣ್ಣ ಗುಳಿಗೆಗಳನ್ನು ತಯಾರಿಸಿ ಪಾನಕದೊಂದಿಗೆ ಕಲಸಿ ಕುಡಿಯುವುದೂ ರೂಢಿಯಲ್ಲಿದೆ. ಇಂತಹ ರೋಗಿಗಳು ಅನೇಕ ಬಗೆಯ ಆಮೋದ ಪ್ರಮೋದಗಳಲ್ಲಿ ತೊಡಗಿ, ನೃತ್ಯ–ಸಂಗೀತಾದಿಗಳಲ್ಲಿಯೂ, ರತಿಸುಖದಲ್ಲಿಯೂ ಆಸಕ್ತರಾಗಿ ಯಥೇಚ್ಛ ಆನಂದಿಸುತ್ತಾರೆ. ಅಂತಹವರಲ್ಲಿ ಪಾನ ಭೋಜನಗಳ ಮೇಲೆ ಹೆಚ್ಚಿನ ಅಪೇಕ್ಷೆ ಕಾಣಿಸುತ್ತದೆ. ಸುಮಾರು 4 ತಾಸುಗಳ ನಂತರ ಅವರು ನಿದ್ರಾಪರವಶರಾಗುತ್ತಾರೆ.

ಬಂಗಿ ಗಿಡದ ಎಲೆಗಳನ್ನು ಚೂರ್ಣಮಾಡಿ ಹಾಲು, ಬೆಣ್ಣೆ, ಸಕ್ಕರೆ ಮತ್ತು ಗೋಧಿಹಿಟ್ಟಿನೊಂದಿಗೆ ಮಿಶ್ರಮಾಡಿ ತಯಾರಿಸುವ 'ಮಾಜುನ್ ಹಲ್ವಾ ರುಚಿಕರವಾದ ಸುಮಧುರ ತಯಾರಿಕೆಯಾಗಿದ್ದು, ಇದನ್ನು ಸೇವಿಸಿದ ರೋಗಿಯು ತಾನೊಬ್ಬ ರಾಜ–ಮಹಾರಾಜ ವಂಶಸ್ಥನೆಂಬ ಭ್ರಮೆಗೊಳಗಾಗಿ ಮನಸ್ಸಿನಲ್ಲಿ ಸಂತೋಷಪಡುತ್ತಾ ಆನಂದ ಸಾಗರದಲ್ಲಿ ತೇಲುತ್ತಾನೆ. ಬಂಗಿಯ ಹೂ, ಹೀಚುಗಳನ್ನು ಒಣಗಿಸಿ ತಯಾರಿಸಿದ ಗಾಂಜಾ ಹಸುರಾಗಿದ್ದು, ಬಂಗಿಯ ವಾಸನೆಯಿಂದ ಕೂಡಿರುತ್ತದೆ. ಇದನ್ನು ಚಿಲುಮೆಯಲ್ಲಿಟ್ಟು ಅಥವಾ ತಂಬಾಕಿನೊಂದಿಗೆ ಸೇರಿಸಿ ಸೇವಿಸುತ್ತಾರೆ. ಸಾಧು– ಸನ್ಯಾಸಿಗಳಿಗೂ, ಬಾವಾಜಿ ಬೈರಾಗಿಗಳಿಗೂ ಈ ಭಂಗಿಯ ಹೊಗೆ ಆನಂದ ಲೋಕದಲ್ಲಿ ವಿಹರಿಸಲು ರಹದಾರಿ ನೀಡುತ್ತದೆ. ಬಂಗಿ ಗಿಡದ ಎಲೆ, ಟೊಂಗೆಗಳಿಂದ ಬರುವ ಮೇಣವನ್ನು ಸಂಗ್ರಹಿಸಿ ತಂಬಾಕಿನೊಂದಿಗೆ ಬೆರೆಸಿ ಹುಕ್ಕಾ ಸೇವಿಸುತ್ತಾರೆ. (ಇದನ್ನು 'ಚರಸ್' ಎಂದೂ ಕರೆಯುತ್ತಾರೆ. ಸಿಗರೇಟಿನಂತೆ ಸೇವನೆಗೆ ಬರುವ ಚರಸ್ಸಿಗೆ ಕೂಟ ಪ್ರಮೋದಗಳಲ್ಲಿ ಅಗ್ರಮಾನ್ಯತೆಯಿದೆ).

ರೀಫರ್, ಪಾಟ್, ವೀಡ್, ಇಂಡಿಯನ್ ಹೇ, ಗ್ರಾಸ್, ಆಸಿಡ್, ಮೆರಿಜೇನ್, ಎಲ್.ಎಸ್.ಡಿ. ಮೊದಲಾದ ಹೆಸರಿನ ನಾನಾ ಬಗೆಯ ಗಾಂಜಾ ಸಿದ್ಧಮಾದಕ ದ್ರವ್ಯಗಳು ಹಿಪ್ಪಿ ಕುಲಕ್ಕೆ ಸೇರಿದ ಭ್ರಾಮಕ ತರುಣ ಪೀಳಿಗೆಯ ಬದುಕಿನ ಉಸಿರು ಮತ್ತು ಅನ್ನಾಹಾರವಾಗಿದೆ ಎಂದರೆ ಅತಿಶಯೋಕ್ತಿಯಲ್ಲ.

### ವಿಷಪ್ರಯೋಗದ ಲಕ್ಷಣಗಳು

ಬಂಗಿ ಸೇವಿಸಿದ ರೋಗಿಯು ಮೊದಲು ಉದ್ರೇಕ ಚಿತ್ತಪ್ರವೃತ್ತಿಯನ್ನೂ ಭ್ರಮೆಯನ್ನು ಏಕಕಾಲದಲ್ಲಿ ಅನುಭವಿಸುತ್ತಾನೆ. ನಗುವುದು, ಹರಟುವುದು, ವಾಚಾಳತ್ವ, ಅಕಾರ ಕುಣಿತ ಮೊದಲಾದ ಮನಸ್ವೀ ಚಟುವಟಿಕೆಗಳೂ, ಹೆಚ್ಚಿನ ಹಸಿವೂ, ಕಾಮಾಸಕ್ತಿಯೂ ಉಂಟಾಗುತ್ತವೆ ಹಾಗೂ ಅವನ ವಿವೇಕ ವಿವೇಚನಾಶಕ್ತಿಗಳು ಶೂನ್ಯವಾಗಿಬಿಡುತ್ತವೆ. ಸ್ಥಳ, ಸನ್ನಿವೇಶಗಳನ್ನೆಲ್ಲ ಮರೆತು, ಯದ್ವಾತದ್ವಾ ನಡೆನುಡಿಗಳು ಪ್ರಾರಂಭವಾಗುತ್ತವೆ. ಒಮ್ಮೊಮ್ಮೆ ಕೊಲೆಗಡುಕ ಪ್ರವೃತ್ತಿಯು ಸಹ ತಲೆಹಾಕಬಹುದು. ತಲೆತಿರುಗುವುದು, ಮೈಮೇಲೆ ಇರುವೆ ಹರಿದಂತಾಗುವುದು ಮತ್ತು ತೂಕಡಿಕೆ ಮೊದಲಾದ ಉಪದ್ರವಗಳು ಕಂಡುಬರುವುವು. ಮುಂದಿನ ಹಂತದಲ್ಲಿ ರೋಗಿಯ ಅರಿವು ತಪ್ಪುತ್ತದೆ. ಮೊದಲು ಕಿರಿದಾಗಿದ್ದ ಅವನ ಕಣ್ಣುಬೊಂಬೆ ಈ ಸ್ಥಿತಿಯಲ್ಲಿ ಅರಳಿ ದೊಡ್ಡದಾಗುತ್ತದೆ ಹಾಗೂ ಗಾಢ ನಿದ್ರೆ ಅವನನ್ನು ಆವರಿಸುತ್ತದೆ. ಉಸಿರಾಟದ ಅವರೋಧದಿಂದ ಸಾವು ಸಂಭವಿಸಬಹುದು.

### ಚಿಕಿತ್ಸೆ ಮತ್ತು ಉಪಚಾರ

ಬಂಗಿ ಸೇವಿಸಿದ ರೋಗಿಗೆ ವಮನ, ವಿರೇಚನ ಮತ್ತು ಹೊಟ್ಟೆ ತೊಳೆಯುವ ಚಿಕಿತ್ಸೆಗಳನ್ನು ನಡೆಸಬೇಕು. ಅಗತ್ಯಬಿದ್ದರೆ ಕೃತಕ ಉಸಿರಾಟ ಹಾಗೂ ಆಮ್ಲಜನಕ ನೀಡಿಕೆಗಳನ್ನು ಪೂರೈಸಬೇಕು. ಉತ್ತೇಜಕ ಔಷಧಿ, ಪಾನಪೇಯಗಳನ್ನು ನೀಡಬೇಕು. ಎಟ್ರೋಪಿನ್, 'ಸ್ಟ್ರಿಕ್‌ನೀನ್', ಕೊರಾನಿನ್ ಸೂಜಿಮದ್ದುಗಳು ಉಪಯುಕ್ತವಾಗಿವೆ. ಆಯುರ್ವೇದ ವೈದ್ಯರು ಲಕ್ಷ್ಮೀವಿಲಾಸರಸ ಬೃಹತ್ ವಾತಚಿಂತಾಮಣಿರಸ (ಭಸ್ಮ ಪ್ರಯೋಗ) ನೀಡುತ್ತಾರೆ. ಹಸಿ ಶುಂಠಿಯ ಕಲ್ಕವನ್ನು ಮೊಸರಿನಲ್ಲಿ ಕಲಸಿ ಕುಡಿಸುವುದು, ಹುಣಸೆ ಎಲೆಯ ಕಲ್ಕವನ್ನು ತಿನ್ನಿಸುವುದು, ನೇರಲ ಚಿಗುರೆಲೆಯನ್ನು ನೀರಿನಲ್ಲಿ ಅರೆದು ಕುಡಿಸುವುದು, ಚಿಲ್ಲಿಬೀಜವನ್ನು ಮಜ್ಜಿಗೆಯಲ್ಲಿ ಅರೆದು ಕುಡಿಸುವುದು, ಅಕ್ಕಿ ತೊಳೆದ ನೀರು (ಕಲಗಚ್ಚು) ಕುಡಿಸುವುದು ಮೊದಲಾದ ಚಿಕಿತ್ಸೆಗಳ ಪೈಕಿ ಯಾವುದಾದರೂ ಒಂದನ್ನು ಕೂಡಾ ನಡೆಸಬಹುದು.

### ದೀರ್ಘಕಾಲ ವಿಷಪ್ರಯೋಗ ಲಕ್ಷಣ ಚಿಕಿತ್ಸೆ

ಬಂಗಿ ಸೇವಿಸುವ ಚಟಕ್ಕೆ ಬಿದ್ದು ದೀರ್ಘಕಾಲ ವಿಷಪ್ರಯೋಗಕ್ಕೆ ತುತ್ತಾದ ರೋಗಿಯು ಅನ್ನ ಆಹಾರಗಳಲ್ಲಿ ಆಸಕ್ತಿಯನ್ನೂ, ಬಾಯಿ ರುಚಿಯನ್ನೂ ಕಳೆದುಕೊಳ್ಳುತ್ತಾನೆ. ಅವನ ದೇಹವು ಸೊರಗಿ ಕಡ್ಡಿಯಂತಾಗುತ್ತದೆ; ಕೈಕಾಲು ನಡುಗುತ್ತದೆ. ಮುಖದಲ್ಲಿ ಕಳೆಯೇ ಇರುವುದಿಲ್ಲ. ಅವನು ದೈನ್ಯತೆ, ಸಂತಾಪ ಹಾಗೂ ಚಾಂಚಲ್ಯತೆಯ ಸಾಕಾರ ಮೂರ್ತಿಯಂತೆ ಕಾಣುತ್ತಾನೆ. ಅವನಲ್ಲಿ

ಕಾಮಾಸಕ್ತಿಯು ಸಂಪೂರ್ಣ ಲೋಪವಾಗಿರುತ್ತದೆ. ಸದ್ಬುದ್ಧಿ, ನೀತಿ, ವಿವೇಕ, ವಿವೇಚನಾಶಕ್ತಿಗಳೆಲ್ಲ ಗಾಳಿಯಲ್ಲಿ ತೂರಿಹೋಗುತ್ತವೆ. ಬುದ್ಧಿಭ್ರಮಣೆಗೆ ತುತ್ತಾಗುವುದೂ ಅಪರೂಪವೇನಲ್ಲ. ಬಂಗಿ ವಿಷ ಬುದ್ಧಿಗೇಡಿಯಾದ ರೋಗಿಯು ನಾನಾ ಬಗೆಯ ಮನೋವಿಕಾರಗಳಿಗೆ ಬಲಿಯಾಗುತ್ತಾನೆ. ಹಿಂಸಾ ಪ್ರವೃತ್ತಿ, ಕಾರ್ಯ ಮತ್ತು ವಿಕೃತ ಕಾಮಚೇಷ್ಟೆಗಳಿಂದ ಪರಪೀಡಕನೂ, ಸಮಾಜಕಂಟಕನೂ ಆಗುತ್ತಾನೆ. ಇತರರು ಸುಖವಾಗಿರುವುದನ್ನು ನೋಡಿ ಸಹಿಸಲು ಸಾಧ್ಯವಾಗದಂತಹ ದುಷ್ಟ ಅಸೂಯೆಗೆ ತುತ್ತಾಗಿ, ಸರಿಯಾಗಿರುವುದನ್ನೆಲ್ಲಾ ಹಾಳು ಮಾಡಬೇಕೆಂಬ ಪೈಶಾಚಿಕ ಪ್ರವೃತ್ತಿಗೆ ಬಲಿಯಾಗುತ್ತಾನೆ. ಕೊಲೆ, ಸುಲಿಗೆ, ಅತ್ಯಾಚಾರ, ಅನಾಚಾರ ಮೊದಲಾದ ಪಾಪಕೃತ್ಯಗಳನ್ನು ಮಾಡುತ್ತ, ಹೊಲಸು ಬದುಕನ್ನು ನಡೆಸುತ್ತಿದ್ದರೂ ಆ ಬಗ್ಗೆ ಅವನಿಗೆ ಲವಲೇಶವಾದರೂ ಚಿಂತೆಯಿರುವುದಿಲ್ಲ. ರೋಗಿಯು ಈ ಬಗೆಯ ಪಶು ಜೀವನ ಮಟ್ಟಕ್ಕೆ ಇಳಿದು ಕೈಯಾರೆ ದುರಂತವನ್ನು ತಾನೇ ತಂದುಕೊಳ್ಳುತ್ತಾನೆ.

ಬಂಗಿ ಸೇವಿಸಿದ ಅಮಲಿನಲ್ಲಿ ಕೊಲೆ, ಸುಲಿಗೆ, ಲೂಟಿ, ಜಗಳ, ಹಾದರ, ಅತ್ಯಾಚಾರ, ಅನಾಚಾರ, ಬೀದಿ ತಂಟೆ ಮತ್ತು ಹೊಡೆದಾಟ ನಡೆಯುವುದು ಸರ್ವೇಸಾಧಾರಣ ದೃಶ್ಯ. ಕೆಲವರು ತಲೆ ಕೆಟ್ಟು ಬೀದಿಯಲ್ಲಿ ಅಡ್ಡಾಡುತ್ತ ಇದಿರು ಸಿಕ್ಕವರನ್ನೆಲ್ಲ ಕತ್ತಿಯಿಂದ ಇರಿದು ಗಾಯಗೊಳಿಸಬಹುದು; ಕೊಲೆ ಮಾಡಬಹುದು. ಪಾಪ, ತಮ್ಮ ಬುದ್ಧಿ ಸ್ಥಿಮಿತದಲ್ಲಿ ಇರದವರಿಗೆ ಯಾವುದು ಸರಿ, ಯಾವುದು ತಪ್ಪು ಎನ್ನುವ ವಿವೇಚನೆ, ವಿವೇಕ ಎಲ್ಲಿರುತ್ತದೆ?

ಇಂತಹ ರೋಗಿಗಳನ್ನು (ಬಂಗಿ ವಿಷಕ್ಕೆ ತುತ್ತಾದ ಚಟದ ರೋಗಿಗಳನ್ನು) ಬಂಗಿಯ ಸಂಪರ್ಕದಿಂದ ಕಡ್ಡಾಯವಾಗಿ ದೂ ಮಾಡಿ ತಜ್ಞ ವೈದ್ಯರಿಂದ ಚಿಕಿತ್ಸೆ ನಡೆಸಬೇಕು.

## ಚರಸ್

ಅಮಲು ವಿಷದಲ್ಲಿ ಚರಸ್‌ನಷ್ಟು ಖೋಡಿ ಬೇರಾವುದೂ ಇಲ್ಲವೆನ್ನಬಹುದು. ಸುಮಾರು ಐದು ಸಾವಿರ ವರ್ಷಗಳಷ್ಟು ಹಿಂದೆಯೇ ಮಧ್ಯ ಏಷಿಯಾದ ಅಲೆಮಾರಿ ಜನಾಂಗದ ಸ್ಕಿಥಿಯಾನರು ಚರಸ್‌ನ್ನು ಮುಕ್ಕುತ್ತಿದ್ದರೆಂಬುದಕ್ಕೆ ಆಧಾರಗಳಿವೆ. ಅಮೆರಿಕದಲ್ಲಿ ಮರಿಜುವಾನ್ ಎಂದೂ, ಯುರೋಪಿನಲ್ಲಿ ಹಷೀಷ್ ಎಂದೂ, ಆಫ್ರಿಕಾದಲ್ಲಿ ಖೀಫ್ ಅಥವಾ ಡಗ್ಗಾ ಎಂದೂ ಇದನ್ನು ಕರೆಯುತ್ತಾರೆ. ವಾಸ್ತವವಾಗಿ ಇದು ಬಂಗಿ ಗಿಡದಿಂದ ಒಸರುವ ನಸುಹಳದಿ ಬಣ್ಣದ ಹಾಲಾಗಿದ್ದು, ಅದನ್ನು ಸಂಗ್ರಹಿಸಿ, ಒಣಗಿಸಿ ಚರಸ್ ಮಾದಕವನ್ನು ಸಿದ್ಧಮಾಡುತ್ತಾರೆ. ಕಳ್ಳ ವ್ಯಾಪಾರದ ಜಗತ್ತಿನಲ್ಲಿ ಚರಸ್ಸಿಗೆ ಬಹಳ ಮಹತ್ವ. ಶುದ್ಧ ಚರಸ್ ಭಾರೀ ಅಮಲೇರಿಸುವ

ದ್ರವ್ಯವಾಗಿರುವುದರಿಂದ ಇದರ ಕಿಮ್ಮತ್ತು ತೀರಾ ಹೆಚ್ಚಾಗಿದ್ದು ಕಳ್ಳಪೇಟೆಯಲ್ಲಿ ದುಬಾರಿ ಬೆಲೆಗೆ ಮಾರಾಟವಾಗುತ್ತದೆ.

ಚರಸ್ ಮಾರುಕಟ್ಟೆಯಲ್ಲಿ ವಿವಿಧ ವೇಷ ತಳೆದುಕೊಂಡು ಹಾಜರಾಗುತ್ತದೆ. ಜಾಯಿಂಟ್ ಎಂಬ ಹೆಸರಿನ ವಿಶೇಷ ಮಾದರಿಯ ಸಿಗರೇಟ್ ರೂಪದಲ್ಲಿಯೂ, ಕೈಕೊಳವೆಯುಳ್ಳ ಗುಡುಗುಡಿಯಂತಹ ಮಣ್ಣಿನ ಮಡಿಕೆಯ ಮೂಲಕವೂ, ಚಿಲುಮೆ, ಹುಕ್ಕ ಮತ್ತು ಸಾಮಾನ್ಯ ಪೈಪುಗಳಿಂದಲೂ ಇದರ ಹೊಗೆಯನ್ನು ಸೇವಿಸುತ್ತಾರೆ. ಚಹದಂತಹ ಚರಸ್ಸಿನ ಕಷಾಯವನ್ನು ಬಸಿದುಕೊಂಡು, ಬ್ರೇಡ್, ಕೇಕ್, ಚಪಾತಿ ಮೊದಲಾದ ಖಾದ್ಯಗಳಲ್ಲಿ ಬೆರಸುವುದೂ ಉಂಟು. ಕೆಲವರು ಚರಸ್‌ನ ದ್ರಾವಣವನ್ನು ರಕ್ತನಾಳದ ಮೂಲಕವೋ, ಮಾಂಸಖಂಡದ ಮೂಲಕವೋ ಚುಚ್ಚುಮದ್ದಿನಂತೆ ಉಪಯೋಗಿಸುವ ಚಟವನ್ನು ಬೆಳೆಸಿಕೊಂಡಿರುತ್ತಾನೆ. ಇಂತಹವರು ಚರಸ್ ವಿಷದ ದೀರ್ಘಕಾಲ ವಿಷಪ್ರಯೋಗಕ್ಕೆ ತುತ್ತಾಗಿರುತ್ತಾರೆ.

**ವಿಷಪ್ರಯೋಗದ ಲಕ್ಷಣ ಮತ್ತು ಚಿಕಿತ್ಸೆ**

ಚರಸ್ ಹೊಗೆಬತ್ತಿಯನ್ನು ಸೇವಿಸಿದೊಡನೆಯೇ ಅಮಿತಾನಂದ ಹಾಗೂ ಆತ್ಮವಿಶ್ವಾಸಗಳು ಉಂಟಾಗುವಂತೆ ಪ್ರವರ್ತಿಸುವುದರಿಂದ ರೋಗಿಯು ತನ್ನನ್ನು ತಾನು ಮರೆತು, ಆಮೋದ- ಪ್ರಮೋದಗಳಲ್ಲಿ ತಲ್ಲೀನನಾಗುತ್ತಾನೆ. ಲೈಂಗಿಕ ವಿಷಯದಲ್ಲಂತೂ ಅವನು ಪರಮಾವಧಿ ಸುಖವನ್ನು ಅನುಭವಿಸುತ್ತಾನೆ. ಹಾಡುವುದು, ಕುಣಿಯುವುದು, ಬರೆಯುವುದು, ಚಿತ್ರ ಬಿಡಿಸುವುದು ಮೊದಲಾದ ಅಂಶಗಳು ಹೆಚ್ಚು ಸ್ಫುಟವಾಗಿ ಕಾರ್ಯಗತವಾಗುವುದು, ಅದರ ಬದಲಿಗೆ ಜಗಳ, ಹೊಡೆದಾಟ, ಬಡಿದಾಟ ಕೂಡ ಸಂಭವಿಸಬಹುದು. ಚರಸ್ ಸೇವಿಸಿದ ರೋಗಿಯು ಕನಸು ಕಾಣುತ್ತಿರುವವನಂತೆ ಇದ್ದು, ಒಮ್ಮೆ ಜೋರಾಗಿ ಒದರಾಡುತ್ತಿದ್ದು ಮರುಕ್ಷಣದಲ್ಲಿ ಥಟ್ಟನೆ ಮೌನಪಂಡಿತನಾಗಿಬಿಡಬಹುದು. ಒಟ್ಟಿನಲ್ಲಿ ವಿಚಿತ್ರವಾದ, ಊಗೆಗೂ ನಿಲುಕದಂತಹ ನಡುವಳಿಕೆಯಿದ್ದು ಕೆಲವೊಮ್ಮೆ ಗಾಢ ನಿದ್ರಾವಶನಾಗುವನು.

ಮತಿಭ್ರಮಣೆಗೂ ಚರಸ್ ಸೇವನೆಗೂ ನಿಕಟ ಸಂಬಂಧವಿದೆ. ಅಶಕ್ತ ದೇಹಿಗಳೂ, ದುರ್ಬಲ ಮನಸ್ಕರೂ ಖಂಡಿತವಾಗಿ ಬುದ್ಧಿ ವಿಕಲ್ಪಕ್ಕೆ ಒಳಗಾಗುತ್ತಾರೆ. ತಮ್ಮ ದೈಹಿಕ, ಮಾನಸಿಕ, ಬೌದ್ಧಿಕ ಕೀಳ್ಮೆಯನ್ನು ನಿವಾರಿಸುವುದಲ್ಲದೆ, ತಮ್ಮನ್ನು ಪ್ರತಿಷ್ಠಿತರೂ, ಧ್ಯೇಯೋದಾತ್ತ ಮಹತ್ವಾಕಾಂಕ್ಷಿ ಧೀಃಪುರುಷರನ್ನಾಗಿ ಸಮಾಜದಲ್ಲಿ ಮೇಲಂತಸ್ತಿಗೆ ಏರಿಸಲು ಚರಸ್ ನೆರವಾಗುತ್ತದೆಂಬ ಪ್ರಬಲ ನಂಬಿಕೆಯೇ ಈ ಮಾದಕದ್ರವ್ಯದ ಸೇವನೆಗೆ ಬಹು ಜನರು ಪ್ರೇರೇಸಿಸಲ್ಪಡಲು ಪ್ರಧಾನವಾದ ಕಾರಣವಾಗಿದೆ.

ಚರಸ್ ಸೇವನೆಯ ಪರಿಣಾಮವಾಗಿ ಅನತಿ ಕಾಲದೊಳಗೆ ರೋಗಿಯ ಕಣ್ಣು ಕೆಂಪಾಗುತ್ತದೆ, ನಾಲಗೆ ಒಣಗುತ್ತದೆ, ದೇಹದ ಉಷ್ಣಾಂಶವು ಇಳಿಮುಖವಾಗುವುದಲ್ಲದೆ ಮೂತ್ರ ವಿಸರ್ಜನೆ ಅಧಿಕಗೊಳ್ಳುತ್ತದೆ. ರಕ್ತದ ಒತ್ತರ ಮತ್ತು ನಾಡಿಯ ಬಡಿತ ಹೆಚ್ಚಾಗುತ್ತದೆ. ಸುಮಾರು ನಾಲ್ಕೈದು ತಾಸುಗಳ ಕಾಲ ಈ ಸ್ಥಿತಿ ಇರುತ್ತದೆ. ಅನಂತರ ಹತಾಶ ಭಾವನೆ; ತೂಕಡಿಕೆ, ನಿದ್ರೆ, ಕೆಲಸ ಮಾಡಲು ಅಸಮರ್ಥತೆ, ಮೊದಲಾದ ಉಪದ್ರವಗಳು ತಲೆದೋರಿ ಅವನು ಮತ್ತಷ್ಟು ಹೆಚ್ಚು ಮಾದಕ ದ್ರವ್ಯದ ಮೊರೆಹೋಗುವಂತೆ ಪ್ರೇರೇಪಿಸಲ್ಪಡುತ್ತಾನೆ. ಕ್ರಮೇಣ ಅವನ ಜೀವನದ ಸರ್ವಸ್ವವೂ ಈ ಮಾದಕ ದ್ರವ್ಯವನ್ನು ಸೇವಿಸುವುದೇ ಆಗಿ, ಅವನು ಚರಸ್‌ನ ದಾಸನಾಗಿ ತನ್ನ ಬಾಳುವೆಯುನ್ನು ಸಂಪೂರ್ಣ ಹಾಳುಮಾಡಿಕೊಳ್ಳುತ್ತಾನೆ.

ಚರಸ್ ಸೇವನೆಯ ಚಟಕ್ಕೆ ಬಿದ್ದ ರೋಗಿಯನ್ನು ಚರಸ್ ಸಂಪರ್ಕ ತಪ್ಪಿಸಿ ತಜ್ಞ ವೈದ್ಯರ ನೇತೃತ್ವದಲ್ಲಿ ಚಿಕಿತ್ಸೆ ನಡೆಸಿದರೆ ಪುನಃ ನಾಗರಿಕ ಜೀವನವನ್ನು ನಡೆಸುವುದು ಸಾಧ್ಯ.

## ಕೊಕೇನ್

ನಮ್ಮ ನಾಡಿನ ಚಹ ತೋಟಗಳ ನಡುವೆ ನೆಟ್ಟು ಬೆಳೆಸುವ ಕೋಕಾ ಗಿಡದ ಫಲದಿಂದ ಮಧುರವಾದ ಕೋ-ಕೋ ಪೇಯವನ್ನು ತಯಾರಿಸುತ್ತಾರೆ. ಕೋಕಾ ಗಿಡದ ಸತ್ವವೇ ಮಾದಕ ಗುಣವುಳ್ಳ ಕೊಕೇನ್. ಇದು ಕಹಿ ರುಚಿಯಿಂದ ಕೂಡಿರುತ್ತದೆ. ಕೊಕೇನನ್ನು ರಾಸಾಯನಿಕವಾಗಿ (ಕೃತಕವಾಗಿ) ತಯಾರಿಸಲು ಸಾಧ್ಯವಿದೆ. ಕೊಕೇನ್ ಸ್ಪರ್ಶದಿಂದ ಅಂಗಾಗಗಳಲ್ಲಿ ತಾತ್ಕಾಲಿಕ ಸಂಜ್ಞಾಹೀನತೆಯು ಉಂಟಾಗುತ್ತದೆ. ದಂತವೈದ್ಯರ ಹಾಗೂ ನೇತ್ರವೈದ್ಯರ ಕೈಗಳಲ್ಲಿ ಕೊಕೇನ್ ಕಾಮಧೇನುವಿನಂತೆ ಕೆಲಸ ಮಾಡುತ್ತದೆ. ಸಿಂಪರಣೆ ಮತ್ತು ಸೂಜಿಮದ್ದಿನ ಮೂಲಕ ಸ್ಥಾನಿಕ ವೇದನೆಯ ಪರಿಹಾರಕ್ಕಾಗಿ ಕೊಕೇನನ್ನು ಬಳಸುತ್ತಾರೆ. ಕೊಕೇನ್ ಸತ್ವದ ಮೂಲಾಮು ಸಹ ದೊರಕುತ್ತದೆ. ಕೊಕೇನನ್ನು ನಿತ್ಯ ಸೇವಿಸುವ ಅಭ್ಯಾಸವುಳ್ಳವರು ಅಥವಾ ನಿತ್ಯ ಸೂಜಿಮದ್ದು ಪಡೆಯುವವರು ಇದರ ಚಟಕ್ಕೆಬಲಿಯಾಗುತ್ತಾರೆ.

ಕೊಕೇನ್ ಕಾಮೋತ್ತೇಜಕ ದ್ರವ್ಯವೆಂಬ ಭ್ರಮೆಯಿಂದ ತಾಂಬೂಲದೊಂದಿಗೆ ಬೆರೆಸಿ ಕೆಲವರು ಮುಕ್ಕುತ್ತಾರೆ. ವೇಶ್ಯೆಯರು ತಮ್ಮ ಜನನೇಂದ್ರಿಯಗಳಿಗೆ ಕೊಕೇನ್ ಮುಲಾಮನ್ನು ಬಳಿದುಕೊಂಡು ಯೋನಿಯ ಕೃತಕ ಬಿರುಸುತನವನ್ನು ನಿರ್ಮಿಸಿ

ವಿಟ ಪುರುಷರಿಗೆ ಭ್ರಾಮಕ ಸುಖವನ್ನು ತೋರಿಸುವುದುಂಟು. ಶೀಘ್ರಸ್ಖಲನದ ಭಯವುಳ್ಳ ಪುರುಷರು ತಮ್ಮ ಶಿಶ್ನಕ್ಕೆ ಕೊಕೇನ್ ಮುಲಾಮನ್ನು ಸಂಭೋಗ ಪೂರ್ವದಲ್ಲಿ ಸವರುವುದುಂಟು. ಈ ಬಗೆಯಾಗಿ ಬಳಸಲ್ಪಟ್ಟಾಗ ಕೊಕೇನ್ ಸ್ಪರ್ಶ ವಿಷವು ದೇಹಾಪಾಯವುಂಟಾಗುವ ಸಂಭವವಿರುತ್ತವೆ.

ಪ್ರಾಣಾಪಾಯದ ಪ್ರಮಾಣ (ಸೇವನೆ) : 1 ಗ್ರಾಂ ಸೂಚಿಮದ್ದು ರೂಪದಲ್ಲಿ 60 ಮಿಲಿಗ್ರಾಂ.

(ಕೊಕೇನ್ ಚಟಕ್ಕೆ ಬಲಿಯಾದವರು ತುಸು ಅಧಿಕ ಪ್ರಮಾಣದ ಔಷಧಿಯನ್ನು ತಡೆದುಕೊಳ್ಳಬಲ್ಲರು).

**ದೀರ್ಘಕಾಲದ ವಿಷಪ್ರಯೋಗದ ಲಕ್ಷಣ ಮತ್ತು ಚಿಕಿತ್ಸೆ**

ಕೊಕೇನ್ ಚಟಕ್ಕೆ ಬಲಿಯಾದ ರೋಗಿಯ ದೇಹವು ಕ್ರಮೇಣ ಸೊರಗುತ್ತದೆ; ಮುಖವು ಕಳೆಗುಂದುತ್ತದೆ; ಕಣ್ಣು ಗುಳಿಬೀಳುತ್ತವೆ ಹಾಗೂ ಕಣ್ಣು ಬೊಂಬೆಗಳು ಅರಳುತ್ತವೆ. ಆ ರೋಗಿಯಲ್ಲಿ ದೃಷ್ಟಿದೋಷವೂ ಸಹ ಉಂಟಾಗಬಹುದು. ಹಸಿವು, ಬಾಯಿ ರುಚಿ ಮತ್ತು ನಿದ್ರೆ ಹೇಳಹೆಸರಿಲ್ಲದಂತಾಗುತ್ತದೆ. ಅವನಲ್ಲಿ ಕಾಮಾಸಕ್ತಿಯು ಬಹುಪಾಲು ನಿರ್ನಾಮವಾಗಿರುತ್ತದೆ. ಜ್ಞಾಪಕ ಶಕ್ತಿಯು ಕುಂದಿ, ದೈಹಿಕ ಹಾಗೂ ಮಾನಸಿಕ ದೌರ್ಬಲ್ಯ ತಲೆದೋರುವುದು ಮತ್ತು ವಿಚಿತ್ರ ಮನೋಭ್ರಮೆ ಹಾಗೂ ಹಿಂಸಾ ಪ್ರವೃತ್ತಿ ಉಂಟಾಗುವುದು. ಅವನ ನಾಡಿಯು ಜೋಡಾಗಿ ಬಡಿದುಕೊಳ್ಳುವುದು. ಒಮ್ಮೊಮ್ಮೆ ಕೈ ನಡುಕ ಕೂಡಾ ಉಂಟಾಗಬಹುದು. ರೋಗಿಯು ತೀರಾ ಅಸಹಾಯಕನಂತೆ ಕಾಣಿಸುತ್ತಾನೆ.

ಕೊಕೇನ್ ದೀರ್ಘಕಾಲ ವಿಷಕ್ಕೆ ಬಲಿಯಾದ ರೋಗಿಯನ್ನು ಕೊಕೇನ್ ಸಂಪರ್ಕ ಹಾಗೂ ಸೇವನೆಯಿಂದ ದೂರಮಾಡಿ ತಜ್ಞ ವೈದ್ಯರ ಮೇಲ್ವಿಚಾರಣೆಯಲ್ಲಿ ಸರಿಯಾದ ಚಿಕಿತ್ಸೆ ನಡೆಸಿದರೆ ರೋಗಿಯು ಆರೋಗ್ಯವಂತನಾಗುವನು.

**ವಿಷಪ್ರಾಶನದ ಲಕ್ಷಣಗಳು**

ಕೊಕೇನ್ ಸೂಜಿಮದ್ದು ಅಥವಾ ಸೇವನೆ ಮಾಡಿದ ರೋಗಿಗೆ ಮೊದಮೊದಲು ಸುಖ ಸಂತೋಷದಲ್ಲಿ ಓಲಾಡುವ ಮಧುರ ಭಾವನೆಯುಂಟಾಗುವುದಲ್ಲದೇ ಮನೋಲ್ಲಾಸ, ವಾಚಾಳತ್ವ, ಚುರುಕು ಚಟುವಟಿಕೆ ಜತೆಗೆ ಗಲಿಬಿಲಿಯೂ

ಉಂಟಾಗುತ್ತದೆ. ಅನಂತರ ಇದ್ದಕ್ಕಿದ್ದ ಹಾಗೆಯೇ ಮೈ ನಡುಕ, ಜ್ವರ ಪ್ರಾರಂಭವಾಗುತ್ತದೆ. ಬಾಯಿ ಮತ್ತು ಗಂಟಲು ಒಣಗತೊಡಗಿ ಏನಾದರೂ ನುಂಗಲು ಕಷ್ಟವಾಗುತ್ತದೆ. ನೀರಡಿಕೆ, ವಾಕರಿಕೆ, ತಲೆ ತಿರುಗುವುದು, ತಲೆನೋವು, ಕಣ್ಣು ಕತ್ತಲೆ ಬರುವುದು, ಹೊಟ್ಟೆ ನುಲಿತ, ಕಣ್ಣು ಬೊಂಬೆ ಅರಳುವುದು, ಮಂದ ವಕ್ರನಾಡಿ, ಉಸಿರಾಟಕ್ಕೆ ಪರದಾಟ, ಹಣೆಯಿಂದ ಧಾರಾಕಾರವಾದ ಬೆವರು, ಬಡಬಡಿಸುವುದು, ಹುಚ್ಚು ಭ್ರಮೆ, ಅದಿರುವಾಯು, ದೀರ್ಘ ಸುಪ್ತಿ ಮೊದಲಾದ ಉಪದ್ರವಗಳು ಉಂಟಾಗುದಲ್ಲದೇ ಸಾವು ಕೂಡಾ ಸಂಭವಿಸಬಹುದು.

**ಚಿಕಿತ್ಸೆ ಮತ್ತು ಉಪಚಾರ**

ಕೊಕೇನ್ ವಿಷ ಸೇವಿಸಿದ ರೋಗಿಯನ್ನು ಪೊಟಾಶಿಯಂ ಪರಮಾಂಗನೇಟ್ ದ್ರಾವಕದಿಂದ ಹೊಟ್ಟೆ ತೊಳೆಯುವುದು, ಸರ್ವಮಾನ್ಯ ಪ್ರತ್ಯೌಷಧ ಕುಡಿಸುವುದು ಮೊದಲಾದ ವಿಧಾನಗಳಿಂದ ಚಿಕಿತ್ಸೆ ಮಾಡಬೇಕು. ಆಮ್ಲಜನಕ ನೀಡಿಕೆಯೂ 'ಎಮೈಲಿ ನೈಟ್ರೇಟ್' ಮೂಸುವುದೂ ಹೆಚ್ಚಿನ ಪ್ರಯೋಜನವನ್ನು ನೀಡುತ್ತದೆ. ರೋಗಿಗೆ ಹಾಲನ್ನು ಕುಡಿಯಲು ನೀಡಬೇಕು. ವಿಷ ಸ್ಪರ್ಷವಾದ ಭಾಗವನ್ನು ಉಪ್ಪು ನೀರಿನಿಂದ ತೊಳೆಯಬೇಕು.

## ಅಧ್ಯಾಯ- VII

# ಕೃಷಿ ವಿಷ

## ಕೃಷಿ ರಕ್ಷಣೆಗೆ ಬಳಸುವ ರಾಸಾಯನಿಕ ವಿಷಗಳು

ಹೊಲಗದ್ದೆಗಳಲ್ಲಿ ಬೆಳೆಸುವ ವಿವಿಧ ದವಸಧಾನ್ಯಗಳಿಗೆ, ಹಣ್ಣು, ಹಂಪಲು, ತರಕಾರಿಗಳಿಗೆ, ಹೂವು ಕಾಯಿಗಳು ಕೀಟಬಾಧೆಯಿಂದ ಹಾಳಾಗಿ ಬೆಳೆ ನಷ್ಟವಾಗುತ್ತಿರುವುದು ಈಗ ಸರ್ವೇಸಾಮಾನ್ಯವಾಗಿದೆ. ಬಿತ್ತುವ ಬೀಜದಿಂದ ಹಿಡಿದು ಉಳುವ ಹೊಲ, ನೆಲ, ಮಣ್ಣು, ಗೊಬ್ಬರ- ಎಲ್ಲವನ್ನೂ ಕ್ರಿಮಿನಾಶಕಗಳಿಂದ ಸಂಸ್ಕರಿಸಿ, ಬಳಸಿದರೂ ರೋಗ ಹತೋಟಿಗೆ ಬರುವುದು ಕಷ್ಟವಾಗಿದೆ. ಫಸಲು ಬೆಳೆಯುತ್ತಿರುವಾಗ ಕಾಲಕಾಲಕ್ಕೆ ಕ್ರಿಮಿನಾಶಕಗಳನ್ನು ಸಿಂಪಡಿಸಬೇಕು. ಬೀಜ ಬಿತ್ತುವ ಮೊದಲೇ ಬೀಜೋಪಚಾರ ನಡೆಸಬೇಕು. ಫಸಲನ್ನು ಕಟಾವು ಮಾಡಿ ಜೋಪಾನ ಮಾಡುವಾಗಲೂ ಕ್ರಿಮಿ ಕೀಟಗಳಿಂದ ರಕ್ಷಣೆ ಒದಗಿಸಬೇಕು. ಈ ರಕ್ಷಣಾ ವಿಧಾನಗಳನ್ನು ಸಮರ್ಪಕವಾಗಿ ನಡೆಸದಿದ್ದರೆ ಬೆಳೆ ಕೈಗೆ ಬರುವುದೇ ಇಲ್ಲ, ರೈತನ ದುಡಿಮೆ, ಮಾಡಿದ ಖರ್ಚುವೆಚ್ಚ ಎಲ್ಲವೂ ಗಾಳಿಗೋಪುರವಾಗಿ ಕೃಷಿಕರು ಕಷ್ಟನಷ್ಟಗಳಿಂದ ಸಾಲಬಾಧೆಗೆ ತುತ್ತಾಗುತ್ತಾರೆ. ಕೃಷಿ ಸಂರಕ್ಷಣಾ ಸಾಧನಗಳಾದ ಕೀಟನಾಶಕಗಳು, ರಸಗೊಬ್ಬರ ಮೊದಲಾದವುಗಳು ರಾಸಾಯನಿಕ ಮೂಲದ ವಸ್ತುಗಳಾಗಿದ್ದು ದುಬಾರಿ ಬೆಲೆಗೆ ರೈತರು ಕೊಂಡುಕೊಂಡು ಉಪಯೋಗಿಸಬೇಕಾಗಿರುತ್ತದೆ.

ಬೆಳೆ ರಕ್ಷಣೆಗೆ ಬಳಸುವ ಔಷಧಿಗಳಲ್ಲಿ ಹೆಚ್ಚಿನವು ವಿಷ ಭರಿತವಾಗಿರುತ್ತವೆ. ಕ್ರಮಬದ್ಧವಾಗಿ, ನಿಯಮಿತ ಪ್ರಮಾಣದಲ್ಲಿ ಮಾತ್ರ ಅವುಗಳನ್ನು ಬಳಸಬೇಕು. ಅಷ್ಟೇ ಅಲ್ಲದೆ ಬಳಸುವಾಗ ಸೂಕ್ತಸ್ವರಕ್ಷಣಾ ವಿಧಾನಗಳನ್ನು ಅನುಸರಿಸಬೇಕು. ಇಲ್ಲದೇ ಹೋದಲ್ಲಿ ಅಪಾಯ ಸಂಭವಿಸಬಹುದು.

ಪ್ರತಿಯೊಂದು ರಾಸಾಯನಿಕ ಕ್ರಿಮಿನಾಶಕ ದ್ರವ್ಯದ ಪ್ಯಾಕ್‌ನಲ್ಲಿ ಅವುಗಳನ್ನು ಬಳಸುವ ವಿಧಾನ ಹಾಗೂ ಕೈಗೊಳ್ಳಬೇಕಾದ ಮುಂಜಾಗ್ರತೆಯ ಬಗ್ಗೆ ಸೂಚನಾ ಪತ್ರ ಇರುತ್ತದೆ. ಅಕಸ್ಮಾತ್ ದುಷ್ಪರಿಣಾಮಗಳು ಉಂಟಾದರೆ ತಕ್ಷಣ ಕೈಗೊಳ್ಳಬೇಕಾದ

ಪ್ರಥಮ ಚಿಕಿತ್ಸೆ ಮತ್ತು ಅಗತ್ಯವಾಗಿ ಒದಗಿಸಬೇಕಾದ ವೈದ್ಯಕೀಯ ಸೌಕರ್ಯಗಳ ವಿಚಾರವನ್ನು ಕೃಷಿಕರು ಪಾಲಿಸಬೇಕು. ಇಲ್ಲದೆಹೋದರೆ ಅಪಾಯ ಉಂಟಾಗುವ ಸಂಭವವಿರುವುದನ್ನು ಮರೆಯಬಾರದು.

ಇಂದು ಮಾರುಕಟ್ಟೆಯಲ್ಲಿ ನೂರಾರು ಬ್ರಾಂಡ್‌ನ ಕೃಷಿ ರಕ್ಷಣಾ ರಾಸಾಯನಿಕ ಔಷಧಿಗಳು ದೊರೆಯುತ್ತವೆ. ಅವುಗಳ ಮೂಲ ಸತ್ವವನ್ನು ಹೊಂದಿಕೊಂಡು ಉಪಕಾರ- ಅಪಕಾರಗಳು ಉಂಟಾಗುತ್ತವೆ ಎಂಬುದರಿಂದ ಸಂಕ್ಷೇಪವಾಗಿ ಅವುಗಳನ್ನು ಹೇಳಲಾಗಿದೆ. ಇಲ್ಲಿ ಒಂದು ವಿಚಾರವನ್ನು ಸ್ಪಷ್ಟವಾಗಿ ಹೇಳಬೇಕಾಗಿದೆ. ಬೇರೆ ಬೇರೆ ವಿಷಗಳನ್ನು ಪರಿಣಾಮಕಾರಿಯಾಗಿ ನಿಗ್ರಹಿಸಲು ಉಪಯೋಗಿಸಬಹುದಾದ ಔಷಧಿ, ಸೂಜಿಮದ್ದು ಮೊದಲಾದವುಗಳನ್ನು ಇಲ್ಲಿ ಹೆಸರಿಸಿದೆ. ಆದರೆ ಈ ಎಲ್ಲವನ್ನೂ ವೈದ್ಯರ ಅಥವಾ ದವಾಖಾನೆಗಳ ನೆರವಿನಿಂದಲೇ ಪಡೆದುಕೊಳ್ಳಬೇಕಲ್ಲದೆ ಮನೆಗಳಲ್ಲಿ ಜನರು ತಾವಾಗಿ ನಡೆಸಬಾರದು. ಕೇವಲ ತಿಳುವಳಿಕೆಗಾಗಿ ಮಾತ್ರ ಚಿಕಿತ್ಸಾ ಸೂತ್ರಗಳನ್ನು ನಮೂದಿಸಿದೆ.

ಕೃಷಿ ಸಂರಕ್ಷಣೆಗಾಗಿ ರಾಸಾಯನಿಕ ದ್ರವ್ಯಗಳನ್ನು ಬಳಸಿದಾಗ ತೊಂದರೆಗಳು ಕಾಣಿಸಿಕೊಂಡರೆ ತಕ್ಷಣ ಪ್ರಥಮೋಪಚಾರ (ಪ್ರಥಮ ಚಿಕಿತ್ಸೆ) ನಡೆಸಿ ವೈದ್ಯ ಸಹಾಯಕ್ಕಾಗಿ ಧಾವಿಸಬೇಕು ಎಂಬುದನ್ನು ಸದಾ ನೆನಪಿನಲ್ಲಿ ಇರಿಸಿಕೊಳ್ಳಬೇಕು.

## ಬಿ.ಹೆಚ್.ಸಿ. ಮತ್ತು ಲಿಂಡೇನ್

ಬೆಂಜೀನ್ ಹೆಕ್ಸಾಕ್ಲೋರೈಡ್ (ಬಿಹೆಚ್‌ಸಿ) ಪ್ರಮುಖವಾದ ಒಂದು ಶಿಲೀಂಧ್ರನಾಶಕ ದ್ರವ್ಯ. ನೀರಿನಲ್ಲಿ ಕರಗುವ ಪುಡಿ, ಮಿಶ್ರಣ ಮೊದಲಾದ ಅನೇಕ ರೂಪಗಳಲ್ಲಿ ಮಾರುಕಟ್ಟೆಯಲ್ಲಿ ಇದು ದೊರಕುತ್ತದೆ. ಲಿಂಡೇನ್ ಇದೇ ವರ್ಗದ ಇನ್ನೊಂದು ಶಿಲೀಂದ್ರನಾಶಕ ದ್ರವ್ಯ. ಇವೆರಡೂ ದ್ರವ್ಯಗಳೂ ಸ್ಪರ್ಶ, ಆಘ್ರಾಣ, ಮತ್ತು ಸೇವನಾ ವಿಷಗಳಾಗಿವೆ.

ಪ್ರಾಣಾಪಾಯದ ಪ್ರಮಾಣ (ಸೇವನೆ) : ಬಿ.ಹೆಚ್.ಸಿ. 20-30 ಗ್ರಾಂ, ಲಿಂಡೇನ್ 3-5 ಗ್ರಾಂ.

**ವಿಷಪ್ರಯೋಗದ ಲಕ್ಷಣಗಳು :**

ಬೆಂಜೀನ್ ವಿಷಪ್ರಾಶನವಾದ ರೋಗಿಯಲ್ಲಿ ವಾಂತಿ, ಭೇದಿ ಮತ್ತು ಅದಿರುವಾಯು ಉಪದ್ರವಗಳು ಕಾಣಿಸಿಕೊಳ್ಳುತ್ತವೆ. ಅವನ ಮೋರೆಯು ನೀಲಿ ಛಾಯೆಗೆ ತಿರುಗುತ್ತದೆ ಮತ್ತು ಉಸಿರಾಟಕ್ಕೆ ತೀವ್ರವಾದ ತೊಂದರೆ ಕಾಣಿಸಿಕೊಳ್ಳುತ್ತದೆ.

ಈ ವಿಷದ್ರವ್ಯಗಳ ಸ್ಪರ್ಶ ಹಾಗೂ ಆಘ್ರಾಣಗಳಿಂದ ತಲೆ ತಿರುಗುವುದು, ತಲೆ ನೋವು, ವಾಕರಿಕೆ, ಅದಿರುವಾಯು ಮೊದಲಾದ ಉಪದ್ರವಗಳೂ, ಚರ್ಮರೋಗಗಳೂ ಉಂಟಾಗುವುದು. ಅಲ್ಲದೆ ರೋಗಿಯ ಕಣ್ಣು, ಮೂಗು, ಗಂಟಲುಗಳಲ್ಲಿ ಕೆರೆತ, ಉರಿ ಮತ್ತು ನೋವು ಉಂಟಾಗಬಹುದು.

**ಚಿಕಿತ್ಸೆ ಮತ್ತು ಉಪಚಾರ :**

ಈ ವಿಷಗಳ ಸ್ಪರ್ಶ ಮತ್ತು ಆಘ್ರಾಣ ವಿಷ ಲಕ್ಷಣಗಳು ಕಾಣಿಸಿಕೊಂಡ ಕೂಡಲೇ ರೋಗಿಯನ್ನು ವಿಷ ಸಂಪರ್ಕದಿಂದ ಸ್ವಚ್ಛ ಹವೆ ಇರುವಲ್ಲಿಗೆ ಸ್ಥಳಾಂತರಿಸಬೇಕು. ವಿಷಸ್ಪರ್ಶವಾದ ಅಂಗಾಂಗಗಳನ್ನು ನೀರಿನಿಂದ ತೊಳೆಯಬೇಕು. ವಿಶಪ್ರಾಶನವಾದ ರೋಗಿಗೆ ತತ್ತಿಯ ಲೋಳೆ, ಅನ್ನ ಬಸಿದ ಗಂಜಿ ಅಥವಾ ಹಿಟ್ಟಿನ ರಾಡಿಯನ್ನು ಕುಡಿಸಬಹುದು. ಹೊಟ್ಟೆ ತೊಳೆಯುವುದು ಮತ್ತು ವಾಂತಿ ಮಾಡಿಸುವುದರ ಮೂಲಕ ವಿಷವನ್ನು ಹೊರಕ್ಕೆ ಹಾಕಬೇಕು. ಹಾಲು, ತೈಲ, ಕೊಬ್ಬು ಮತ್ತು ಉತ್ತೇಜಕ ಅನ್ನಪಾನಗಳು, ಔಷಧಿಗಳು ವರ್ಜ್ಯ. ಎಟ್ರೋಪಿನ್, ಕ್ಯಾಲ್ಸಿಯಂ ಗ್ಲೂಕೋನೇಟ್ ಮತ್ತು ಶಾಮಕ ಔಷಧಿಗಳು ಉಪಯುಕ್ತವಾಗಿವೆ. ರೋಗಿಗೆ ಜೀವಾತು ಮಿಶ್ರವಾದ ಸ್ವಾದಿಷ್ಟ ಆಹಾರ, ವಿಶ್ರಾಂತಿ ಮತ್ತು ಚಿತ್ತಶಾಂತಿಗಳು ಅಗತ್ಯ.

## ಟೊಕ್ಸಾಫೇನ್

ಚಿಮುಕಿಸಿದ ಮೇಲೆ ಸುಮಾರು ಆರು ತಿಂಗಳಷ್ಟು ತನ್ನ ಶಕ್ತಿಯನ್ನು ಉಳಿಸಿಕೊಳ್ಳುವ ಟೊಕ್ಸಾಫೇನ್‌ನ್ನು ಅನೇಕ ಬೆಳೆಗಳನ್ನು ಕೆಡಿಸುವ ಶಿಲೀಂಧ್ರ ಬಾಧೆಯ ನಿವಾರಣಾರ್ಥವಾಗಿ ಬಳಸುತ್ತಾರೆ. ಒಣಪುಡಿ, ನೀರಲ್ಲಿ ಕರಗುವ ಪುಡಿ, ತೈಲಮಿಶ್ರಣ ಮೊದಲಾದ ನಾನಾ ರೂಪಗಳಲ್ಲಿ ಈ ಕೀಟನಾಶಕವು ದೊರಕುತ್ತದೆ. ನಮ್ಮ ದೇಶದಲ್ಲಿ ಇದರ ಉಪಯೋಗವು ಕಮ್ಮಿಯಾದರೂ ಟೊಕ್ಸಾಫೇನ್ ವಿಷಪ್ರಯೋಗದಿಂದ ಪ್ರತಿವರ್ಷ 3–4 ಸಾವುಗಳು ಸಂಭವಿಸುತ್ತವೆ.

**ಪ್ರಾಣಾಪಾಯದ ಪ್ರಮಾಣ (ಸೇವನೆ) : 2 ಗ್ರಾಂ.**

**ದಿರ್ಘಕಾಲದ ವಿಷಪ್ರಯೋಗದ ಲಕ್ಷಣ ಮತ್ತು ಚಿಕಿತ್ಸೆ:**

ದೀರ್ಘಕಾಲ ಟೊಕ್ಸಾಫೆನೀನ್ ವಿಷಪ್ರಯೋಗಕ್ಕೆ ತುತ್ತಾದ ರೋಗಿಯು ಸದಾ ಮೂಗು ಸೋರುವುದು, ಕೈಕಾಲು ಶಕ್ತಿಗುಂದುವುದು, ಜೋಮು ಹಿಡಿಯುವುದು, ಅಶಕ್ತಿ, ರಕ್ತಹೀನತೆ, ಚರ್ಮರೋಗ ಮೊದಲಾದ ಉಪದ್ರವಗಳಿಂದ ನರಳುತ್ತಾನೆ. ಗಾಬರಿ ಮತ್ತು ಗಡಿಬಿಡಿಗಳಿಂದ ಅವನ ಮನಸ್ಸಿಗೆ ನೆಮ್ಮದಿ ತಪ್ಪುತ್ತದೆ. ಇಂತಹ

ರೋಗಿಯನ್ನು ತಕ್ಷಣ ವಿಷಸಂಪರ್ಕದಿಂದ ತಪ್ಪಿಸಬೇಕು ಮತ್ತು ಮುಂದೆ ಎಂದೂ ಸಂಪರ್ಕ ಬಾರದಂತೆ ದೂರವಿರಿಸಬೇಕು. ಸುಣ್ಣ, ಶರ್ಕರಪಿಷ್ಟ ಮತ್ತು ಜೀವಾಭರಿತವಾದ ಆಹಾರವನ್ನು, ವಿಶ್ರಾಂತಿಯನ್ನೂ ರೋಗಿಗೆ ನೀಡಬೇಕು. ಟೊಕ್ಸಾಫೇನ್ ವಿಷದ ಸಂಪರ್ಕ ಬರುವ ಕೆಲಸಗಾರರು ಸೂಕ್ತ ರಕ್ಷಣಾ ಕವಚಗಳನ್ನು ಧರಿಸುವುದು ಅಗತ್ಯ.

**ವಿಷಪ್ರಾಶನದ ಲಕ್ಷಣಗಳು :**

ಟೊಕ್ಸಾಫೇನ್ ವಿಷಪ್ರಾಶನವಾದ ರೋಗಿಯಲ್ಲಿ ವಾಕರಿಕೆಯೂ ವಾಂತಿಯೂ ಪ್ರಾರಂಭವಾಗುತ್ತದೆ. ಆದರೆ ಕೆಲವು ರೋಗಿಗಳಲ್ಲಿ ಈ ಲಕ್ಷಣಗಳು ಗೋಚರಿಸದೆ ಒಮ್ಮೆಲೇ ತೀವ್ರವಾದ ಅದಿರುವಾಯುವು ಉಂಟಾಗಬಹುದು. ಕ್ರಮೇಣ ನಡುಕಗಳ ನಡುವಣ ಮಧ್ಯಂತರವು ಹೆಚ್ಚುತ್ತಾ ಬಂದರೂ ಉಸಿರಾಟದ ಸೋಲಿನಿಂದಾಗಿ ರೋಗಿಯು ಸಾವನ್ನಪ್ಪಬಹುದು. ಬದುಕಿವುಳಿದರೆ ರಕ್ತಹೀನತೆ, ಅಶಕ್ತಿ ಮೊದಲಾದ ಉಪದ್ರವಗಳು ಉಂಟಾಗುತ್ತವೆ.

**ಚಿಕಿತ್ಸೆ ಮತ್ತು ಉಪಚಾರ :**

ಟೊಕ್ಸಾಫೇನ್ ವಿಷಸೇವಿಸಿದ ರೋಗಿಗೆ ವಮನ ಮಾಡಿಸುವುದು, ಹೊಟ್ಟೆ ತೊಳೆಯುವುದು, ವಿರೇಚನ ಮಾಡಿಸುವುದು ಮೊದಲಾದ ಸಾಂಪ್ರದಾಯಿಕ ಚಿಕಿತ್ಸೆಗಳನ್ನು ಅದಷ್ಟು ತೀವ್ರ ನಡೆಸಬೇಕು. ಎಟ್ರೋಫಿನ್ ಸಲ್ಫೇಟ್ ಗುಳಿಗೆಗಳನ್ನಾಗಲಿ, ಸೂಜಿಮದ್ದನ್ನಾಗಲಿ ಕೊಡುವುದು ಉತ್ತಮ ಪ್ರತ್ಯೌಷಧ. ರೋಗಿಗೆ ಉದ್ರೇಕಕಾರಿ ಚಿಕಿತ್ಸೆ ಹಾಗೂ ಆಹಾರ ಪಾನೀಯ ವರ್ಜ್ಯ. ಅದಿರುವಾಯು ನಿರೋಧಕವಾದ ಉಪಚಾರವನ್ನೂ, ಜೀವಾತು ಶರ್ಕರಪಿಷ್ಟಭರಿತ ಆಹಾರ ಮತ್ತು ವಿಶ್ರಾಂತಿಯನ್ನೂ ನೀಡಬೇಕು.

## ಕ್ಲೊರಿಡೇನ್, ಹೆಕ್ಟಾಕ್ಲೋರ್, ಆಲ್‌ಡ್ರಿನ್; ಎಂಡ್ರಿನ್ ಮತ್ತು ಡ್ರೈ ಎಂಡ್ರಿನ್

ಇಂಡೇನ್ ವರ್ಗಕ್ಕೆ ಸೇರಿದ ಕ್ಲೊರಿಡೇನ್, ಹೆಪ್ಟಾಕ್ಲೋರ್, ಆಲ್‌ಡ್ರಿನ್, ಡೈಲ್‌ಡ್ರಿನ್, ಎಂಡ್ರಿನ್ ಮತ್ತು ಡ್ರೈ ಎಂಡ್ರಿನ್ ಮೊದಲಾದ ಕೀಟನಾಶಕಗಳನ್ನು ಒಕ್ಕಲಿಗರು ಬೆಳೆಗಳ ರಕ್ಷಣೆಗಾಗಿ ಉಪಯೋಗಿಸುತ್ತಾರೆ. ಪುಡಿ ದ್ರಾವಕ ಮತ್ತು

ತೈಲಮಿಶ್ರಣ ರೂಪದಲ್ಲಿ ಔಷಧ ಸಾಂದ್ರತೆಯಲ್ಲಿ ಇವು ಮಾರುಕಟ್ಟೆಯಲ್ಲಿ ದೊರಕುತ್ತವೆ. ಚಿಮುಕಿಸಿದ ನಂತರ ಸುಮಾರು 1 ವರ್ಷದಷ್ಟು ದೀರ್ಘಾವಧಿಯ ತನಕ ಆಲ್‌ಡ್ರಿನ್ ತನ್ನ ಕ್ರಿಮಿನಾಶಕ ಸ್ವಭಾವವನ್ನು ಉಳಿಸಿಕೊಳ್ಳುವುದರಿಂದ ರೈತರು ಇದನ್ನು ಬಹಳವಾಗಿ ಬಳಸುತ್ತಾರೆ. ದುರ್ದೈವವಶಾತ್ ಮಾನವರಿಗೆ ಇದು ಹೆಚ್ಚು ತೀಕ್ಷ್ಣವಿಷವಾಗಿ ಪರಿಣಮಿಸುವುದಲ್ಲದೇ ವ್ಯಾಪಕವಾದ ಉಪದ್ರವಗಳನ್ನೂ ಉಂಟುಮಾಡುತ್ತದೆ.

ಪ್ರಾಣಾಪಾಯದ ಪ್ರಮಾಣ (ಸೇವನೆ) : 15–50 ಮಿಲಿಗ್ರಾಂ.

ಈ ವಿಷದ್ರವ್ಯಗಳು ತೀಕ್ಷ್ಣವಿಷವಾಗಿದ್ದು ಕೆಲವು ಸಲ ಚರ್ಮದ ಮೂಲಕ ಹೀರಲ್ಪಟ್ಟು ಮಾರಕ ದುಷ್ಪರಿಣಾಮಗಳನ್ನು ಕೇವಲ 40 ನಿಮಿಷಗಳೊಳಗಾಗಿ ಉಂಟುಮಾಡುವುದಲ್ಲದೆ ಪ್ರಾಣಾಪಾಯವನ್ನು ತಂದೊಡ್ಡಿದ ದಾಖಲೆಯಿದೆ. ಪ್ರತಿ ವರ್ಷ ಒಂದೆರಡು ಸಾವು ಇಂಡೇನ್ ವಿಷ ಪ್ರಯೋಗದಿಂದ ಸಂಭವಿಸುತ್ತದೆ.

**ವಿಷಪ್ರಾಶನದ ಲಕ್ಷಣಗಳು :**

ಇಂಡೇನ್ ವಿಷಪ್ರಾಶನವಾದ ರೋಗಿಯಲ್ಲಿ ಕಾಣಿಸುವ ಮುಖ್ಯವಾದ ಲಕ್ಷಣವೆಂದರೆ ಅದಿರುವಾಯು. ಅತ್ಯಂತ ಉದ್ರೇಕಾವಸ್ಥೆ, ಮೈ ಕೈ ನಡುಕ, ದೇಹ ವ್ಯಾಪಾರಗಳ ಮೇಲೆ ಸಮತೋಲನೆ ತಪ್ಪುವುದು ಮೊದಲಾದ ಉಪದ್ರವಗಳು ವಿಷಪ್ರಾಶನವಾದ ಅರ್ಧತಾಸಿನೊಳಗಾಗಿ ಕಾಣಿಸಿಕೊಳ್ಳುವುದಲ್ಲದೆ ಪ್ರಾಣಾಪಾಯವೂ ಸಹ ಉಂಟಾಗಬಹುದು.

**ಚಿಕಿತ್ಸೆ ಮತ್ತು ಉಪಚಾರ :**

ಸ್ಪರ್ಶವಿಷಕ್ಕೆ ತುತ್ತಾದ ರೋಗಿಯನ್ನು ತಕ್ಷಣ ವಿಷದ ಪರಿಸರದಿಂದ ಬೇರ್ಪಡಿಸಿ, ತಣ್ಣೀರಿನಿಂದ ಮೈ ಕೈಗಳನ್ನು ತೊಳೆಯಬೇಕು. ಹೊಟ್ಟೆಗೆ ಸೇರಿದ ವಿಷವನ್ನು ವಮನ ಮಾಡಿಸುವುದು, ಹೊಟ್ಟೆ ತೊಳೆಯುವುದು ಮೊದಲಾದ ಚಿಕಿತ್ಸೆಗಳಿಂದ ಹೊರಕ್ಕೆ ಹಾಕಬೇಕು. ಎಟ್ರೋಪಿನ್ ಉತ್ತಮ ಪ್ರತ್ಯೌಷಧ. (ಎಟ್ರೋಪಿನ್ ಸೂಜಿಮದ್ದು ಅಥವಾ ಗುಳಿಗೆಗಳನ್ನು ಕೊಡಬೇಕು) ಕ್ಯಾಲ್ಸಿಯಂ ಗ್ಲೂಕೋನೇಟ್ ಮತ್ತು ಶಾಮಕ ಔಷಧಿಗಳೂ ಸಾಕಷ್ಟು ದ್ರವ ನೀಡಿಕೆಯೂ ಅಗತ್ಯ. ರೋಗಿಗೆ ಉತ್ತೇಜಕ ಚಿಕಿತ್ಸೆಯಾಗಲಿ, ಉಪಚಾರ– ಅನ್ನಪಾನೀಯಗಳಾಗಲಿ ವರ್ಜ್ಯ. ಶರ್ಕರ, ಪಿಷ್ಟ, ಜೀವಾತು ಭರಿತವಾದ ಆಹಾರ ಮತ್ತು ವಿಶ್ರಾಂತಿಗಳನ್ನು ನೀಡಬೇಕು.

## ಪರಥಿಯಾನ್, ಮಲಥಿಯಾನ್ ಮತ್ತು ಮೆಟಾಸ್ಸೈಡ್‌ಗಳು

ಬೆಳೆಗಳ ಮೇಲೆ ದಾಳಿಯಿಟ್ಟು ಹಾವಳಿ ಮಾಡುವ ಮೃದುದೇಹದ ಕೀಟಗಳನ್ನು ನಾಶಮಾಡಲು ಬಳಸುವ ಫಾಸ್ಫೇಟ್ ಈಸ್ಟರ್ ವರ್ಗದ ಕ್ರಿಮಿನಾಶಕಗಳಲ್ಲಿ ಪರಥಿಯಾನ್, ಮಲಥಿಯಾನ್ ಮತ್ತು ಮೆಟಾಸ್ಸೈಡ್‌ಗಳು ಮುಖ್ಯ ತಯಾರಿಕೆಗಳು. ಪ್ರಾಣಾಪಾಯದ ಪ್ರಮಾಣ (ಸೇವನೆ) : ಪರಥಿಯಾನ್ 100 ಮಿಲಿಗ್ರಾಂ, ಮಲಥಿಯಾನ್ 1 ಗ್ರಾಂ.

ಈ ಕೀಟನಾಶಕಗಳು ಸೇವನೆ, ಸ್ಪರ್ಶ ಹಾಗೂ ಆಘ್ರಾಣ ವಿಷವಾಗಿದ್ದು, ಅತ್ಯಲ್ಪ ಪ್ರಮಾಣದಲ್ಲಿ ನಾಲ್ಕಾರು ವಾರಗಳ ಕಾಲ ಸ್ಪರ್ಶವಾಗುತ್ತಿದ್ದು ದೇಹಗತವಾದರೂ ಕೂಡಾ ತೀವ್ರ ಅಪಾಯವುಂಟಾಗಬಹುದು. ಆಗಾಗ ಎಂದರೆ ಅನೇಕ ದಿವಸಗಳ ಅಂತರದಲ್ಲಿ ತುಸು ಪ್ರಮಾಣದಲ್ಲಿ ವಿಷಪ್ರಯೋಗವಾಗುತ್ತಿದ್ದರೂ ಅಪಾಯ ಸಂಭವಿಸಬಹುದು.

**ದೀರ್ಘಕಾಲದ ವಿಷ ಪ್ರಯೋಗ ಲಕ್ಷಣ ಮತ್ತು ಚಿಕಿತ್ಸೆ :**

ಫಾಸ್ಫೇಟ್ ಈಸ್ಟರ್ ವರ್ಗದ ಕ್ರಿಮಿನಾಶಕ ವಿಷಪ್ರಯೋಗಕ್ಕೆ ದೀಘಕಾಲ ತುತ್ತಾದ ರೋಗಿಯ ಪಾದ ಮತ್ತು ಮೊಣಕ್ಕೆ ಗಂಟುಗಳ ಎರಡೂ ಪಾರ್ಶ್ವಗಳು ಅಶಕ್ತವಾಗುವವು, ಕ್ರಮೇಣ ಅವನ ಕೈಕಾಲುಗಳನ್ನೂ ಶ್ವಾಸಕೋಶವನ್ನೂ ಆ ಅಶಕ್ತತೆಯು ಆವರಿಸಿ, ಪಕ್ಷಾಘಾತವಾದಂತೆ ಕಾಣಿಸುವುದು. ಇಂತಪ ರೋಗಿಯನ್ನು ವಿಷ ಸಂಪರ್ಕದಿಂದ ತಕ್ಷಣ ತಪ್ಪಿಸಿ, ಸೂಕ್ತ ವೈದ್ಯ ಚಿಕಿತ್ಸೆ ನೀಡುವುದಲ್ಲದೆ ಸತ್ವಯುತ ಆಹಾರ ಮತ್ತು ವಿಶ್ರಾಂತಿಗಳನ್ನು ಕೂಡಾ ಒದಗಿಸಬೇಕು.

**ವಿಷಪ್ರಾಶನದ ಲಕ್ಷಣಗಳು:**

ಫಾಸ್ಫೇಟ್ ಈಸ್ಟರ್ ವರ್ಗದ ಕೀಟ ಔಷಧಗಳನ್ನು ಸೇವಿಸಿದ ರೋಗಿಯಲ್ಲಿ ದೃಷ್ಟಿದೋಷ, ಉಸಿರಾಟದ ತೊಂದರೆ ಮೊದಲಾದ ಉಪದ್ರವಗಳು ಕಾಣಿಸುವವು. ಮೊದಲಿಗೆ ತಲೆ ತಿರುಗುವುದು, ತಲೆನೋವು, ಆಯಾಸ, ಕಣ್ಣುಕತ್ತಲೆ ಬರುವುದು ಮೊದಲಾದ ಲಕ್ಷಣಗಳು ಉಂಟಾಗುತ್ತವೆ. ರೋಗಿಯು ಆತಂಕ ಹಾಗೂ ಭಯದಿಂದ ತತ್ತರಿಸುತ್ತಾನೆ. ಅವನ ನಾಲಗೆ ರೆಪ್ಪೆಗಳು ಹಾರುತ್ತವೆ. ತಾತ್ಕಾಲಿಕವಾಗಿ ದೃಷ್ಟಿದೋಷವೂ ಸಹ ಉಂಟಾಗಬಹುದು. ವಿಷಪ್ರಯೋಗವು ಹೆಚ್ಚಿನ ಪ್ರಮಾಣದಲ್ಲಾಗಿದ್ದರೆ ವಾಕರಿಕೆ, ವಾಂತಿ, ಕಣ್ಣೀರು, ಹೊಟ್ಟೆ ಚಳುಕು, ಮೈ ಬೆವರುವುದು ಮೊದಲಾದ ಲಕ್ಷಣಗಳು

ಉಂಟಾಗುತ್ತವೆ. ನಾಡಿಯು ಬಲು ನಿಧಾನವಾಗುವುದು. ಮೈ ನಡುಕವು ಪ್ರಾರಂಭವಾಗುವುದು. ಇನ್ನೂ ಹೆಚ್ಚು ಉಲ್ಬಣಾವಸ್ಥೆಗೇರಿದಾಗ ಕಣ್ಣುಬೊಂಬೆ ಸೂಜಿಮೊನೆಯಷ್ಟು ಕಿರಿದಾಗಿರುವುದು. ಬೆಳಕಿಗೆ ಪ್ರತಿಸ್ಪಂದಿಸುವುದಿಲ್ಲ. ಭೇದಿಯೂ ತೊಡಗುತ್ತದೆ. ಮುಖವು ನೀಲಿ ಛಾಯೆಗೆ ತಿರುಗುವುದು; ಅದಿರುವಾಯು ಸ್ಮೃತಿತಪ್ಪುವುದು ಮತ್ತು ಹೃದಯವಿಕಾರ ಮರಣ.

**ಪ್ರತ್ಯೌಷಧ :**

ಈ ವಿಷಗಳಿಗೆ ಎಟ್ರೋಪಿನ್ ಸಿದ್ಧಪ್ರತ್ಯೌಷಧ (ಎಟ್ರೋಪಿನ್ ಸೂಜಿಮದ್ದು ಅಥವಾ ಗೋಲಿ)

**ಚಿಕಿತ್ಸೆ ಮತ್ತು ಉಪಚಾರ :**

ಸ್ಪರ್ಶವಿಷಕ್ಕೆ ತುತ್ತಾದ ರೋಗಿಯನ್ನು ಮೊದಲು ವಿಷದ ಪರಿಸರದಿಂದ ದೂರಸಾಗಿಸಿ, ಮೈ ಕೈಗೆ ಸ್ಪರ್ಶವಾಗಿದ್ದ ವಿಷವನ್ನು ಸಾಬೂನು ಹಚ್ಚಿ ನೀರಿನಿಂದ ಚೆನ್ನಾಗಿ ತೊಳೆಯಬೇಕು. ದವಾಖಾನೆಗೆ ರೋಗಿಯನ್ನು ಸೇರಿಸಿ ಚಿಕಿತ್ಸೆ ಮಾಡುವುದು ಉಚಿತ. ಕೃತಕ ಉಸಿರಾಟ ಆಮ್ಲಜನಕ ನೀಡಿಕೆಗಳು ಅಗತ್ಯವಾಗಬಹುದು. ರೋಗಿಯ ಹೊಟ್ಟೆಗೆ ಸೇರಿದ ವಿಷವನ್ನು ಹೊಟ್ಟೆ ತೊಳೆಯುವುದು, ವಾಂತಿ ಮಾಡಿಸುವುದು ಮೊದಲಾದ ವಿಧಾನಗಳಿಂದ ಹೊರಕ್ಕೆ ಹಾಕುವುದಲ್ಲದೆ, 30 ಗ್ರಾಂ ಸೋಡಿಯಂ ಸಲ್ಫೇಟನ್ನು ಒಂದು ಕಪ್ಪು ನೀರಿನಲ್ಲಿ (2 ಮಿಲಿ ಲೀಟರ್) ಕಲಸಿ ಕುಡಿಸಿ ಭೇದಿ ಮಾಡಿಸಬೇಕು.

ರೋಗಿಯ ಉಸಿರಾಟಕ್ಕೆ ತಡೆಯಾಗದಂತೆ ಶ್ವಾಸನಾಳವನ್ನು ಸ್ವಚ್ಛ ಮಾಡುತ್ತಿರಬೇಕು. ಪುಪ್ಪುಸ ವಿಕಾರಕ್ಕೆ ಸೂಕ್ತ ಚಿಕಿತ್ಸೆ ನಡೆಸಬೇಕು. ಮಾರ್ಫಿಯಾ, ಅಮೈನೋಫೈಲಿನ್ ಮತ್ತು ಬಾರ್ಬಿಟೋನ್ ಔಷಧಿಗಳು ವರ್ಜ್ಯ.

**ಸಸ್ಯಸಂರಕ್ಷಣೆಯ ವಿಷಬಳಕೆಯಲ್ಲಿ ವಹಿಸಬೇಕಾದ ಮುನ್ನೆಚ್ಚರಿಕೆಗಳು–ಬೇಕುಗಳು**

1. ಸಸ್ಯಸಂರಕ್ಷಣೆಯ ಔಷಧಿಗಳನ್ನೂ ಕೀಟನಾಶಕಗಳನ್ನೂ ಬಳಸುವಾಗಲೂ ತಯಾರಿಕೆ, ಸಾಗಾಣಿಕೆ ಮತ್ತು ಬಳಕೆಯ ಪ್ರತಿ ಹಂತದಲ್ಲಿಯೂ ಸೂಕ್ತ ಮುನ್ನೆಚ್ಚರಿಕೆ ವಹಿಸಬೇಕು.
2. ಒಕ್ಕಲುತನದಿಂದ ಪ್ರತಿಯೊಂದು ಸೀಸೆ, ಡಬ್ಬ ಅಥವಾ ಪೊಟ್ಟಣದೊಡನೆ ಇರುವ ಕಂಪನಿಯ ಮುದ್ರಿತ ಗುರುತು ಚೀಟಿ, ಕರಪತ್ರ, ಸೂಚನಾ

ಪತ್ರಗಳನ್ನು ಓದಿ ಮನನ ಮಾಡಿಕೊಂಡು, ಜೋಪಾನವಾಗಿ ತೆಗೆದಿರಿಸಬೇಕು. ಸಂದೇಹ ಬಂದಾಗಲೆಲ್ಲಾ ಮತ್ತೆ ಮತ್ತೆ ಓದಿ ನೋಡಬೇಕು.

3. ಔಷಧಿ ಸಿಂಪರಣೆ ಮಾಡುವಾಗ ಮೋರೆ ಮತ್ತು ಕೈಗಳಿಗೆ ರಕ್ಷಾಕವಚ ಧರಿಸಬೇಕು. ಸಿಂಪರಣೆಯ ಉಪಕರಣದ (ನಲಿಕೆಯ) ರಂಧ್ರವು ಮುಚ್ಚಿಕೊಂಡರೆ ಅದನ್ನು ಸರಿಪಡಿಸಲು ಗುಂಡುಸೂಜಿಯನ್ನು (ಟಾಚಣಿ) ಉಪಯೋಗಿಸಬೇಕು.

4. ಔಷಧ ಸಿಂಪರಣೆ ಮಾಡುವಾಗ ಮೈ ಕೈಗಳಿಗೆ ಸ್ಪರ್ಶವಾದರೆ ಸಿಂಪರಣೆಯನ್ನು ತಕ್ಷಣ ನಿಲ್ಲಿಸಿ ಆ ಭಾಗವನ್ನು ಸಾಬೂನು ಹಚ್ಚಿ, ತಣ್ಣೀರಿನಿಂದ ಚೆನ್ನಾಗಿ ತೊಳೆಯಬೇಕು. ಸಿಂಪರಣಾ ಕಾರ್ಯದಲ್ಲಿ ಬಳಸುವ ಪ್ರತಿಯೊಂದು ಉಪಕರಣವನ್ನೂ ಪಾತ್ರ ಮೊದಲಾದ ಸಲಕರಣೆಗಳನ್ನು ದಿನಸ ಕೊನೆಯಲ್ಲಿ ನೀರಿನೀಂದ ತೊಳೆದು ಇರಿಸಬೇಕು.

5. ಬರಿದಾದ ಔಷಧ ಪೆಟ್ಟಿಗೆ, ಸೀಸೆ ಅಥವಾ ಪೊಟ್ಟಣಗಳನ್ನು ತಕ್ಷಣ ನಾಶಮಾಡಬೇಕು. ಕನಿಷ್ಠಪಕ್ಷ ಮಕ್ಕಳ ಕೈಗೆ ಸಿಗದಂತೆ ತೆಗೆದಿರಿಸಬೇಕು.

6. ಸಸ್ಯಸಂರಕ್ಷಣಾ ಔಷಧಿಗಳನ್ನು ಜೋಪಾನವಾಗಿ (ಬೀಗದಲ್ಲಿ) ಇರಿಸುವುದು ಅಗತ್ಯ.

7. ಆಕಸ್ಮಿಕ ಸಂಭವಿಸಿದಲ್ಲಿ ಪ್ರಥಮ ಚಿಕಿತ್ಸೆ ನೀಡಿ ಬಳಸಲ್ಪಟ್ಟ ವಿಷದ ಗುರುತು ಚೀಟಿ, ಮಾಹಿತಿ ಪ್ರತದೊಂದಿಗೆ ವೈದ್ಯರಲ್ಲಿಗೆ ರೋಗಿಯನ್ನು ಸಾಗಿಸಬೇಕು.

**ಸಸ್ಯಸಂರಕ್ಷಣೆಯ ವಿಷಬಳಕೆಯಲ್ಲಿ ವಹಿಸಬೇಕಾದ ಮುನ್ನೆಚ್ಚರಿಕೆಗಳು–ಬೇಡಗಳು**

1. ಸಸ್ಯಸಂರಕ್ಷಣೆಯ ಔಷಧಿಗಳನ್ನೂ ಕ್ರಿಮಿನಾಶಕಗಳನ್ನೂ ಆಹಾರ ಪದಾರ್ಥಗಳೊಂದಿಗೆ ಇರುಸುವುದು ಬೇಡ. ದ್ರಾವಕಗಳನ್ನು ಸಿಂಪಡಿಸುವಾಗ ಅಥವಾ ಇನ್ನಿತರ ರೀತಿಗಳಿಂದ ಪ್ರಯೋಗಿಸುತ್ತಿರುವಾಗ ಉಣ್ಣುವುದು, ತಿನ್ನುವುದು ಏನನ್ನಾದರೂ ಕುಡಿಯುವುದು, ಪಾನ್ (ಎಲೆ–ಅಡಿಕೆ) ಜಗಿಯುವುದು ಮತ್ತು ಹೊಗೆಬತ್ತಿ ಸೇದುವುದು ಬೇಡ.

2. ಸಿಂಪಡಿಸುವ ಮಿಶ್ರಣಗಳನ್ನು ಕೈಯಿಂದ ಕಲಸುವುದು ಅಥವಾ ಸ್ಪರ್ಶಿಸುವುದು ನಿಷಿದ್ಧ. ಬಾಯಿಯಿಂದ ಉಸಿರೆಳೆದು ನಡೆಸುವ ಯಾವ

ಸಲಕರಣೆಗಳನ್ನೂ ಉಪಯೋಗಿಸಬಾರದು.

3. ಸಸ್ಯ ಸಂರಕ್ಷಣಾ ದ್ರವ್ಯದ ಸೀಸೆಯನ್ನು ಮುಖದ ಬಳಿ ಹಿಡಿದು ಮುಚ್ಚಳ ತೆರೆಯಬಾರದು. ಸಿಂಪಡಿಸುವಾಗ ಗಾಳಿಯ ಓಟಕ್ಕೆ ಎದುರಾಗಿ ಹಿಡಿದು ವಿಷದ ಹನಿಗಳು ನಿಮ್ಮೆಡೆಗೆ ತೂರಿ ಬರುವಂತೆ ಪ್ರಯೋಗಿಸಬಾರದು.

4. ಆರೋಗ್ಯವಂತ ಯುವಕರ ವಿನಃ ಮಕ್ಕಳು–ಮುದುಕರು ಮೊದಲಾದವರನ್ನು ಈ ಔಷಧಿ ತಯಾರಿಕೆ, ಸಾಗಾಣಿಕೆ ಮತ್ತು ಬಳಕೆಯ ಕೆಲಸಗಳಿಗೆ ನೇಮಿಸುವುದು ಬೇಡ.

5. ಅರಿಯದ ಜನರೂ, ಮೂಕಪ್ರಾಣಿಗಳೂ, ಕೋಳಿ, ಮೀನು ಮೊದಲಾದ ಜೀವಜಂತುಗಳು ಸಸ್ಯಸಂರಕ್ಷಣಾ ಔಷಧಿ ಬೆರೆತ ಆಹಾರ, ಮೇವು ಮತ್ತು ನೀರನ್ನು ಸೇವಿಸಿ ಅಪಾಯಕ್ಕೆ ತುತ್ತಾಗುವ ಸಂಭವವಿರುವುದರಿಂದ ಇವುಗಳನ್ನು ಬಳಸುವಾಗ ಅಸಡ್ಡೆ ಮತ್ತು ಮೈಮರೆವು ಬೇಡ.

6. ವಿಷಪ್ರಯೋಗವಾದರೆ ಗಾಬರಿಯಾಗುವುದು ಬೇಡ. ತಕ್ಷಣ ಪ್ರಥಮ ಚಿಕಿತ್ಸೆ ಕೈಗೊಂಡು ತುರ್ತು ವೈದ್ಯಸಹಾಯ ಪಡೆಯಲು ವಿಳಂಬಿಸುವುದು ಬೇಡ.

## ಇಲಿ ಪಾಷಾಣ ಮತ್ತು ಥಲ್ಲಿಯಂ



ಮೂಷಕವಿಷವಾಗಿ ಬಳಸುವ ಥಲ್ಲಿಯಂ ಮೃದುವಾದ ಭಾರವುಳ್ಳ ಬಿಳಿಯ ತಗಡಿನ ಪುಡಿಯಂತೆ ಕಾಣಿಸುವ ವಿಷಲೋಹ. ಬಣ್ಣದ ಕೈಗಾರಿಕೆಯಲ್ಲಿಯೂ, ಗಾಜು ತಯಾರಿಕೆಯಲ್ಲಿಯೂ ಇದನ್ನು ಬಳಸುತ್ತಾರೆ. ಥಲ್ಲಿಯಂ ಅಸಿಟೇಟ್‌ನಿಂದ ತಯಾರಿಸಿದ ಔಷಧಿಗಳನ್ನು ಮಕ್ಕಳ ತಲೆಯಲ್ಲಿ ತದ್ದು ರೋಗದ ಉಂಟಾಗುವ ಚಿಕಿತ್ಸೆಗಾಗಿ ಸವರುತ್ತಾರೆ. ಅನುಚಿತವಾಗಿ ಬೆಳೆದ ದೇಹದ ಚೆಲುವನ್ನು ಕೆಡಿಸುವ ಹೆಚ್ಚುವರಿ ರೋಮವನ್ನು ನಾಶಮಾಡಲು ಶೃಂಗಾರಪ್ರಿಯರಾದ ಬೆಡಗುಗಾತಿಯರು ಇದರ ಮುಲಾಮನ್ನು ಹಚ್ಚುವುದುಂಟು.

ಥಲ್ಲಿಯಂ ಒಗ್ಗದವರಲ್ಲಿ ಅನಿರೀಕ್ಷಿತ ದುಷ್ಪರಿಣಾಮಗಳನ್ನುಂಟುಮಾಡುತ್ತವೆ. ಬಹುದೀರ್ಘಕಾಲ ಅಥವಾ ಹೆಚ್ಚು ಪ್ರಮಾಣದಲ್ಲಿ ಬಳಸಿದಾಗಲೂ ಕೂಡಾ ಉಪದ್ರವ ಕಟ್ಟಿಟ್ಟದ್ದು. ಥಲ್ಲಿಯಂ ಸೇವನೆ ಹಾಗೂ ಸ್ಪರ್ಶ ವಿಷ.

ಪ್ರಾಣಾಪಾಯದ ಪ್ರಮಾಣ (ಸೇವನೆ) ಒಂದು ಗ್ರಾಮು.

ಥಲ್ಲಿಯಂ ವಿಷಪ್ರಯೋಗದ ವಿಶಿಷ್ಟ ಲಕ್ಷಣವೆಂದರೆ ಕೂದಲು ಉದುರುವುದು.

**ಸ್ಪರ್ಶವಿಷದ ಲಕ್ಷಣಗಳು ಮತ್ತು ಚಿಕಿತ್ಸೆ:**

ಥಲ್ಲಿಯಂ ಸ್ಪರ್ಶವಿಷಕ್ಕೆ ತುತ್ತಾದ ರೋಗಿಯು ದೇಹಾಯಾಸ, ನಿದ್ರಾನಾಶ, ಅಗ್ನಿಮಾಂದ್ಯ, ಅರುಚಿ, ಮೊದಲಾದ ಉಪದ್ರವಗಳಿಂದ ನರಳುವುದಲ್ಲದೆ ವಿಶೇಷ ಚಡಪಡಿಸುತ್ತಾನೆ. ಅವನ ಮೈಕೈಗಳು ದುರ್ಬಲವಾಗುವುವು ಮತ್ತು ಚರ್ಮದ ವರ್ಣವೂ ಸಹ ವ್ಯತ್ಯಾಸವಾಗುವುದು. ಅವನು ಮಂದವಾದ ಹೊಟ್ಟೆನೋವು, ಕಾಲುನೋವು ಮೊದಲಾದ ಉಪದ್ರವಗಳಿಂದ ನರಳುವನು. ಜೊಲ್ಲು ಸುರಿಯುವುದು, ಒಸಡಿನಲ್ಲಿ ನೀಲಿರೇಖೆ ಕಾಣಿಸುವುದು ಮತ್ತು ಚರ್ಮವು ಒಣಗುವುದು. ಸ್ತ್ರೀಯರಲ್ಲಿ ಋತುಸ್ರಾವದ ಏರುಪೇರು, ಪುರುಷರಲ್ಲಿ ಬೀಜೋತ್ಪತ್ತಿಯ ಅವ್ಯವಸ್ಥೆ ಕಾಣಿಸುವುದು, ರೋಗಿಯ ಕೂದಲು ಮತ್ತು ರೋಮಗಳು ಉದುರುವುದು ಇವು ಎದ್ದು ಕಾಣಿಸುವ ಲಕ್ಷಣಗಳಾಗಿವೆ. ಇಂತಹ ರೋಗಿಯನ್ನು ತಕ್ಷಣ ವಿಷಸಂಪರ್ಕದಿಂದ ಬೇರ್ಪಡಿಸಬೇಕು ಮತ್ತು ಮುಂದೆ ಖಾಯಂ ಆಗಿ ವಿಷಸ್ಪರ್ಶವನ್ನು ತಪ್ಪಿಸಬೇಕು. ಬಿ.ಎ.ಎಲ್. ಸೂಜಿಮದ್ದು ಥಲ್ಲಿಯಂ ವಿಷಕ್ಕೆ ಸಿದ್ಧಪ್ರತ್ಯೌಷಧ. ಇತರ ಉಪದ್ರವಗಳಿಗೆ ಲಕ್ಷಣಾನುಸಾರ ಚಿಕಿತ್ಸೆ ನಡೆಸಬೇಕು.

**ವಿಶಪ್ರಾಶನದ ಲಕ್ಷಣಗಳು :**

ಥಲ್ಲಿಯಂ ವಿಷವನ್ನು ಸೇವಿಸಿದ ರೋಗಿಯಲ್ಲಿ ಕೆಲವು ಗಂಟೆಗಳೊಳಗಾಗಿ ವಿಷ ಲಕ್ಷಣಗಳು ಕಾಣಿಸಬಹುದು ಅಥವಾ ಕೆಲವೊಮ್ಮೆ ಅನೇಕ ದಿವಸಗಳ ನಂತರ ಉಪದ್ರವಗಳು ಪ್ರಾರಂಭವಾಗುವುದೂ ಉಂಟು. ರೋಗಿಯ ಬಾಯಿ ಒನಗುವುದು, ಮೂಗು ಸೋರುವುದು, ಕಣ್ಣುನೋವು, ಗಂಟಲು ನೋವು, ಹೊಟ್ಟೆ ನೋವು, ವಾಕರಿಕೆ ಮತ್ತು ವಾಂತಿ ಮೊದಲಾದ ಉಪದ್ರವಗಳು ಕಾಣಿಸುತ್ತವೆ. ಮೈ ಕೈ ನೋವಿನಿಂದ ಕೂಡಿದ ಜ್ವರ, ಭೇದಿ ಮತ್ತು ನಿರ್ವಿಣ್ಣತೆಗಳಿಂದ ಅವನು ಹೆಚ್ಚು ಸಂಕಟಪಡುತ್ತಿದ್ದು ಕೂದಲು ಉದುರುವುದು, ಉಗುರು ಹರಕಾಗುವುದು ಸಹ ಕಾಣಿಸುತ್ತದೆ. ರೋಗಿಯ ದೇಹದ ಸಮತೋಲನತೆಯು ತಪ್ಪುತ್ತದೆ. ಬಡಬಡಿಕೆ, ಅದಿರುವಾಯು, ಕಂಪನ ಮತ್ತು ಉಸಿರಾಟದ ತೊಂದರೆ, ನಾನಾ ಬಗೆಯ ಮೂತ್ರ ವಿಕಾರ, ಮೂತ್ರದ ಇಳುವರಿ, ಪುಪ್ಪುಸ ಊತ, ಕುಸಿತ, ಸ್ಮೃತಿ ತಪ್ಪುವುದು ಮತ್ತು ಮರಣ.

**ಪ್ರತ್ಯೌಷಧ :**

ಥಲ್ಲಿಯಂ ವಿಷಕ್ಕೆ ಸಿದ್ಧಪ್ರತ್ಯೌಷಧ ಬಿ.ಎ.ಎಲ್. ಸೂಜಿಮದ್ದು.

**ಚಿಕಿತ್ಸೆ ಮತ್ತು ಉಪಚಾರ :**

ಥಲ್ಲಿಯಂ ವಿಷ ಪ್ರಯೋಗಕ್ಕೆ ತುತ್ತಾದ ರೋಗಿಯನ್ನು ವಾಂತಿ ಮಾಡಿಸುವುದು, ಹೊಟ್ಟೆ ತೊಳೆಸುವುದು ಮತ್ತು ವಿರೇಚನ ಮಾಡಿಸುವುದು ಮೊದಲಾದ ಸಾಂಪ್ರದಾಯಿಕ ವಿಧಾನಗಳಿಂದ ಚಿಕಿತ್ಸೆ ಮಾಡಬೇಕು. ಸೋಡಿಯಂ ಥಿಯೋಸಲ್ಫೇಟ್ ಸೂಜಿಮದ್ದು ಉಪಯುಕ್ತವಾಗಿದೆ. 3 ರಿಂದ 5 ಗ್ರಾಂ ಪೊಟಾಸಿಯಂ ಕ್ಲೋರೈಡ್‌ನ್ನು ಒಂದು ಪಿಂಟ್ ನೀರಿನಲ್ಲಿ ಕರಗಿಸಿ ಕುಡಿಸುವುದು ಸಹ ಉಪಯುಕ್ತ ಪರಿಣಾಮವನ್ನು ಉಂಟು ಮಾಡುತ್ತದೆ. ರೋಗಿಯ ಮೈ ಬೆಚ್ಚಗಿರುವಂತೆ ಮಾಡಲು ಕಂಬಳಿ ಹೊದಿಸುವುದು, ಬಿಸಿನೀರು ತುಂಬಿದ ಸೀಸೆಗಳನ್ನು ಪಕ್ಕದಲ್ಲಿ ಇರಿಸುವುದು ಮೊದಲಾದ ಉಪಚಾರವನ್ನು ನಡೆಸಬೇಕು. ಮೂತ್ರ ವಿಕಾರ, ರಕ್ತಹೀನತೆ, ಮೊದಲಾದ ಉಪದ್ರವಗಳಿಗೆ ಸೂಕ್ತ ಚಿಕಿತ್ಸೆ ನಡೆಸಬೇಕು.

**ಮುನ್ನೆಚ್ಚರಿಕೆ :**

ಇಲಿ ವಿಷವಾಗಿ ಥಲ್ಲಿಯಂನ್ನು ಬಳಸುವಾಗ ಸಕ್ಕರೆ, ಜೇನುತುಪ್ಪ ಅಥವಾ ಬೆಲ್ಲದೊಂದಿಗೆ ಬೆರಸಿ ಇರಿಸುತ್ತಾರೆ. ಇದು ವಿಷಮಿಶ್ರಿತ ವಸ್ತುವೆಂದು ತಿಳಿಯದೇ ಚಿಕ್ಕ ಮಕ್ಕಳು, ಕೆಲವು ಸಲ ದೊಡ್ಡವರೂ ಸಹ ಸೇವಿಸಿ, ಪ್ರಾಣಾಪಾಯಕ್ಕೆ ತುತ್ತಾಗುತ್ತಾರೆ. ಆದ್ದರಿಂದ ಮನೆಗಳಲ್ಲಿ ಇಲಿಗಳನ್ನು ಕೊಲ್ಲುವ ಹಂಚಿಕೆ ಹೂಡಿದಾಗ ಈ ಬಗೆಯ ಆಕಸ್ಮಿಕ ಸಂಭವಿಸದಂತೆ ಎಲ್ಲರಿಗೂ ತಿಳುವಳಿಕೆ ಮುನ್ನೆಚ್ಚರಿಕೆ ನೀಡಬೇಕು.

## ವಾರ್ಫಾರಿನ್

ರಕ್ತಕಾರಿಸುವ ಮೂಲಕ ಇಲಿಗಳನ್ನು ಸಾಯಿಸಲು ಬಳಸುವ ಮೂಷಿಕವಿಷ ವಾರ್ಫಾರಿನನ್ನು ನಾನಾ ಬಗೆಯ ರೋಗ ಚಿಕಿತ್ಸೆಗೂ ಬಳಸುತ್ತಾರೆ. ಎಷ್ಟು ಹೆಚ್ಚು ಪ್ರಮಾಣದಲ್ಲಿ ಒಂದು ಸಾರಿ ಸೇವಿಸಿದರೂ ಇದರಿಂದ ಪ್ರಾಣಾಪಾಯ ಸಂಭವಿಸುವುದಿಲ್ಲ. ಆದರೆ ಅಲ್ಪ ಪ್ರಮಾಣದಲ್ಲಿಯೇ ಆದರೂ ಮತ್ತೆ ಮತ್ತೆ ಸೇವಿಸಿದಾಗ ಅಪಾಯ ಖಚಿತ. ವಿಷಪ್ರಾಶನವಾದ ಪ್ರತಿಯೊಂದು ಸಲವೂ ಹಿಂದಿನ ಸರ್ತಿಗಿಂತ ಹೆಚ್ಚು ರಕ್ತಸ್ರಾವವಾಗುವುದು ಈ ವಿಷದ್ರವ್ಯದ ವೈಶಿಷ್ಟ್ಯವಾದುದರಿಂದ ವಿಷಪ್ರಾಶನವಾದುದನ್ನು ಸಮಯಾನುಸಾರ ಗುರುತಿಸಿ ಚಿಕಿತ್ಸೆ ಕೈಗೊಂಡು

ರೋಗಿಯನ್ನು ಪ್ರಾಣಾಪಾಯದಿಂದ ತಪ್ಪಿಸುವುದಕ್ಕೂ ಮುಂದೆ ವಿಷಪ್ರಾಶನವಾಗದಂತೆ ತಡೆಗಟ್ಟುವುದಕ್ಕೂ ಸಾಧ್ಯವಿದೆ.

ಪ್ರಾಣಾಪಾಯದ ಪ್ರಮಾಣ (ಸೇವನೆ) 100 ಮಿಲಿಗ್ರಾಂ. (ಅನೇಕ ಬಾರಿ ಮೇಲಿಂದ ಮೇಲೆ ಸೇವನೆ)

**ವಿಷಪ್ರಯೋಗದ ಲಕ್ಷಣಗಳು :**

ವಾರ್ಫಾರಿನ್ ವಿಷಸೇವಿಸಿದ ರೋಗಿಯ ಬಾಯಿಯಿಂದ- ಮುಖ್ಯವಾಗಿ ಮೂಗು ಮತ್ತು ಮಲಮೂತ್ರದ್ವಾರಗಳಿಂದ ರಕ್ತಸ್ರಾವವಾಗುವುದು. ರೋಗಿಯ ಚರ್ಮವು ಅಲ್ಲಲ್ಲಿ ಕಿತ್ತುಬರುವುದಲ್ಲದೆ ಅಂತಹ ಭಾಗಗಳಿಂದ ಮೈ, ಕೈ, ಬೆನ್ನು ಮೊದಲಾದ ಅಂಗಾಂಗಗಳಿಂದ ಕೂಡಾ ರಕ್ತಸ್ರಾವವುಂಟಾಗುತ್ತದೆ. ರೋಗಿಯು ಬಿಳಿಚಿಕೊಳ್ಳುತ್ತಾನೆ.

**ಪ್ರತ್ಯೌಷಧ :**

ವಾರ್ಫಾರಿನ್ ವಿಷ ಪ್ರಯೋಗಕ್ಕೆ ಸಿದ್ಧಪ್ರತ್ಯೌಷಧವೆಂದರೆ ವಿಟಮಿನ್ ಕೆ ಸೂಜಿಮದ್ದು.

**ಚಿಕಿತ್ಸೆ ಮತ್ತು ಉಪಚಾರ :**

ವಾರ್ಫಾರಿನ್ ವಿಷಪ್ರಯೋಗಕ್ಕೆ ತುತ್ತಾದ ರೋಗಿಗೆ ರಕ್ತಬಂಧಕವಾದ ಔಷಧೋಪಚಾರ ಮಾಡಿ ರಕ್ತಸ್ರಾವವನ್ನು ತಡೆಗಟ್ಟಬೇಕು. ಆಡುಸೋಗೆ ಎಲೆಯ (ಆಡುಪಾಲ-ಆಡು ಮಟ್ಟದ ತೊಪ್ಪಲು) ಕಷಾಯವನ್ನು ಕುಡಿಸಬಹುದು. ಮೊದಲಿಗೆ ಹೊಟ್ಟೆ ತೊಳೆಯುವುದು, ವಾಂತಿ ಮಾಡಿಸುವುದು ಮತ್ತು ವಿರೇಚನ ಚಿಕಿತ್ಸೆಗಳಿಂದ ವಿಷಮುಕ್ತಿಮಾಡಿಸಬೇಕು. ಅಗತ್ಯಬಿದ್ದರೆ ರೋಗಿಗೆ ರಕ್ತದಾನ ಸಹ ನೀಡಬೇಕು.

## ಬೇರಿಯಂ

ಬೇರಿಯಂ ಕುಡಿಸಿ ಕರುಳು ಹುಣ್ಣಿನ ಎಕ್ಸ್‌ರೇ ಚಿತ್ರ ತೆಗೆಯುತ್ತಾರೆ. ಈ ಬೇರಿಯಂ ಸಲ್ಫೇಟ್ ನಿರಪಾಯಕಾರಿ ನಿರ್ವಿಷದ್ರವ್ಯ. ಆದರೆ ಬೇರಿಯಂನ ಇತರ ಕೆಲವು ತಯಾರಿಕೆಗಳು ಮಾರಕ ವಿಷಗಳಾಗಿವೆ. ಇಲಿಗಳು ಹಾಗೂ ಕ್ರಿಮಿಕೀಟಗಳ ನಾಶಕ್ಕೂ ಬೇರಿಯಂ ವಿಷವನ್ನು ಬಳಸುತ್ತಾರೆ. ಇವು ತೀಕ್ಷ್ಣವಾದ ಸೇವನಾ ವಿಷಗಳಾಗಿವೆ. ಪ್ರಾಣಾಪಾಯದ ಪ್ರಮಾಣ (ಸೇವನೆ) 1 ಗ್ರಾಂ.

**ವಿಷಪ್ರಾಶನದ ಲಕ್ಷಣಗಳು :**

ಬೇರಿಯಂ ವಿಷಪ್ರಾಶನವಾದ ರೋಗಿಯು ಸ್ನಾಯುಗಳ ಸೆಳೆತ, ವಾಂತಿ, ಭೇದಿ, ಮನೋವ್ಯಾಕುಲತೆ, ಉಸಿರಾಟದ ತೊಂದರೆ, ಎದೆ ಬಡಿತದ ಏರುಪೇರು ಮೊದಲಾದ ಉಪದ್ರವಗಳಿಂದ ನರಳುತ್ತಾನೆ. ಕ್ರಮೇಣ ಅದಿರುವಾಯು, ಹೃದಯಾಘಾತ ಸಂಭವಿಸಿ ಸಾವು ಉಂಟಾಗಬಹುದು.

**ಪ್ರತ್ಯೌಷಧ ಮತ್ತು ಚಿಕಿತ್ಸೆ :**

ಸೋಡಿಯಂ ಸಲ್ಫೇಟ್ ಸೂಜಿಮದ್ದು ಬೇರಿಯಂ ವಿಷಕ್ಕೆ ಸಿದ್ಧ ಪ್ರತ್ಯೌಷಧ. (ಇದನ್ನು ರಕ್ತನಾಳದ ಮೂಲಕ ಕೊಡಬೇಕು). 30 ಗ್ರಾಂ ಸೋಡಿಯಂ ಸಲ್ಫೇಟನ್ನು ಒಂದು ಲೋಟ ನೀರಿನಲ್ಲಿ ಕರಗಿಸಿ ಪ್ರತಿ ತಾಸಿಗೊಮ್ಮೆ ಕುಡಿಸಬಹುದು. ಎಟ್ರೋಪಿನ್, ಮಾರ್ಫಿನ್ ಸೂಜಿಮದ್ದುಗಳೂ ಉಪಯುಕ್ತ.

## ಮೈಲುತುತ್ತು

ಮಲೆನಾಡಿನ ಅಡಿಕೆ ಬೆಳೆಗಾರರು ಕೊಳೆರೋಗ ನಿವಾರಣೆಗಾಗಿ ಚಿಮುಕಿಸುವ ಬೋರ್ಡೋ ಮಿಶ್ರಣದ ಮುಖ್ಯ ಸತ್ವವೇ ಮೈಲುತುತ್ತು. ಇದನ್ನು ನೀಲತುತಿಯಾ, ತುತ್ಥ ಎಂದೂ ಕರೆಯುತ್ತಾರೆ. ಆಯುರ್ವೇದ ವೈದ್ಯರು ಮೈಲುತುತ್ತನ್ನು ಅನೇಕ ಚರ್ಮರೋಗಗಳ ಚಿಕಿತ್ಸೆಗೆ ಬಳಸುತ್ತಾರೆ. ಅಲ್ಪ ಪ್ರಮಾಣದಲ್ಲಿ ಎಂದರೆ 120 ಮಿಲಿಗ್ರಾಂನಷ್ಟು ಸೇವಿಸಿದರೆ ಸ್ತಂಭಕವಾಗಿಯೂ, 5–10 ಗ್ರೇನ್ಸ್ ಪ್ರಮಾಣದಲ್ಲಿ ಸೇವಿಸಿದರೆ ವಾಂತಿಕಾರಕವಾಗಿಯೂ ಇರುವ ಮೈಲುತುತ್ತು ಉತ್ತಮ ಶಿಲೀಂಧ್ರನಾಶಕ ದ್ರವ್ಯ. ಅವರೆಕಾಳಿನಂತಹ ಅನೇಕ ಹಸಿರು ಕಾಯಿಪಲ್ಲೆಗಳನ್ನು ಡಬ್ಬಿ ಶೇಖರಣೆ ಮಾಡುವಾಗ ಅದರ ಹಸಿರು ಕೆಡದಂತೆ ಉಳಿಸಲಿಕ್ಕೂ ಉಪ್ಪಿನಕಾಯಿ ದಾಸ್ತಾನಿನಲ್ಲಿಯೂ ಅತ್ಯಲ್ಪ ಪ್ರಮಾಣದಲ್ಲಿ ಎಂದರೆ ಒಂದುಪೌಂಡು ದ್ರವ್ಯಕ್ಕೆ ಒಂದು ಗ್ರೇನಿನಷ್ಟು ಮೈಲುತುತ್ತು ಬೆರೆಸುವ ಸಂಪ್ರದಾಯವಿದೆ. ಅಧಿಕ ಪ್ರಮಾಣದಲ್ಲಿ ಮೈಲುತುತ್ತನ್ನು ಸೇವಿಸಿದರೆ ಪ್ರಾಣಾಂತಿಕ ಸಂಕಟಗಳು ಉಂಟಾಗುವವು. ಮೈಲುತುತ್ತು ಸೇವನೆ, ಆಘ್ರಾಣ ಹಾಗೂ ಸ್ಪರ್ಶ ವಿಷ.

**ಪ್ರಾಣಾಪಾಯದ ಪ್ರಮಾಣ (ಸೇವನೆ) :**

15–30 ಗ್ರಾಂ (ಅಂದರೆ 4 ಔನ್ಸ್ ಮೈಲುತುತುತ್ತು ಸೇವಿಸಿದರೂ ಸಕಾಲದಲ್ಲಿ ಕೈಗೊಂಡ ಸೂಕ್ತಚಿಕಿತ್ಸೆಯಿಂದ ರೋಗಿಯು ಚೇತರಿಸಿಕೊಂಡ ದಾಖಲೆಗಳಿವೆ) ಅತ್ಯಲ್ಪ ಪ್ರಮಾಣದಲ್ಲಿ ಮೇಲಿಂದ ಮೇಲೆ ಮೈಲುತತ್ತನ್ನು ಸೇವಿಸುತ್ತಿದ್ದರೂ ಅಪಾಯ

ಸಂಭವಿಸಬಹುದು. ಪ್ರಾಣಾಪಾಯದ ಕಾಲಾವಧಿ 3 ದಿವಸ. ತೀವ್ರ ವಿಷಪ್ರಯೋಗದ ಸಂದರ್ಭದಲ್ಲಿ 2–3 ತಾಸಿನೊಳಗೆ ಸಾವು ಸಂಭವಿಸಬಹುದು.

**ಸ್ಪರ್ಶ ವಿಷ ಲಕ್ಷಣಗಳು :**

ಮೈಲುತುತ್ತು ಪುಡಿ ಧೂಳು ಅಥವಾ ದ್ರಾವಕ ರೂಪದಲ್ಲಿ ಕಣ್ಣಿಗೆ ಸ್ಪರ್ಶವಾದರೆ ಕಣ್ಣುಕೆಂಪಾಗುವುದು, ಕಣ್ಣುಉರಿ, ಕಣ್ಣುನೋವು ಕಾಣಿಸುವುದು ಹಾಗೂ ಕಣ್ಣೀರು ಸುರಿಯುವುದು ಮತ್ತು ಕಣ್ಣು ವ್ರಣ ಉಂಟಾಗಬಹುದು. ಸ್ಪರ್ಶ ವಿಷಕ್ಕೆ ತಕ್ಷಣ ಕಣ್ಣನ್ನು ತಣ್ಣೀರಿನಿಂದ ಚೆನ್ನಾಗಿ ತೊಳೆಯಬೇಕು. ಅಗತ್ಯಬಿದ್ದರೆ ವೈದ್ಯರ ಸಹಾಯವನ್ನೂ ಪಡೆಯಬೇಕು. ಚರ್ಮಕ್ಕೆ ಸ್ಪರ್ಶವಾದರೆ ಇಸುಬಿನಂತಹ ಚರ್ಮರೋಗಗಳೂ ವ್ರಣಗಳೂ ಉಂಟಾಗಬಹುದು. ಇಂತಹ ರೋಗಿಗಳನ್ನು ಮೈಲುತುತ್ತು ವಿಷಸಂಪರ್ಕದಿಂದ ಬಿಡಿಸಿ ಸ್ಪರ್ಶವಾದ ಭಾಗವನ್ನು ತಣ್ಣೀರಿನಿಂದ ತೊಳೆದು, ಕೊಬ್ಬರಿ ಎಣ್ಣೆ ಸವರಬೇಕು. ಅಗತ್ಯ ಬಿದ್ದರೆ ಸಹಾಯವನ್ನು ಪಡೆಯಬಹುದು.

**ದೀರ್ಘಕಾಲ ವಿಷ ಲಕ್ಷಣಗಳು :**

ಮೈಲುತುತ್ತಿನ ಸಾಗಾಣಿಕೆ, ಸಿಂಪರಣೆ ಮೊದಲಾದ ಕೆಲಸಗಳಲ್ಲಿ ನಿರತವಾದ ಕಾರ್ಮಿಕರು ಮೈಲುತುತ್ತಿನ ಸಂಪರ್ಕದಿಂದ ದೀರ್ಘಕಾಲ ವಿಷಪ್ರಯೋಗಕ್ಕೆ ತುತ್ತಾಗಿ ನರಳುವ ಸಂಭವವಿರುತ್ತದೆ ಮತ್ತು ಇದರ ಪುಡಿ ಧೂಳನ್ನು ಆಘ್ರಾಣಿಸಿಯೂ ತೊಂದರೆಗಳಿಗೆ ತುತ್ತಾಗಬಹುದು. ಇಂತಹ ರೋಗಿಯ ಬಾಯಲ್ಲಿ ಲೋಹದ ರುಚಿ, ವಾಸನೆ, ಒಸಡಿನಲ್ಲಿ ನೀಲಿಗೆರೆ ನೀಲಿಗೆರೆ ಕಾಣಿಸುವವು, ಕ್ರಮೇಣ ಅವನು ವಾಕರಿಕೆ, ವಾಂತಿ, ಭೇದಿ, ತಲೆ ತಿರುಗುವುದು ಮೊದಲಾದ ಉಪದ್ರವಗಳಿಂದ ನರಳುತ್ತಾನೆ. ಅವನಿಗೆ ಅನ್ನಾಹಾರಗಳಲ್ಲಿ ರುಚಿ ಕಾಣಿಸುವುದಿಲ್ಲ. ಹೊಟ್ಟೆ ನುಲಿತ ಮತ್ತು ಬಾಯಿ ಹುಣ್ಣು ಮೂತ್ರಪಿಂಡದ ನಾನಾ ವಿಕಾರಗಳು, ಶ್ವಾಸಕೋಶದ ಉಪದ್ರವಗಳು ಮತ್ತು ಪಾಂಡುರೋಗದ ಲಕ್ಷಣಗಳು ಕಾಣಿಸಿಕೊಳ್ಳುವವು.

ಇಂತಹ ರೋಗಿಗಳನ್ನು ತಕ್ಷಣ ವಿಷ ಸಂಪರ್ಕದಿಂದ ದೂರಮಾಡಬೇಕು. ರೋಗಿಯ ಮೈಯು ಬೆವರಿನಿಂದ ನಾರುತ್ತಿದ್ದರೆ ಸಾಬೂನು ಹಚ್ಚಿ ಬಿಸಿ ನೀರಿನಿಂದ ಸ್ನಾನಮಾಡಿಸಿ ಗಾಳಿ, ಬೆಳಕು ಸರಿಯಾಗಿರುವ ಕೊಠಡಿಯಲ್ಲಿ ಮಲಗಿಸಿ ವಿಶ್ರಾಂತಿ ನೀಡಬೇಕು. ಅಂಗಮರ್ದನ, ಸತ್ವಭರಿತವಾದ ಲಘು ಆಹಾರ ಮತ್ತು ಸಾಕಷ್ಟು ದ್ರವ ಸೇವನೆ ಅಗತ್ಯ, ಇತರ ಉಪದ್ರವಗಳಿಗೆ ಲಕ್ಷಣಾನುಸಾರ ಚಿಕಿತ್ಸೆ ನೀಡಬೇಕು.

**ವಿಷಪ್ರಾಶನದ ಲಕ್ಷಣಗಳು :**

ಮೈಲುತುತ್ತು ವಿಷಪ್ರಾಶನವಾದ 10-20 ನಿಮಿಷಗಳೊಳಗಾಗಿ ರೋಗಿಯು ತೀವ್ರವಾದ ಸಂಕಟವನ್ನು ಅನುಭವಿಸತೊಡಗುತ್ತಾನೆ. ಅವನ ಬಾಯಲ್ಲಿ ಲೋಹದ ರುಚಿ- ವಾಸನೆ ಕಾಣಿಸತೊಡಗಿ, ಜೊಲ್ಲುಸುರಿಯುವುದು, ತಲೆನೋವು, ನೀರಡಿಕೆ, ವಾಕರಿಕೆ, ವಾಂತಿ, ಭೇದಿ ಮೊದಲಾದ ಉಪದ್ರವಗಳು ಪ್ರಾರಂಭವಾಗುವವು. ಅವನು ಕಾರಿಕೊಂಡ ದ್ರವ್ಯವು ಹಸಿರು ಮಿಶ್ರಿತವಾಗಿರುವುದು. ರೋಗಿಯು ನಾನಾ ಬಗೆಯ ಮೂತ್ರವಿಕಾರಗಳಿಂದರೂ ಅರಿಶಿನ ಮಂಡಿಗೆ ರೋಗದ ಲಕ್ಷಣಗಳಿಂದಲೂ ನರಳುವನು. ಕೈಕಾಲು ಸೆಳೆತ, ನಿದ್ರೆ, ಅದಿರುವಾಯು, ದೀರ್ಘಸುಪ್ತಿ ಮತ್ತು ಸಾವು ಸಂಭವಿಸಬಹುದು.

**ಚಿಕಿತ್ಸೆ ಮತ್ತು ಉಪಚಾರ :**

ಮೈಲುತುತ್ತು ವಿಷ ಸೇವಿಸಿದ ರೋಗಿಗೆ ಕೋಳಿತತ್ತಿಯ ಲೋಳೆ, ಹಾಲು ಅಥವಾ ಅನ್ನ ಬಸಿದ ಗಂಜಿಯನ್ನು ಕುಡಿಸಬೇಕು. ಹೊಟ್ಟೆ ತೊಳೆಯುವುದೂ, ಹರಳೆಣ್ಣೆಯ ವಿರೇಚನ, ಬಿ.ಎ.ಎಲ್. ಸೂಜಿಮದ್ದು, ಮಾರ್ಫಿಯಾ ಮತ್ತು ಕ್ಯಾಲ್ಸಿಯಂ ಇ.ಡಿ.ಟಿ.ಎ. ಸೂಜಿಮದ್ದುಗಳು ಉಪಯುಕ್ತ ಪ್ರತ್ಯೌಷಧಗಳಾಗಿ ಕೆಲಸ ಮಾಡುತ್ತವೆ. (ಮೈಲುತುತ್ತು ವಿಷಪ್ರಾಶನ ಮಾಡಿದ ರೋಗಿಗೆ ವಾಂತಿಮಾಡಿಸುವ ಪ್ರಕ್ರಿಯೆ ಅನಗತ್ಯ. ಏಕೆಂದರೆ ಮೈಲುತುತ್ತು ಸ್ವತಃ ವಾಂತಿಕಾರಕ ದ್ರವ್ಯವಾಗಿದೆ.

## ಲೋಹದ ವಿಷ ವಸ್ತುಗಳು / ಕೈಗಾರಿಕಾ ವಿಷಗಳು

| ಕ್ರ. ಸಂ. | ಲೋಹದ ಹೆಸರು | ಪ್ರಾಣಾಪಾಯ ಲಕ್ಷಣಗಳು | ರೋಗ ಚಿಕಿತ್ಸೆ ಉಪಚಾರ |
|---|---|---|---|
| 1 | ಪಾದರಸ (ಸ್ಪರ್ಷ ವಿಷ ಸೇವನಾ ವಿಷ) | ನಾಲಗೆ, ಬಾಯಿ ಗಂಟಲು ಉರಿ ಹುಣ್ಣು, ಹೊಟ್ಟೆ ನೋವು, ಬಾಯಲ್ಲಿ ಲೋಹ ವಾಸನೆ, ಮೂತ್ರವಿಕಾರ ರೋಗ | ಬಿಎಎಲ್ ಸೂಜಿ ಮತ್ತು ಸಿದ್ಧ ಪ್ರತ್ಯೌಷಧ ವೈದ್ಯಕೀಯ ನೆರವು |
| 2. | ಸಂಕಪಾಷಾಣ | ಗಂಟಲು, ಬಾಯಿ, ತುಟಿ ನೋವು. ನೀರು ಕುಡಿಯಲು ತೊಂದರೆ ಹೊಟ್ಟೆನೋವು, ಬಾಯಿ ವಾಸನೆ, ನೀರು, ಭೇದಿ ದೇಹದ ಉಷ್ಣತೆ ಕಮ್ಮಿಯಾಗುವುದು | ವೈದ್ಯಕೀಯ ಚಿಕಿತ್ಸೆಯನ್ನು ತಕ್ಷಣ ಪಡೆದು ಕೊಳ್ಳಬೇಕು. |
| 3. | ಸೀಸ (ಲೆಡ್) ಇದು ದೀರ್ಘ ಕಾಲೀನ ವಿಷವೂ ಆಗಿರುತ್ತದೆ | ಹೊಟ್ಟೆ ನುಲಿತ, ಬಾಯಿ, ದೇಹ ವಾಸನೆ, ನೀರು ಭೇದಿ, ತಲೆನೋವು, ತಲೆತಿರುಕು, ಮೂತ್ರ ತೊಂದರೆ ಇತ್ಯಾದಿ. | ಮಗ್ನೀಶಿಯಂ ಸಲ್ಫೇಟ್ ಸೋಡಿಯಂ ಸಲ್ಫೇಟ್ ಉತ್ತಮ ಪ್ರತ್ಯೌಷಧ. ವೈದ್ಯಕೀಯ ನೆರವು ಅಗತ್ಯ |
| 4. | ಗಂಧಕಾಮ್ಲ ಇದು ಸ್ಪರ್ಷ ವಿಷವೂ ಆಗಿರುತ್ತದೆ | ನಾಲಗೆ, ಗಂಟಲು ಅನ್ನನಾಳ, ಕರುಳುಗಳಲ್ಲಿ ತೀವ್ರವಾದ ವ್ರಣ. ಮೂತ್ರ ಲೋಪ ಬಾಯಿಮುಖ ಹೋದಂತೆ ಆಗುತ್ತವೆ. | ತಕ್ಷಣ ವೈದ್ಯ ಚಿಕಿತ್ಸೆ |

## ಇತರ ಕೆಲವು ಲೋಹವಿಷಗಳು – ಚಿಕಿತ್ಸೆ

| ಕ್ರ. ಸಂ. | ಲೋಹದ ಹೆಸರು | ವಿಷ ಲಕ್ಷಣ | ಚಿಕಿತ್ಸೆ |
|---|---|---|---|
| 1. | ಕೊಬಾಲ್ಟ್ ನಿಕ್ಕಲ್ | ಚುಟುಕು ಉಸಿರಾಟ ಎದೆ ಬಿಗಿತ, ಚರ್ಮರೋಗ | ವಿಷ ಸಂಪರ್ಕ ತಪ್ಪಿಸುವುದು ಲಕ್ಷಣಾನುಸಾರ ಇತರ ಚಿಕಿತ್ಸೆ |
| 2. | ತಾಮ್ರ | ವಾಂತಿ, ಬಾಯಲ್ಲಿ ಲೋಹ ರುಚಿ, ಹೊಟ್ಟೆ ಉರಿ, ನೀರಡಿಕೆ ರಕ್ತಮಿಶ್ರಿತ ಭೇದಿ, ಮೂತ್ರ ವಿಕಾರ | ಬಿ.ಎ.ಎಲ್. ಸೂಜಿಮದ್ದು ಲಕ್ಷಣಾನುಸಾರ ಇತರ ಚಿಕಿತ್ಸೆ |
| 3. | ಕಬ್ಬಿಣ | ತಲೆ ತಿರುಗುವಿಕೆ, ತಲೆನೋವು ವಾಂತಿ, ಮೂರ್ಛೆ | ಲಕ್ಷಣಾನುಸಾರ ಚಿಕಿತ್ಸೆ |
| 4. | ಬೆಳ್ಳಿ | ಮೂತ್ರವಿಕಾರ, ಮೈ ಮೋರೆ ಕಪ್ಪಾಗುವುದು, ವಾಂತಿ ಮೂರ್ಛೆ | ಚಿಕಿತ್ಸೆ ಮೇಲಿನಂತೆಯೇ |
| 5. | ಸತುವು | ವಾಂತಿ, ಜ್ವರ, ಕೆಮ್ಮು ಉಸಿರಾಟದ ತೊಂದರೆ ಅದಿರುವಾಯು | ಚಿಕಿತ್ಸೆ ಮೇಲಿನಂತೆಯೇ |
| 6. | ಬಂಗಾರ | ತುಟಿ, ನಾಲಗೆ, ಹಲ್ಲು ಮತ್ತು ಒಳ ದವಡೆ ನೇರಳೆ ವರ್ಣ ಜೊಲ್ಲು, ವಾಂತಿ ಭೇದಿ, ಜ್ವರ, ಹೈತ್ತಿಕ ಗಂದೆ ಮೂತ್ರ ವಿಕಾರ | ಬಿ.ಎ.ಎಲ್. ಸೂಜಿಮದ್ದು ಎ.ಸಿ.ಟಿ. ಹೆಚ್‌ಬಿ–12 ಸೂಜಿಮದ್ದು ಮತ್ತು ಕ್ಯಾಲ್ಸಿಯಂ ಗ್ಲೂಕನೇಟ್ ಸೂಜಿಮದ್ದು ನೀಡಿಕೆ |
| 7. | ಅಲ್ಯುಮಿನಿಯಂ | ಬಾಯಿ ಉರಿ, ಗಂಟಲು ನೋವು, ಹೊಟ್ಟೆ ನೋವು, ವಾಕರಿಕೆ, ರಕ್ತಮಿಶ್ರಿತ ಉಸಿರಾಟದ ತೊಂದರೆ, ಅದಿರುವಾಯು, ಮೈ ತಣ್ಣಗಾಗುವುದು | ಲಾಕ್ಷಣಿಕ ಚಿಕಿತ್ಸೆ |
| 8. | ಮೆಗ್ನೇಶಿಯಂ | ಹೊಟ್ಟೆ ಕರುಳುನೋವು ವಾಕರಿಕೆ, ವಾಂತಿ, ಭೇದಿ, ಕಣ್ಣುಬೊಂಬೆ ಅರಳುವುದು, ಕೈಕಾಲುಸ್ವಾಧೀನ ತಪ್ಪುವುದು, ಮೂತ್ರ ಲೋಪ, ಕುಸಿತ, ಸಾವು | ಲಾಕ್ಷಣಿಕ ಚಿಕಿತ್ಸೆ |

# ಅರಣ್ಯ ಮತ್ತು ಔಷಧಿ ಸಸ್ಯಗಳ ಸಂರಕ್ಷಣೆ

ಭಾರತ ದೇಶವು ನೈಸರ್ಗಿಕ ಸಂಪತ್ತಿನ ಅತ್ಯಂತ ಸಮೃದ್ಧ ಪ್ರದೇಶವಾಗಿದ್ದು ಅತಿ ವಿಶಿಷ್ಟವಾದ ಹಾಗೂ ಉಪಯೋಗವುಳ್ಳ ಪ್ರಾಣಿ ಮತ್ತು ಸಸ್ಯ ಸಂಕುಲವನ್ನು ಹೊಂದಿದೆ. ನಮ್ಮ ದೇಶದಲ್ಲಿ 40 ಸಾವಿರಕ್ಕೂ ಹೆಚ್ಚು ಸಸ್ಯ ಪ್ರಬೇಧಗಳಿದ್ದು, 8ಸಾವಿರಕ್ಕೂ ಹೆಚ್ಚಿನ ಸ್ಯಗಳನ್ನು ನಮ್ಮ ಔಷಧ ಪರಂಪರೆಯಲ್ಲಿ ಬಳಸಲಾಗುತ್ತದೆ. ಇದಲ್ಲದೆ 89ಸಾವಿರಕ್ಕೂ ಹೆಚ್ಚು ಪ್ರಾಣಿ ಪ್ರಬೇಧಗಳಿವೆ. ಅತಿ ಹೆಚ್ಚಿನ ವೈವಿಧ್ಯತೆಯುಳ್ಳ ದೇಶ ನಮ್ಮದಾಗಿದೆ ಎಂದು ಹೇಳುವುದರಲ್ಲಿ ಅತಿಶಯೋಕ್ತಿಯಿಲ್ಲ. ಈ ಸಸ್ಯಗಳು ಮಾನವನಿಗೆ ಒಂದಲ್ಲ ಒಂದು ರೀತಿ ಉಪಯೋಗಕ್ಕೆ ಬಂದು ಆತನಬ ಜೀವನದಲ್ಲಿ ಹಾಸು ಹೊಕ್ಕಾಗಿವೆ. “ತೊಟ್ಟಿಲಿನಿಂದ ಚಟ್ಟದವರೆಗೆ” ಎಂಬ ನಾಣ್ನುಡಿಯಂತೆ ಮನುಷ್ಯನ ಹುಟ್ಟಿನಿಂದ ಹಿಡಿದು ಸಾಯುವವರೆಗೂ ಸಸ್ಯಗಳು ಉಪಯೋಗವಾಗುತ್ತಿವೆ. ದಿನನಿತ್ಯದ ಆಹಾರ, ಸೌದೆ, ಸೊಪ್ಪು, ಹಣ್ಣು-ಹಂಪಲು, ಔಷಧಿ, ಮನೆಕಟ್ಟುವ ಸಾಮಗ್ರಿ, ಕೃಷಿ ಉಪಕರಣಗಳು, ಪೀಠೋಪಕರಣಗಳು, ಆಟದ ಸಾಮಾನುಗಳು ಹೀಗೆ-ಒಂದಲ್ಲ ಒಂದು ರೀತಿ ಪ್ರತಿನಿತ್ಯದ ಜೀವನದಲ್ಲಿ ಸಸ್ಯಗಳು ಉಪಯೋಗವಾಗುತ್ತಿವೆ.

ಕರ್ನಾಟಕವು ಸಹ ವೈವಿಧ್ಯಮಯ ಅರಣ್ಯಗಳಿಂದ ಕೂಡಿದ್ದು, ಸಂಪದ್ಭರಿತ ಪ್ರದೇಶವಾಗಿದೆ. ಪಶ್ಚಿಮ ಘಟ್ಟಗಳಲ್ಲಿ ನಿತ್ಯ ಹರಿದ್ವರ್ಣ ಮತ್ತು ಅರೆ ನಿತ್ಯ ಹರಿದ್ವರ್ಣ ಸಸ್ಯಗಳಿಂದ ಕೂಡಿದ ದಟ್ಟವಾದ ಕಾಡುಗಳಿದ್ದು ಹಾಗೂ ಮೈದಾನ ಮತ್ತು ಅರೆ ಮೈದಾನ ಪ್ರಚೇಶಗಳಲ್ಲಿ ಒಣಎಲೆ ಉದುರುವ ಪ್ರದೇಶ ಮತ್ತು ಕುರುಚಲು ಕಾಡುಗಳಿರುವ ಪ್ರದೇಶಗಳಿಂದ ಕೂಡಿವೆ. ಕರ್ನಾಟಕದಲ್ಲಿ ಸುಮಾರು 4ಸಾವಿರ ಸಸ್ಯ ಪ್ರಬೇಧಗಳಿದ್ದು, ಅದರಲ್ಲಿ 1,500ಕ್ಕೂ ಹೆಚ್ಚು ಸಸ್ಯಗಳನ್ನು ಔಷಧಿಗಳಿಗಾಗಿ ಬಳಸಲಾಗುತ್ತಿದೆ.

## ಔಷಧಿ ಸಸ್ಯಗಳ ಸಂರಕ್ಷಣೆ ಏಕೆ?

ಪರಿಸರ ಮತ್ತು ಅರಣ್ಯನಾಶದಿಂದ ಹಲವಾರು ಸಸ್ಯಗಳು ನಶಿಸಿ ಹೋಗಿವೆ ಹಾಗೂ ಇನ್ನೂ ಹಲವು ಸಸ್ಯಗಳು ನಶಿಸುವ ಅಂಚಿನಲ್ಲಿವೆ. ಅಂತರಾಷ್ಟ್ರೀಯ

ಪ್ರಕೃತಿ ಸಂರಕ್ಷಣ ಸಂಸ್ಥೆಯ ಪ್ರಕಾರ () ಭಾರತದಲ್ಲಿ ಸುಮಾರು 28ಕ್ಕೂ ಸಸ್ಯ ಪ್ರಭೇಧಗಳು ಕಣ್ಮರೆಯಾಗಿವೆ ಹಾಗೂ 1,0000ಕ್ಕೂ ಹೆಚ್ಚು ಸಸ್ಯ ಪ್ರಭೇಧಗಳು ನಶಿಸಿ ಹೋಗುವ ಹಂತದಲ್ಲಿವೆ. ಹೀಗೆ ಸಸ್ಯಗಳು ನಶಿಸುತ್ತಾ ಹೋದಲ್ಲಿ ಮುಂದೆ ಯಾವುದೇ ಸಸ್ಯಗಳು ನಮಗೆ ದೊರಕದೇ ಇರುವ ಸ್ಥಿತಿಯನ್ನು ತಲುಪಬಹುದು. ಹೀಗೆ ಸಸ್ಯಗಳು ನಾಶವಾದಲ್ಲಿ ಮಾನವನ ವಿನಾಶವು ಖಚಿತವೆಂಬುದನ್ನು ಮನಗಾಣಬೇಕು. ಮಾನವನ ಬದುಕಿಗೆ ಉತ್ತಮ ಗಾಳಿ, ನೀರು, ನೆಲ ಅತಿ ಮುಖ್ಯ. ಈ ಅವಶ್ಯಕತೆಗಳನ್ನು ಪೂರೈಸಲು ಮರಗಿಡಗಳ ಸಂರಕ್ಷಣೆ ಅತಿ ಅವಶ್ಯಕ. ಸಸ್ಯಗಳು ಮಾನವನ ಹುಟ್ಟಿನಿಂದ ಆತನ ಆರೋಗ್ಯವನ್ನು ಕಾಪಾಡಿಕೊಂಡು ಬಂದಿವೆ. ಅದರಲ್ಲೂ ಔಷಧಿ ಸಸ್ಯಗಳು ಮಾನವನ ಜೀವನಾಡಿಯಾಗಿದ್ದು, ಅವುಗಳ ಸಂರಕ್ಷಣೆ ಮತ್ತು ಅಭಿವೃದ್ಧಿ ಅತಿ ಮುಖ್ಯ.

ಬಹುತೇಕ ಔಷಧ ಸಸ್ಯಗಳು ಅರಣ್ಯದಲ್ಲಿ ದೊರೆಯುತ್ತದೆ. ಅರಣ್ಯಗಳ ಮೇಲೆ ಹೆಚ್ಚುತ್ತಿರುವ ಅವಲಂಬನೆ, ಒತ್ತಡದಿಂದ ಸಸ್ಯ ಸಂಪತ್ತು ಅದರಲ್ಲಿಯೂ ರೋಗನಿರೋಧಕ ಗುಣವುಳ್ಳ ಸಸ್ಯಪ್ರಭೇಧಗಳು ಈಗಾಗಲೇ ನಶಿಸಿಹೋಗಿವೆ. ಇನ್ನೂ ಎಷ್ಟೋ ವಿನಾಶದ ಅಂಚಿನಲ್ಲಿ ಸಿಲುಕಿಕೊಂಡಿವೆ. ಆದುದರಿಂದ ಈಗ ಉಳಿದಿರುವ ಔಷಧ ಸಸ್ಯಗಳನ್ನು ಗುರುತಿಸಿ ಸಂರಕ್ಷಿಸಿ, ಸಂಗ್ರಹಿಸಿ ಬಳಸುವುದು ಅತ್ಯಗತ್ಯವಾಗಿದೆ.

ನಮ್ಮ ದೇಶದ ಔಷಧ ಸಸ್ಯಗಳ ವಿಶೇಷ ಗುಣಧರ್ಮ ಮತ್ತು ಅವುಗಳ ರೋಗನಿವಾರಕ ಗುಣಗಳನ್ನು ಗಮನಿಸಿ ವಿದೇಶಿ ಕಂಪನಿಗಳು ನಮ್ಮ ದೇಶದ ಸಸ್ಯಗಳಿಂದ ತಯಾರಿಸಿದ ಔಷಧಿಗಳಿಗೆ ಪೇಟೆಂಟ್ ಪಡೆದುಕೊಂಡಿವೆ. ಬೇವು, ಅರಿಶಿಣ ಹಾಗೂ ಇನ್ನಿತರ ಸಾಮಾನ್ಯ ಔಷಧಿಗಳನ್ನು ಸಹ ಪೇಟೆಂಟ್ ಮಾಡಿಕೊಂಡಿದ್ದು ಈ ಬಗ್ಗೆ ಜನರ ಮತ್ತು ಸರ್ಕಾರದ ಪ್ರತಿಭಟನೆ ಮುಂದುವರಿದಿದೆ. ಇನ್ನೂ ಅನೇಕ ಸಸ್ಯಗಳನ್ನು ಪೇಟೆಂಟ್ ಮಾಡಿಕೊಳ್ಳಲು ವಿದೇಶಿ ಕಂಪನಿಗಳು ಅರ್ಜಿ ಸಲ್ಲಿಸುತ್ತಿರುವುದರಿಂದ, ಸ್ಥಳೀಯವಾಗಿ ಈಗಾಗಲೇ ಇರುವ ಜ್ಞಾನವನ್ನು ಕ್ರೋಢೀಕರಿಸಿ ಸಾರ್ವಜನಿಕರ ಗಮನಕ್ಕೆ ತರುವುದು ಅವಶ್ಯವಾಗಿದೆ. ವಿದೇಶಿ ಕಂಪೆನಿಗಳಿಂದ ಹೆಚ್ಚಿನ ಬೇಡಿಕೆ ಬಂದಲ್ಲಿ ನಮ್ಮ ಔಷಧಿ ಸಸ್ಯಗಳ ಮೇಲೆ ಒತ್ತಡ ಹೆಚ್ಚಾಗುವ ಸಂಭವವಿದೆ.

## ಅರಣ್ಯ ಮತ್ತು ಔಷಧಿ ಸಸ್ಯಗಳು ನಾಶವಾಗಲು ಮುಖ್ಯ ಕಾರಣಗಳು:

ಅರಣ್ಯಗಳು ಔಷಧಿ ಸಸ್ಯಗಳ ಆವಾಸಸ್ಥಾನವಾಗಿವೆ. ಶೇ.90ಕ್ಕೂ ಹೆಚ್ಚು ಔಷಧಿ ಸಸ್ಯಗಳನ್ನು ಈಗಲೂ ಅರಣ್ಯದಿಂದಲೇ ತರಲಾಗುತ್ತಿದೆ. ಅರಣ್ಯಗಳ ನಾಶದಿಂದ ಔಷಧಿ ಸಸ್ಯಗಳ ನಾಶವೂ ಕೂಡ ಆಗುತ್ತದೆ. ಅರಣ್ಯ ಮತ್ತು ಔಷಧಿ ಸಸ್ಯಗಳು ಈ ಕೆಳಕಂಡ ಕಾರಣಗಳಿಂದ ನಾಶವಾಗುತ್ತಿವೆ:

1. **ಕಾಡ್ಗಿಚ್ಚು:** ಬಹುತೇಕ ಕಾಡಿನ ಬೆಂಕಿ ಮಾನವನಿಂದ ಉಂಟಾಗುತ್ತಿದ್ದು, ಇದರಿಂದ ಅರಣ್ಯ ಸಂಪತ್ತು ಮತ್ತು ಔಷಧಿ ಸಸ್ಯಗಳು ದಹನವಾಗಿ ಭೂಮಿ ಬರಡಾಗುತ್ತಿದೆ.

2. **ಅತಿಯಾದ ಜಾನುವಾರುಗಳ ಮೇಯುವಿಕೆ:** ಹೆಚ್ಚಿನ ಜಾನುವಾರುಗಳನ್ನು ಮಿತಿಮೀರಿ ಮೇಯಿಸುವುದರಿಂದ ಕಾಡಿನ ಹಸಿರು ಹಾಳಾಗಿ ಭೂಮಿ ಬರಡಾಗುತ್ತಿದೆ.

3. **ಭೂಮಿಯ ಒತ್ತುವರಿಯಿಂದ:** ಜನಸಂಖ್ಯೆ ಹೆಚ್ಚಾಗಿದ್ದು, ಕೃಷಿಗಾಗಿ ಕಾಡನ್ನು ನಾಶಗೊಳಿಸಿ ವ್ಯವಸಾಯಕ್ಕೆ ಉಪಯೋಗಿಸುವುದರಿಂದ ಭೂಮಿಯ ಹಸಿರು ಹೊದಿಕೆ ಪೂರ್ಣವಾಗಿ ನಾಶವಾಗಿ ಭೂಮಿ ಬರಡಾಗುತ್ತಿದೆ.

4. **ಅಕ್ರಮ ಕಡಿತಲೆಯಿಂದ:** ಗಿಡಮರಗಳನ್ನು ವಿವೇಚನೆಯಿಲ್ಲದೆ ಕಡಿದು ಅರಣ್ಯ ನಾಶಮಾಡುವುದರಿಂದ ಅಲ್ಲಿಯಫಲವತ್ತಾದ ಮಣ್ಣು ಒಣಗಿ, ಗಾಳಿ ಹಾಗೂ ಮಳ:ಎನೀರಿನಿಂದ ಸವಕಳಿಯಾಗಿ ಭೂಮಿ ಬರಡಾಗುತ್ತಿದೆ.

5. ಅತಿಯಾಗಿ ಹಾಗೂ ಅವೈಜ್ಞಾನಿಕವಾಗಿ ಔಷಧಿ ಸಸ್ಯಗಳನ್ನು ಸಂಗ್ರಹಿಸುವುದರಿಂದಲೂ ಔಷಧಿ ಸಸ್ಯಗಳು ನಾಶಹೊಂದುತ್ತಿವೆ.

6. ನಗರ, ರಸ್ತೆ ವಿಸ್ತರಣೆಯಿಂದಲೂ ಫಲವತ್ತಾದ ಭೂಮಿ ಅನುಪಯುಕ್ತವಾಗುತ್ತಿದೆ.

7. ಗಣಿಗಾರಿಯಿಂದ ಅರಣ್ಯ ಮತ್ತು ಮಣ್ಣು ನಾಶವಾಗಿ ಭೂಮಿ ಬರಡಾಗುತ್ತಿದೆ.

8. ಕೈಗಾರಿಕೆ, ತ್ಯಾಜ್ಯವಸ್ತುಗಳನ್ನು ಭೂಮಿಯ ಮೇಲೆ ರಾಶಿ ಹಾಕುವುದರಿಂದ ಮಣ್ಣು ನಾಶವಾಗಿ ಭೂಮಿ ಬರಡಾಗುತ್ತಿದೆ.

9. ನೀರಾವರಿ ಹಾಗೂ ನೀರಿನ ನಿರ್ವಹಣೆಯಲ್ಲಿ ಸೂಕ್ತ ವಿಧಾನಗಳನ್ನು ಅನುಸರಿಸದಿರುವುದರಿಂದ ಭೂಮಿಯ ಮೇಲೆ ನೀರು ನಿಂತು ನಾರುತ್ತದೆ. ಅಲ್ಲದೆ ಮಣ್ಣಿನಲ್ಲಿ ಲವಣತ್ವವಿಲ್ಲದೆ ಕ್ಷಾರತ್ವ ಹೆಚ್ಚಿ, ಮಣ್ಣಿಗೆ ವಿಷ ಬೆರೆಸಿದಂತಾಗಿ ಭೂಮಿ ಬಂಜರಾಗುತ್ತಿದೆ.

10. ಔಷಧಿ ತಯಾರಿಕೆಯ ದೊಡ್ಡ ದೊಡ್ಡ ಕಂಪನಿಗಳ ಅನಿಂತ್ರಿತವಾದ ಮೂಲಿಕಾ ಸಸ್ಯಗಳ ಬಳಕೆ ಮತ್ತು ಅವೈಜ್ಞಾನಿಕವಾಗಿ ಜನರು ಉಪಯೋಗಿಸುತ್ತಿರುವುದರಿಂದ ಔಷಧಿ ಸಸ್ಯಗಳು ನಾಶವಾಗುತ್ತಿವೆ.

11. ಔಷಧಿ ಸಸ್ಯಗಳ ಭಾಗಗಳಾದ ಬೇರು, ಕಾಂಡ, ತೊಗಟೆ, ಎಲೆ ಇತ್ಯಾದಿ ಭಾಗಗಳನ್ನು ಸಂಗ್ರಹಿಸುವಾಗ ಅರಣ್ಯ ನಾಶವಾಗದೆ ಪುನರುಜ್ಜೀವನಗೊಳ್ಳುವಂತೆ ಮಾಡುವ ಬಗ್ಗೆ ಜ್ಞಾನವಿಲ್ಲದಿರುವುದು.

12. ಬಹುರಾಷ್ಟ್ರೀಯ () ಕಂಪನಿಗಳು ತಮಗೆ ಬೇಕಾದ ಔಷಧಿ ಸಸ್ಯಗಳನ್ನು ಬೆಳೆಸಲು ಕ್ರಮ ಕೈಗೊಳ್ಳದೆ ಪೂರ್ಣವಾಗಿ ನೈಸರ್ಗಿಕವಾಗಿ ಬೆಳೆದ ಸಸ್ಯಗಳ ಮೇಲೆ ಅವಲಂಬಿಸಿರುವುದು.

13. ನೈಸರ್ಗಿಕವಾಗಿ ಲಭ್ಯವಿದ್ದ ಸಸ್ಯಗಳನ್ನು ಸಂಗ್ರಹಿಸಿ ಉಪಯೋಗಿಸುವ ಬಗ್ಗೆ ನೀತಿ ನಿಯಮಗಳನ್ನು ರೂಪಿಸದೇ ಇರುವುದು.

14. ಔಷಧಿ ಸಸ್ಯಗಳನ್ನು ಪುನ: ಬೆಳೆಸುವ ಬಗ್ಗೆ ಜ್ಞಾನವಿಲ್ಲದೆ ಇರುವುದು.

15. ನಮ್ಮ ಭಾರತೀಯ ಆಯುರ್ವೇದ ವಿದ್ಯಾಲಯಗಳು ಸ್ಯಗಳನ್ನು ಬಳಸುವುದನ್ನು ಕಲಿಸುತ್ತಾರೆಯೇ ವಿನ: ಅವುಗಳನ್ನು ಬೆಳೆಸುವ ಬಗ್ಗೆ ಸೂಕ್ತ ಗಮನವನ್ನು ಕೊಡದೆ ಇರುವುದು.

16. ಹೆಚ್ಚುತ್ತಿರುವ ಒತ್ತಡದಿಂದ ಅರಣ್ಯ ಕ್ಷೇತ್ರಗಳು ನಾಶವಾಗುತ್ತಿರುವುದು ಹಾಗೂ ದನಕರುಗಳ ಮೇಯುವಿಕೆ, ಜನರ ನಿರ್ಲಕ್ಷ್ಯದಿಂದ ಅರಣ್ಯಗಳ ಮೇಲೆ ಬೀಳುವ-ಬೆಂಕಿ ಇವು ಅರಣ್ಯಗಳ ಕ್ಷೀಣತೆಗೆ ಮುಖ್ಯ ಕಾರಣಗಳು ಎನ್ನಬಹುದು.

ಭೂಮಿ ತನ್ನ ಹಸಿರು ಹೊದಿಕೆಯುನ್ನು ಕಳೆದುಕೊಂಡು ಒಮ್ಮೆ ಬರಡಾಯಿತೆಂದರೆ ಫಲವತ್ತಾದ ಮೇಲ್ಮೈ ಮಣ್ಣು, ಕೆಳಮಣ್ಣು ಹಾಗೂ ತಳಮಣ್ಣಿನ ಪದರಗಳು ನಾಶವಾಗಿ ಮರಳು ರಾಶಿ ಇಲ್ಲದೆ ಭದ್ರಶಿಲೆಗಳು ಮಾತ್ರ ಉಳಿಯುತ್ತವೆ. ಆಗ ಸಸ್ಯಗಳಿಗೆ ಅವಶ್ಯಕವಾಗಿ ಬೇಕಾದ ಮಣ್ಣು, ತೇವಾಂಶ ಹಾಗೂ ಪೋಷಕಾಂಶಗಳನ್ನು ಒದಗಿಸುವ ಭೂ ಸಾಮರ್ಥ್ಯ ಶೀಘ್ರ ನಾಶವಾಗುತ್ತದೆ. ಗಿಡಮರಗಳು, ಒಣಗಿ, ಸೊರಗಿ ಬಾಡುತ್ತವೆ. ಭೂ ಉತ್ಪಾದನೆ ಕ್ರಮೇಣ ಕಡಿಮೆಯಾಗುತ್ತದೆ. ಹಸಿರಿಲ್ಲದ ಭೂಮಿ ಬರಡಾಗುತ್ತದೆ. ಹೀಗೆ ಆಹಾರ, ಆಮ್ಲಜನಕ ಹಾಗೂ ಆಶ್ರಯವಿಲ್ಲದ ಈ ಬರಡು ಭೂಮಿಯಲ್ಲಿ ನಾವು ಬದುಕುವುದು ಕಷ್ಟವಾಗುತ್ತದೆ.

## ಪಾರಂಪರಿಕ ಹಿನ್ನೆಲೆ

ಭಾರತೀಯ ಔಷಧಿ ಪರಂಪರೆಗಳಾದ ಆಯುರ್ವೇದ, ಸಿದ್ಧ, ಯುನಾನಿ, ಪಾರಂಪರಿಕ ವೈದ್ಯ ಹಾಗೂ ಇನ್ನಿತರ ವೈದ್ಯಶಾಸ್ತ್ರಗಳಲ್ಲಿ 7,500ಕ್ಕೂ ಹೆಚ್ಚು ಸಸ್ಯಗಳನ್ನು ಔಷಧಿ ಸಸ್ಯಗಳನ್ನಾಗಿ ಬಳಸಲಾಗುತ್ತಿದೆ. ಆಧುನಿಕ ವೈದ್ಯ ಪದ್ಧತಿಯಲ್ಲಿ ಸಹ ನೂರಕ್ಕೂ ಹೆಚ್ಚಿನ ಔಷಧಿ ಸಸ್ಯಗಳನ್ನು ಬಳಸಲಾಗುತ್ತಿದೆ. ಗ್ರಾಮೀಣ ಪ್ರದೇಶದಲ್ಲಿ ಹೆಚ್ಚು ಜನರು ಪ್ರಾಥಮಿಕ ಆರೋಗ್ಯ ರಕ್ಷಣೆಗಾಗಿ ಈಗಲೂ ಸಹ ಔಷಧಿ ಸಸ್ಯಗಳನ್ನು ಅವಲಂಬಿಸಿದ್ದಾರೆ. ನಮ್ಮ ದೇಶಕ್ಕೆ ಬ್ರಿಟಿಷರು ಬಂದನಂತರ ವ್ಯಾಪಾರ ಮತ್ತು ಅಭಿವೃದ್ಧಿಯ ನೆಪದಲ್ಲಿ ಈ ಭೂಮಿಯಲ್ಲಿ ಎಲ್ಲಾ ಜೀವಿಗಳ ಅಸ್ತಿತ್ವಕ್ಕೆ ಆಧಾರವಾಗಿದ್ದ ನಿಸರ್ಗದತ್ತವಾದ ಸಸ್ಯ ಸಂಪತ್ತಿನ ನಾಶ ಅತಿ ಹೆಚ್ಚಿನ ಪ್ರಮಾಣದಲ್ಲಿ ನಡೆಯಿತು ಎಂಬುದು ವಿಷಾದದ ಸಂಗತಿ. ಕಳೆದ ಐದು ದಶಕಗಳಿಂದಲೂ ವಿದೇಶೀ ವೈದ್ಯಶಾಸ್ತ್ರ ಪದ್ಧತಿಗೆ ಹೆಚ್ಚು ಪ್ರೋತ್ಸಾಹ ಕೊಟ್ಟಿದ್ದರಿಂದ ಗ್ರಾಮೀಣ ಪ್ರದೇಶದಲ್ಲಿ ಪ್ರಚಲಿತವಿದ್ದ ಅನುವಂಶಿಕ ಪದ್ಧತಿಯು ಕ್ರಮೇಣ ನಶಿಸುತ್ತಾ ಬಂದಿದೆ. ಈ ಪಾರಂಪರಿಕ ಔಷಧಿ ಪದ್ಧತಿಯನ್ನು ಜನರು ಮರೆತಿದ್ದು, ಈ ಪದ್ಧತಿ ಅವಸಾನದ ಅಂಚಿಗೆ ತಲುಪಿದೆ. ಕರ್ನಾಟಕ ರಾಜ್ಯ ಒಂದರಲ್ಲೇ 250ಕ್ಕಿಂತ ಹೆಚ್ಚು ಔಷಧ ತಯಾರಿಸುವ ಕಂಪನಿಗಳಿದ್ದು, ಈ ಕಂಪನಿಗಳಿಗೆ ಸಾಕಷ್ಟು ಔಷಧಿ ಸಸ್ಯಗಳ ಸ್ವಂತ ಲಭ್ಯತೆಯಿಲ್ಲದಿರುವುದರಿಂದ ಅವುಗಳ ವಿನಾಶವೂ ಸಹ ಬಹು ದೂರವಿಲ್ಲ.

## ಔಷಧಿ ಸಸ್ಯಗಳ ಸಂರಕ್ಷಣೆ ಹೇಗೆ ಮಾಡಬಹುದು?

ಔಷಧಿ ಸಸ್ಯಗಳನ್ನು ಸಂರಕ್ಷಣೆ ಮಾಡುವ ಜೊತೆಗೆ ಅವುಗಳು ನಿರಂತರವಾಗಿ ಮುಂದಿನ ಪೀಳಿಗೆಗೆ ದೊರಕುವಂತೆ ಉಪಯೋಗಿಸುತ್ತಾ ಬರುವುದು ಸಹ ಅತಿ ಮುಖ್ಯ. ಅರಣ್ಯ ಮತ್ತು ಅರಣ್ಯೇತರ ಪ್ರದೇಶಗಳಲ್ಲಿರುವ ಜೀವ ಸಂಕುಲ ಮತ್ತು ಜೀವ ವೈವಿಧ್ಯತೆಯನ್ನು ಸಹ ಸಂರಕ್ಷಿಸುವುದರಿಂದ ಔಷಧಿ ಸಸ್ಯಗಳನ್ನು ಸಂರಕ್ಷಿಸಬಹುದಾಗಿನ ಔಷಧಿ ಸಸ್ಯಗಳ ಆವಾಸಸ್ಥಾನಗಳನ್ನು ಕಾಪಾಡಲು ಜನರು ಮುಂದಾಗಬೇಕಿದೆ.

## ನೈಸರ್ಗಿಕ ಪ್ರದೇಶಗಳಲ್ಲಿ ಔಷಧಿ ಸಸ್ಯಗಳ ಸಂರಕ್ಷಣೆ

ನೈಸರ್ಗಿಕವಾಗಿ ಔಷಧಿ ಸಸ್ಯಗಳು ಹೆಚ್ಚಾಗಿ ಅರಣ್ಯದಲ್ಲಿ ಬೆಳೆಯುತ್ತವೆ. ಅರಣ್ಯ ಪ್ರದೇಶವಲ್ಲದೆ, ರೆವಿನ್ಯೂ ಅರಣ್ಯ, ಸರ್ಕಾರಿ ಅರಣ್ಯ, ಕೆರೆ, ಕಾಲುವೆ, ಹೊಲ, ಹಿತ್ತಿಲು, ಬೇಲಿ, ಗುಂಡುತೋಪು, ಅಡ್ಡಲು, ಬದು, ಇನ್ನಿತರ ಪ್ರದೇಶಗಳಲ್ಲಿ ಔಷಧಿ ಸಸ್ಯಗಳು ಸ್ವಾಭಾವಿಕವಾಗಿ ಬೆಳೆದಿರುತ್ತವೆ. ಕೃಷಿ ಜಮೀನಿನಲ್ಲಿ ಬೆಳೆಯುವ ಕಳೆ ಗಿಡಗಳು ಬಹುತೇಕ ಸಸ್ಯಗಳು ಔಷಧಿ ಸಸ್ಯಗಳಾಗಿರುತ್ತವೆ.

ವನ್ಯ ಪ್ರಾಣಿ ಧಾಮ, ರಾಷ್ಟ್ರೀಯ ಉದ್ಯಾನಗಳು , ರಕ್ಷಿತ ಅರಣ್ಯ ಪ್ರದೇಶಗಳು ಸಹ ಔಷಧಿ ಸಸ್ಯಗಳ ಉತ್ತಮ ಆವಾಸ ಸ್ಥಾನಗಳಾಗಿವೆ. ಅರಣ್ಯ ಪ್ರದೇಶಗಳನ್ನು ಬೆಂಕಿಯಿಂದ, ಜಾನುವಾರುಗಳಿಂದ, ಒತ್ತುವರಿಯಿಂದ, ಅಕ್ರಮ ಕಡಿತದಿಂದ ರಕ್ಷಿಸುವುದು ಅತ್ಯಗತ್ಯ. ಇದೇರೀತಿ ಅರಣ್ಯೇತರ ಪ್ರದೇಶಗಳಲ್ಲಿಯೂ ಸಹ ಸಸ್ಯಗಳು ನಾಶವಾಗದಂತೆ ಸಂರಕ್ಷಿಸಬೇಕಾಗಿದೆ.

## ನೈಸರ್ಗಿಕೇತರ ಪ್ರದೇಶಗಳಲ್ಲಿ ಔಷಧಿ ಸಸ್ಯಗಳ ಸಂರಕ್ಷಣೆ

ಔಷಧಿ ಸಸ್ಯಗಳನ್ನು ಅವುಗಳ ನೈಸರ್ಗಿಕ ಪ್ರದೇಶಗಳ ಹೊರಗೆ ಅಭಿವೃದ್ಧಿಗೊಳಿಸುವುದರಿಂದಲೂ ಸಹ ಸಂರಕ್ಷಿಸಬಹುದು. ಔಷಧಿ ವನಗಳ ನಿರ್ಮಾಣ, ಸಸ್ಯ ಉದ್ಯಾನವನದ ನಿರ್ಮಾಣ, ಕೈತೋಟಗಳು, ಹಿತ್ತಲುಗಳು ಬದುಗಳು ಮುಂತಾದ ಕಡೆ ಔಷಧಿ ಸಸ್ಯಗಳನ್ನು ಬೆಳೆಸುವುದರಿಂದಲೂ ಔಷಧಿ ಸಸ್ಯಗಳ ಸಂರಕ್ಷಣೆಯಾಗುತ್ತದೆ. ಹೆಚ್ಚಿನ ಬೇಡಿಕೆಯಿರುವ ಔಷಧಿ ಸಸ್ಯಗಳನ್ನು ಕೃಷಿಯಲ್ಲಿ ಅಥವಾ ಕೃಷಿ ಅರಣ್ಯದಲ್ಲಿ ಬೆಳೆಸುವುದು ಕೂಡ ಜನರಿಗೆ ಲಾಭದಾಯಕವಾಗುವುದಲ್ಲದೆ, ಔಷಧ ಕಾರ್ಖಾನೆಗೆ ಬೇಕಾದ ಔಷಧಿ ಸಸ್ಯಗಳೂ ಸಹ ಸಿಗುತ್ತವೆ. ಇದರಿಂದ ಔಷಧಿ ಸಸ್ಯಗಳ ನೈಸರ್ಗಿಕ ನೆಲೆ ಮತ್ತು ಅರಣ್ಯಗಳ ಮೇಲೆ ಒತ್ತಡ ತಪ್ಪಿ ಹೆಚ್ಚಿನ ಔಷಧಿ ಸಸ್ಯಗಳ ಸಂತತಿ ಮತ್ತು ಪರಬೇಧಗಳನ್ನು ಸಂರಕ್ಷಣೆಯಾಗಲು ಸಹಕಾರಿಯಾಗುತ್ತದೆ. ಜನರು ಕೈತೋಟ ಹಾಗೂ ಹಿತ್ತಲುಗಳಲ್ಲಿ, ಕುಂಡಗಳಲ್ಲಿ ಔಷಧಿ ಸಸ್ಯಗಳನ್ನು ಬೆಳೆಸಿಕೊಳ್ಳುವುದರಿಂದ ಪ್ರಾಥಮಿಕ ಚಿಕಿತ್ಸೆಗೆ ತಕ್ಷಣವೇ ಉತ್ತಮವಾದ ಔಷಧಿ ಸಸ್ಯಗಳು ದೊರಕುತ್ತವೆ.

## ಪವಿತ್ರವನಗಳು

ವಿವಿಧ ದೇವಸ್ಥಾನಗಳ ಸುತ್ತಮುತ್ತ ಇರುವ ನಾನಾ ಪವಿತ್ರ ವನಗಳು ಮತ್ತು ದೈವತ್ವವುಳ್ಳ ಮರಗಳು, ದೇವ ವನಗಳು, ಪೂಜಾ ವೃಕ್ಷಗಳನ್ನು ಬಳಸುವುದರಿಂದ ಔಷಧಿ ಸಸ್ಯಗಳನ್ನು ಪರೋಕ್ಷವಾಗಿ ಸಂರಕ್ಷಿಸಿದಂತಾಗುತ್ತದೆ. ಇದಲ್ಲದೆ ವೃಕ್ಷಗಳಲ್ಲಿರುವ ಪ್ರಾಣ ಮತ್ತು ದೈವತ್ವದ ಪ್ರಭಾವದಿಂದ ಜನರಿಗೆ ಉತ್ತಮ ಫಲ ಪ್ರಾಪ್ತಿಯಾಗುತ್ತದೆ. ರಾಶಿವನ, ನವಗ್ರಹವನ, ನಕ್ಷತ್ರವನ, ತಪೋವನ, ಶಿವಪಂಚಾಯತನವನ, ಅಷ್ಟದಿಕ್ಪಾಲಕ ವನ, ಪಂಚವಟಿವನ ಹೀಗೆ ವಿವಿಧ ರೀತಿಯ ವನಗಳನ್ನು ನಿರ್ಮಾಣ ಮಾಡಬಹುದು . ಆಲ, ಅರಳಿ, ಬೇವು, ಬನ್ನಿ, ತಾರೆ, ಎಕ್ಕ, ಕಗ್ಗಲಿ, ಅತ್ತಿ ಮುಂತಾದ ಪೂಜಾವೃಕ್ಷಗಳನ್ನು ಸಹ ಬೆಳೆಸಬಹುದಾಗಿದೆ. ಈ ವೃಕ್ಷಗಳಿಂದ ಉತ್ತಮ ಪರಿಸರ ನಿರ್ಮಾಣವಾಗಿ ಜನರ ಹಾಗೂ ಸಮುದಾಯದ ಆರೋಗ್ಯವು ಉತ್ತಮಗೊಳ್ಳುತ್ತದೆ.

## ಔಷಧಿ ಸಸ್ಯಗಳ ಕೃಷಿ

ಬೇಡಿಕೆ ಇರುವ ಔಷಧಿ ಸಸ್ಯಗಳನ್ನು ಬೆಳೆಸಿ ಲಾಭ ಪಡೆಯಬಹುದಾಗಿದೆ. ಇದರಿಂದ ಪರೋಕ್ಷವಾಗಿ ನೈಸರ್ಗಿಕ ಔಷಧಿ ಸಸ್ಯಗಳ ಮೇಲಿನ ಒತ್ತಡ ಕಡಿಮೆಯಾಗುತ್ತದೆ. ಔಷಧಿ ಸಸ್ಯಗಳ ಕೃಷಿ ಕೃಷಿ ಮಾಡುವಾಗ ಅವುಗಳನ್ನು ಕೊಳ್ಳುವ ಔಷಧಿ ಕಂಪನಿಗಳ ಜೊತೆ ಕೊಳ್ಳುವಿಕೆ ಮತ್ತು ಬೆಲೆಯ ಬಗ್ಗೆ ಒಪ್ಪಂದ ಮಾಡಿಕೊಳ್ಳುವುದು ಒಳಿತು. ಔಷಧಿ ಸಸ್ಯಗಳನ್ನು ಪ್ರತ್ಯೇಕ ಬೆಳೆಯಾಗಿ ಬೆಳೆಯುವುದರ ಬದಲು ಕೃಷಿ, ತೋಟಗಾರಿಕೆ ಹಾಗೂ ಅರಣ್ಯ ಬೆಳೆಗಳ ಮಧ್ಯಂತರ ಬೆಳೆಯಾಗಿ ಬೆಳೆಯುವುದು ಲಾಭದ ದೃಷ್ಟಿಯಿಂದ ಸೂಕ್ತ. ಔಷಧಿ ಸಸ್ಯಗಳನ್ನು ಆದಷ್ಟು ಸಂಸ್ಕರಿಸಿ ಮಾರಾಟ ಮಾಡುವುದರಿಂದ ಸಹ ಹೆಚ್ಚಿನ ಲಾಭ ಪಡೆಯಬಹುದಾಗಿದೆ.

## ಔಷಧಿ ಸಸ್ಯಗಳ ಸಂರಕ್ಷಣೆ ಯಾರಿಗಾಗಿ

ಮಹಾಮುನಿಯೊಬ್ಬರು ಔಷಧಿ ಸಸ್ಯಗಳ ಬಗ್ಗೆ ಈ ರೀತಿ ಹೇಳುತ್ತಾರೆ:

"ಯಸ್ಯ ದೇಶೇ ತೋ ಯೋ ಜಾತಾ

ತತ್ ಔಷಧಂ ಹಿತಂ"

"ಯಾವ ಪ್ರದೇಶದಲ್ಲಿ ಮಾನವನು ಜನಿಸಿರುವನೋ ಆತನಿಗೆ ಅದೇ ಪ್ರದೇಶದ ಔಷಧಿ ಸಸ್ಯಗಳು ಹಿತವನ್ನುಂಟುಮಾಡುತ್ತವೆ" ಎಂಬುದಾಗಿ ಸುಶ್ರುತ ಆಚಾರ್ಯರು ಸಾವಿರಾರು ವರ್ಷಗಳ ಹಿಂದೆಯೇ ಹೇಳಿದ ಈ ಮಾತು ಇಂದಿಗೂ ಪ್ರಸ್ತುತವಾಗಿದೆ. ಆದ್ದರಿಂದ ನಮ್ಮ ಕಾಯಿಲೆಯ ಚಿಕಿತ್ಸೆಗೆ ಬೇಕಾಗುವ ಔಷಧಿ ಸಸ್ಯಗಳು ನಮ್ಮ ಪ್ರದೇಶದಲ್ಲಿಯೇ ವಿಫುಲವಾಗಿ ಬೆಳೆಯುತ್ತವೆ. ಅವುಗಳ ರಕ್ಷಣೆ, ಅಭಿವೃದ್ಧಿ ಮತ್ತು ಹಿತಮಿತವಾದ ಬಳಕೆಯಿಂದ ನಿರಂತರವಾಗಿ ಆರೋಗ್ಯವನ್ನು ಕಾಪಾಡಿಕೊಳ್ಳುವ ಜವಾಬ್ದಾರಿ ನಮ್ಮದಾಗಿದೆ. ಆದ್ಧರಿಂದ ನಮ್ಮ ಪರಂಪರೆ ಮತ್ತು ಆರೋಗ್ಯವನ್ನು ಕಾಪಾಡಿಕೊಳ್ಳಲು ಔಷಧಿ ಸಸ್ಯಗಳ ಸಂರಕ್ಷಣೆ ಅತ್ಯಗತ್ಯ.

## ಔಷಧಿ ಸಸ್ಯಗಳ ಸಂರಕ್ಷಣೆಗೆ ತೆಗೆದುಕೊಳ್ಳಬೇಕಾದ ಕ್ರಮಗಳು:

1. ಔಷಧಿ ಸಸ್ಯಗಳ ಆವಾಸ ಸ್ಥಾನಗಳನ್ನು ಸಂರಕ್ಷಿಸುವುದು (ಉದಾ: ಅರಣ್ಯ, ಇತರ ಪ್ರದೇಶಗಳು)
2. ಜನರಲ್ಲಿ ಔಷಧಿ ಸಸ್ಯಗಳ ಸಂರಕ್ಷಣೆ ಬಗ್ಗೆ ಅರಿವು ಮೂಡಿಸುವುದು.
3. ಶಾಲಾ ಕಲೇಜುಗಳಲ್ಲಿ ಸಸ್ಯಗಳ ಸಂರಕ್ಷಣೆಯ ಮಹತ್ವದ ಬಗ್ಗೆ ಪ್ರಜ್ಞೆ ಮೂಡಿಸುವುದು.

4. ಅರಣ್ಯದೊಳಗಿನ ಔಷಧಿ ಸಸ್ಯಗಳನ್ನು ಮತ್ತು ಈ ಬಗೆಯ ನೈಸರ್ಗಿಕ ಸಂಪನ್ಮೂಲಗಳನ್ನು ನಾಶಮಾಡದಂತೆ ಕಯಿದೆಯನ್ನು ಸಹ ಜಾರಿಯಲ್ಲಿ ತರಬೇಕು. ಸಸ್ಯಗಳನ್ನು ಅವೈಜ್ಞಾನಿಕವಾಗಿ, ಅನಿಯಂತ್ರಿತವಾಗಿ ತೆಗೆದು ನಾಶವಾಗದಂತೆ ರಕ್ಷಿಸಬೇಕು.

5. ಜನರಲ್ಲಿ ಸಸ್ಯಗಳನ್ನು ಬೆಳೆಸುವುದರ ಅವಶ್ಯಕತೆಗಳ ಬಗ್ಗೆ ಪ್ರಜ್ಞೆ ಮೂಡಿಸುವುದು.

6. ಸರ್ಕಾರಿ ಹಾಗೂ ಸಹಕಾರಿ ಸಂಘಗಳು ಹೆಚ್ಚು ಹೆಚ್ಚು ಔಷಧಿ ಸಸ್ಯಗಳ ಸಸ್ಯಕ್ಷೇತ್ರದಲ್ಲಿ ಸಸಿ ಬೆಳೆಸಿ ಜನರಿಗೆ ಸುಲಭವಾಗಿ, ಕಡಿಮೆ ದರದಲ್ಲಿ ಸಿಗುವಂತೆ ಮಾಡುವುದು.

7. ಜನರು ತಮ್ಮ ಮನೆಯ ಖಾಲಿ ಜಾಗಗಳಲ್ಲಿ ಹಾಗೂ ಮಣ್ಣಿನ ಕುಂಡಗಳಲ್ಲಿ ಸಸ್ಯಗಳನ್ನು ಬೆಳೆಸುವುದಕ್ಕೆ ಪ್ರೋತ್ಸಾಹಿಸುವುದು.

8. ದೊಡ್ಡ ದೊಡ್ಡ () ಕಂಪನಿಗಳು ತಮಗೆ ಅವಶ್ಯವಿದ್ದಸಸ್ಯಗಳನ್ನು ರೈತರ ಮುಖಾಂತರ ಬೆಳೆಸಿ ಉಪಯೋಗಿಸುವಂತೆ ಯೋಜನೆಯನ್ನು ರೂಪಿಸುವುದು.

9. ತಾಲೂಕು ಹಾಗೂ ಪಂಚಾಯಿತಿ ಮಟ್ಟದಲ್ಲಿ ಎಲ್ಲಾ ಶಾಲೆಗಳು, ಸ್ವಯಂಸೇವಾ ಸಂಘಟನೆಗಳು ಮತ್ತು ನುರಿತ ದೇಶೀಯ ವೈದ್ಯರನ್ನು ಒಳಗೊಂಡು ಔಷಧಿ ಸಸ್ಯಗಳ ಸಂರಕ್ಷಣೆಯ ಬಗ್ಗೆ ಕಾರ್ಯಾಗಾರವನ್ನು ಏರ್ಪಡಿಸಿ ಸಸ್ಯಗಳ ಸಂರಕ್ಷಣೆಯ ಹಾಗೂ ಅಭಿವೃದ್ಧಿಯ ಬಗ್ಗೆ ಚರ್ಚಿಸಿ ಹೆಚ್ಚಿನ ಪರಿಜ್ಞಾನ ಮೂಡಿಸುವುದು ಹಾಗೂ ಸೂಕ್ತ ಕಾರ್ಯಕ್ರಮ ರೂಪಿಸುವುದು.

10. ಔಷಧಿ ಸಸ್ಯಗಳು ಇದ್ದ ಅರಣ್ಯ ಕ್ಷೇತ್ರವನ್ನು ಗುರುತಿಸಿ ಸಂಪೂರ್ಣವಾಗಿ ಅವುಗಳ ರಕ್ಷಣೆಯ ಬಗ್ಗೆ ಕಾರ್ಯಕ್ರಮ ಹಮ್ಮಿಕೊಳ್ಳುವುದು.

11. ನಶಿಸಿ ಹೋಗುತ್ತಿರುವ ಮತ್ತು ಮುಖ್ಯ ಔಷಧಿ ಸಸ್ಯಗಳ ಪ್ರಬೇಧಗಳನ್ನು ಸಂರಕ್ಷಿಸುವ ಯೋಜನೆಗಳನ್ನು ಹಮ್ಮಿಕೊಳ್ಳುವುದಕ್ಕಾಗಿ ಹೆಚ್ಚಿನ ಅಧ್ಯಯನಕ್ಕೆ ಆಸ್ಪದ ಮಾಡಿಕೊಡುವುದು, ಹಾಗೂ ಈ ಬಗ್ಗೆ ಕಾರ್ಯಕ್ರಮ ಹಮ್ಮಿಕೊಳ್ಳುವುದು.

12. ಪ್ರತಿ ತಾಲೂಕಿನಲ್ಲೂ ಔಷಧಿ ವನಗಳನ್ನು ನಿರ್ಮಿಸಬೇಕು. ಔಷಧಿ ಸಸಿಗಳನ್ನು ಬೆಳೆಸಿ ಜನರಿಗೆ ನೀಡಬೇಕು.

## ಔಷಧಿ ಮೂಲಿಕೆಗಳ ಸಂಗ್ರಹಣೆ:

ಔಷಧಿ ಸಸ್ಯಗಳನ್ನು (ಮೂಲಿಕೆ) ಸಂಗ್ರಹಿಸುವಾಗ ಈ ಸಸ್ಯಗಳ ವಂಶಾಭಿವೃದ್ಧಿಗೆ, ಬೆಳವಣಿಗೆಗೆ ಮಾರಕವಾಗದಂತೆ, ನಿರಂತರವಾಗಿ ಜನತೆಗೆ ಹಾಗೂ ಮುಂದಿನ ಪೀಳಿಗೆಗೆ ಲಭ್ಯವಾಗುವಂತೆ ಸಂಗ್ರಹಿಸುವುದು ಅಗತ್ಯ. ವಿವಿಧ ಗಿಡಮೂಲಿಕೆಗಳನ್ನು ತೆಗೆಯುವಾಗ ಈ ಕೆಳಕಂಡ ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು. ಇದರಿಂದ ಔಷಧಿ ಸಸ್ಯಗಳ ಸಂರಕ್ಷಣೆಯಾಗುವುದಲ್ಲದೆ, ಮಾನವನಿಗೆ ನಿರಂತರವಾಗಿ ಔಷಧಿ ಸಸ್ಯಗಳು ದೊರಕುತ್ತವೆ.

## ಮೂಲಿಕಾ ಸಂಗ್ರಹಣಾ ವಿಧಾನ:

ಔಷಧಿ ಸಸ್ಯಗಳನ್ನು (ಮೂಲಿಕೆಗಳನ್ನು ಸಂಗ್ರಹಿಸುವಾಗ ಈ ಕೆಳಕಂಡ ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು.

- ತೊಗಟೆಯನ್ನು ತೆಗೆಯುವಾಗ ಒಂದು ವರ್ಷದಲ್ಲಿ 1/4ಭಾಗ ತೊಗಟೆಯನ್ನು ಉದ್ದುದ್ದವಾಗಿ ತೆಗೆಯುವುದು. ತೊಗಟೆ ತೆಗೆದ ಭಾಗವು ಪುನ: ಬೆಳೆದು ಮುಚ್ಚಿಕೊಂಡ ನಂತರವೇ ವಿರುದ್ಧ ದಿಕ್ಕಿನಲ್ಲಿ 1/4ಭಾಗದಲ್ಲಿ ತೊಗಟೆಯನ್ನು ತೆಗೆಯುವುದು. ಉದಾ. ಅರ್ಜುನ (ಹೊಳೆಮತ್ತಿ) ಮರದ ಚೆಕ್ಕೆ.

- ಬೇರುಗಳ ಬಳಕೆಯನ್ನು ಸಾಧ್ಯವಾದಷ್ಟೂ ಕಡಿಮೆ ಮಾಡಬೇಕು. ತೆಗೆಯಲೇಬೇಕಾದ ಪಕ್ಷದಲ್ಲಿ ಪ್ರತಿವರ್ಷದಲ್ಲಿ ನಿರ್ದಿಷ್ಟವಾದ ಋತುವಿನಲ್ಲಿ 1/10ಭಾಗಕ್ಕೆ ಮೀರದಂತೆ ತೆಗೆಯಬೇಕು.

- ಇಡೀ ಸಸ್ಯವನ್ನು ಬಳಸುವಾಗ ಅಲ್ಲಿರುವ ಸಸ್ಯಗಳಲ್ಲಿ ಕೊನೇಪಕ್ಷ 1/20ರಷ್ಟು ಸಸ್ಯಗಳಿಗೆ ಮೀರದಂತೆ ತೆಗೆಯಬಹುದಾಗಿದೆ. ಆದರೆ ಬೀಜದಿಂದ ಬೆಳೆಯುವ ಸಣ್ಣ ಸಸ್ಯಗಳಾಗಿದ್ದಲ್ಲಿ ಬೀಜಗಳು ನೆಲಕ್ಕುದುರಿದ ಮೇಲೆ 1/4ಭಾಗ ಸಸ್ಯಗಳನ್ನು ತೆಗೆಯಬಹುದು. ಉದಾ: ಭೂ ನಿಂಬೆ, ನೆಲಬೇವು.

- ಬೀಜ ಮತ್ತು ಹೂಗಳನ್ನು ಬಳಸುವಾಗ ಮುಂದಿನ ವಂಶಾಭಿವೃದ್ಧಿಗೆ ಅನುಕೂಲವಾಗುವಷ್ಟು ಉತ್ತಮ ಹೂ ಮತ್ತು ಬೀಜಗಳನ್ನು ಉಳಿಸಬೇಕು. ಕೊನೇಪಕ್ಷ ಶೇಕಡಾ 25ರಷ್ಟನ್ನಾದರೂ ಬೀಜಗಳನ್ನು ಉಳಿಸಿ ನೈಸರ್ಗಿಕವಾದ ವಂಶಾಭಿವೃದ್ಧಿಗಾಗಿ ಬಿಡಬೇಕು.

- ಎಲೆಗಳನ್ನು ಸಂಗ್ರಹಣೆ ಮಾಡುವಾಗ ಶೇಕಡ 30ಕ್ಕೆ ಮೀರದಂತೆ ತೆಗೆಯಬಹುದು. ಎಲೆಗಳನ್ನು ತೆಗೆಯುವಾಗ ಎಲ್ಲಾ ದಿಕ್ಕುಗಳಲ್ಲಿಯೂ ಸಮನಾಗಿ ತೆಗೆಯುವಂತೆ ಲಕ್ಷ್ಯ ವಹಿಸತಕ್ಕದ್ದು. ಕೊಂಬೆಗಳು ಮುರಿಯದಂತೆ ಹಾಗೂ ಅವುಗಳಿಗೆ ಧಕ್ಕೆಯಾಗದಂತೆ ನಿಗಾ ವಹಿಸತಕ್ಕದ್ದು. ನೇರವಾಗಿ ಬೆಳೆಯುವ ಮುಖ್ಯ ಕಾಂಡದಿಂದ ಎಲೆಯನ್ನು ತೆಗೆಯಬಾರದು.
- ಗೆಡ್ಡೆಗಳನ್ನು ತೆಗೆಯುವಾಗ ಅಲ್ಲಿರುವ ಸಂತತಿಯ ಶೇಕಡಾ 25ಕ್ಕಿಂತ ಹೆಚು ಕೊಯ್ಲು ಮಾಡಬಾರದು.
- ಹಣ್ಣುಗಳನ್ನು ಬಳಸುವಾಗ ಬೀಜಗಳನ್ನು ಆ ಪ್ರದೇಶದಲ್ಲಿ ಮತ್ತೆ ಅದೇ ಸ್ಥಳದಲ್ಲಿ ಹಾಕಲು ಮರೆಯಬಾರದು. ಬಲಿತ ಹಣ್ಣನ್ನು ಮಾತ್ರ ತೆಗೆದು ಬೀಜವನ್ನು ಬೇರ್ಪಡಿಸತಕ್ಕದ್ದು. ಬೀಜಗಳ ಸಂಗ್ರಹಣೆಯ ಕಾಲಕ್ಕೆ ಗಿಡದ ಕೆಳಗೆ ಬೆಂಕಿ ಹಾಕಬಾರದು.
- ಮರದ ಕೇಂದ್ರ ಕಾಂಡವನ್ನು ಉಪಯೋಗಿಸಲೇ ಬೇಕಾದ ಸಂದರ್ಭಗಳಲ್ಲಿ ಒಣಗಿದ ಮತ್ತು ಬಿದ್ದ ಮರದ ಕಾಂಡವನ್ನು ಮಾತ್ರ ಬಳಸಬೇಕು.
- ಆದಷ್ಟು ಮಟ್ಟಿಗೆ ಎಲೆ, ಬೀಜ, ಹೂ, ಹಣ್ಣು, ಸಸ್ಯಭಾಗಗಳನ್ನು ಉಪಯೋಗಿಸುವುದು ಸೂಕ್ತ.
- ಸಸ್ಯಗಳನ್ನು ಬೆಳೆಸಿ ಬಳಸುವುದು.
- ಔಷಧಿ ಸಸ್ಯಗಳನ್ನು ಸಂರಕ್ಷಿಸಿ, ಬೆಳೆಸಿ, ಬಳಸಲು ಇತರರನ್ನು ಪ್ರೇರೇಪಿಸಬೇಕು.
- ಶಾಲಾ ಕಾಲೇಜಿನ ಮಕ್ಕಳಲ್ಲಿ ಔಷಧಿ ಸಸ್ಯಗಳ ಸಂರಕ್ಷಣೆ , ಅಭಿವೃದ್ಧಿ, ಹಿತಮಿತ ಬಳಕೆಯ ಬಗ್ಗೆ ಅರಿವು ಮೂಡಿಸುವುದೇ ಅಲ್ಲದೆ ಅಂತಹ ಮನೋವೃತ್ತಿಯನ್ನು ಬೆಳೆಸಬೇಕು.
- ಉದ್ದಿಮೆಗಳ ಬಳಕೆಗಾಗಿ ಸಸ್ಯಗಳನ್ನು ಕಡಿಯುವಾಗ (ಕೊಯ್ಲು) ಸಸ್ಯ ಸಂತತಿ ಕ್ಷೀಣಿಸದಂತೆ ನೋಡಿಕೊಳ್ಳಬೇಕು.
- ಹಣ್ಣುಗಳನ್ನು ಕೀಳಲು ಕೊಂಬೆಯನ್ನು ಕತ್ತರಿಸುವಂತಹ ಅನಿಷ್ಟ ಕ್ರಮವನ್ನು ನಿಲ್ಲಿಸಬೇಕು.
- ಬೀಜಗಳನ್ನು ಹೆಕ್ಕಿ ಸಂಗ್ರಹಿಸುವ ಮೊದಲು ಬೆಂಕಿ ಹಾಕುವುದನ್ನು ನಿಲ್ಲಿಸಬೇಕು.

- ಕಾಡುಗಳಲ್ಲಿ ಬೇಟೆಯಾಡುವುದನ್ನು ತಡೆಯಬೇಕು.
- ಪಕ್ಷಿಗಳು ಹಾಗೂ ಉಪಕಾರಿ ಕೀಟಗಳು ಅಭಿವೃದ್ಧಿಯಾಗುವಂತೆ ವಿವಿಧ ಮರಗಳನ್ನು ಬೆಳೆಸಬೇಕು.
- ಪಕ್ಷಿಗಳು ಸಹ ಸಸ್ಯಗಳ ಸಂತಾನಾಭಿವೃದ್ಧಿಗೆ ನೆರವಾಗುತ್ತವೆ.
- ಬೇರುಗಳನ್ನು ಸಂಗ್ರಹಿಸಬೇಕಾದರೆ ಮುಖ್ಯವಾದ ತಾಯಿಬೇರನ್ನು ಕೀಳದೆ ಇತರ ಉಪಬೇರುಗಳನ್ನು ಮಾತ್ರ ತೆಗೆಯತಕ್ಕದ್ದು.. (ಉದಾ: ನುಗ್ಗೆ)
- ಕೆಲವು ಸಸ್ಯಗಳ ಬೇರು ಗುಂಪಾಗಿದ್ದಲ್ಲಿ (ಉದಾ:ಶತಾವರಿ) ಗುಂಪಿನಲ್ಲಿ 3/4 ಭಾಗಕ್ಕಿಂತ ಹೆಚ್ಚು ಬೇರನ್ನು ಬಿಟ್ಟು ಉಳಿಉದ ಬೇರನ್ನು ತೆಗೆಯುವುದು. ಬೇರನ್ನು ತೆಗೆದ ನಂತರ ಮಣ್ಣನ್ನು ಮುಚ್ಚಬೇಕು.

* * * * *

# ಧಾರ್ಮಿಕ ವೃಕ್ಷಗಳು ಮತ್ತು ಆರೋಗ್ಯ

ಪ್ರಾಚೀನ ಕಾಲದಲ್ಲಿ ನಮ್ಮ ಪೂರ್ವಜರು ವೃಕ್ಷಗಳನ್ನು ಆರಾಧಿಸಿ, ಪೂಜಿಸಿ, ಆರೋಗ್ಯಭಾಗ್ಯವನ್ನು ಪಡೆದುಕೊಳ್ಳುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಈ ಪ್ರವೃತ್ತಿ ನಶಿಸುತ್ತಿದೆ. ಪ್ರಾಚೀನ ಭಾರತದಲ್ಲಿ ಎಲ್ಲಾ ಜೀವ ಜಾತಿಗಳಿಗೂ ಮನ್ನಣೆ ನೀಡಿ ಪೋಷಿಸುವ ಮಾನವೀಯ ಸಂಸ್ಕಾರವನ್ನು ತನ್ನದಾಗಿಸಿಕೊಂಡಿತ್ತು. ಈ ಅರ್ಥದಲ್ಲಿ ಸಂಪೂರ್ಣ ಬದುಕೇ ಸೃಷ್ಟಿಯನ್ನು ಪ್ರೀತಿಸುವುದರೊಂದಿಗೆ ವ್ಯಕ್ತವಾಗುತ್ತಿತ್ತು. ಈ ಪರಂಪರೆಯ ಪ್ರಭಾವ ಪೂರ್ವಜರಿಗೆ ನಿಸರ್ಗದೊಂದಿಗೆ ಸಮತೋಲನವನ್ನು ತಂದಿತ್ತು. ಇದರೊಂದಿಗಿನ ಈ ಪ್ರವೃತ್ತಿಯಲ್ಲಿ ಪ್ರಕೃತಿ ಮತ್ತು ಪುರುಷ ಪಾಲುಗಾರರೆಂಬ ಅನುಭವ ಮತ್ತು ನಿಸರ್ಗ ತನ್ನ ಸಮವೆಂಬ ದೃಷ್ಟಿಯನ್ನು ಮಾನವ ಕಂಡುಕೊಂಡಿದ್ದ. ಅಂದರೆ ವಿಕಾಸಗೊಳ್ಳುವ ಒಟ್ಟಾರೆ ಸೃಷ್ಟಿ ಕ್ರಿಯೆಯಲ್ಲಿ ಮಾನವನೂ ಸಹ ಒಂದು ಪಾತ್ರವನ್ನು ಪಡೆದಿದ್ದ.

ವೇದಗಳು, ಉಪನಿಷತ್ತುಗಳು, ವೃಕ್ಷ ಮತ್ತು ಕಾಡುಗಳ ಮೇಲೆ ಮಾನವ ಅವಲಂಬಿಸಿರುವುದನ್ನು ಪ್ರಕಟಿಸಿವೆ. ನರನ ಧರ್ಮಶ್ರದ್ಧೆಯೊಳಗೊಂಡ ಭಾವನಾಶಕ್ತಿಯ ಹಂತವು ಈ ಗಿಡಮರಗಳನ್ನು ಪೂಜ್ಯಭಾವದಿಂದ ಕಂಡು ಇವುಗಳನ್ನು ಪವಿತ್ರ ವನ ಇಲ್ಲವೆ ದೇವರ ಕಾಡು ಎಂಬ ಸ್ಪಷ್ಟ ಕಲ್ಪನೆಗೆ ಪರಿಣಾಮ ನೀಡಿತು.

ಕಾಲ ಸ್ಥಿತಿಗತಿಗಳನ್ನು ಪರಿವರ್ತಿಸುತ್ತದೆ. ಅವಶ್ಯಕತೆಗಳ ಸವಾರಿ ಶ್ರದ್ಧಾಮನೋಭಾವನೆಯ ಆಲೋಚನೆಗಳನ್ನೇ ತಳ್ಳಿಹಾಕಿ ಎತ್ತಲೋ ಮುಂದೋಡುತ್ತದೆ. ಅರಣ್ಯ ಉತ್ಪನ್ನದ ಮೇಲೆ ಜನಸಂಖ್ಯೆ ಏರಿಕೆಯ ದುಷ್ಪರಿಣಾಮದ ಪ್ರಭಾವ; ತೃಪ್ತಿಯಾಗದ ಧನಲೋಭಿತನ; ತಾರತಮ್ಯ ಜ್ಞಾನವಿಲ್ಲದ ಒಕ್ಕಲುತನಕ್ಕಾಗಿ ಸೀಮಿತ ಭೂಮಿಯನ್ನು ಕಬಳಿಸಿ ವಿಸ್ತರಿಸುವಿಕೆ–ಇವೆಲ್ಲ ಅರಣ್ಯ ಸಂಪತ್ತಿಗುಂಟಾದ ಭಾರೀ ಹೊಡೆತಗಳು, ಪವಿತ್ರ ವನಬಗಳು, ನಾಗಬನಗಳು, ದೇವರ ಕಾಡುಗಳು ಸಹ ಹಾನಿಗಳಿಂದ ಉಳಿದುಕೊಳ್ಳಲಿಲ್ಲ. ಪ್ರಾರಂಭದಲ್ಲಿ ಕೊಂಚಕೊಂಚವಾಗಿ

ಕಡಿಮೆಯಾಗುತ್ತಾ ಬಂದು ಕಾಲದಡಿಯಲ್ಲಿ ಇವು ಸಹ ಹಾನಿಗಳಿಂದ ಉಳಿದುಕೊಳ್ಳಲಿಲ್ಲ. ಪ್ರಾರಂಭದಲಗಲಿ ಕೊಂಚ ಕೊಂಚವಾಗಿ ಕಡಿಮೆಯಾಗುತ್ತಾ ಬಂದು ಅನಾದಿ ಕಾಲದಿಂದ ಹೊಂದಿದ್ದ ಸದ್ಭಾವನೆಗಳನ್ನು ಹಿಂದಕ್ಕೆ ತಳ್ಳುವುದಲ್ಲದೆ, ವೈಜ್ಞಾನಿಕದಲ್ಲಾದ ಪ್ರಗತಿಯನ್ನು ಕಾರಣಗಳಲ್ಲೊಂದಾಗಿಸುತ್ತೇವೆ. ಕಾಲ ಪುನಃ ಮಾರ್ಪಾಟಾಗುತ್ತದೆ. ಹೀಗೊಂದು ಅವಧಿಯಲ್ಲಿ ತುಚ್ಛೀಕರಿಸಿದ ನಮ್ಮ ಅನೇಕ ನಂಬಿಕೆಗಳು ಮತ್ತು ಶ್ರದ್ಧೆಗಳು, ವಿಜ್ಞಾನದ ಸಮಯೋಚಿತ ತಿಳುವಳಿಕೆ ಮನದಟ್ಟಾದಂತೆ ಪುನರುಜ್ಜೀವನಗೊಂಡು ಮತ್ತೆ ರೂಢಿಯಲ್ಲಿ ಪಾಲು ಪಡೆಯುತ್ತೇವೆ.

**ಧಾರ್ಮಿಕ ವೃಕ್ಷಗಳಿಂದಾಗುವ ಉಪಯೋಗಗಳು:**

1. ಧಾರ್ಮಿಕ ವೃಕ್ಷಗಳನ್ನು ಪೂಜಿಸುವುದರಿಂದಲೂ ಹಾಗೂ ವೃಕ್ಷಗಳ ಬಳಿ ಕುಳಿತು ಧ್ಯಾನ ಮಾಡುವುದರಿಂದಲೂ ಆರೋಗ್ಯಭಾಗ್ಯ ಹಾಗೂ ಮೋಕ್ಷವನ್ನು ಸಹ ಪಡೆಯಬಹುದು. ಇದರ ಜೊತೆಗೆ ಹಲವಾರು ಸಿದ್ಧಿಯೂ ಲಭಿಸುವುದುಂಟು. ಬುದ್ಧ, ಮಹಾವೀರ, ಏಸುಕ್ರಿಸ್ತ, ಪೈಗಂಬರ್ ಮೊದಲಾದ ಮಹಾನ್ ವ್ಯಕ್ತಿಗಳೂ ಸಹ ವೃಕ್ಷಗಳ ಕೆಳಗೆ ಕುಳಿತು ಧ್ಯಾನ ಮಾಡಿ ಜ್ಞಾನವನ್ನು ಪಡೆದುಕೊಂಡಿರುವುದುಂಟು. ವ್ಯಕ್ತಿಗಳನ್ನು ಪೂಜಿಸುವುದರಿಂದ, ವೃಕ್ಷಗಳ ಸುತ್ತಲೂ ಸುತ್ತುವುದರಿಂದ ಹಾಗೂ ವೃಕ್ಷಗಳ ಬಳಿ ಕುಳಿತು ಧ್ಯಾನ ಮಾಡುವುದರಿಂದ ಸಕಲ ಸನ್ಮಂಗಳಗಳೂ ಸಿದ್ಧಿಯಾಗುತ್ತವೆ. ವೃಕ್ಷಗಳು ಟೆಲಿವಿಷನ್‌ನ ಏಂಟೆನಾದ ರೀತಿಯಲ್ಲಿ ಕೆಲಸ ಮಾಡಿ ಮಾನವನ ಪ್ರಾರ್ಥನೆಯನ್ನು ದೇವರಿಗೆ ತಲುಪಿಸುವಲ್ಲಿ ಹಾಗೂ ದೇವರಿಂದ ಬಂದ ಆಶೀರ್ವಾದವನ್ನು ವಾಪಸ್ಸು ಮಾನವನಿಗೆ ಮುಟ್ಟಿಸುವಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಕೆಲಸ ಮಾಡುತ್ತವೆ. ಆದುದರಿಂದ ಪ್ರತಿ ಮನೆಯ ಅಂಗಳದಲ್ಲಿ, ತೋಟದಲ್ಲಿ, ಹೊಲಗದ್ದೆಗಳಲ್ಲಿ, ಗ್ರಾಮಗಳಲ್ಲಿ, ಧಾರ್ಮಿಕ ವೃಕ್ಷಗಳನ್ನು ಬೆಳೆಸಿ, ಪೂಜಿಸಿ ಧ್ಯಾನಿಸಿ ಸಕಲ ಸನ್ಮಂಗಳಗಳನ್ನು ಪಡೆಯಬಹುದಾಗಿದೆ.

**ಧಾರ್ಮಿಕ ವನಗಳು:**

## 1. ನವಗ್ರಹ ವನ

ಪ್ರತಿಯೊಂದು ಗ್ರಹಕ್ಕೂ ಅದರದೇ ಪ್ರತಿನಿಧಿ ಮರಗಿಡಗಳಿದ್ದು ಅವುಗಳನ್ನು ಬೆಳೆಸಿ ಪ್ರತಿನಿತ್ಯ ಪೂಜಿಸಿದಲ್ಲಿ ಹಾಗೂ ಆ ಗಿಡಗಳ ಭಾಗಗಳನ್ನು ಔಷಧದ ರೂಪದಲ್ಲಿ ಸೇವಿಸುವುದರಿಂದ ಆ ಗ್ರಹಗಳ ಉಪಟಳ ತಪ್ಪುವುದಲ್ಲದೆ, ಗ್ರಹದೋಷದಿಂದ ಬಂದ ಕಾಯಿಲೆ ಸಹ ನಿವಾರಣೆಯಾಗುವುದು ವಿವಿಧ ಗ್ರಹಗಳ ಸಸ್ಯ ಮತ್ತು ಅವುಗಳನ್ನು ನೆಡುವ ದಿಕ್ಕನ್ನು ಈ ಕೆಳಗೆ ನೀಡಲಾಗಿದೆ.

| ಕ್ರಮ. ಸಂಖ್ಯೆ | ಗ್ರಹದ ಹೆಸರು | ವೃಕ್ಷ (ಸಂಸ್ಕೃತ) | ಕನ್ನಡದ ಹೆಸರು | ದಿಕ್ಕು |
|---|---|---|---|---|
| 1. | ರವಿ | ಶ್ವೇತಾರ್ಕ | ಬಿಳಿಎಕ್ಕ | ಮಧ್ಯಭಾಗ |
| 2. | ಚಂದ್ರ | ಪಾಲಾಶ | ಮುತ್ತುಗ | ಆಗ್ನೇಯ |
| 3. | ಕುಜ | ಖದಿರ | ಕಗ್ಗಲಿ | ದಕ್ಷಿಣ |
| 4. | ಬುಧ | ಅಪಾಮಾರ್ಗ | ಉತ್ತರಾಣಿ | ಈಶಾನ್ಯ |
| 5. | ಗುರು | ಅಶ್ವತ್ಥ | ಅರಳಿ | ಉತ್ತರ |
| 6. | ಶುಕ್ರ | ಔದುಂಬರ | ಅತ್ತಿ | ಪೂರ್ವ |
| 7. | ಶನಿ | ಶಮೀ | ಬನ್ನಿ | ಪಶ್ಚಿಮ |
| 8. | ರಾಹು | ದೂರ್ವಂ | ಗರಿಕೆ | ನೈರುತ್ಯ |
| 9. | ಕೇತು | ದರ್ಭ | ದರ್ಬೆ | ವಾಯುವ್ಯ |

## 2. ರಾಶಿವನ

ಪ್ರತಿಯೊಬ್ಬ ವ್ಯಕ್ತಿಯು ತನ್ನ ರಾಶಿಯ ವೃಕ್ಷವನ್ನು ಆರಾಧಿಸಿ ಆರೋಗ್ಯಭಾಗ್ಯ ಹಾಗೂ ಇಷ್ಟಾರ್ಥಗಳನ್ನು ಪಡೆಯಬಹುದು. ಮೇಷಾದಿ ಹನ್ನೆರಡು ರಾಶಿಗಳ ಅಧಿಪತಿ ಗ್ರಹ ಮತ್ತು ವೃಕ್ಷವನ್ನು ಈ ಕೆಳಗೆ ನೀಡಲಾಗಿದೆ.

| ಕ್ರ. ಸಂ. | ರಾಶಿ | ಅಧಿಪತಿ ಗ್ರಹ | ವೃಕ್ಷ (ಸಂಸ್ಕೃತ) | ಕನ್ನಡದ ಹೆಸರು |
|---|---|---|---|---|
| 1. | ಮೇಷ | ಕುಜ | ರಕ್ತಚಂದನ | ರಕ್ತಚಂದನ |
| 2. | ವೃಷಭ | ಶುಕ್ರ | ಸಪ್ತಪರ್ಣಿ | ಮದ್ದಾಲೆ |
| 3. | ಮಿಥುನ | ಬುಧ | ಪನಸ | ಹಲಸು |
| 4. | ಕರ್ಕ | ಚಂದ್ರ | ಪಾಲಾಶ | ಮುತ್ತುಗ |
| 5. | ಸಿಂಹ | ರವಿ | ಪಾದರಿ | ಪಾದರಿ |
| 6. | ಕನ್ಯಾ | ಬುಧ | ಆಮ್ರ | ಮಾವು |
| 7. | ತುಲಾ | ಶುಕ್ರ | ಬಕುಲ | ರಂಜಲು |
| 8. | ವೃಶ್ಚಿಕ | ಕುಜ | ಖದಿರ | ಕಗ್ಗಲಿ/ಕಾಚು |
| 9. | ಧನು | ಗುರು | ಅಶ್ವತ್ಥ | ಅರಳಿ |
| 10. | ಮಕರ | ಶನಿ | ಶಿಂಶಫ | ಬೀಟೆ |
| 11. | ಕುಂಭ | ಶನಿ | ಶಮಿ | ಬನ್ನಿ |
| 12. | ಮೀನ | ಗುರು | ವಟ | ಆಲ |

## 3. ನಕ್ಷತ್ರ ವನ

ಅಶ್ವಿನಿಯೇ ಮುಂತಾದ 27 ನಕ್ಷತ್ರಗಳಿಗೆ ಯೋನಿ, ಗಣ, ಲಿಂಗ, ವರ್ಣ, ಗುಣ,ನಾಡಿ, ಮುಖ, ಋಷಿ, ಭೂತ ಮೊದಲಾದವುಗಳ ಸಂಜ್ಞೆಯಿದ್ದಂತೆ ವಿವಿಧ ವೃಕ್ಷಗಳನ್ನೂ ಸಂಕೇತಿಸಲಾಗಿದೆಯೆಂಬುದು ಶಾರದಾ ತಿಲಕ ಮೊದಲಾದ ತಂತ್ರ ಗ್ರಂಥಗಳಲ್ಲೂ ಜ್ಯೋತಿಷ್ಯ ಗ್ರಂಥಗಳಲ್ಲೂ ಉಕ್ತವಾಗಿದೆ. ಮಂತ್ರ ಮಹಾರ್ಣವದಲ್ಲಿವಿವಿಧ ನಕ್ಷತ್ರಗಳಿಗೆ ಈ ಕೆಳಗಿನ ವೃಕ್ಷಗಳನ್ನು ಸೂಚಿಸಲಾಗಿದೆ. ಪ್ರತಿಯೊಬ್ಬ ಮಾನವನು ಒಂದಲ್ಲೊಂದು ನಕ್ಷತ್ರದಡಿ ಜನಿಸಿದವನಾಗಿರುತ್ತಾನೆ. ಆದುದರಿಂದ ಆಯಾ ನಕ್ಷತ್ರದಲ್ಲಿ ಜನಿಸಿಲುವವರು ತಮ್ಮ ನಕ್ಷತ್ರದ ವೃಕ್ಷಗಳನ್ನು ಪೂಜಿಸುವುದರಿಂದ/ಆರಾಧಿಸುವುದರಿಂದ ಹಾಗೂ ವೃಕ್ಷದ ಪಕ್ಕ ಕುಳಿತು ಧ್ಯಾನ ಮಾಡುವುದರಿಂದ ಉತ್ತಮ ಫಲಗಳು ಸಿಗುತ್ತವೆ.

ಇಪ್ಪತ್ತೇಳು ನಕ್ಷತ್ರಗಳ ವೃಕ್ಷಗಳನ್ನು ಈ ಕೆಳಗೆ ನೀಡಲಾಗಿದೆ.

| ಕ್ರಸಂ | ನಕ್ಷತ್ರ | ವೃಕ್ಷ | ಕ್ರಸಂ | ನಕ್ಷತ್ರ | ವೃಕ್ಷ |
|---|---|---|---|---|---|
| 1. | ಅಶ್ವಿನಿ | ಕಾಸರಿಕ | 15 | ಸ್ವಾತಿ | ಹೊಳೆಮತ್ತಿ |
| 2. | ಭರಣಿ | ನೆಲ್ಲಿ | 16. | ವಿಶಾಖಾ | ಹಣ್ಣುಸಂಪಿಗೆ |
| 3. | ಕೃತ್ತಿಕಾ | ಅತ್ತಿ | 17. | ಅನೂರಾಧಾ | ರಂಜಲ |
| 4. | ರೋಹಿಣಿ | ನೇರಳೆ | 18. | ಜ್ಯೇಷ್ಠಾ | ಬೂರಲ |
| 5. | ಮೃಗಶಿರಾ | ಕಗ್ಗಲಿ | 19. | ಮೂಲಾ | ಶ್ರೀಗಂಧ |
| 6. | ಆರಿದ್ರಾ | ಶಿವನಿ | 20. | ಪೂರ್ವಾಷಾಡ | ಕರಿಮುತ್ತುಗ |
| 7. | ಪುನರ್ವಸು | ಬಿದಿರು | 21. | ಉತ್ತರಾಷಾಡ | ಹಲಸು |
| 8. | ಪುಷ್ಯ | ಅರಳಿ | 22 | ಶ್ರವಣ | ಎಕ್ಕ |
| 9. | ಆಶ್ಲೇಷಾ | ನಾಗಸಂಪಿಗೆ | 23 | ಧನಿಷ್ಠ | ಬನ್ನಿ |
| 10. | ಮಘ | ಆಲ | 24 | ಶತಭಿಷಾ | ಕದಂಬ |
| 11. | ಪುಬ್ಬಾ | ಮುತ್ತುಗ | 25. | ಪೂರ್ವಾಬಾದ್ರಾ | ಬೇವು |
| 12. | ಉತ್ತರಾ | ಬಸರಿ | 26. | ಉತ್ತರಾಬಾದ್ರ | ಮಾವು |
| 13. | ಹಸ್ತಾ | ಅಮಟೆ | 27. | ರೇವತಿ | ಇಪ್ಪೆ |
| 14. | ಚಿತ್ತಾ | ಬಿಲ್ವ | | | |

## 4. ಅಷ್ಟದಿಕ್ಪಾಲಕ ವನ

ಭಾರತೀಯ ಸಾಂಸ್ಕೃತಿಕ ಪರಂಪರೆಯಲ್ಲಿ ಅಷ್ಟದಿಕ್ಪಾಲಕರು ಅತ್ಯಂತ ಪ್ರಮುಖ ಸ್ಥಾನ ಪಡೆದಿರುತ್ತಾರೆ. ದಿಕ್ಪಾಲಕರ ಮರಗಳನ್ನು, ವನಗಳನ್ನು ಆಯಾ ದಿಕ್ಕುಗಳಲ್ಲಿ ಮನೆಯ ಸುತ್ತ ಹಾಗೂ ತೋಟ, ಹೊಲಗದ್ದೆಗಳ ಸುತ್ತಲೂ ಬೆಳೆಸಿ, ಸಂರಕ್ಷಿಸಿ, ಪೂಜಿಸಿ, ಆರಾಧಿಸುವುದರಿಂದ ಎಲ್ಲಾ ರೀತಿಯ ರಕ್ಷಣೆ ದೊರೆಯುವುದಲ್ಲದೆ, ಉತ್ತಮ ಆರೋಗ್ಯ ಹೆಚ್ಚಿನ ಫಸಲು ಹಾಗೂ ತೇಜಸ್ಸು ದೊರಕುತ್ತದೆ. ಪ್ರತಿ ಹಳ್ಳಿಯಲ್ಲೂ ದೇವಸ್ಥಾನದ ಆವರಣದಲ್ಲಿ, ಸಮುದಾಯ ಪ್ರದೇಶಗಳಲ್ಲಿ, ಗುಂಡುತೋಪು ಪ್ರದೇಶಗಳಲ್ಲಿ, ಧಾರ್ಮಿಕ ವನಗಳನ್ನು ನಿರ್ಮಿಸಿ, ಪೂಜಿಸಿ, ಆರಾಧಿಸಿದಲ್ಲಿ, ಸರ್ವ ಜನರಿಗೂ ಸುಖ, ಶಾಂತಿ, ಸಮೃದ್ಧಿಯು ಲಭಿಸುತ್ತದೆ.

| ದಿಕ್ಕು | ದಿಕ್ಪಾಲಕರು | ಸಸ್ಯ/ವೃಕ್ಷ |
|---|---|---|
| ಪೂರ್ವ | ಇಂದ್ರ | ಬೂರುಗ |
| ಆಗ್ನೇಯ | ಅಗ್ನಿ | ಅತ್ತಿ |
| ದಕ್ಷಿಣ | ಯಮ | ನೆಲ್ಲಿ |
| ನೈರುತ್ಯ | ನಿರುರತಿ | ಶ್ರೀಗಂಧ |
| ಪಶ್ಚಿಮ | ವರುಣ | ಕದಂಬ |
| ವಾಯುವ್ಯ | ವಾಯು | ಕರಿಮತ್ತಿ |
| ಉತ್ತರ | ಕುಬೇರ | ನೇರಳೆ |
| ಈಶಾನ್ಯ | ಈಶಾನ | ಶಿವನೆ |

**ಇತರೆ ಧಾರ್ಮಿಕ ವನಗಳು:**

ಇದೇರೀತಿ ಸಪ್ತಋಷಿವನ, ಶಿವಪಂಚಾಯತನವನ, ಪಂಚವಟಿವನ, ಬೃಹತ್ ಪಂಚವಟಿವನಗಳನ್ನು ನಿರ್ಮಿಸಿ ಆರಾಧಿಸಬಹುದಾಗಿದೆ. ಇದೇ ರೀತಿ ವಿವಿಧ ದೇವತೆಗಳ ಪೂಜೆಗೆ ಬೇಕಾದ ಪುಷ್ಪ ಮತ್ತು ಪತ್ರೆಗಳನ್ನು ಆರಾಧಿಸಿ ಉಪಯೋಗಿಸಿ ಉತ್ತಮ ಫಲ ಪಡೆಯಬಹುದು.

ಎಲ್ಲಾ ಸಸ್ಯಗಳಲ್ಲೂ ಜೀವವರಿದ್ದು, ಈ ಸಸ್ಯಗಳು ತಮ್ಮ ತರಂಗಗಳ ಮುಖಾಂತರ ಬಾಹ್ಯ ಪ್ರಪಂಚದೊಂದಿಗೆ ಸಂಪರ್ಕ ಬೆಳೆಸಿಕೊಂಡಿರುತ್ತವೆ.

ಪ್ರತಿಯೊಂದು ಸಸ್ಯದಲ್ಲೂ ದೈವತ್ವವಿರುವುದರಿಂದ ಸಸ್ಯಗಳನ್ನು ಸಂರಕ್ಷಿಸಿ, ಬೆಳೆಸಿ, ಪೂಜಿಸಿ, ಧ್ಯಾನಿಸಿ, ಆರಾಧಿಸುವುದು ಶ್ರೇಯಸ್ಕರ. ಸಸ್ಯಗಳು ದೇವರು ಮತ್ತು ಮಾನವನ ನಡುವೆ ಶೀಘ್ರ ಹಗೂ ನೇರ ಸಂಪರ್ಕವೇರ್ಪಡಿಸುವ ದಿವ್ಯಜೀವಿಗಳಾಗಿವೆ.

ಕರ್ನಾಟಕ ಅರಣ್ಯ ಇಲಾಖೆಯು ಉತ್ತರ ಕನ್ನಡ ಜಿಲ್ಲೆಯ ಬಕ್ಕಳ, ಬೆಂಗಳೂರು ಜಿಲ್ಲೆಂಯ ರಾಮನಗರ, ಕೋಲಾರದ ಕೈವಾರ, ಹುಬ್ಬಳ್ಳಿಂಯ ಬುಡ್ನಾಳ, ಚಿಕ್ಕಮಗಳೂರಿನ ರತ್ನಗಿರಿ ಬೋರೆ, ತುಮಕೂರಿನ ದೇವರಾಯನದುರ್ಗ, ಬೀದರ್‌ನ ಬಳಿ ಹಾಗೂ ಇನ್ನಿತರ ಕಡೆಗಳಲ್ಲಿ ಧಾರ್ಮಿಕವನಗಳನ್ನು ಶಾಸ್ತ್ರೀಯವಾಗಿ ನೆಟ್ಟು ಬೆಳೆಸಿರುತ್ತಾರೆ. ಆಸಕ್ತಿಯುಳ್ಳವರು ಈ ಪ್ರದೇಶಗಳಿಗೆ ಭೇಟಿ ಕೊಟ್ಟು ವೃಕ್ಷಗಳಲ್ಲೇ ದೇವರನ್ನು ಕಂಡು ಕೃತಾರ್ಥರಾಗಬಹುದಾಗಿದೆ. ಧಾರ್ಮಿಕ ವೃಕ್ಷಗಳ ವನಗಳನ್ನು ರೂಪಿಸುವ ಬಗ್ಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಾದ ಶ್ರೀ ಗಾ.ನಂ. ಶ್ರೀಕಂಠಯ್ಯ, ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳಾದ ಶ್ರೀ ಪ್ರವೀಣ ಚಂದ್ರ ಪಾಂಡೆ ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಾದ ಶ್ರೀ ನಿಸಾರ್‌ಅಹಮದ್ ಹಾಗೂ ಈ ಎಲ್ಲಾ ಧಾರ್ಮಿಕ ವೃಕ್ಷಗಳ ಸಂಯೋಜನೆಯನ್ನು ಪ್ರಥಮ ಬಾರಿಗೆ ಪರಿಚಯಿಸಿ ವನಗಳನ್ನು ನಿರ್ಮಿಸಲು ಕಾರಣಕರ್ತರಾದ ಶ್ರೀ ಅ.ನಂ. ಎಲ್ಲಪ್ಪರೆಡ್ಡಿಯವರನ್ನು ಸಂಪರ್ಕಿಸಬಹುದಾಗಿದೆ. ಧಾರ್ಮಿಕ ವೃಕ್ಷಗಳ ಬಗ್ಗೆ ಆಳವಾದ ಜ್ಞಾನವಿರುವ ಹಾಗೂ ನಡೆದಾಡುವ ವಿಶ್ವಜ್ಞಾನಕೋಶವೆಂದೇ ಪ್ರಖ್ಯಾತರಾಗಿರುವ ವಿದ್ವಾನ್ ಶ್ರೀ ಹಿತ್ಲಳ್ಳಿ ನಾಗೇಂದ್ರಭಟ್, ಯಲ್ಲಾಪುರ ತಾಲೂಕು. ಉತ್ತರಕನ್ನಡ ಜಿಲ್ಲೆ, ಇವರನ್ನೂ ಸಹ ಹೆಚ್ಚಿನ ಮಾಹಿತಿಗಾತಿ ಸಂಪರ್ಕಿಸಬಹುದು.

# ಮನೆಯಂಗಳದಲ್ಲಿ ಮದ್ದಿನ ಗಿಡ

ನಮ್ಮ ಪರಂಪರೆಯಲ್ಲಿ ಪ್ರಾಥಮಿಕ ಆರೋಗ್ಯವನ್ನು ಕಾಪಾಡಿಕೊಳ್ಳಲು ಮನೆಮದ್ದಿನ ಮೇಲೆ ಹೆಚ್ಚಿನ ಅವಲಂಬನೆ ಇತ್ತು. ಇತ್ತೀಚಿನ ದಿನಗಳಲ್ಲಿ ಆಧುನಿಕತೆ ಹೆಚ್ಚಾದಂತೆ, ನಮ್ಮ ಸಂಸ್ಕೃತಿಯ ಔಷಧಿ ಪರಂಪರೆಗಳು ಸಹ ನಶಿಸಿಹೋಗುತ್ತಿವೆ. ಪಾರಂಪರಿಕ ಚಿಕಿತ್ಸಾಪದ್ಧತಿಯಲ್ಲಿ, ಮನೆಹಿತ್ತಲಿನಲ್ಲಿ ಸಿಗುವ ಔಷಧಿ ಸಸ್ಯಗಳು ಹಾಗೂ ಮನೆಯೊಳಗಿನ ಸಂಬಾರ(ಮಸಾಲೆ) ಪದಾರ್ಥಗಳು ಹಾಗೂ ಇನ್ನಿತರ ಪದಾರ್ಥಗಳನ್ನು ಬಳಸಿಕೊಂಡು ಸುಲಭ ಔಷಧಿಗಳನ್ನು ತಯಾರಿಸಿ ಚಿಕಿತ್ಸೆ ಮಾಡುತ್ತಿದ್ದರು.

ಈ ಚಿಕಿತ್ಸೆಗಳು ಸುಲಭ ಚಿಕಿತ್ಸೆಗಳಾಗಿದ್ದು, ರೋಗ ಕಾಣಿಸಿಕೊಂಡ ತಕ್ಷಣವೇ ಚಿಕಿತ್ಸೆ ನೀಡುತ್ತಿದ್ದುದ್ದರಿಂದ ಕ್ರಮವಾಗಿ ಶಮನವಾಗುತ್ತಿದ್ದವು. ಹೆಚ್ಚಿನ ತೊಡಕುಗಳು ಉಂಟಾಗಿ ವೈದ್ಯರನ್ನು ಹುಡುಕಿಕೊಂಡು ಅಲೆಯುವ ಅಗತ್ಯ ಬೀಳುತ್ತಿರಲಿಲ್ಲ. ಈ ಪದ್ಧತಿಯ ಔಷಧಿಗಳು ಕಾಯಿಲೆಗಳನ್ನು ನಿವಾರಣೆ ಮಾಡುವುದಲ್ಲದೆ ಆರೋಗ್ಯ ವರ್ಧನೆಯನ್ನು ಸಹ ಮಾಡುತ್ತಿದ್ದವು ಮತ್ತು ರೋಗ ಬಾರದಂತೆ ದೇಹಕ್ಕೆ ರೋಗನಿರೋಧಕ ಶಕ್ತಿಯನ್ನು ನೀಡುತ್ತಿದ್ದವು. ಆಧುನಿಕ ಚಿಕಿತ್ಸೆಯ ಪದ್ಧತಿಯಲ್ಲಿ ಸಣ್ಣಪುಟ್ಟ ತೊಂದರೆಗಳಿಗೆ ಕೂಡ ಇಂದು ನೂರಾರು ರೂಪಾಯಿಗಳನ್ನು ಖರ್ಚು ಮಾಡಬೇಕಾದ ಪರಿಸ್ಥಿತಿ ಬಂದಿರುತ್ತದೆ.

ಇತ್ತೀಚಿನ ಕಂಪನಿಯ ಔಷಧಿಗಳು ತಾತ್ಕಾಲಿಕ ಶಮನವೀಯುವುದಲ್ಲದ ಹಲವಾರು ಅಡ್ಡಪರಿಣಾಮಗಳನ್ನು ಉಂಟುಮಾಡಿ ನಮಗೆ ಗೊತ್ತಿಲ್ಲದಂತೆ ಇನ್ನಿತರ ಖಾಯಿಲೆಗಳು ಬರಲು ಅವಕಾಶ ಮಾಡಿಕೊಡುತ್ತವೆ. ಹಿಂದಿನ ಕಾಲದಲ್ಲಿ ಗರ್ಭಿಣಿ ಚಿಕಿತ್ಸೆ, ತಾಯಿ ಮತ್ತು ವಗುವಿನ ಚಿಕತ್ಸೆ ಹಾಗೂ ಆರೈಕೆಯನ್ನು ಮನೆಯಲ್ಲೇ ಮನೆಮದ್ದಿನಿಂದ ಮಾಡುತ್ತಿದ್ದುದರಿಂದ ಅವರ ಆರೋಗ್ಯ ಉತ್ತಮವಾಗಿದ್ದು ಮಕ್ಕಳು ಸಹ ಬಲಿಷ್ಠರಾಗಿರುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ದುಬಾರಿ ವೆಚ್ಚ ಮಾಡಿ ಔಷಧಿ ತೆಗೆದುಕೊಂಡರೂ ಸಹ ಉತ್ತಮ ಸ್ವಾಸ್ಥ್ಯ ಮತ್ತು ಆರೋಗ್ಯವನ್ನು ಪಡೆಯುವುದು ಕಷ್ಟವಾದ್ದರಿಂದ ನಮ್ಮ ಪಾರಂಪರಿಕ ವೈದ್ಯ ಪದ್ಧತಿಯ ಪುನಶ್ಚೇತನದ ಅಗತ್ಯ ಇಂದು ಅನಿವಾರ್ಯವಾಗಿದೆ.

ಈ ನಿಟ್ಟಿನಲ್ಲಿ ಪ್ರತಿ ಮನೆಗೂ ಪ್ರತಿ ತಾಯಿಗೂ, ಪ್ರತಿ ಮಗುವಿಗೂ ನಮ್ಮ ವೈದ್ಯ ಪದ್ಧತಿಯ ಮಹತ್ವ ಮತ್ತು ಉಪಯೋಗವನ್ನು ತಲುಪಿಸುವುದು ಇಂದಿನ ಮತ್ತು ಮುಂದಿನ ಪೀಳಿಗೆಯವರ ಆರೋಗ್ಯ ದೃಷ್ಟಿಯಿಂದ ಸೂಕ್ತವಾಗಿದೆ. ಮನೆಮನೆಯೂ ಆರೋಗ್ಯದಿಂದ ನಲಿಯುತ್ತಿರಬೇಕೆಂಬ ದೃಷ್ಟಿಯಿಂದ **ಹಸಿರು ಆರೋಗ್ಯ ಕಾರ್ಯಕ್ರಮ**ಗಳನ್ನು ಹಮ್ಮಿಕೊಳ್ಳಬೇಕಾಗಿದೆ. ಈ ನಿಟ್ಟಿನಲ್ಲಿ ಪ್ರತಿ ಮನೆಗೂ ಸಂಪೂರ್ಣವಾಗಿ ಪ್ರಾಥಮಿಕ ಆರೋಗ್ಯ ಪಾಲನೆ ದೃಷಟಿಯಿಂದ ಮುಖ್ಯವಾದ ಕೆಲವು ಸಸ್ಯಗಳನ್ನು ಗುರ್ತಿಸಿ, ದೈನಂದಿನ ಆರೋಗ್ಯದಲ್ಲಿ ಅವುಗಳನ್ನು ಉಪಯೋಗಿಸುವ ರೀತಿಯನ್ನು ಈ ಪುಸ್ತಕದಲ್ಲಿ ನೀಡಲಾಗಿದೆ.

ಈ ಸಸ್ಯಗಗಳನ್ನು ಮನೆಯಂಗಳದಲ್ಲಿ, ಹಿತ್ತಲುಗಳಲ್ಲಿ, ಬೇಲಿಗಳಲ್ಲಿ, ಕೈತೋಟಗಳಂತಹ ಇನ್ನಿತರ ಸ್ಥಳಗಳಲ್ಲಿ ಸುಲಭವಾಗಿ ಬೆಳೆಸಬಹುದು. ಈ ಸಸ್ಯಗಳನ್ನು ಬೀಜದಿಂದ, ಕಾಂಡದ ಕಡ್ಡಿಯಿಂದ ಹಾಗೂ ಇನ್ನಿತರ ವಿಧಾನಗಳಿಂದ ಪುನರುತ್ಪತ್ತಿಗೊಳಿಸಬಹುದು. **ಔಷಧಿ ಸಸ್ಯಗಳನ್ನು ಬೆಳೆಸಿಯೇ ಬಳಸಬೇಕು** ಕೆಲವೊಂದು ಮರಗಳಿಂದ ಬರುವ ಉತ್ಪನ್ನಗಳಾದ ಹಣ್ಣು ಬೀಜ, ಇನ್ನಿತರ ಸಸ್ಯಭಾಗಗಳನ್ನು ಸ್ವಲ್ಪ ಮಟ್ಟಿಗೆ ಲಭ್ಯವಿರುವ ನೈಸರ್ಗಿಕ ಸ್ಥಳಗಳಿಂದ ಪಡೆದುಕೊಳ್ಳಬೇಕಾಗಿದೆ. ಆದರೆ ಅಂತಹ ಮರಗಳನ್ನು ಸಹ ತೋಟ, ಹೊಲದ ಬದುಗಳು ಮತ್ತು ಬೇಲಿಗಳಲ್ಲಿ ಈಗಿನಿಂದಲೇ ಬೆಳೆಸಬೇಕು.

ಮನೆಯಂಗಳದಲ್ಲಿ ಬೆಳೆಸುವ ಸಸ್ಯಗಳು ಮತ್ತು ಮನೆಯಲ್ಲಿ ಸಿಗುವ ಸಾಮಗ್ರಿಗಳಿಂದ ಸಣ್ಣ ಪುಟ್ಟ ಕಾಯಿಲೆಗಳಾದ ನೆಗಡಿ, ಜ್ವರ, ಕೆಮ್ಮಿನಿಂದ ಹಿಡಿದು ಸಂಕೀರ್ಣವಾದ ಕಾಯಿಲೆಗಳನ್ನು ಸಹ ಗುಣಪಡಿಸಬಹುದಾಗಿದೆ.ಈ ಔಷಧಿಗಳಿಂದ ಯಾವುದೇ ಅಡ್ಡಪರಿಣಾಮಗಳಿರುವುದಿಲ್ಲ. **ಈ ಔಷಧಿಗಳು ಆರೋಗ್ಯ ವರ್ಧನೆಯನ್ನು ಮಾಡುವುದಲ್ಲದೆ, ರೋಗನಿರೋಧಕ ಶಕ್ತಿಯನ್ನು ಹೆಚ್ಚಿಸುತ್ತವೆ.** ಈ ಸಸ್ಯಗಳು ಹಾಗೂ ಅವುಗಳ ಉತ್ಪನ್ನಗಳನ್ನು ತರಕಾರಿ, ಹಣ್ಣುಹಂಪಲು, ಪಾನೀಯಗಳಾಗಿ, ಚಟ್ನಿಯಾಗಿ ಆಯಾದೊಂದಿಗೆ ತೆಗೆದುಕೊಳ್ಳಬಹುದಾಗಿದೆ. ಇವುಗಳು ಔಷಧಿಗಳೆನ್ನಿಸಿಕೊಳ್ಳದೆ, ದಿನನಿತ್ಯದ ಆಹಾರ-ವಿಹಾರ ಹಾಗೂ ಜೀವನ ಕ್ರಮಗಳಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿವೆ.

ಭಾರತೀಯ ಮಹಿಳೆ ಸಾಂಪ್ರದಾಯಿಕವಾಗಿ ಬೆಳೆದು ಬಂದ ಪಾರಂಪರಿಕ ವೈದ್ಯ ಪದ್ಧತಿಯನ್ನು ರೂಢಿಸಿಕೊಂಡು ತನ್ನ ಇಡೀ ಕುಟುಂಬದ ಆರೋಗ್ಯವನ್ನು ಕಾಪಾಡಿಕೊಳ್ಳುವಲ್ಲಿ ಹಸಿರು ಆರೋಗ್ಯ ಕಾರ್ಯಕ್ರಮ ಸಹಾಯಕವಾಗುತ್ತದೆ ಎಂದು ಆಶಿಸಲಾಗಿದೆ. ಇತ್ತೀಚಿನ ದಿನಗಳಲ್ಲಿ ಪಾಶ್ಚಿಮಾತ್ಯರು ಸಹ ಆಧುನಿಕ ಔಷಧಿ ಪದ್ಧತಿಯ ಅಡ್ಡ ಪರಿಣಾಮಗಳನ್ನು ಮನಗಂಡು, ಅವರು ತಮ್ಮ ಆರೋಗ್ಯಕ್ಕಾಗಿ

ನೈಸರ್ಗಿಕ ವಸ್ತುಗಳು ಮತ್ತು ಪಾರಂಪರಿಕ ವೈದ್ಯ ಪದ್ಧತಿಯತ್ತ ವಾಲುತ್ತಿದ್ದಾರೆ. ಆದ್ದರಿಂದ ಈಗಲಾದರೂ ನಾವು ನಮ್ಮ ಉತ್ಕೃಷ್ಟ ಪಾರಂಪರಿಕ ವೈದ್ಯ ಪದ್ಧತಿಯನ್ನು ಅನುಸರಿಸಿ ನಮ್ಮ ಆರೋಗ್ಯವನ್ನು ಕಾಪಾಡಿಕೊಳ್ಳುವತ್ತ ದಿಟ್ಟ ಹೆಜ್ಜೆ ಹಾಕಬೇಕಿದೆ.

ಮನೆಮದ್ದಿನ ಚಿಕಿತ್ಸಾ ಪದ್ಧತಿಯ ವೈಶಿಷ್ಟ್ಯ ಮತ್ತು ಲಾಭಗಳು:

- ಔಷಧಿ ಸಸ್ಯಗಳು ಸ್ಥಳೀಯವಾಗಿ ಲಭ್ಯವಿರುತ್ತವೆ.
- ಬೇಕಾದ ಸಸ್ಯಗಳನ್ನು ಮನೆಯಂಗಳದಲ್ಲಿ: ಕೈತೋಟದಲ್ಲಿ ಮತ್ತು ಮಣ್ಣಿನ ಕುಂಡಗಳಲ್ಲಿ ಸುಲಭವಾಗಿ ಬೆಳೆಸಬಹುದು.
- ಈ ಸಸ್ಯಗಳನ್ನು ಬೆಳೆಸುವ ಖರ್ಚು ಅತಿ ಕಡಿಮೆಯಾಗಿರುತ್ತದೆ.
- ಇಂತಹ ಸಸ್ಯಗಳಿಂದ ತಾಜಾ ಔಷಧಿಗಳನ್ನು ಪಡೆಯಲು ಸಾಧ್ಯವಾಗುವುದರಿಂದ ಬೇರೆಡೆಗಳಿಂದ ಕೆಲವೊಮ್ಮೆ ಕಲಬೆರಕೆಯ ಔಷಧಿಗಳನ್ನು ಪಡೆದು ಆಗುವ ಕೆಟ್ಟ ಪರಿಣಾಮಗಳನ್ನು ತಪ್ಪಿಸಲು ಸಹಾಯವಾಗುತ್ತದೆ.
- ಕೆಲವು ವಿದೇಶೀ ಪದ್ಧತಿ-ಚಿಕಿತ್ಸೆಯ ಔಷಧಿಗಳಿಂದ ಅಡ್ಡ ಪರಿಣಾಮವಾಗುವುದುಂಟು. ಆದರೆ, ಈ ತಾಜಾ ಸಸ್ಯಗಳನ್ನು ಉಪಯೋಗಿಸುವುದರಿಂದ ಯಾವ ಅಡ್ಡ ಪರಿಣಾಮವೂ ಸಂಭವಿಸುವುದಿಲ್ಲ.
- ಚಿಕಿತ್ಸೆಯು ಕೂಡಲೆ ಸಾಧ್ಯವಾಗುವುದರಿಂದ ಸಾಮಾನ್ಯ ಕಾಯಿಲೆಗಳಿಗೆ ವೈದ್ಯರನ್ನು ಹುಡುಕಿಕೊಂಡು ಹೋಗುವ ಅವಶ್ಯಕತೆ ಬರುವುದಿಲ್ಲ.
- ಚಿಕಿತ್ಸೆಯನ್ನು ಕೂಡಲೆ ಪಡೆಯಲು ಸಾಧ್ಯವಾಗುವುದರಿಂದ ರೋಗವು ಉಲ್ಬಣಗೊಳ್ಳದಂತೆ ತಡೆಯಲು ಸಹಾಯವಾಗುತ್ತದೆ.
- ಔಷಧಿ ಸಸ್ಯಗಳನ್ನು ಬೀಜಗಳಿಂದ ಮಾತ್ರವಲ್ಲದೆ ಬೇರು, ಕಾಂಡ, ಗಡ್ಡೆಗಳ ತುಂಡಿನಿಂದಲೂ ಸುಲಭವಾಗಿ ಬೆಳೆಸಬಹುದು.
- ವಿದೇಶೀ ಪದ್ಧತಿಯ ಚಿಕಿತ್ಸೆಗೆ ತಗಲುವ ದುಬಾರಿ ವೆಚ್ಚವನ್ನು ಕಡಿಮೆ ಮಾಡಬಹುದು.
- ವಿದೇಶೀ ಪದ್ಧತಿಯಿಂದ ತಕ್ಷಣದ ಉಪಶಮನವಲ್ಲದೆ ಸಂಪೂರ್ಣ ಆರೋಗ್ಯ ಪಡೆಯಲು ದುಸ್ತರ.
- ಮನೆಯಲ್ಲಿಯೇ ಶೀಘ್ರ ಹಾಗೂ ಪರಿಣಾಮಕಾರಿ ಚಿಕಿತ್ಸೆಯನ್ನು ಪಡೆಯಬಹುದು.

## ಮನೆಯಂಗಳದಲ್ಲಿ ಔಷಧಿ ವನವನ್ನು ನಿರ್ಮಿಸುವ ವಿಧಾನ:

ಔಷಧಿ ವನವನ್ನು ಮನೆಯಂಗಳದಲ್ಲಿ, ಹಿತ್ತಲುಗಳಲ್ಲಿ ಅಥವಾ ಊರಿನ ಖಾಲಿ ಜಾಗಗಳಲ್ಲಿ ಬೆಳೆಸಬಹುದಾಗಿದೆ. ಜಾಗದ ಲಭ್ಯತೆಗನುಗುಣವಾಗಿ ವಿವಿಧ ಔಷಧಿ ಸಸ್ಯಗಳನ್ನು ಬೆಳೆಸಬಹುದಾಗಿದೆ. ಮರ, ಗಿಡ, ಬಳ್ಳಿಗಳನ್ನು ಯಾವ ಯಾವ ಜಾಗದಲ್ಲಿ ಹಾಕಬೇಕು ಎನ್ನುವ ಬಗ್ಗೆ ವಿವರಣೆಯನ್ನು ನೀಡಲಾಗಿದೆ. ಮನೆಯಂಗಳದಲ್ಲಿ ಬೆಳೆಸುವ ಔಷಧಿ ಸಸ್ಯಗಳನ್ನು ನಿರ್ಧರಿಸುವಾಗ ಈ ಕೆಳಕಂಡ ತತ್ವಗಳನ್ನು ಅಳವಡಿಸಿಕೊಳ್ಳಬೇಕು.

- ಔಷಧಿ ಸಸ್ಯವು ಚಿಕಿತ್ಸೆಯಲ್ಲಿ ಪರಿಣಾಮಕಾರಿಯಾಗಿರಬೇಕು.
- ಔಷಧಿ ಗಿಡಗಳನ್ನು ಸುಲಭವಾಗಿ ಪುನರುತ್ಪತ್ತಿ ಮಾಡಿ ಬೆಳೆಸುವಂತಿರಬೇಕು.
- ಔಷಧಿಯನ್ನು ಸಾಮಾನ್ಯ ಜನರೂ ಕೂಡ ಅತ್ಯಂತ ಸುಲಭವಾಗಿ ತಯಾರಿಸಿಕೊಳ್ಳುವಂತಿರಬೇಕು.
- ಔಷಧಿ ಸಸುಗಳು ಔಷಧಿ ಜೊತೆಗೆ ಪೌಷ್ಠಿಕಾಂಶಗಳನ್ನು ಹೊಂದಿರಬೇಕು.
- ನೈಸರ್ಗಿಕ ಔಷಧಿ ಸಸ್ಯಗಳ ಮೇಲೆ ವಿನಾಶಕಾರಿ ಒತ್ತಡ ಬೀಳದಂತಿರಬೇಕು.
- ಚಿಕಿತ್ಸೆಯಿಂದ ಅಡ್ಡ ಪರಿಣಾಮಗಳುಂಟಾಗದಂತಿರಬೇಕು.

ಔಷಧಿ ವನವನ್ನು ನಿರ್ಮಿಸುವಾಗ ಸೌಂದರ್ಯಪೂರ್ಣವಾಗಿ ಕಾಣುವಂತೆ ನಿರ್ಮಾಣ ಮಾಡಬಹುದು.

## ಮನೆ ಮದ್ದಿಗಾಗಿ–ಮನೆಯಂಗಳದಲ್ಲಿ ಕೈತೋಟದಲ್ಲಿ ಬೆಳೆಸಬಹುದಾದ ಔಷಧಿ ಸಸ್ಯಗಳು

### ಪೊದೆಗಳು (Shrubs)

| | | | | |
|---|---|---|---|---|
| ಗೋರಂಟಿ | ನಿಂಬೆ | ಬಾಳೆ | ವಾಯುವಿಳಂಗ | ಕೊಡಸಿಗೆ |
| ಗಜ್ಜುಗ | ತಂಗಡಿ | ದಾಸವಾಳ | ಲಕ್ಕಿಸೊಪ್ಪು | |

### ಬಳ್ಳಿಗಳು (Climbers)

| | | | | |
|---|---|---|---|---|
| ಅಮೃತಬಳ್ಳಿ | ಈಶ್ವರಿಬಳ್ಳಿ | ಕಾಳುಮೆಣಸು | ದಾಗಡಿಬಳ್ಳಿ | ಮುಟ್ಟಿದರೆ ಮುನಿ |
| ವೀಳ್ಯದೆಲೆ | ಸೊಗದೇಬೇರು | ಹಾಗಲ | ಹಲವುಮಕ್ಕಳಬಳ್ಳಿ | ಗುಲಗಂಜಿ |

## ಗಿಡಗಳು(Herbs)

| | | | | |
|---|---|---|---|---|
| ಆಡುಸೋಗೆ | ಅರಿಸಿನ | ಅಣ್ಣೆಸೊಪ್ಪು | | ಅಶ್ವಗಂಧ |
| ಓಮ | ಉತ್ತರಾಣಿ | ಉಮ್ಮತ್ತಿ | ಎಳ್ಳು | ಎಕ್ಕ |
| ಒಂದೆಲಗ | ಕುಪ್ಪೆಗಿಡ | ಗರಿಕೆ | ಗರುಗ | ತುಳಸಿ |
| ಚಿತ್ರಮೂಲ | ತುಂಬೆ | ದತ್ತೂರ | ನೆಲಗುಳ್ಳ | ನೆಗ್ಗಿಲುಮುಳ್ಳು |
| ಪುರುಷರತ್ನ | ಬಜೆ | ಬಸಳೆ | ಲಾವಂಚ | ಲೋಳೆಸರ |
| ಶುಂಠಿ | ಶ್ರೀಮುದ್ರೆ | ಹಿಪ್ಪಲಿ | ಹೊನಗೊನೆ | ಹೊಮ್ಮುಗುಳಿ |

## ಮರಗಳು(Trees)

| | | | | |
|---|---|---|---|---|
| ಅಳಲೆ | ಆಲ | ಅಗಸೆ | ಅರಳಿ | ಅಶೋಕ |
| ಅತ್ತಿ | ಅಂಟವಾಳ | ಕಕ್ಕೆ | ಜಾಲಿ | ತಾರೆ |
| ಬೆಟ್ಟನೆಲ್ಲಿ | ಬೇವು | ಬಿಲ್ವ | ಬೇಲ | ಮಾವು |
| ಮತ್ತಿ | ಮುತ್ತುಗ | ಹುಣಸೆ | ಹೊಂಗೆ | ಶ್ರೀಗಂಧ |
| ದಾಳಿಂಬೆ | ನುಗ್ಗೆ | ಸೀತಾಫಲ | ಹರಳು | ಪಪ್ಪಾಯಿ |
| ಪಾರಿಜಾತ | ವಾತನಾರಾಯಿಣಿ | | | |

## ವಿವಿಧ ಔಷಧಿ ಸಸ್ಯಗಳನ್ನು ಬೆಳೆಸುವ ಜಾಗಗಳು

ವಿವಿಧ ಔಷಧಿ ಸಸ್ಯಗಳನ್ನು ಅವುಗಳ ಬಾಹ್ಯ ರೂಪ, ಗುಣಲಕ್ಷಣಗಳು ಹಾಗೂ ಅವುಗಳ ನೀರಿನ ಅಗತ್ಯತೆಗನುಗುಣವಾಗಿ ಕೆಳಕಂಡ ಸ್ಥಳಗಳಲ್ಲಿ ಬೆಳೆಸುವುದು ಸೂಕ್ತ.

1. ಬೇಲಿಗಳಾಗಿ – ಆಡುಸೋಗೆ, ಕರಿಬೇವು, ಲೋಳೆಸರ, ಗೋರಂಟಿ, ದಾಸವಾಳ
2. ಬೇಲಿಗಳಲ್ಲಿ – ಅಗಸೆ, ವಾತನಾರಾಯಣಿ, ಬೇವು, ಬೆಟ್ಟನೆಲ್ಲಿ, ಎಕ್ಕ
3. ಬೇಲಿಗಳಲ್ಲಿ ಹಬ್ಬಿಸುವುದು – ಅಮೃತಬಳ್ಳಿ, ಮಧುನಾಶಿನಿ, ಮುಂಗರಬಳ್ಳಿ, ಬಸಳೆ, ಶಂಖಪುಷ್ಪಿ
4. ಬೇಲಿಗಳ ಪಕ್ಕದಲ್ಲಿ ಸಾಲಾಗಿ – ಚಕ್ರಮುನಿ
5. ನೆರಳಿನಲ್ಲಿ – ಹಿಪ್ಪಲಿ, ಶುಂಠಿ, ಅರಿಶಿಣ, ಕುಪ್ಪಿಗಿಡ
6. ನೀರು ನಿಲ್ಲುವ ಕಡೆ – ಬಜೆ, ಬಾಳೆ, ಒಂದೆಲಗ, ನೀರುಬ್ರಾಹ್ಮಿ

7. ಹೆಚ್ಚಿಗೆ ನೀರು ಬೇಕಾದ ಸಸ್ಯಗಳು - ರಾಸ್ನಾ, ಲಾವಂಚ, ಬಾವಂಚಿ, ಶುಂಠಿ, ಅರಿಸಿಣ, ಬಸಳೆ, ಕೊಮ್ಮೆಸೊಪ್ಪು, ಭೃಂರಾಜ, ಹೊಮ್ಮೊಗ್ಗು, ಹೊನಗೊನೆ.

8. ಅತಿಸಣ್ಣ ಭೂಮಿಯಲ್ಲಿ ಬೆಳೆಯುವ ಸಸ್ಯಗಳು (ಅತಿ ಕಡಿಮೆ ನೀರು ಬೇಕಾದ ಸಸ್ಯಗಳು) : ಲೋಳೆಸರ, ಎಕ್ಕ, ಅಣ್ಣೆಸೊಪ್ಪು.

9. ಕುಂಡಗಳಲ್ಲಿ ಬೆಳೆಸಬಹುದಾದ ಔಷಧಿ ಸಸ್ಯಗಳು: ಅಮೃತಬಳ್ಳಿ, ಅರಿಸಿಣ, ಅಶ್ವಗಂಧ, ಒಂದೆಲಗ, ಕುಪ್ಪಗಿಡ, ತುಳಸಿ, ತುಂಬೆಗಿಡ, ಭೃಂಗರಾಜ, ಗರಿಕೆ, ನಾಗದಾಳಿ, ದೊಡ್ಡಪತ್ರೆ, ನೆಲಬೇವು, ನೆಲನೆಲ್ಲಿ, ಪುದೀನ, ಬಸಳೆ ಬಜೆ, ಮೆಂತ್ಯ, ಮಧುನಾಶಿನಿ, ರಾಸ್ನ, ಮಂಗರವಳ್ಳಿ, ಲಾವಂಚ, ಲೋಳೆಸರ, ಶುಂಠಿ,ಶಂಖಪುಷ್ಪಿ, ಶ್ರೀಮುದ್ರೆ, ಹಿಪ್ಪಲಿ, ಹೊಮ್ಮೊಗ್ಗು, ಹೊನಗೊನೆ.

10. ಬೇರೆ ಸಸಿಗಳನ್ನು ಸೂಕ್ತವೆನಿಸಿದ ಸ್ಥಳಗಳಲ್ಲಿ ಬೆಳೆಸಿಕೊಳ್ಳಬಹುದು.

## ಕರ್ನಾಟಕ ಅರಣ್ಯ ಇಲಾಖೆಯ ಕೊಡುಗೆ

ಕರ್ನಾಟಕ ಅರಣ್ಯ ಇಲಾಖೆಯು ಔಷಧಿ ಸಸ್ಯಗಳ ಸಂರಕ್ಷಣೆ ಹಾಗೂ ಅಭಿವೃದ್ಧಿಯಲ್ಲಿ ಮಹತ್ತರ ಕೊಡುಗೆ ನೀಡುತ್ತಿದೆ. ಈ ನಿಟ್ಟಿನಲ್ಲಿ ಕೆಳಕಂಡ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ:

1. ಔಷಧಿ ಸಸ್ಯಗಳ ಆವಾಸ ಸ್ಥಾನಗಳಾದ ವಿವಿಧ ರೀತಿಯ ಅರಣ್ಯಗಳ ಸಂರಕ್ಷಣೆ ಮತ್ತು ಅಭಿವೃದ್ಧಿ.

2. ವಿವಿಧ ರೀತಿಯ ಅರಣ್ಯ ಪ್ರದೇಶವನ್ನು ಆಯ್ಕೆಮಾಡಿ ಆ ಪ್ರದೇಶಗಳಲ್ಲೇ ಬೆಳೆಯುವ ಔಷಧಿ ಸಸ್ಯಗಳನ್ನು ಗುರುತಿಸಿ ಸಂರಕ್ಷಣೆ ಮಾಡಲು ಕ್ರಮ ಕೈಗೊಂಡಿರುವುದು.

3. ನಶಿಸಿಹೋಗಿರುವ ಹಾಗೂ ನಶಿಸುತ್ತಿರುವ ಅರಣ್ಯ ಪ್ರದೇಶಗಳಲ್ಲಿ ಔಷಧಿ ಸಸ್ಯಗಳನ್ನು ಬೆಳೆಸಿ ಅಭಿವೃದ್ಧಿ ಪಡಿಸುತ್ತಿರುವುದು.

4. ಔಷಧಿ ವನಗಳು ಮತ್ತು ಔಷಧಿ ಸಸ್ಯಗಳ ನರ್ಸರಿಗಳನ್ನು ನಿರ್ಮಿಸಿರುವುದು. ಉದಾ: ಬಕ್ಕಳ, ಧನ್ವಂತರಿವನ (ಬೆಂಗಳೂರು, ಕೈವಾರ, ರಾಮನಗರ,

ಅಶ್ವಿನಿವನ ಶಿವಮೊಗ್ಗ: ಸಂಜೀವಿನಿ ವನ ಚಿಕ್ಕಮಗಳೂರು; ಅಮೃತ ಸಂಜೀವಿನ ವನ ಹುಬ್ಬಳ್ಳಿ; ಬಿಳಿಗಿರಿ ರಂಗನಬೆಟ್ಟ; ಬೀದರ್; ದೇವರಾಯನದುರ್ಗ; ತುಮಕೂರು)

5. ವಿವಿಧ ಸ್ಥಳಗಳಲ್ಲಿ ಪವಿತ್ರವನಗಳನ್ನು ನಿರ್ಮಿಸಿರುವುದು, ಔಷಧಿ ಸಸ್ಯಗಳನ್ನು ಬೆಳೆಸಿ ಕಡಿಮೆ ದರದಲ್ಲಿ ನೀಡುತ್ತಿರುವುದು.

6. ಔಷಧಿ ಸಸ್ಯಗಳ ಬಗ್ಗೆ ಮಾಹಿತಿ ನೀಡುತ್ತಿರುವುದು ಹಾಗೂ ಈ ಬಗ್ಗೆ ಪ್ರಕಟಣೆಗಳನ್ನು ಹೊರತಂದಿರುವುದು.

7. ಔಷಧಿ ಸಸ್ಯಗಳ ಸಂರಕ್ಷಣೆ, ಅಭಿವೃದ್ಧಿ ಹಾಗೂ ಈ ಸಂಬಂಧವಾಗಿ ತರಬೇತಿ ನೀಡುತ್ತಿರುವುದು.

8. ಔಷಧಿ ಸಸ್ಯಗಳ ಬಗ್ಗೆ ಸಂಶೋಧನೆ ನಡೆಸುತ್ತಿರುವುದು.

9. ಔಷಧಿ ಸಸ್ಯಗಳ ಬಗ್ಗೆ ಕಾರ್ಯಾಗಾರಗಳು, ವಿಚಾರ ಸಂಕಿರಣ, ಸಮಾವೇಶ, ಚರ್ಚೆ ಮತ್ತು ಸಮ್ಮೇಳನಗಳನ್ನು ಸಂಘಟಿಸುತ್ತಿರುವುದು.

10. ಈ ಎಲ್ಲಾ ವಿಷಯಗಳ ನಿರ್ವಹಣೆಗೆ ಪ್ರತ್ಯೇಕ ಔಷಧಿ ಸಸ್ಯಗಳ ಮಂಡಳಿಯನ್ನು ಸ್ಥಾಪಿಸಿ ನಿರ್ವಹಿಸುತ್ತಿರುವುದು.

* * * *

# ಸಮುದಾಯದ ಸಹಭಾಗಿತ್ವ, ಜಂಟಿ ಅರಣ್ಯ ಯೋಜನೆ ಮತ್ತು ಸಂಘ ಸಂಸ್ಥೆಗಳ ಪಾತ್ರ

ಪಾರಂಪರಿಕ ಔಷಧಿ ಪದ್ಧತಿಯನ್ನು ಪುನಶ್ಚೇತನಗೊಳಿಸುವಲ್ಲಿ ಸಮುದಾಯದ ಭಾಗವಹಿಸುವಿಕೆ ಅತ್ಯಂತ ಮಹತ್ವದ್ದಾಗಿದೆ. ಈಗಿನ ಸರ್ಕಾರದ ಯೋಜನೆಗಳಲ್ಲಿ ಈಗಾಗಲೇ ಗ್ರಾಮಗಳಲ್ಲಿ ಗ್ರಾಮ ಅರಣ್ಯ ಸಮಿತಿಗಳು, ಸ್ತ್ರೀ ಶಕ್ತಿ ಸಂಘಗಳು ಹಾಗೂ ಸ್ವಶಕ್ತಿ ಸಂಘಗಳು, ಮಹಿಳಾ ಸಂಘಗಳು, ಯುವಕ ಸಂಘಗಳು, ಇನ್ನಿತರ ವಿವಿಧ ಸಂಘ ಸಂಸ್ಥೆಗಳು ಪಾಲ್ಗೊಂಡಿವೆ. ಈ ಸಂಸ್ಥೆಗಳ ಮುಖಾಂತರ ಔಷಧಿ ಸಸ್ಯಗಳ ಸಂರಕ್ಷಣೆ, ಅಭಿವೃದ್ಧಿ ಮತ್ತು ಅವುಗಳ ನಿರಂತರ ಉಪಯೋಗವನ್ನು ಜನತೆಗೆ ಪರಿಣಾಮಕಾರಿಯಾಗಿ ಮುಟ್ಟಿಸಲು ಸಾಧ್ಯವಾಗುತ್ತದೆ.

## ಜಂಟಿ ಅರಣ್ಯ ಯೋಜನೆ:

ಅರಣ್ಯ ರಕ್ಷಣೆ ಮತ್ತು ಅಭಿವೃದ್ಧಿಯಲ್ಲಿ ಜನತೆಯನ್ನು ತೊಡಗಿಸಿಕೊಂಡು ಅರಣ್ಯ ನಿರ್ವಹಣೆಯನ್ನು ಜನತೆ ಮತ್ತು ಸರ್ಕಾರ ಜೊತೆಯಾಗಿ ಕೂಡಿಕೊಂಡು ಮಾಡುವುದಕ್ಕೆ ಜಂಟಿ ಅರಣ್ಯ ಯೋಜನೆ ಎನ್ನುತ್ತೇವೆ. ಕರ್ನಾಟಕ ಸರ್ಕಾರವು ಈ ಜಂಟಿ ಅರಣ್ಯ ಯೋಜನೆಯನ್ನು 1991ರಿಂದ ಜಾರಿಗೆ ತಂದಿರುತ್ತದೆ. ಈ ಯೋಜನೆಯನ್ನು ಗ್ರಾಮ ಅರಣ್ಯ ಸಮಿತಿಗಳು, ಸಂಘಸಂಸ್ಥೆಗಳು ಮತ್ತು ಸ್ವಸಹಾಯ ಸಂಘಗಳ ಮೂಲಕ ನಿರ್ವಹಿಸಬಹುದು. ಅರಣ್ಯ ರಕ್ಷೆ ಮತ್ತು ಅಭಿವೃದ್ಧಿಯಲ್ಲಿ ಸ್ಥಳೀಯ ಜನರು ಪಾಲ್ಗೊಂಡು ಅರಣ್ಯ ಉತ್ಪನ್ನದಲ್ಲಿ ಪಾಲು ಪಡೆಯಬಹುದಾಗಿದೆ. ಅರಣ್ಯ ನಿರ್ವಹಣೆಯಲ್ಲಿ ಸ್ಥಳೀಯಯ ಜನರೂ ಸಹ ಭಾಗವಹಿಸುವುದರಿಂದ ಕಾಡು ತಮ್ಮದೆಂದು ಜನರಲ್ಲಿ ಭಾವನೆ ಮೂಡುತ್ತದೆ. ಇದರಿಂದ ಅರಣ್ಯ ಪ್ರದೇಶದ ರಕ್ಷಣೆ ಮತ್ತು ಅಭಿವೃದ್ಧಿ ಉತ್ತಮವಾಗುವುದಲ್ಲದೆ ಜನರ ಜೀವ ಮಟ್ಟವೂ ಸಹ ಸುಧಾರಿಸುತ್ತದೆ.

## ಗ್ರಾಮ ಅರಣ್ಯ ಸಮಿತಿಗಳು:

ಪ್ರತಿ ಗ್ರಾಮಕ್ಕೆ ಒಂದು ಗ್ರಾಮ ಅರಣ್ಯ ಸಮಿತಿಯನ್ನು ಮಾಡಿಕೊಳ್ಳಬಹುದು. ಆಯಾ ಗ್ರಾಮದ ಪ್ರತಿ ಮನಬೆಯಿಂದ ಗಂಡ ಮತ್ತು ಹೆಂಡತಿ ಸೇರಿದಂತೆ

ಇಬ್ಬರು ಸದಸ್ಯರಿರುವರು. ಈ ರೀತಿ ಗ್ರಾಮದಲ್ಲಿರುವ ಎಲ್ಲಾ ಮನೆಯವರು ಸದಸ್ಯರಾಗಿ ತಮ್ಮದೇ ಆದ ಗ್ರಾಮ ಅರಣ್ಯ ಸಮಿತಿಯನ್ನು ರಚಿಸಿಕೊಳ್ಳುವರು. ಆ ಭಾಗದಲ್ಲಿ ಕೆಲಸ ಮಾಡುತ್ತಿರುವ ಸರ್ಕಾರದ ವಿವಿಧ ಇಲಾಖೆಯ ಅಧಿಕಾರಿಗಳು, ಸಿಬ್ಬಂದಿಗಳು, ಗ್ರಾಮ ಅರಣ್ಯ ಸಮಿತಿಯ ಪದನಿಮಿತ್ತ ಸದಸ್ಯರಾಗಿರುತ್ತಾರೆ.

ಪ್ರತಿ ಗ್ರಾಮ ಅರಣ್ಯ ಸಮಿತಿಯು 15ಜನ ಸದಸ್ಯರ ಕಾರ್ಯಕಾರಿಣಿ ಸಮಿತಿಯನ್ನು ಆಯ್ಕೆ ಮಾಡಿಕೊಳ್ಳಬೇಕು. ಇದರಲ್ಲಿ ಒಬ್ಬರು ಅಧ್ಯಕ್ಷರು ಮತ್ತು 11 ಜನ ಚುನಾಯಿತ ಸದಸ್ಯರಿರುತ್ತಾರೆ. ಆ ಭಾಗದ ವನಪಾಲಕ, ಗ್ರಾಮ ಲೆಕ್ಕಿಗ, ಗ್ರಾಮ ಪಂಚಾಯ್ತಿ ಕಾರ್ಯದರ್ಶಿ, ಪದನಿಮಿತ್ತ ಕಾರ್ಯಕಾರಿಣಿ ಸಮಿತಿ ಸದಸ್ಯರಾಗಿರುತ್ತಾರೆ. ಸ್ಥಳೀಯ ಸಂಘ ಸಂಸ್ಥೆಗಳಿಂದಒಬ್ಬ ಪ್ರತಿನಿಧಿಯನ್ನು ಉಪ ಅರಣ ಒಬ್ಬ ಪ್ರತಿನಿಧಿಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಕಾರ್ಯಕಾರಿಣಿ ಸಮಿತಿಗೆ ನೇಮಿಸುವರು.

**ಗ್ರಾಮ ಅರಣ್ಯ ಸಮಿತಿಯ ಕಾರ್ಯಗಳು:**

1. ಗ್ರಾಮ ಅರಣ್ಯ ರಕ್ಷಣೆ ಮತ್ತು ಅಭಿವೃದ್ಧಿ.
2. ಅರಣ್ಯಾಭಿವೃದ್ಧಿ ಮತ್ತು ಅರಣ್ಯ ರಕ್ಷಣೆ ಕಾರ್ಯದಲ್ಲಿ ಅರಣ್ಯ ಇಲಾಖೆಗೆ ಸಹಕಾರ.
3. ಗ್ರಾಮಕ್ಕೆ ಉಪಯುಕ್ತವಾದ ಗಿಡ ಮರಗಳನ್ನು ನೆಟ್ಟು ಬೆಳೆಸುವುದು.
4. ಅರಣ್ಯ ಒತ್ತುವರಿ ತಡೆಗಟ್ಟುವುದು.
5. ಅರಣ್ಯಕ್ಕೆ ಬೆಂಕಿ ಬೀಳದಂತೆ ತಡೆಯುವುದು.
6. ಅಕ್ರಮವಾಗಿ ಮರ ಕಡಿಯುವುದನ್ನು ತಪ್ಪಿಸುವುದು.
7. ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯನ್ನು ತಡೆಗಟ್ಟುವುದು.
8. ವನ್ಯ ಪ್ರಾಣಿಗಳ ಬೇಟೆಯನ್ನು ತಡೆಗಟ್ಟುವುದು.
9. ಅರಣ್ಯ ಉತ್ಪನ್ನಗಳಾದ ಸೌದ, ಹಣ್ಣು, ಸೊಪ್ಪು, ರೆಂಬೆ, ಕೊಂಬೆಗಳನ್ನು ಸದಸ್ಯರಿಗೆ ಹಂಚುವುದು.
10. ಅರಣ್ಯ ಸಂಪನ್ಮೂಲಗಳನ್ನು ಅಭಿವೃದ್ಧಿ ಪಡಿಸುವುದು.
11. ಜಂಟಿ ಅರಣ್ಯ ಯೋಜನೆಯನ್ನು ತಯಾರಿಸಿ ಅನುಷ್ಠಾನಗೊಳಿಸುವುದು.

**ಸಂಘ ಸಂಸ್ಥೆಗಳ ಪಾತ್ರ :**

ಸಂಘ ಸಂಸ್ಥೆಗಳು ಸಹ ಜಂಟಿ ಯೋಜನೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಬಹುದು. ಸ್ತ್ರೀಶಕ್ತಿ ಸಂಘಗಳು, ಸಣ್ಣ ಉಳಿತಾಯ ಗುಂಪುಗಳು, ಯುವಕ ಮತ್ತು ಯುವತಿ ಮಂಡಳಿಗಳು ಹಾಗೂ ಇನ್ನಿತರ ಸ್ವಸಹಾಯ ಗುಂಪುಗಳು, ಜಂಟಿ ಅರಣ್ಯ ಯೋಜನೆಯಲ್ಲಿ ಭಾಗವಹಿಸಿ ಅರಣ್ಯ ಸಂರಕ್ಷಣೆ ಮತ್ತು ಅಭಿವೃದ್ಧಿಯಲ್ಲಿ ಪಾಲ್ಗೊಳ್ಳಬಹುದು. ಈ ಕಾರ್ಯಕ್ರಮದಲ್ಲಿ ಪಾಲ್ಗೊಂಡು, ಬಂದ ಉತ್ಪನ್ನದಲ್ಲಿ ಪಾಲನ್ನೂ ಸಹ ಪಡೆಯಬಹುದು. ಹೆಚ್ಚಿನ ಮಾಹಿತಿಗಾಗಿ ಸ್ಥಳೀಯ ಅರಣ್ಯ ಅಧಿಕಾರಿ ಅಥವಾ ಸಿಬ್ಬಂದಿಯನ್ನು ಸಂಪರ್ಕಿಸುವುದು.

* * * * * *

# ಔಷಧಿ ಗಿಡಗಳನ್ನು ಬೆಳೆಸುವ ವಿಧಾನ

ಸಾಮಾನ್ಯವಾಗಿ ಔಷಧಿ ಸಸ್ಯಗಳನ್ನು ಕಾಡಿನಿಂದ ಅಥವಾ ನೈಸರ್ಗಿಕವಾಗಿ ಬೆಳೆದಿರುವ ಇನ್ನಿತರ ಪ್ರದೇಶಗಳಿಂದ ತಂದು ಬೆಳೆಸುವುದು ವಾಡಿಕೆ. ಇದರಿಂದ ಅಮೂಲ್ಯವಾದ ನೈಸರ್ಗಿಕ ಸಸ್ಯಸಂಪತ್ತು ನಶಿಸುತ್ತದೆ. ಮನೆಮದ್ದು ಮಾಡುವಾಗ ತಕ್ಷಣವೇ ಉಪಚಾರದ ಅವಶ್ಯಕತೆ ಇದ್ದು, ಔಷಧಿ ತಯಾರಿಸಲು ಔಷಧಿ ಸಸ್ಯಗಳು ತಕ್ಷಣವೇ ಲಭ್ಯವಾಗಬೇಕು. ವಿವಿಧ ಗಿಡಗಳು ಬೇರೆ ಬೇರೆ ಪ್ರದೇಶಗಳಲ್ಲಿ ಬೆಳೆಯುವುದರಿಂದ ಅವುಗಳನ್ನು ಹುಡುಕಿ ತರುವುದಕ್ಕೆ ಹೆಚ್ಚಿನ ಸಮಯ ತಗಲುತ್ತದೆ. ಹಾಗೂ ಬೇಕಾದ ಹಲವು ಸಸ್ಯಗಳು ಆ ಪ್ರದೇಶದಲ್ಲಿ ಲಭ್ಯವಿರುವುದಿಲ್ಲ. ಆದ್ದರಿಂದ ಔಷಧಿ ಸಸ್ಯಗಳನ್ನು ಮನೆ ಅಂಗಳದಲ್ಲಿ, ಹಿತ್ತಲಿನಲ್ಲಿ, ಕೈತೋಟಗಳಲ್ಲಿ, ಬೇಲಿ, ಬದು, ಕುಂಡ ಹಾಗೂ ಇನ್ನಿತರ ಪ್ರದೇಶಗಳಲ್ಲಿ ಬೆಳೆಸುವುದು ಸೂಕ್ತ. ಇದರಿಂದ ನಮಗೆ ಬೇಕಾದ ತಾಜಾ ಮೂಲಿಕೆಗಳು ಲಭ್ಯವಾಗುವುದರಿಂದ ಬೇಗ ಔಷಧವನ್ನು ತಯಾರಿಸಬಹುದು. ತಾಜಾ ಔಷಧ ಅತ್ಯಂತ ಪರಿಣಾಮಕಾರಿ. ಔಷಧಿ ಸಸ್ಯಗಳನ್ನು ಬೆಳೆಸಿ ಬಳಸುವುದರಿಂದ ಔಷಧಿ ಸಸ್ಯಗಳ ಸಂರಕ್ಷಣೆಯೂ ಆಗುತ್ತದೆ ಹಾಗೂ ನಮಗೂ, ನಮ್ಮ ಮಕ್ಕಳಿಗೂ, ತಲತಲಾಂತರವಾಗಿ ಮುಂದಿನ ಪೀಳಿಗೆಗೂ ಔಷಧಿ ಸಸ್ಯಗಳು ಲಭ್ಯವಾಗುತ್ತವೆ.

**ಪ್ರಾಥಮಿಕ ಆರೋಗ್ಯ ರಕ್ಷಣೆಗೆ ಸುಲಭವಾಗಿ ಬೆಳೆಸಿಕೊಳ್ಳಬಹುದಾದ ಔಷಧಿ ಸಸ್ಯಗಳ ಬಗ್ಗೆ ಮಾಹಿತಿ ಮತ್ತು ಸಸ್ಯ ಕ್ಷೇತ್ರ (ನರ್ಸರಿ) ಮಾಡಲು ಬೇಕಾದ ಅತ್ಯವಶ್ಯಕವಾದ ಸೂಚನೆಗಳು:**

- ನರ್ಸರಿಗಳಲ್ಲಿ ಬೀಜಗಳನ್ನು ಬಿತ್ತಲು ಮಾರ್ಚ್‌ನಿಂದ ಜೂನ್‌ವರೆಗೆ ಸೂಕ್ತ ಕಾಲ.
- ಬೆಡ್‌ಗಳಲ್ಲಿ ಮತ್ತು ಕ್ಷೇತ್ರಗಳಲ್ಲಿ ನಾಟಿ ಮಾಡಲು ಜೂನ್‌ನಿಂದ ಆಗಸ್ಟ್ ತಿಂಗಳು ಸೂಕ್ತ ಸಮಯ.
- ಕಾಂಡದ/ಬೇರಿನ ತುಂಡುಗಳು ಅಥವಾ ಇಲುಕುಗಳನ್ನು ಸಸಿ ಬೆಳೆಸಲು ಉಪಯೋಗಿಸುವಾಗ ಅವುಗಳನ್ನು 1ರಿಂದ 2ದಿನಗಳೊಳಗಾಗಿ ಬ್ಯಾಗ್‌ಗಳಲ್ಲಿ ಹಾಕಬೇಕು.

- ಕಾಂಡ/ಬೇರಿನ ರುಂಡುಗಳಿಂದ (ಕಟಿಂಗ್ಸ್) ಸಸತಿಗಳನ್ನು ಮಾಡಬೇಕಾದಾಗ ತಕ್ಷಣ ಬೇರುಬಿಡಲು **IBA** ಪುಡಿಯ ಪೇಸ್ಟ್ ಅಥವಾ ದ್ರಾವಣದಲ್ಲಿ ಅದ್ದಿ ನಾಟಿ ಮಾಡಬೇಕು. "ಹೈಡ್ರೋಪಿಟ್" ವಿಧಾನದ ಮೂಲಕ ಅಥವಾ **mistchamber** ವಿಧಾನದಲ್ಲಾದರೆ ಎಲ್ಲಾ ತುಂಡುಗಳು ಚಿಗುರು ಒಡೆದು ಹೆಚ್ಚು ಸಸಿಗಳು ಲಭ್ಯವಾಗುತ್ತವೆ.
- ಮಾಗಿದ ಹಣ್ಣುಗಳಿಂದ ಬೀಜಗಳನ್ನು ಸಂಗ್ರಹಿಸಿ, ಬೀಜಗಳು ತಾಜಾ ಇರುವಾಗಲೇ ಅವುಗಳನ್ನು ಮಡಿಗಳಿಗೆ/ಚೀಲಗಳಿಗೆ ಹಾಕುವುದು.
- ಬಹುತೇಕ ಔಷಧಿ ಸಸ್ಯಗಳ ತಾಜಾ ಬೀಜಗಳನ್ನೇ ಬಿತ್ತುವುದರಿಂದ ಅವುಗಳು ಮೊಳಕೆ ಒಡೆಯುವ ಪ್ರಮಾಣ ಹೆಚ್ಚಾಗುತ್ತದೆ.
- ಕುದಿಸಿ ಕೆಳಗಿಳಿಸಿದ ಬಿಸಿನೀರಿನಲ್ಲಿ ಗಟ್ಟಿಯಾಗಿರುವ ಬೀಜಕವಚ ಉಳ್ಳ ಸಸ್ಯಗಳ ಬೀಜಗಳನ್ನು ಒಂದು ರಾತ್ರಿ ನೆನಸಿ, ನಂತರ ಮಡಿಗಳಲ್ಲಿ/ಬ್ಯಾಗ್‌ಗಳಲ್ಲಿ ಹಾಕಬೇಕು. (ಉದಾ: ಅಳಲೆಕಾಯಿ, ಬೇವು, ಇತ್ಯಾದಿ)
- ಸಸಿಗಳನ್ನು ಬೆಳೆಸುವ ಮಡಿಗಳು/ಬ್ಯಾಗ್‌ಗಳಲ್ಲಿ ಜೌಗು ಆಗದಂತೆ ನೋಡಿಕೊಳ್ಳಬೇಕು.
- ಬೆಳಿಗ್ಗೆ ಮತ್ತು ಸಾಯಂಕಾಲ ಸಸ್ಯಗಳಿಗೆ ಹಿತ ಮಿತವಾಗಿ ನೀರನ್ನು ಹಾಕಬೇಕು.
- ಹೆಚ್ಚು ನೀರು ಅಗತ್ಯ ಇರುವ ಸಸ್ಯಗಳು: ಬಜೆ, ನೀರುಬ್ರಾಹ್ಮಿ, ದೊಡ್ಡಪತ್ರೆ, ಒಂದೆಲಗ, ಶುಂಠಿ, ಹಿಪ್ಪಲಿ, ಅರಿಸಿಣ
- ಕಡಿಮೆ ನೀರು ಅಗತ್ಯ ಇರುವ ಸಸ್ಯಗಳು: ಲಾವಂಚ, ಲೋಳೆಸರ, ಮಂಗರಬಳ್ಳಿ, ಗಜ್ಜುಗ, ಇತ್ಯಾದಿ.

**ಸಸ್ಯಕ್ಷೇತ್ರ ನಿರ್ಮಾಣ/ಮಡಿಗಳು:**

ಮಡಿಗಳನ್ನು ಪೂರ್ವದಿಂದ ಪಶ್ಚಿಮ ದಿಕ್ಕಿಗೆ ಹೋದಂತೆ ನಿರ್ಮಿಸುವುದು ಸೂಕ್ತ. ಏಕೆಂದರೆ ಬಿಸಿಲು ಹೆಚ್ಚಾದರೆ ನೆರಳನ್ನು ಒದಗಿಸುವುದು ಸುಲಭ. ಪ್ರತಿ ಮಡಿಯು ಸುಮಾರು 4ರಿಂದ 5ಅಡಿ ಅಗಲ ಮತ್ತು 20ರಿಂದ 25ಅಡಿ ಉದ್ದವಿರಬೇಕು. ಇದರಿಂದ ನಾಟಿ ಮಾಡಲು, ನೀರುಣಿಸಲು, ನೆರಳು ನಿರ್ಮಿಸಲು, ಸಸಿಗಳ ಬಗ್ಗೆ ನಿಗಾವಹಿಸಲು ಅನುಕೂಲ. ಆಯಾ ಪ್ರದೇಶದಲ್ಲಿ ಬೀಳುವ ಮಳೆಯ ಪ್ರಮಾಣದ ಆಧಾರದ ಮೇಲೆ ವಿವಿಧ ರೀತಿಯ ಮಡಿಗಳನ್ನು ನಿರ್ಮಿಸಬೇಕು. ಅವುಗಳೆಂದರೆ:

* ತಗ್ಗುಮಡಿ–ಮಳೆ ಬೀಳುವ ಮತ್ತು ಒಣ ಪ್ರದೇಶಗಳಲ್ಲಿ.

* ಸಮತಟ್ಟಾದ ಮಡಿ–ಎರಡೂ ರೀತಿಯ ಪ್ರದೇಶಗಳಲ್ಲಿ ಅಳವಡಿಸಿಕೊಳ್ಳಬಹುದು.

* ಏರುಮಡಿ–ಜೌಗು ಪ್ರದೇಶಗಳಲ್ಲಿ ಮತ್ತು ಹೆಚ್ಚು ಮಳೆ ಬೀಳುವ ಪ್ರದೇಶಗಳಲ್ಲಿ

**ಬೀಜೋಪಚಾರ:**

ದನ, ಕುರಿ, ಆಡು ಮತ್ತು ಪಕ್ಷಿಗಳು ಹಣ್ಣುಗಳನ್ನು ತಿಂದು ಮಲದಲ್ಲಿ ಹೊರಚೆಲ್ಲಿದ ಬೀಜಗಳು ಎಷ್ಟೋಕಡೆ ನೆಲದಲ್ಲಿ ಬಿದ್ದು, ಮಳೆಗಾಲ ಶುರುವಾದಾಗ ಬೇಗ ಮೊಳಕೆಯೊಡೆದು ಬೆಳೆಯುವುದು. ಇದು ಒಂದು ತರಹದ ನೈಸರ್ಗಿಕ ಬೀಜೋಪಚಾರ.

ಬೀಜೋಪಚಾರವನ್ನು ಕೃತಕವಾಗಿ ಮಾಡುವ ಕೆಲವು ವಿಧಾನಗಳನ್ನು ಈ ಕೆಳಗೆ ವಿವರಿಸಲಾಗಿದೆ.

* ಬೀಜಗಳಿಗೆ ಅನುಗುಣವಾದ ಬೀಜೋಪಚಾರವನ್ನು ರೈತರು ಯೋಚಿಸಿ ಸೂಕ್ತ ವಿಧಾನವನ್ನು ಆಯ್ಕೆ ಮಾಡಿಕೊಳ್ಳಬೇಕು.
* ಬೀಜಗಳನ್ನು ಸಗಣಿ ನೀರಿನಲ್ಲಿ ಕಲಸಿ 24ಗಂಟೆ ನೆನೆಸುವುದು.
* ಕುದಿಸಿದ ನೀರನ್ನು ಕೆಳಗಿಳಿಸಿ, ನಂತರ ಬೀಜ ಹಾಕಿ ತಣಿಸುವುದು.
* ಬೀಜಗಳನ್ನು 24ಗಂಟೆ ತಣ್ಣೀರಿನಲ್ಲಿ ನೆನೆಸಿಟ್ಟು ನಂತರ ಬಿತ್ತನೆ ಮಾಡುವುದು.
* ಹಸುವಿನ ಗಂಜಲದಲ್ಲಿ 2ರಿಂದ 3ಗಂಟೆ ನೆನಸಿಡುವುದು.
* ಕಾಂಡದ ತುಂಡುಗಳನ್ನು **IBA** ಪುಡಿ ಅಥವಾ ದ್ರಾವಣದಿಂದ ಉಪಚಾರ ಮಾಡಬೇಕು.
* ಬೂದಿಯಲ್ಲಿ ಬೀಜಗಳನ್ನು ಕಲಸಿಟ್ಟು ನಂತರ ಬಿತ್ತನೆ ಮಾಡಬೇಕು.
* ಕೆಲವು ಜಾತಿಯ ಬೀಜಗಳ (ಅತಿ ಗಟ್ಟಿ ಬೀಜದ) ಕವಚವನ್ನು ಸ್ವಲ್ಪ ಸೀಳುಗೊಳಿಸಿ ಸುಲಭವಾಗಿ ಮೊಳಕೆಯೊಡೆಯುವಂತೆ ಮಾಡಲು ಬೀಜಗಳನ್ನು ಬಿಸಿಲಿನಲ್ಲಿ ಒಣಗಿಸಬೇಕು ಅಥವಾ ಮರದ ಸುತ್ತಿಗೆಯಿಂದ ಬಡಿಯಬೇಕು. (ಉದಾ: ಅಳಲೆಕಾಯಿ) ಹೀಗೆ ಮೇಲೆ ಹೇಳಿದ ವಿಧಾನದಿಂದ ಬೀಜಗಳನ್ನು, ಅವುಗಳ ಮೇಲಿರುವ ಪದರಿನ ಗಟ್ಟಿತನದ ಆಧಾರದ ಮೇಲೆ ಬೀಜೋಪಚಾರ ಮಾಡಿ ಬಿತ್ತಲು ಉಪಯೋಗಿಸಬೇಕು.

**ಬಿತ್ತನೆ ಮಾಡುವ ವಿಧಾನ :**

ಬಿತ್ತನೆಯನ್ನು ಎರಡು ವಿಧಾನಗಳಲ್ಲಿ ಮಾಡಬಹುದು.

ಅ) ಮಡಿಗಳಲ್ಲಿ

ಆ) ನೇರವಾಗಿ ಬ್ಯಾಗ್‌ಗಳಲ್ಲಿ.

ಬಿತ್ತನೆ ಪದ್ಧತಿಯು ಸಸ್ಯಜಾತಿ ಮತ್ತು ಬೀಜದ ಗಾತ್ರದ ಆಧಾರದ ಮೇಲೆ ಅವಲಂಬನೆಯಾಗಿರುತ್ತದೆ. ಅತಿ ಸೂಕ್ಷ್ಮವಾದ (ಉದಾ: ಹಿರೇಮದ್ದು, ಓಮ, ತುಳಸಿ) ಬೀಜಗಳನ್ನು ಮಡಿಗಳಲ್ಲಿ ಬಿತ್ತನೆ ಮಾಡಬೇಕು. ದಪ್ಪವಾದ, ಗಟ್ಟಿಯಾದ ಬೀಜಗಳನ್ನು ನೇರವಾಗಿ ಬ್ಯಾಗ್‌ಗಳಲ್ಲಿಯೇ ಬಿತ್ತನೆ ಮಾಡಬೇಕು. (ಉದಾ: ಸೀತಾಫಲ, ಜಾಲಿ, ಹುಣಸೆ ನುಗ್ಗೆ)

ಮಡಿಗಳಲ್ಲಿ ಬೀಜಗಳನ್ನು ಬಿತ್ತನೆ ಮಾಡುವಾಗ ಬೀಜಗಳು ಅತಿ ಆಳಕ್ಕೆ ಬೀಳದಂತೆ ಎಚ್ಚರಿಕೆ ವಹಿಸಬೇಕು. ಇದರಿಂದಾಗಿ ಹೆಚ್ಚು ಬೀಜಗಳು ಹಾಳಾಗದಂತೆ ತಡೆಗಟ್ಟುವುದರ ಜೊತೆಗೆ ಉತ್ತಮ ಸಸಿಗಳನ್ನು ಪಡೆದುಕೊಳ್ಳಬಹುದು. ಮಡಿಗಳಲ್ಲಿ ಅಥವಾ ಬ್ಯಾಗ್‌ಗಳಲ್ಲಿ ಬೀಜಗಳನ್ನು ಬಿತ್ತುವಾಗ, ಅತಿ ದಪ್ಪವಾಗಿ/ಒತ್ತಾಗಿ ಬಿತ್ತನೆ ಮಾಡಬಾರದು. ಅತಿ ಸೂಕ್ಷ್ಮವಾದ ಬೀಜಗಳಾಗಿದ್ದರೆ ಮರಳಿನ ಜೊತೆ ಮಿಶ್ರ ಮಾಡಿ ಬಿತ್ತನೆ ಮಾಡಬೇಕು. ಇದರಿಂದ ಸಸಿಗಳು ದಟ್ಟವಾಗುವುದನ್ನು ತಡೆಯಬಹುದು. ಸಾಮಾನ್ಯ ಗಾತ್ರದ ಬೀಜಗಳನ್ನು ನೇರವಾಗಿ ಕೈಯಿಂದಲೇ ಬಿತ್ತನೆ ಮಾಡಬಹುದು.

**ಈ ಕೆಳಗಿನ ಔಷಧಿ ಸಸ್ಯಗಳ ಬೀಜಗಳನ್ನು ಮಡಿಗಳಲ್ಲಿ ಬಿತ್ತನೆ ಮಾಡಬಹುದು.**

ಗಜ್ಜುಗ, ಅಳಲೆಕಾಯಿ, ಪಪ್ಪಾಯ, ಹಿರೇಮದ್ದು, ಮೊಳೆಕಾಳಿನ ಗಿಡ, ನೀರು ಬ್ರಾಹ್ಮಿ, ಒಂದೆಲಗ, ಲೋಳೆಸರ, ಲಾವಂಚ, ನಿಂಬೆಹುಲ್ಲು, ತುಳಸಿ ಮತ್ತು ಮಾವು.

ಲಾವಂಚ ಮತ್ತು ನಿಂಬೆಹುಲ್ಲು ಈ ಎರಡೂ ಸಸ್ಯಗಳನ್ನು ಮಡಿಗಳಲ್ಲೆ ಬೆಳಸಿಮ ನಾಟಿಗಾಗಿ ಬಳಸಬಹುದು. ಉಳಿದೆಲ್ಲಾ ಸಸ್ಯಗಳನ್ನು ಸ್ವಲ್ಪ ದಿನಗಳ ನಂತರ ಮಡಿಯಿಂದ ಕಿತ್ತು ಬ್ಯಾಗ್‌ಗಳಲ್ಲಿ ನಾಟಿ ಮಾಡಬೇಕಾಗುತ್ತದೆ.

**ಈ ಕೆಳಗಿನ ಔಷಧಿ ಸಸ್ಯಗಳ ಬೀಜಗಳನ್ನು ನೇರವಾಗಿ ಬ್ಯಾಗ್‌ಗಳಲ್ಲಿ ಬಿತ್ತನೆ ಮಾಡಬಹುದು.**

1. ಬೆಟ್ಟನೆಲ್ಲಿ 7. ಕರಿಬೇವು 12. ಅಶ್ವಗಂಧ 17. ಸೀತಾಫಲ

2. ತಾರೆಕಾಯಿ 8. ನಿಂಬೆ 13. ಗುಲಗಂಜಿ 1 8 .
ಅಂಟುವಾಳ

3. ನೇರಳೆ 9. ಬೇವು 14. ಬಸಳೆ 19. ದತ್ತೂರ

4. ಬಿಲ್ವಪತ್ರೆ 10. ಪಪ್ಪಾಯ 15. ಓಮ 20. ಕಕ್ಕೆ

5. ನುಗ್ಗೆ 11 ಗೋರಂಟಿ 16. ನೆಗ್ಗಿಲಮುಳ್ಳು 21 ಜಾಲಿ

6. ಅಗಸೆ

**ಬಿತ್ತನೆಗೆ ಸೂಕ್ತ ಕಾಲ:**

ಬೀಜಗಳನ್ನು ಬಿತ್ತನೆ ಮಾಡುವುದು, ಬೀಜಗಳ ಗಾತ್ರ, ಬೀಜಗಳನ್ನು ಸಂಗ್ರಹಿಸಿಡಲಾದ ಅವಧಿ, ಬಿತ್ತನೆ ಪದ್ಧತಿ ಯಾವ ಕಲದಲ್ಲಿ ನಾಟಿ ಮಾಡಲು ಸಸಿಗಳು ಬೇಕು, ಯಾವ ಮಟ್ಟದ ಬೀಜಗಳನ್ನು ಬಿತ್ತನೆಗಾಗಿ ಸಂಗ್ರಹಿಸಲಾಗಿದೆ ಇತ್ಯಾದಿ ಅಂಶಗಳನ್ನು ಅವಲಂಬಿಸಿರುತ್ತದೆ. ವರ್ಷದ ಯಾವುದೇ ತಿಂಗಳಲ್ಲಾದರೂ ಬಿತ್ತನೆ ಮಾಡಬಹುದು. ಆದರೂ ಮಾರ್ಚ್ ತಿಂಗಳಿಂದ ಜೂನ್ ತಿಂಗಳ ಅಂತ್ಯದೊಳಗಾಗಿ ಬಿತ್ತನೆ ಮಾಡಿದರೆ ಉತ್ತಮ ಸಸಿಗಳನ್ನು ಪಡೆಯಬಹುದು. ಮುಂಜಾನೆ ಅಥವಾ ಸಾಯಂಕಾಲದ ಸಮಯದಲ್ಲಿ ಬೀಜಗಳನ್ನು ಬಿತ್ತನೆ ಮಾಡುವುದು ಸೂಕ್ತ. ಮಾರ್ಚ್ ಮತ್ತು ಏಪ್ರಿಲ್ ತಿಂಗಳುಗಳಲ್ಲಿ ಬಿಸಿಲು ಹೆಚ್ಚಾಗಿರುವ ಕಾರಣ ನರ್ಸರಿಗೆ ಹೆಚ್ಚಿ ನೆರಳಿನ ಅವಶ್ಯಕತೆ ಇರುತ್ತದೆ. ಚಳಿಗಾಲ ಬಿತ್ತನೆಗೆ ಸೂಕ್ತವಲ್ಲ. ಅದರಲ್ಲೂ ಡಿಸೆಂಬರ್, ಜನವರಿ, ಫೆಬ್ರವರಿ ತಿಂಗಳುಗಳಲ್ಲಿ ಅತಿ ಚಳಿ ಇರುವ ಕಾರಣದಿಂದ ಬೀಜಗಳು ಮೊಳಕೆಯೊಡೆದರೂ ಬದುಕುಳಿಯುವ ಸಾಧ್ಯತೆ ತುಂಬಾ ಕಡಿಮೆ.

**ಬ್ಯಾಗ್‌ಗಳಲ್ಲಿ ಸಸಿ ನಾಟಿ ಮಾಡುವ ಕ್ರಮ:**

* ಸಸ್ಯಗಳನ್ನು 3ರಿಂದ 4ಎಲೆಗಳಾದ ಮೇಲೆ ನಾಟಿಗಾಗಿ ಬೇರ್ಪಡಿಸಬಹದು.
* ಪಾತಿಗಳಿಂದ ಸಸ್ಯಗಳನ್ನು ಬೇರ್ಪಡಿಸುವ ಮುನ್ನ ಸಂಪೂರ್ಣವಾಗಿ ಪಾತಿಗಳನ್ನು ನೆನೆಸಬೇಕು.
* ಸಸ್ಯಗಳಿಗೆ ಮತ್ತು ಅವುಗಳ ಬೇರುಗಳಿಗೆ ತೊಂದರೆಯಾಗದಂತೆ ಸಸಿಗಳನ್ನು ಪಾತಿಗಳಿಂದ ಬೇರ್ಪಡಿಸಬೇಕು.
* ಕಿತ್ತು ತಂದ ಸಸಿಗಳನ್ನು ಬ್ಯಾಗುಗಳಲ್ಲಿ ನಾಟಿ ಮಾಡುವ ಮುನ್ನ ಅದರ ಬ್ಯಾಗಿನಲ್ಲಿರುವ ಮಿಶ್ರಣವು ಸಂಪೂರ್ಣವಾಗಿ ತೇವವಾಗುವವರೆಗೆ ನೀರನ್ನು ಹಾಕಬೇಕು.

* ನಾಟಿ ಮಾಡುವುದನ್ನು ಸಾಯಂಕಾಲದ ಸಮಯದಲ್ಲಿ ಮಾಡಿದರೆ ಒಳ್ಳೆಯದು.
* ನಾಟಿ ಮಾಡಿದ ತಕ್ಷಣವೇ ನೀರು ಕೊಡುವುದನ್ನು ಮರೆಯಬಾರದು.
* ಅತಿ ಬಿಸಿಲಿನ ಕಾಲದಲ್ಲಿ ನಾಟಿ ಮಾಡುವುದಾದರೆ ನೆರಳು ನೀಡುವುದು ಅಗತ್ಯ.

**ಸಸಿಗಳಿಗೆ ನೀರುಣಿಸುವ ವಿಧಾನ:**

* ನರ್ಸರಿಯಲ್ಲಿ ಸಸ್ಯಗಳಿಗೆ ಪ್ರತಿದಿನ ಎರಡು ಬಾರಿ ಬೆಳಿಗ್ಗೆ ಮತ್ತು ಸಾಯಂಕಾಲ ನೀರು ಕೊಡುವುದು.
* ಕೆಲವು ಔಷಧಿ ಸಸ್ಯಗಳಿಗೆ ಹೆಚ್ಚು ನೀರು ಕೊಡಬೇಕು. (ಹಿಪ್ಪಲಿ, ಮಧುನಾಶಿನಿ, ಬಜೆ, ನೀರು ಬ್ರಾಹ್ಮಿ, ದೊಡ್ಡಪತ್ರೆ, ಒಂದೆಲಗ ಇತ್ಯಾದಿ)
* ಲಾವಂಚ, ನಿಂಬೆಹುಲ್ಲು, ಲೋಳೆಸರ, ಗಜ್ಜುಗ, ಮಂಗರಬಳ್ಳಿ ಇತಯಾದಿ ಸಸ್ಯಗಳು ಕಡಿಮೆ ನೀರಿನಲ್ಲಿ ಬೆಳೆಯುತ್ತವೆ.
* ಇನ್ನುಳಿದ ಔಷಧಿ ಸಸ್ಯಗಳಿಗೆ ಮಾಮೂಲಿನಂತೆ ನೀರುಣಿಸಿದರೆ ಸಾಕು.

**ನರ್ಸರಿ ಮಿಶ್ರಣ ತಯಾರಿಸುವ ವಿಧಾನ:**

ಮಣ್ಣು, ಮರಳು ಮತ್ತು ಕೊಟ್ಟಿಗೆ ಗೊಬ್ಬರ ಈ ಮೂರನ್ನು ಸೇರಿಸಿ ಚೆನ್ನಾಗಿ ಮಿಶ್ರಮಾಡಬೇಕು. ಎರಡು ಭಾಗ ಮಣ್ಣು ಒಂದು ಭಾಗ ಮರಳು ಮತ್ತು ಒಂದು ಭಾಗ ಕೊಟ್ಟಿಗೆ ಗೊಬ್ಬರ ಸೇರಿಸಿ ಮಿಶ್ರಣ ಮಾಡಿ ನಂತರ ಈ ಮಿ

ಸ್ರಣವನ್ನು ಬ್ಯಾಗ್‌ಗಳಿಗೆ ತುಂಬಬೇಕು. ಈ ಅನುಪಾತದ ಮಿಶ್ರಣವು ಒಳ್ಳೆ ಆರೋಗ್ಯಪೂರ್ಣವಾದ ಸಸ್ಯಗಳನ್ನು ಬೆಳೆಸುವಲ್ಲಿ ಸಹಕಾರಿಯಾಗುತ್ತದೆ. ಒಂದು ಪಕ್ಷ ಮರಳು ಮಿಶ್ರಿತ ಮಣ್ಣಾಗಿದ್ದರೆ ಇದಕ್ಕೆ ಹೆಚ್ಚು ಮರಳನ್ನು ಮಿಶ್ರಮಾದುವ ಅವಶ್ಯಕತೆ ಇಲ್ಲ. ಮಣ್ಣು ಅತಿ ಅಂಟಿನಿಂದ (ಜಿಗುಟು) ಕೂಡಿದ್ದರೆ ಹೆಚ್ಚು ಮರಳನ್ನು ಸೇರಿಸಿಕೊಳ್ಳಬೇಕು. ಮಿಶ್ರಣದಲ್ಲಿ ಕಲ್ಲು, ಪ್ಲಾಸ್ಟಿಕ್, ಗಾಜು ಇತ್ಯಾದಿಗಳು ಕಂಡು ಬಂದರೆ, ಸಂಪೂರ್ಣವಾಗಿ ಬೇರ್ಪಡಿಸಬೇಕು.

**ಐ.ಬಿ.ಎ. (ಇಂಡೋಲ್ ಬ್ಯೂಟಿರಿಕ್ ಆಸಿಡ್) ಪುಡಿ ಅಥವಾ ದ್ರಾವಣ ತಯಾರಿಸುವ ವಿಧಾನ:**

ಐ.ಬಿ.ಎ –ಇದೊಂದು ಸಸ್ಯಗಳ ಬೆಳವಣಿಗೆ ಪ್ರಚೋದಿಸುವ ಹಾರ್ಮೋನ್. ಇದು ಪುಡಿ ರೂಪದಲ್ಲಿರುತ್ತದೆ. ದೊಡ್ಡ ದೊಡ್ಡ ನಗರಗಳಲ್ಲಿ, ಕೃಷಿ ವಸ್ತುಗಳನ್ನು, ಕ್ರಿಮಿನಾಶಕಗಳನ್ನು ಮತ್ತು ಜೀಜಗಳನ್ನು ಮಾರಾಟ ಮಾಡುವ ಮಳಿಗೆಗಳಲ್ಲಿ

ದೊರೆಯುತ್ತದೆ. ಪ್ರಚೋದಕ ಹಾರ್ಮೋನನ್ನು ಎರಡು ರೀತಿಯಲ್ಲಿ ತಯಾರಿಸಿ ಉಪಯೋಗಿಸಬಹುದು.

- **ಪುಡಿರೂಪದಲ್ಲಿ:** ಎರಡು ಮಿಲಿಗ್ರಾಂ ಐಬಿಎ ಪುಡಿಯನ್ನು 1ಕೆ.ಜಿ ಮುಖಕ್ಕೆ ಹಚ್ಚುವ ಪೌಡರಿಗೆ ಬೆರೆಸಬೇಕು. ಪುನರುತ್ಪತ್ತಿಗಾಗಿ ಬಳಸಲಾಗುವ ಕಾಂಡದ ತುಂಡುಗಳ ಬುಡದ ಭಾಗವನ್ನು ಈ ಪುಡಿಯಲ್ಲಿ ಅದ್ದಿ ನಂತರ ಬ್ಯಾಗ್‌ಗಳಲ್ಲಿ ನೆಡಬೇಕು. ಈ ಬ್ಯಾಗ್‌ಗಳನ್ನು ಹೈಡ್ರೋಪಿಟ್‌ನಲ್ಲಿ ಜೋಡಿಸಬೇಕು.
- **ದ್ರಾವಣ ರೂಪದಲ್ಲಿ:** ಎರಡು ಮಿ.ಗ್ರಾಂ ಐಬಿಎ ಪುಡಿಯನ್ನು ಒಂದು ಲೀಟರ್ ನೀರಿನಲ್ಲಿ ಮಿಶ್ರಮಾಡಬೇಕುನಂತರ ಪುನರುತ್ಪತ್ತಿಗಾಗಿ ಬಳಸುವ ಕಾಂಡದ ತುಂಡಿನ ನೆಡುವ ಭಾಗವನ್ನು ಈ ದ್ರಾವಣದಲ್ಲಿ 2ರಿಂದ 3ಸೆಕೆಂಡುಗಳ ವರೆಗೆ ಇಡಬೇಕು. ಹೊರತೆಗೆದ ತುಂಡುಗಳನ್ನು ಬ್ಯಾಗ್‌ಗಳಲ್ಲಿ ನೆಡಬೇಕು.

  ಈ 2 ವಿಧಾನಗಳಿಂದ ಉಪಚರಿಸಿದ ಕಾಂಡದ ತುಂಡುಗಳು ಅತಿ ಬೇಗನೆ ಅಂದರೆ ಸುಮಾರು 18ರಿಂದ 25ದಿನಗಳಲ್ಲಿ ಬೇರುಗಳನ್ನು ಬಿಟ್ಟು ಹೊಸ ಗಿಡಗಳಾಗಿ ಮಾರ್ಪಾಡಾಗುತ್ತವೆ.

**ಪುನರುತ್ಪತ್ತಿಗಾಗಿ ಬಳಸುವ ಕಾಂಡದ ತುಂಡುಗಳ ಆಯ್ಕೆ:**

- ಕಾಂಡದ ತುಂಡುಗಳು 20ರಿಂದ 25ಸೆಂ.ಮೀ ಉದ್ದವಿರಬೇಕು.
- ಪ್ರತಿ ಕಾಂಡ ತುಂಡುಗಳೂ 2ರಿಂದ 3ಮೊಗ್ಗು ಅಥವಾ ಗಿಣ್ಣುಗಳನ್ನು ಹೊಂದಿರಬೇಕು.
- ಕಾಂಡದ ತುಂಡುಗಳು ಆರೋಗ್ಯಪೂರ್ಣವಾಗಿರಬೇಕು. ರೋಗ ಅಥವಾ ಕೀಟಬಾಧೆಯಿಂದ ಹಾಳಾಗಿರಬಾರದು.
- ಕತ್ತರಿಸಿ ತಂದ ಕಾಂಡದ ತುಂಡುಗಳನ್ನು 1 ಅಥವಾ 2 ದಿನದ ಒಳಗೆ ಬ್ಯಾಗ್‌ಗಳಲ್ಲಿ ನೆಡಬೇಕು. ತಡಮಾಡಿದರೆ ಚಿಗುರುವುದು ಅಥವಾ ಹುಟ್ಟುವಳಿ ಕಡಿಮೆಯಾಗುತ್ತದೆ.
- ಕತ್ತರಿಸಿ ತಂದ ತುಂಡುಗಳನ್ನು ತೇವದ ಬಟ್ಟೆಯಿಂದ ಸುತ್ತಿ ಇಡಬೇಕು.
- ಮೃದುವಾದ ಕಾಂಡದ ತುಂಡುಗಳನ್ನು ಆಯ್ಕೆ ಮಾಡಿಕೊಂಡಲ್ಲಿ, ತುಂಡಿನ ಜೊತೆ ಎರಡು ಅಥವಾ ಮೂರು ಎಲೆಗಳಿರುವಂತೆ ನೋಡಿಕೊಳ್ಳಿ.

**ಸಸ್ಯ ಕ್ಷೇತ್ರ ಅಥವಾ ನರ್ಸರಿ ಅಭಿವೃದ್ಧಿ ಪಡಿಸುವಾಗ ಗಮನಿಸಬೇಕಾದ ಮುಖ್ಯವಾದ ಅಂಶಗಳು:**

- ಯೋಗ್ಯವಾದ ಬೀಜಗಳನ್ನು ಮತ್ತು ತುಂಡುಗಳನ್ನು ಆಯ್ಕೆ ಮಾಡುವುದು ಮತ್ತು ಶೇಖರಿಸುವುದು.
- ಬೀಜೋಪಚಾರವನ್ನು ಅಗತ್ಯವಾಗಿ ಮಾಡಬೇಕು.
- ಮಡಿಗಳನ್ನು ಮತ್ತು ಪಾತಿಗಳನ್ನು ಅನುಕೂಲಕ್ಕೆ ತಕ್ಕಂತೆ ನಿರ್ಮಿಸಬೇಕು.
- ಬ್ಯಾಗ್‌ಗಳನ್ನು ಮತ್ತು ಕುಂಡಗಳನ್ನು ಸಸಿ ನೆಡಲು ಬಳಸುವುದು.
- ಬೀಜಗಳನ್ನು ಬಿತ್ತುವುದು.
- ನೀರು ಹಾಕುವುದು.
- ಕಳೆ ತೆಗೆಯುವುದು.
- ಕ್ರಿಮಿಕೀಟಗಳ ಬಾಧೆಯಿಂದ ಸಸಿಗಳನ್ನು ಸಂರಕ್ಷಿಸುವುದು.
- ಬ್ಯಾಗ್ ಅಥವಾ ಕುಂಡಗಳಲ್ಲಿ ಬೆಳೆಸಿದ ಸಸಿಗಳನ್ನು ಅವುಗಳ ಆರೋಗ್ಯ ಮತ್ತು ಎತ್ತರಕ್ಕೆ ತಕ್ಕಂತೆ ಆಯಾ ತರಗತಿಯಲ್ಲಿ ವಿಂಗಡಿಸುವುದು.
- ಸಸ್ಯಗಳನ್ನು ಬೆಳೆಸಲು ಬಳಸುವ ನೀರಿನ ಬಗ್ಗೆ ಗಮನವಹಿಸಬೇಕು. ಕಾರಣ ಉಪ್ಪಿನಾಂಶವಿರುವ ನೀರು ಯೋಗ್ಯವಲ್ಲ.

**ಉತ್ತಮ ಸಸ್ಯಕ್ಷೇತ್ರ ಹೇಗಿರಬೇಕು?**

ಸಸ್ಯಕ್ಷೇತ್ರವು ಉತ್ತಮವೆನಿಸಿಕೊಳ್ಳಬೇಕಾದರೆ ಹಾಗೂ ಲಾಭದಾಯಕವಾಗಬೇಕಾದರೆ:

- ಉತ್ತಮ ನೀರಿನ ಸೌಲಭ್ಯವನ್ನು ಹೊಂದಿರುವುದು ಅತಿ ಮುಖ್ಯ.
- ಸಸ್ಯ ಕ್ಷೇತ್ರವು ರಸ್ತೆ ಬದಿ ಅಥವಾ ರಸ್ತೆಯ ಆಸು-ಪಾಸಿಗೆ ಹೊಂದಿಕೊಂಡಿಬೇಕು.
- ಸಸ್ಯಕ್ಷೇತ್ರವು ಸುತ್ತಲೂ ಹಸಿರು ಮುಳ್ಳುಬೇಲಿಯನ್ನು ಹೊಂದಿರಬೇಕು.
- ಮಳೆ ಬಿದ್ದಾಗ ನೀರು ನಿಲ್ಲುವ ಜೌಗು ಪ್ರದೇಶವಾಗಿರಬಾರದು.

- ಬೀಜಗಳು ಅಥವಾ ಪುನರುತ್ಪತ್ತಿಗಾಗಿ ಬಳಸುವ ಕಾಂಡಗಳು, ಸಸ್ಯಕ್ಷೇತ್ರ ಸಲಕರಣೆಗಳು, ಬ್ಯಾಗುಗಳು, ಇತ್ಯಾದಿ ವಸ್ತುಗಳನ್ನು ಸಂಗ್ರಹಿಸಿಡಲು ಸೂಕ್ತವಾದ ಕೊಠಡಿಯನ್ನು ಹೊಂದಿರಬೇಕು.
- ಸಸ್ಯಗಳ ಎತ್ತರಕ್ಕೆ ಅನುಗುಣವಾಗಿ ವಿಂಗಡಿಸಿ, ಅವುಗಳನ್ನು ಜೋಡಿಸಿಡಿ.
- ರೋಗ ಮತ್ತು ಕೀಟಗಳ ಹಾವಳಿ ಬಗ್ಗೆ ನಿಗಾ ಇರಲಿ. ಸಾಂಪ್ರದಾಯಿಕ ಪದ್ಧತಿಗಳಿಂದಲೂ ಇವುಗಳನ್ನು ಹೋಗಲಾಡಿಸಬಹುದು. (ಉದಾ: ಹಾಲು, ಗಂಜಲ, ಇತ್ಯಾದಿಗಳನ್ನು ನಈರಿನ ಜೊತೆ ಸೇರಿಸಿ ಸಿಂಪಡಿಸುವುದು.

* * * * *

# ಔಷಧಿ ಸಸ್ಯಗಳ ಸಂಗ್ರಹಣೆ ಮತ್ತು ಶೇಖರಣೆ

## ಔಷಧಿ ಸಸ್ಯಗಳ ಸಂಗ್ರಹಣೆ

ನಮ್ಮ ಶರೀರವು ಪಂಚಮಹಾಭೂತಗಳಿಂದ ಮಾಡಲ್ಪಟ್ಟಿದ್ದು, ಈ ಜಗತ್ತಿನ ಎಲ್ಲಾ ಜೀವರಾಶಿಗಳು, ಸಸ್ಯಗಳು ಸಹ ಇದೇ ಪಂಚಮಹಾಭೂತಗಳಿಂದಾಗಿವೆ.

ಒಂದು ರೋಗವು ಗುಣವಾಗಲು ಮುಖ್ಯವಾಗಿ ಔಷಧಿ ಪ್ರಯೋಗವಾಗಬೇಕು. ಈ ಔಷಧಿಯು ತನ್ನ ರಸ ಗುಣಗಳನ್ನು ಹೊಂದಿದ್ದಾಗ ಮಾತ್ರ ಅದರ ಪ್ರಭಾವ ಉತ್ತಮವಾಗಿರುತ್ತದೆ. ಅದರ ಪ್ರಭಾವವನ್ನು ಕಪಾಡಲು ಮುಖ್ಯವಾಗಿ ಸಂಗ್ರಹಣೆಯ ಕಾಲ ಸಂರಕ್ಷಣೆ ಎಲ್ಲವೂ ಪ್ರಮುಖಪಾತ್ರ ವಹಿಸುತ್ತವೆ. ಆದ್ದರಿಂದ ಔಷಧಿ ಸಸ್ಯಗಳು ಬೆಳೆಯುವ ಕಾಲ ಸಂಗ್ರಹಣೆಯ ಸಮಯ ಮುಂತಾದವುಗಳ ಬಗ್ಗೆ ತಿಳಿದುಕೊಳ್ಳವುದು ಅಗತ್ಯ.

### ಪ್ರಶಸ್ತ ಭೂಮಿ:

ಸಾಂಪ್ರದಾಯಿಕವಾಗಿ ನಡೆದುಬಂದಿರುವಂತೆ ಔಷಧಿ ಸಸ್ಯವನ್ನು ನಾವು ಪ್ರಶಸ್ತ ಭೂಮಿಯಿಂದ ಪಡೆಯಬೇಕು.

ಅಂತಹ ಭೂಮಿಯು ಸಮತಟಾಗಿದ್ದು ಜಲಾಶಯಕ್ಕೆ ಹತ್ತಿರವಾಗಿರಬೇಕು; ಹಾಗೂ ಭೂಮಿಯು ಸ್ನಿಗ್ಧತೆಯಿಂದ ಕೂಡಿದ್ದು ಸ್ಥಿರವಾಗಿರಬೇಕು. ಭೂಮಿಯು ಕೃಷ್ಣವರ್ಣ, ಬಿಳಿಬಣ್ಣ ಅಥವಾ ಕೆಂಪು ವರ್ಣದ್ದಾಗಿದ್ದರೆಉತ್ತಮ.

ವನೌಷಧಿಗಳನ್ನು ಬೆಳೆಸಿರುವಂತಹ ಭೂಮಿಯು ಸ್ಮಶಾನ, ವಧಾಸ್ಥಾನ, ದೇವಸ್ಥಾನ, ಮರಳುಭೂಮಿ, ಕಲ್ಲುಗಳಿಂದ ಕೂಡಿರುವ ಪ್ರದೇಶದಿಂದ ದೂರವಾಗಿರಬೇಕು.

### ಸಂಗ್ರಹಿಸಲು ಯೋಗ್ಯವಾದ ಸಸ್ಯ:

ಮೇಲೆ ತಿಳಿಸಿರುವಂತೆ ಉತ್ತಮ ಭೂಮಿಯಲ್ಲಿ ಬೆಳೆದಂತಹ ಔಷಧಿ ಸಸ್ಯಗಳು ಕ್ರಿಮಿ, ವಿಷ . ಗಾಳಿ ಮತ್ತು ಬೆಂಕಿಯಿಂದ ಹಾಗೂ ಮಲಿನಜಲದಿಂದ ಕಲುಷಿತ ಗೊಂಡಿರಬಾರದು, ಅಥವಾ ಶಸ್ತ್ರಗಳಿಂದ ಆಘಾತ ಹೊಂದಿರಬಾರದು.

ಸಂಗ್ರಹಿಸಿದಂತಹ ದ್ರವ್ಯವು ಉತ್ತಮ ರಸ-ಗುಣ-ವೀರ್ಯ-ಗಂಧಗಳನ್ನು ಹೊಂದಿರಬೇಕು, ಮತ್ತು ಅವುಗಳನ್ನು ಆಯಾ ಋತುಗಳಲ್ಲೇ ಸಂಗ್ರಹಿಸುವುದು ಉತ್ತಮ.

**ಸಂಗ್ರಹ ವಿಧಿ:**

ಔಷದಿ ಸಸ್ಯಗಳನ್ನು ಪ್ರಶಸ್ತ ದಿನದಂದು ಶುಭ್ರ ಬಿಳಿ ಬಟ್ಟೆ ಧರಿಸಿ ದೇವರಿಗೆ ಪೂಜೆ ಸಲ್ಲಿಸಿ ನಂತರ ಉತ್ತರ ಅಥವಾ ಪೂರ್ವಾಭಿಮುಖವಾಗಿ ನಿಂತು ಔಷಧಿ ಸಸ್ಯ ಸಂಗ್ರಹಣೆ ಮಾಡಬೇಕು (ಉತ್ತರ ಮತ್ತು ಪೂರ್ವ ದಿಕ್ಕುಗಳಿಂದ ಚಂದ್ರ ಹಾಗೂ ಸೂರ್ಯನ ಪ್ರಭಾವವು ಔಷಧಿ ಸಸ್ಯಗಳ ಮೇಲೆ ಬೀಳುತ್ತದೆ).

ದ್ರವ್ಯಗಳನ್ನು ಮುಖ್ಯವಾಗಿ ಪುಷ್ಯ, ಅಶ್ವಿನಿ ಹಾಗೂ ಮೃಗಶಿರ ನಕ್ಷತ್ರಗಳಂದು ಸಂಗ್ರಹಿಸಬೇಕು.

ಚಂದ್ರನನ್ನು "ಔಷಧೀಶ" ಎಂದು ಕರೆಯುತ್ತಾರೆ. ಅವನ ಪ್ರಭಾವವು ಔಷಧಿಯ ಮೇಲೆ ಸದಾ ಇದ್ದು, ಪುಷ್ಯ ಹಾಗೂ ಮೃಗಶಿರ ನಕ್ಷತ್ರಗಳಂದು ಈ ಪ್ರಭಾವವು ಇನ್ನೂ ಹೆಚ್ಚಾಗಿರುತ್ತದೆ. ಇದರಿಂದ ಔಷಧೀಯ ಸಸ್ಯಗಳ ರಸ, ಗುಣ, ವೀರ್ಯ ಹೆಚ್ಚುತ್ತದೆ.

ಶೀತಗುಣವನ್ನು ಹೊಂದಿರುವಂತಹ ಔಷಧಿ ಸಸ್ಯಗಳನ್ನು ವಿಸರ್ಗ ಕಾಲದಲ್ಲಿ (ಜುಲೈ-ಜನವರಿ) ಸಂಗ್ರಹಿಸಬೇಕು. ಇದರಿಂದ ಅದರ ಪ್ರಭಾವ ಹೆಚ್ಚಾಗಿರುತ್ತದೆ ಹಾಗೂ ಮೃಗಶಿರ ನಕ್ಷತ್ರಗಳಂದು ಈ ಪ್ರಭಾವವು ಇನ್ನೂ ಹೆಚ್ಚಾಗಿರುತ್ತದೆ. ಇದರಿಂದ ಔಷಧೀಯ ಸಸ್ಯಗಳ ರಸ, ಗುಣ, ವೀರ್ಯ ಹೆಚ್ಚುತ್ತದೆ.

ಸೌಮ್ಯ ಭೂಮಿಯಲ್ಲಿ (ಬೆಳೆಗಳು ಹುಲುಸಾಗಿ ಬೆಳೆಯುವ, ಜೌಗು ಪ್ರದೇಶವಲ್ಲದ, ನೀರನ್ನು ಹೀರಿಕೊಂಡು ಸಮನಾಗಿ ಹಂಚುವ, ಶೀತಗುಣದ ಭೂಮಿ) ಬೆಳೆದಂತಹ ಸಸ್ಯಗಳಲ್ಲಿ ಮಧುರ, ಶೀತ, ಸ್ನಿಗ್ಧ ಗುಣವು ಹೆಚ್ಚಾಗಿರುತ್ತದೆ.

ಇಂತಹ ಭೂಮಿಯಲ್ಲಿ ಬೆಳೆದ ಸಸ್ಯಗಳನ್ನು ಶೀತಕಾಲದಲ್ಲಿ ಸಂಗ್ರಹಿಸಬೇಕು.

## ವಿಶಿಷ್ಟ ಸಂಗ್ರಹ ಪಟ್ಟಿ

**(ಯಾವ ಭಾಗವನ್ನು ಯಾವ ಕಾಲದಲ್ಲಿ ಸಂಗ್ರಹಿಸಿದರೆ ಉತ್ತಮ)**

**ಮೂಲಿಕೆಯ ಔಷಧಿ ಭಾಗದ ಸಂಗ್ರಹಣಾ ಕಾಲ**

| ಸಸ್ಯದ ಅಂಗಗಳು | ಸಂಗ್ರಹಿಸುವ ಋತುಗಳು |
|---|---|
| ಬಡ್ಡೆ (ಕಾಂಡ) | ವರ್ಷ ಮತ್ತು ವಸಂತ ಋತು |

| | |
|---|---|
| ಎಲೆ (ಪತ್ರ) | ವರ್ಷ ಮತ್ತು ವಸಂತ ಋತು |
| ಮೂಲ (ಬೇರು) | ಗ್ರೀಷ್ಮ ಮತ್ತು ವಸಂತ ಋತು |
| ತೊಗಟೆ (ತ್ವಕ್) | ಗಡ್ಡೆ (ಕಂದ) |
| ಶರದ್ ಋತು | ಹಾಲು (ಕ್ಷೀರ) |
| ಸಾರ | ಹೇಮಂತ ಋತು |
| ಹೂ (ಪುಷ್ಪ) | ಲಭ್ಯ ಋತು |
| ಹಣ್ಣು (ಫಲ) | ಲಭ್ಯ ಋತು. |

## ಸಂಗ್ರಹಣೆ

ಔಷಧಿ ಸಸ್ಯಗಳನ್ನು ಸಂಗ್ರಹಿಸುವುದು ಸಹ ಒಂದು ಪ್ರಮುಖ ವಿಧಿ. ಸಸ್ಯಗಳನ್ನು ಸಂಗ್ರಹಿಸಿಡುವ ವಿಶಿಷ್ಟ ಕೊಠಡಿ (ಭೇಷಜಾಗಾರ)ದಲ್ಲಿ ಚೆನ್ನಾಗಿ ಶುಭ್ರವಾದಂತಹ ಪಾತ್ರೆಗಳಲ್ಲಿ ಸಂಗ್ರಹಿಡಿಡಬೇಕು. ಈ ರೀತಿ ಸಂಗ್ರಹಿಸಿಟ್ಟ ದ್ರವ್ಯವು ಬೆಂಕಿ, ನೀರು, ಮಂಜು, ಧೂಳು ಹಾಗೂ ಇಲಿ, ಕ್ರಿಮಿಗಳಿಂದ ದೂರವಿರಬೇಕು. ಸಂಗ್ರಹಿಸಿಟ್ಟಂತಹ ಪಾತ್ರೆಗಳು ಔಷಧಿಯ ರಸ, ಗುಣಗಳನ್ನು ವ್ಯತ್ಯಾಸ ಮಾಡದಂತಿರಬೇಕು. ಆಯುರ್ವೇದದಲ್ಲಿ ಚಿನ್ನ, ಬೆಳ್ಳಿ ಮುಂತಾದ ಪಾತ್ರೆಗಳ ಬಗ್ಗೆ ಉಲ್ಲೇಖವಿದ್ದು ಈಗಿನ ಕಾಲದ ಆರ್ಥಿಕ ಸ್ಥಿತಿಗನುಗುಣವಾಗಿ ಸ್ಟೀಲ್ ಮತ್ತು ಗಾಜಿನ ಪಾತ್ರೆಯಲ್ಲಿ ಔಷಧಿಯನ್ನು ಹಾಕಿ ಸಂಗ್ರಹಿಸಿಡಬಹುದು. ಭೇಷಜಾಗಾರವು ಪೂರ್ವ ಅಥವಾ ಉತ್ತರ ದಿಕ್ಕಿಗೆ ಮುಖ ಮಾಡಿರಬೇಕು. ಉತ್ತಮ ಗಾಳಿ ಬೆಳಕಿನ ವ್ಯವಸ್ಥೆ ಇದ್ದು ಅಲ್ಲಿ ಯಾವಾಗಲೂ ಸ್ವಚ್ಛತೆಯನ್ನು ಕಪಾಡಬೇಕು.

ಆಗಾಗ ಬಲಿ, ಪುಷ್ಪ, ಗಂಧ, ಕ್ರಿಮಿಘ್ನ ಧೂಪ ನೀಡಬೇಕು. ಇದರಿಂದ ರೋಗಾಣುಗಳ ಬಾಧೆ ಇರದೆ ಔಷಧಿ ಸಸ್ಯಗಳು ಉತ್ತಮವಾಗಿರುವುದು. ಇಂತಹ ರೀತಿಯಲ್ಲಿ ಸಂಗ್ರಹಿಸಿ, ಜೋಪಾನ ಮಾಡಿ ಇರಿಸಿದ ವನಸ್ಪತಿಗಳಿಂದ ಉತ್ತಮವಾದ ಔಷಧಿಗಳನ್ನು ತಯಾರಿಸಿ, ರೋಗ ಚಿಕಿತ್ಸೆ ಮಾಡಿದರೆ, ರೋಗಿಯು ರೋಗಮುಕ್ತನಾಗುವುದರ ಜೊತೆಗೆ ಶಾಶ್ವತ ಸ್ವಾಸ್ಥ್ಯ ಗಳಿಸಿಕೊಳ್ಳಬಹುದು.

* * * * *

# ಪ್ರಾಥಮಿಕ ಆರೋಗ್ಯ ರಕ್ಷಣೆ ಮತ್ತು ಸಾಂಪ್ರದಾಯಿಕ ಚಿಕಿತ್ಸಾ ಪದ್ಧತಿ ಆಲ್ಮಾಅಟ್ಟಾ ಘೋಷಣೆ:

## ಅಲ್ಮಾಅಟ್ಟಾ ಘೋಷಣೆ

ರಷ್ಯಾದ ಆಲ್ಮಾಅಟ್ಟಾದಲ್ಲಿ 1978ರಲ್ಲಿ ಸೇರಿದ ವಿಶ್ವದ ಅನೇಕ ದೇಶಗಳು ಆರೋಗ್ಯ ಸೇವೆಯನ್ನು ವೃದ್ಧಿಸಿ ಜನರ ಕೈಗೆಟಕುವ ಬಗ್ಗೆ ಚರ್ಚಿಸಿದವು. **"ಕ್ರಿ.ಶ.2000ದಷ್ಟರಲ್ಲಿ ಎಲ್ಲರಿಗೂ ಆರೋಗ್ಯ"** ಎಂಬ ಘೋಷಣೆಯನ್ನು ಸಾರುವ ಮೂಲಕ ಪ್ರಾಥಮಿಕ ಆರೋಗ್ಯಕ್ಕೆ ಹೊಸ ತಿರುವು ಹಾಗೂ ಆದ್ಯತೆ ದೊರಕಿತು. ಔಷಧಿಯು ಮೂಲಕವೇ ಆರೋಗ್ಯ ರಕ್ಷಣೆ ಎಂಬ ಕಲ್ಪನೆಯನ್ನು ಹೋಗಲಾಡಿಸುವುದು. ಆರೋಗ್ಯ ಸೇವೆಗಳು ನಗರ ಪ್ರದೇಶಗಳಿಂದ ಗ್ರಾಮೀಣ ಪ್ರದೇಶಗಳಿಗೆ ದೆಚ್ಚು ದೊರಕುವಂತೆ ರಾಷ್ಟ್ರೀಯ ಸೇವೆಯನ್ನು ಪುನರ್ ರಚಿಸುವುದು. ಆರೋಗ್ಯ ರಕ್ಷಣಾ ದಿಸೆಯಲ್ಲಿ ಪ್ರೋತ್ಸಾಹದಾಯಕ, ರೋಗ ನಿರೋಧಕ ಮತ್ತು ಪುನರ್ ವಸತಿ ಸೇವೆಗಳನ್ನು ಜನರಿಗೆ ನೀಡಲು ಒತ್ತು ನೀಡಿತು. ಇದರ ಮುಖ್ಯ ಗುರಿಯು ಪ್ರಾಥಮಿಕ ಆರೋಗ್ಯ ರಕ್ಷಣೆಯ ಮೂಲಕ ಜನರ ಆರೋಗ್ಯದ ಹೊಣೆಯನ್ನು ಜನರ ಕೈಯಲ್ಲೇ ನೀಡುವುದಾಗಿದೆ.

## ಪ್ರಾಥಮಿಕ ಆರೋಗ್ಯ ರಕ್ಷಣೆಯ ಮೂಲ ಅಂಶಗಳು:

ವಿವಿಧ ದೇಶಗಳು ಮತ್ತು ಸಮುದಾಯಗಳಲ್ಲಿ ದೊರಕುವ ನಿರ್ದಿಷ್ಟ ಸೇವೆಗಳಲ್ಲಿ ವ್ಯತ್ಯಾಸವಿದ್ದರೂ ಆಲ್ಮಾಅಟ್ಟ ಘೋಷಣೆಯು ಪ್ರಾಥಮಿಕ ಆರೋಗ್ಯ ರಕ್ಷಣೆಗೆ 8 ಮುಖ್ಯ ಅಂಶಗಳನ್ನು ತಿಳಿಸಿದೆ:

1. ಯೋಗ್ಯವಾದ ಪೌಷ್ಟಿಕಾಂಶ ಅಭಿವೃದ್ಧಿ
2. ಸಾಕಷ್ಟು ಸುರಕ್ಷಿತ ಕುಡಿಯುವ ನೀರಿನ ಪೂರೈಕೆ.
3. ನೈರ್ಮಲೀಕರಣ
4. ತಾಯಿ ಮತ್ತು ಮಗುವಿನ ರಕ್ಷಣೆ

5. ಪ್ರಮುಖ ಸೋಂಕುರೋಗಗಳ ವಿರುದ್ಧ ಲಸಿಕೆ.

6. ಸ್ಥಳೀಯ ಸಾಂಕ್ರಾಮಿಕ ರೋಗಗಳ ನಿಯಂತ್ರಣ ಮತ್ತು ತಡೆಗಟ್ಟುವಿಕೆ.

7. ಆರೋಗ್ಯ ಸಮಸ್ಯೆಗಳನ್ನು ನಿಯಂತ್ರಿಸುವುದು

8. ಸಾಮಾನ್ಯ ರೋಗ ಮತ್ತು ಹಾನಿಕಾರಕಗಳಿಗೆ ಸೂಕ್ತ ಚಿಕಿತ್ಸೆ.

## ಪ್ರಾಥಮಿಕ ಆರೋಗ್ಯ ರಕ್ಷಣೆಯೇ ಪ್ರಾಥಮಿಕ ಆರೋಗ್ಯ ಪಾಲನೆ

ತಾನು ನೀಡಿದ ಘೋಷಣೆಯನ್ನು ಕಾರ್ಯರೂಪಕ್ಕೆ ತರಲು ಆಲ್ಮಾಅಟ್ಟ ಸಮ್ಮೇಳನವು ಆರೋಗ್ಯರಕ್ಷಣೆಯ ಬಗ್ಗೆ ಈ ರೀತಿ ಸ್ಪಷ್ಟೀಕರಿಸಿದೆ: ಸಮಗ್ರ ಆರೋಗ್ಯಪಾಲನೆಯೆ ಪ್ರಾಥಮಿಕ ಆರೋಗ್ಯ ರಕ್ಷಣೆ ಸಮುದಾ ಯದ ಎಲ್ಲಾ ಕುಟುಂಬಗಳಿಗೂ, ವ್ಯಕ್ತಿಗಳುಗೂ, ಆರೋಗ್ಯದ ತಂತ್ರ ಮತ್ತು ವಿಧಾನಗಳ ಬಳಕೆ ಆಧಾರವಾಗಿ ಕೈಗೊಳ್ಳುವುದು. ಸ್ವಾವಲಂಬನೆ ಹಾಗೂ ಸ್ವನಿರ್ಧಾರದ ಮೂಲಕ ಮುನ್ನಡೆಯ ಪ್ರತಿ ಹಂತದಲ್ಲಿ ಜನರು ಭರಿಸಬಲ್ಲ ಮಟ್ಟದಲ್ಲಿಯೇ ನಿರ್ಧಾರಗಳನ್ನು ಕೈಗೊಳ್ಳಬೇಕು. ಇದು ದೇಶದ ಆರೋಗ್ಯ ವ್ಯವಸ್ಥೆಯ ಅವಿಭಾಜ್ಯ ಅಂಗವಾಗಿದೆ. ಇದರ ಕಾರ್ಯ ವಿಧಾನಬಗಳು ಜನರ ಅನುಕೂಲಗಳಿಗೆ ಹೊಂದಿಕೊಂಡಿರಬೇಕು ಮತ್ತು ಜನರ ಕೈಗೆಟುಕುವಂತಿರಬೇಕು. ಇದು ನಿರಂತೆ ಆರೋಗ್ಯ ಪಾಲನೆಯ ಪ್ರಾಥಮಿಕ ಅಂಸವಾಗಿರುತ್ತದೆ.

ಪ್ರಾಥಮಿಕ ಆರೋಗ್ಯ ಕರ್ಯಕ್ರಮಗಳನ್ನು ಅನುಷ್ಠಾನಗೊಳಿಸುವಲ್ಲಿ ಪ್ರಥಮ ಅಡಚಣೆಯೆಂದರೆ, ಹಣಕಾಸಿನ ಆರ್ಥಿಕ ಸಹಾಯವು ಮಾತ್ರ ಆರೋಗ್ಯ ಕಾರ್ಯಕ್ರಮಗಳಿಗೆ ದೊರಕದ್ದರಿಂದ ಆರೋಗ್ಯ ಕಾರ್ಯಕ್ರಮಗಳ ಅನುಷ್ಠಾನವು ಕುಂಠಿತವಾಗಿದೆ. ದೇಶದ ಹೊರಗಿನಿಂದ ಮತ್ತು ಒಳಗಿನಿಂದ ಸಂಪನ್ಮೂಲಗಳನ್ನು ರೂಢಿಸಿಕೊಂಡರೂ ದುರ್ಬಲ ಸಮುದಾಯವು ಆರೋಗ್ಯ ಕಾರ್ಯಕ್ರಮಗಳ ಸಾಧನವನ್ನು ಅರ್ಥೈಸಿಕೊಂಡು ಸಮ್ಮತಿ ಮತ್ತು ಸಹಯೋಗ ನೀಡಿದಾಗ ಮಾತ್ರ ಪ್ರಾಥಮಿಕ ಆರೋಗ್ಯ ರಕ್ಷಣೆಯ ಕಾರ್ಯಕ್ರಮವು ಹೆಚ್ಚು ಪರಿಣಾಮಕಾರಿಯಾಗುವುದು.

## ಪ್ರಾಥಮಿಕ ಆರೋಗ್ಯ ರಕ್ಷಣೆಯನ್ನು ಈ ರೀತಿ ಕಾಣಬಹುದು:

- ನಿರ್ದಿಷ್ಟ ಸನ್ನಿವೇಶದಲ್ಲಿ ಜೀವಿಸುತ್ತಿರುವ ಜನರ ಆರೋಗ್ಯ ಮತ್ತು ರೋಗಗಳಿಗೆ ಅನುಗುಣವಾದ ಕಾರ್ಯಕ್ರಮ ಶ್ರೇಣಿಗಳನ್ನು ಹಮ್ಮಿಕೊಳ್ಳುವುದು.

- ಸುಸಂಬದ್ಧವಾದ ಮತ್ತು ಉತ್ತಮ ಸಂಘಟಿತ ಮಾಹಿತಿ ಪದ್ಧತಿಯನ್ನು ಹೊಂದಿರುವುದು.

- ಎಲ್ಲಾ ಜನರಿಗೂ ರೋಗಗಳ ವಿರುದ್ಧ ಅವಶ್ಯವಾದ ರಕ್ಷಣೆಯನ್ನು ಒದಗಿಸುವುದು ವೈಯಕ್ತಿಕ ಹಾಗೂ ಸಮುದಾಯದ ಭಾಗವಹಿಸುವಿಕೆ, ಎಲ್ಲಾ ಕ್ಷೇತ್ರಗಳ ಸಹಭಾಗಿತ್ವ, ಮತ್ತು ಆರೋಗ್ಯ ಪದ್ಧತಿಯ ಪುನಶ್ಚೇತನದ ಕೌಶಲ್ಯ.

- ಅಷ್ಟೇ ಅಲ್ಲದೆ ಪ್ರಾಥಮಿಕ ಆರೋಗ್ಯವು ಸಾಮಾಜಿಕ ಸಮಾನತೆ, ಸ್ವಾವಲಂಬನೆ ಮತ್ತು ಸಾಮುದಾಯಿಕ ಅಭಿವೃದ್ಧಿ ತತ್ವಗಳ ಮೇಲೆ ಅವಲಂಬಿಸಿದೆ.

- ಸ್ವಾತಂತ್ರ್ಯ ಪೂರ್ವದಿಂದಲೂ ಜನರು ಗ್ರಾಮೀಣ ಪ್ರದೇಶಗಳಲ್ಲಿ ದೊರಕುವ ಗಿಡಮೂಲಿಕೆಗಳ ಬಳಕೆ ಮತ್ತು ಪಾರಂಪರಿಕ ವೈದ್ಯರ ಸೇವೆಯಿಂದ ತಮ್ಮ ಆರೋಗ್ಯವನ್ನು ಸುಧಾರಿಸಿಕೊಳ್ಳುತ್ತಿದ್ದರು.

ವಾಸ್ತವವಾಗಿ ಭಾರತದ ಜನರು ವೈವಿಧ್ಯಮಯ ಜ್ಞಾನ, ಸಾಧನೆ ಮತ್ತು ವಿವಿಧ ಕೌಶಲ್ಯಗಳನ್ನು ಬಳಸುತ್ತಿದ್ದುದರಿಂದ ನಮ್ಮ ಪಾರಂಪರಿಕ ವೈದ್ಯ ವಿಧಾನವು ಮುರಿಯಲಾಗದ ಚಿಕಿತ್ಸಾ ಸರಣಿಯನ್ನು ನಿರ್ಮಿಸಿದೆ. ಸರ್ವರಿಗೂ ಆರೋಗ್ಯದ ಚಟುವಟಿಕೆಯಲ್ಲಿ ಗುರುತರವಾದ ಕೊಡುಗೆಯನ್ನು ನೀಡಲು ಮಾನವ ಮತ್ತು ಜೈವಿಕ ಸಂಪನ್ಮೂಲ ಗಳ ತಳಹದಿಯನ್ನು ಹೊಂದಿರುವ ವೈದ್ಯರ ಜ್ಞಾನವನ್ನು ಪಡೆಯಲೇ ಬೇಕಾಗುತ್ತದೆ. ಭಾರತವು ತನ್ನ ಅದ್ವಿತೀಯ ಸಾಂಪ್ರದಾಯಿಕ ಜ್ಞಾನವನ್ನು ಸಾರ್ವಜನಿಕ ಅಧಿಪತ್ಯಕ್ಕೋಸ್ಕರ ಉಳಿಸಿಕೊಳ್ಳಬೇಕಾಗಿದೆ.

ಗ್ರಾಮೀಣ ಪ್ರದೇಶದಲ್ಲಿ ವಿಫುಲವಾಗಿ ದೊರಕುವ ಚಿತ್ಸಾ ಸಂಪನ್ಮೂಲಗಳನ್ನು ಬಳಸಿಕೊಂಡು ಗ್ರಾಮೀಣ ಸೂಲಗಿತ್ತಿಯುರು, ಪಾರಂಪರಿಕ ವೈದ್ಯರು, ಮೂಲಿಕಾವೈದ್ಯರು, ಗೃಹಿಣಿಯರು ಮೊದಲಾದವರನ್ನು ಸರ್ವರಿಗೂ ಆರೋಗ್ಯ ದೊರಕಿಸುವಲ್ಲಿ ಗೌರವಯುತವಾಗಿ ಸಜ್ಜುಗೊಳಿಸಬೇಕಿದೆ.

ಹೆಚ್ಚು ಕಮ್ಮಿ ಶೇಕಡ 80ರಷ್ಟು ಖಾಯಿಲೆಗಳನ್ನು ತಡೆಯಬಹುದಾಗಿದ್ದು, ಅವುಗಳು ಡಷ್ಟು ಸರಳವೆಂದರೆ ವೈದ್ಯಕೀಯ ನೆರವಿಲ್ಲದ ಗುಣಪಡಿಸಬಹುದಾಗೆ. ಜನರಿಗೆ ಸಸ್ಯಗಳು ಮತ್ತು ಆರೋಗ್ಯ ರಕ್ಷಣೆಯ ಬಗ್ಗೆ ಇರುವ ಸಾಂಪ್ರದಾಯಿಕ ಜ್ಞಾನವು ಕ್ಷೀಣಿಸುತ್ತಿರುವುದು ಎಚ್ಚರಿಕೆಯ ಗಂಟೆಯನ್ನು ಮೊಳಗಿಸಿದೆ. **"ಹಸಿರು ಆರೋಗ್ಯ"** ಕಾರ್ಯಕ್ರಮವನ್ನು ಆರಂಭಿಸಿ ಜನರು ತಮ್ಮ ಮನೆಯ ಹಿತ್ತಿಲಲ್ಲಿ ಅಥವಾ ಕುಂಡಗಳಲ್ಲಿ ಸಸ್ಯಗಳನ್ನು ಬೆಳೆಸಿ, ಬಳಸಿ ಅವುಗಳಿಂದ ಸಾಮಾನ್ಯ ಆರೋಗ್ಯ ತೊಂದರೆಗಳನ್ನು ನಿವಾರಿಸಿಕೊಳ್ಳಬಹುದು.

ಜನರಿಗೆ ಉತ್ತಮ ಆರೋಗ್ಯ ನೀಡುವುದು ಸರ್ಕಾರದ ಜವಾಬ್ದಾರಿಯಾಗಿದ್ದರೂ ಜನರಿಗೂ ತಮ್ಮ ಆರೋಗ್ಯ ಕಾಪಾಡಿಕೊಳ್ಳುವ ಹಕ್ಕು ಮತ್ತು ಬಾಧ್ಯತೆ ಇದೆ. ಅವರು ಅನಾರೋಗ್ಯ ಪೀಡಿತರಾದಾಗ ತಮ್ಮನ್ನು ತಾವು ನೋಡಿಕೊಳ್ಳಬೇಕಾಗುತ್ತದೆ. ಅಲ್ಲದೆ ಇದೇ ಕರ್ತವ್ಯವನ್ನು ತಮ್ಮ ಕುಟುಂಬದಲ್ಲಿ, ತಮ್ಮ ಸಹಚರರಲ್ಲಿ ಹಾಗೂ ನೆರೆಹೊರೆಯವರಲ್ಲಿ ಸಹ ತೋರಬೇಕಾಗುತ್ತದೆ. ಪ್ರಾಮಾಣಿಕವಾಗಿ ಪ್ರಯತ್ನಿಸಿದರೆ ಗ್ರಾಮೀಣ ಮತ್ತು ನಗರ ಪ್ರದೇಶದ ಜನರು ಸಸ್ಯ ಔಷಧಿಗಳಿಂದ ಪ್ರಾತಮಿಕ ಆರೋಗ್ಯ ರಕ್ಷಣೆಯಲ್ಲಿ ಸಾಕಷ್ಟು ಲಾಭ ಪಡೆಯಬಹುದು. ಸಕ್ರಿಯವಾಗಿ ಕಾರ್ಯನಿರ್ವಹಿಸುತ್ತಿರುವ ಸ್ವಯಂ ಸೇವಾ ಸಂಸ್ಥೆಗಳು ಮತ್ತು ಸಮುದಾಯಕೇಂದ್ರಗಳ ಸೇವೆ ಮತ್ತು ಸಹಕಾರವನ್ನು ಬಳಸಿಕೊಂಡು ಸರ್ಕಾರಿ ಸಂಪರ್ಕ ಜಾಲವನ್ನು ಸಮಗ್ರವಾಗಿ ಉಪಯೋಗಿಸಿಕೊಳ್ಳಬೇಕು. ಎಲ್ಲರಿಗೂ ಆರೋಗ್ಯ ಎಂಬ ಪ್ರಾಥಮಿಕ ಆರೋಗ್ಯದ ಗುರಿಯನ್ನು ಮುಟ್ಟಲು ಈ ಎಲ್ಲಾ ಸಂಪನ್ಮೂಲಗಳನ್ನು ಬಳಸಿಕೊಳ್ಳುವುದು ಅಗತ್ಯ.

* * * * * *

# ಗಿಡಮೂಲಿಕೆಗಳು ಮತ್ತು ಪಾರಂಪರಿಕ ಚಿಕಿತ್ಸೆ

ಭಾರತೀಯ ಆರೋಗ್ಯ ಪರಂಪರೆ ವಿಶ್ವದಲ್ಲಿಯೇ ಒಂದು ವಿಶಿಷ್ಟವಾದ ಆರೋಗ್ಯ ಪರಂಪರೆಯೆಂದರೆ ಅತಿಶಯೋಕ್ತಿಯೇನಲ್ಲ. ನಮ್ಮ ಪರಂಪರೆ ಜೀವ ಮತ್ತು ಜೀವನದ ಬಗ್ಗೆ ತಿಳುವಳಿಕೆಯನ್ನು ನೀಡುವುದಲ್ಲದೆ, ಮಾನವನ ಜೀವನ ವಿಧಾನ ಮತ್ತು ಜೀವನಶೈಲಿಯ ಬಗ್ಗೆ ಸಹ ಒತ್ತು ನೀಡುತ್ತದೆ. ಭಾರತೀಯ ಆರೋಗ್ಯ ಪರಂಪರೆಯ ಪಿತಾಮಹರಾದ ಚರಕಾಚಾರ್ಯರು ಆರೋಗ್ಯವನ್ನು ಈ ಕೆಳಕಂಡಂತೆ ವರ್ಣಿಸಿರುತ್ತಾರೆ.

**"ಸಮದೋಷ ಸಮಾಗ್ನಿಶ್ಚ ಸಮಧಾತು ಮಲಕ್ರಿಯ:**

**ಪ್ರಸನ್ನಾತ್ಮೇಂದ್ರಿಯ ಮನ: ಸ್ವಸ್ಥ ಇತ್ಯಭಿಧೀಯತೇ"**

ಅಂದರೆ. ತ್ರಿದೋಷಗಳಾದ ವಾತ, ಪಿತ್ತ ಮತ್ತು ಕಫ ಇವುಗಳು ಸಮತೋಲನವಾಗಿದ್ದರೆ, ಅಗ್ನಿಯು ಸಮತೋಲನದಲ್ಲಿದ್ದರೆ ಮತ್ತು ಸಂಪತ್ತುಗಳಾದ ರಸ, ರಕ್ತ, ಮಾಂಸ, ಮೇದಸ್ಸು, ಅಸ್ತಿ, ಮಜ್ಜ ಹಾಗೂ ಶುಕ್ರ ಮಲಕ್ರಿಯಗಳು ಸುಸ್ಥಿತಿಯಲ್ಲಿದ್ದು, ಆತ್ಮ ಇಂದ್ರಿಯ, ಮನಸ್ಸು ಪ್ರಸನ್ನವಾಗಿದ್ದರೆ, ಅಂತಹವರನ್ನು ಆರೋಗ್ಯವಂತರು ಎಂದು ಹೇಳಬಹುದು.

ನಮ್ಮ ಆರೋಗ್ಯ ಪರಂಪರೆಯ ದೃಷ್ಟಿಯಿಂದ ಆರೋಗ್ಯವು ಕೇವಲ ದೇಹದ ಆರೋಗ್ಯಕ್ಕೆ ಮಾತ್ರ ಸೀಮಿತವಾಗಿದೆ. ಆತ್ಮ, ಇಂದ್ರಿಯ ಮತ್ತು ಮನಸ್ಸುಗಳನ್ನು ಸಹ ಸುಸ್ಥಿತಿಯಲ್ಲಿಟ್ಟು ಪ್ರಸನ್ನವಾಗಿ ಇಡುವುದಾಗಿದೆ. ಮಾನವನು ಜೀವಿತದ ಅವಧಿಯಲ್ಲಿ ಎಚ್ಚರಿಕೆಯಿಂದ ಇದ್ದು, ರೋಗ ಬಾರದಂತೆ ಮುನ್ನೆಚ್ಚರಿಕೆ ಕ್ರಮಗಳನ್ನು ಹಾಗೂ ರೋಗ ಬಂದಾಗ ನಿವಾರಣೋಪಾಯಗಳನ್ನು ಪಾಲಿಸಬೇಕೆಂದು ನಮ್ಮ ಆರೋಗ್ಯ ಶಾಸ್ತ್ರಗಳು ತಿಳಿಸುತ್ತವೆ. ಮಾನವನು ತನ್ನ ಜೀವನದಲ್ಲಿ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬ ನಾಲ್ಕು (ಚತುರ್ವಿಧ) ಪುರುಷಾರ್ಥಗಳನ್ನು ಸಾಧಿಸಲು, ಆರೋಗ್ಯವು ಪ್ರಮುಖ ಪಾತ್ರ ವಹಿಸುತ್ತದೆ. ನಮ್ಮ ಆರೋಗ್ಯ ಪರಂಪರೆಯು ಸುಮಾರು ಐದು ಸಾವಿರ ವರುಷಗಳಷ್ಟು ಹಿಂದಿನದು. ಆಧುನಿಕ ಔಷಧ ಪರಂಪರೆಯು ನಮ್ಮ ಪರಂಪರೆಯಲ್ಲಿ ಐದು ಸಾವಿರ ವರ್ಷಗಳ ಹಿಂದೆ

ತಿಳಿಸಿದ ಆರೋಗ್ಯ ರಕ್ಷಣೆ ಹಾಗೂ ಆರೋಗ್ಯ ಪಾಲನೆಯ ತತ್ವಗಳನ್ನು ಇತ್ತೀಚೆಗೆ ಪ್ರತಿಪಾದಿಸುತ್ತಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿರುತ್ತದೆ. ನಮ್ಮ ಹಿರಿಯರು ಹಾಗೂ ಋಷಿಗಳು ಅತ್ಯಂತ ಜ್ಞಾನಿಗಳು ಹಾಗೂ ಉತ್ತಮ ಅನುಭವಿಗಳಾಗಿದ್ದು, ಆರೋಗ್ಯ ಕಪಾಡಿಕೊಳ್ಳುವಲ್ಲಿ ಸಾವಿರಾರು ವರ್ಷಗಳ ಹಿಂದಯೇ ಉತ್ತಮ ಮಾರ್ಗದರ್ಶನ ನೀಡಿರುತ್ತಾರೆ.

ಗಿಡಮೂಲಿಕಾ ಚಿಕಿತ್ಸೆಯು ಪ್ರಾಕೃತಿಕ ಚಿಕಿತ್ಸೆಯಾಗಿದ್ದು, ಆರೋಗ್ಯದ ಮೇಲೆ ಯಾವುದೇ ರೀತಿಯ ದುಷ್ಪರಿಣಾಮ ಬೀರುವುದಿಲ್ಲ. ಗಿಡಮೂಲಿಕೆಗಳು ಸ್ವಲ್ಪ ನಿಧಾನವಾಗಿ ಕಾರ್ಯವೆಸಗಿದರೂ ರೋಗವನ್ನು ಪೂರ್ಣವಾಗಿ ಗುಣಪಡಿಸಲು ಹಾಗೂ ರೋಗ ಬಾರದಂತೆ ತಡೆಗಟ್ಟಲು ಉಪಕಾರಿ. ನಿಸರ್ಗದ ವರದಾನವಾದ ಹಾಗೂ ದೇವರ ಅತ್ಯಮೂಲ್ಯ ಕೊಡುಗೆಗಳಾದ ವನಸ್ಪತಿ, ಬಳ್ಳಿ, ಎಲೆ, ಕಾಯಿ, ಹಣ್ಣು, ಬೇರು, ತೊಗಟೆ, ಹೂ ಮುಂತಾದವುಗಳನ್ನು ಮನೆ ಹಿತ್ತಲಿನಲ್ಲಿ ಬೆಳೆಸಿ ಉಪಯೋಗಿಸುವುದರಿಂದ ತಾಜಾ ಹಾಗೂ ಶುದ್ಧ ಔಷಧಿಯು ಲಭ್ಯವಾಗುವುದಲ್ಲದೆ ಖರ್ಚು ಸಹ ಕಡಿಮೆ. ಶಾರೀರಿಕ, ಮಾನಸಿಕ ಬೆಳವಣಿಗೆಗೆ ಬೇಕಾದ ಅನ್ನಾಂಗಗಳು, ಜೀವಸತ್ವಗಳು ಗಿಡಮೂಲಿಕೆಗಳಲ್ಲಿದ್ದು, ರೋಗಗಳು ಬಾರದಂತೆ ತಡೆಯುವ ಸಾಮರ್ಥ್ಯ ಹೊಂದಿವೆ. ಅರಣ್ಯಗಳಲ್ಲಿ ತಪಸ್ವಿಗಳು, ಋಷಿಮುನಿಗಳು, ಆಶ್ರಮವಾಸಿಗಳು, ದೀರ್ಘಾಯುಷಿಗಳಾಗಿ ಸ್ಥಿತಪ್ರಜ್ಞೆ ಮನೋಭಾವದಿಂದ ಬದುಕಿ ಬಾಳಿದ ಗುಟ್ಟು ಅವರುಗಳು ಸೇವಿಸುತ್ತದ್ದ ಆಹಾರ ರೂಪದ ವನಸ್ಪತಿಗಳು ಮತ್ತು ಅವರು ವಾಸಿಸುತ್ತಿದ್ದ ಪರಿಸರ ಮುಖ್ಯ ಕಾರಣವಾಗಿದೆ. ವನಸ್ಪತಿಗಳು ಹಳ್ಳಿಗಳಲ್ಲಿ ಮನೆಯ ಅಂಗಳದಲ್ಲಿ ತಾಜಾ ರೀತಿಯಲ್ಲಿ ದೊರೆಯುತ್ತಿದ್ದು, ಇವುಗಳಿಂದ ತಯಾರಿಸುವ ಔಷಧಿಗಳು ನೈಸರ್ಗಿಕವಾಗಿರುವುದರಿಂದ ದೇಹಕ್ಕೆ ಒಗ್ಗುತ್ತವೆ ಹಾಗೂ ರೋಗಗಳನ್ನು ಬೇಗ ಗುಣಪಡಿಸುತ್ತವೆ.

ನಮ್ಮ ಆರೋಗ್ಯ ಪರಂಪರೆಯಾದ ಆಯುರ್ವೇದವು ಸೃಷ್ಟಿಕರ್ತನಾದ ಬ್ರಹ್ಮನಿಂದ ಉದಯವಾಗಿ, ದಕ್ಷ ಪ್ರಜಾಪತಿ, ಅಶ್ವಿನಿಕುಮಾರರು ಹಾಗೂ ಇಂದ್ರನಿಗೆ ಬಂದಿತೆಂದು ತಿಳಿಯುತ್ತದೆ. ಇಂದ್ರನಿಂದ ಭಾರಧ್ವಾಜ ಮುನಿಗಳು ಜ್ಞಾನ ಪಡೆದಿದ್ದು, ಅವರಿಂದ ಭೂಲೋಕದಲ್ಲಿ ಅನೇಕ ಋಷಿಗಳ ಮುಖಾಂತರ ಆಯುರ್ವೇದವು ಪ್ರಸಾರವಾಯಿತೆಂದು ಶಾಸ್ತ್ರಗಳು ಹೇಳುತ್ತವೆ. ಈ ಪರಂಪರೆಯಲ್ಲಿ ಗರ್ಭಿಣಿ ಚಿಕಿತ್ಸೆ, ಬಾಣಂತಿ ಚಿಕಿತ್ಸೆ, ಬಾಲ ಚಿಕಿತ್ಸೆಯಿಂದ ಹಿಡಿದು ವೃದ್ಧಾಪ್ಯದವರೆಗಿನ ಚಿಕಿತ್ಸೆಗಳು ಸೇರಿವೆ. ಗಿಡಮೂಲಿಕೆಗಳಿಂದಲೇ ಆರೋಗ್ಯವನ್ನು ಸಾವಿರಾರು ವರ್ಷಗಳಿಂದ ಕಾಪಾಡಿಕೊಂಡು ಬಂದಿದ್ದು, ಸುಮಾರು ಇನ್ನೂರು ವರ್ಷಗಳ ಹಿಂದೆ ಬಂದ ಇಂಗ್ಲೀಷ್ ಆರೋಗ್ಯ ಪದ್ಧತಿಗೆ ನಾವು ಜೋತುಬಿದ್ದಿರುವುದು ವಿಪರ್ಯಾಸವೇ ಸರಿ. ಇತ್ತೀಚಿನ ದಿನಗಳಲ್ಲಿ ಪಾಶ್ಚಿಮಾತ್ಯರು ಸಹ ತಮ್ಮ

ಆರೋಗ್ಯಕ್ಕಾಗಿ ನೈಸರ್ಗಿಕ ವಸ್ತುಗಳು ಮತ್ತು ಪಾರಂಪರಿಕ ವೈದ್ಯಕೀಯ ಪದ್ಧತಿಯತ್ತ ವಾಲುತ್ತಿದ್ದಾರೆ. ಈಗಲಾದರೂ ನಾವೇ ಕಡೆಗಣಿಸಿರುವ ನಮ್ಮ ಉತ್ಕೃಷ್ಟ ಪಾರಂಪರಿಕ ಪದ್ಧತಿಯನ್ನು ಪುನಶ್ಚೇತನಗೊಳಿಸುವುದು ನಮ್ಮ ಕರ್ತವ್ಯ.

ಹಸಿರು ಸಸ್ಯಗಳನ್ನು ಬೆಳೆಸಿ, ಶುದ್ಧಗಾಳಿಯನ್ನು ಕುಡಿದು, ಶುದ್ಧ ನೈಸರ್ಗಿಕ ಗಿಡಮೂಲಿಕೆಗಳನ್ನು ಸೇವಿಸಿ ಆರೋಗ್ಯಕ್ಕೆ ನಾಂದಿ ಹಾಡಬೇಕಾದರೆ ಪಾರಂಪರಿಕ ಹಸಿರು ಆರೋಗ್ಯದ ದಾರಿಯಲ್ಲಿ ಸಾಗಬೇಕಾಗಿದೆ. ಈ ನಿಟ್ಟಿನಲ್ಲಿ ಈಗಿರುವ ಕಾಡುಗಳನ್ನು ಮತ್ತು ಹಸಿರನ್ನು ಸಂರಕ್ಷಿಸುವುದಲ್ಲದೇ ಮರಗಿಡಗಳನ್ನು ಬೆಳೆಸುವುದರ ಮೂಲಕ ಭೂತಾಯಿಗೆ ಹೆಚ್ಚಿನ ಹಸಿರು ಹೊದಿಕೆ ಹೊದಿಸಬೇಕಾಗಿದೆ.

* * * * *

# ಮನೆ ಗೃಹ ಬಳಕೆಯ ವಿಷ ವಸ್ತುಗಳು

## ಟಿಂಚರ್ ಅಯೋಡಿನ್

ಮೈಕೈ ತರಚಿದಾಗ ಅಥವಾ ಸಣ್ಣ ಪುಟ್ಟ ಗಾಯವಾಗಿ ನೆತ್ತರು ಬರುತ್ತಿದ್ದರೆ ಟಿಂಚರ್ ಅಯೋಡಿನ್ ಅದ್ದಿ ಹತ್ತಿಯನ್ನಿರಿಸಿ ಪಟ್ಟಿ ಕಟ್ಟುತ್ತಾರೆ. ಇದರಿಂದ ನೆತ್ತರು ಹೆಪ್ಪುಗಟ್ಟಿ ರಕ್ತಸ್ರಾವ ನಿಲ್ಲುತ್ತದೆ; ನಂಜಾಗದೆ ಗಾಯ ಒಣಗುತ್ತದೆ. ಹೀಗೆ ಟಿಂಚರ್ ಅಯೋಡಿನ್ ಉಪಯುಕ್ತವಾದ ಒಂಧು ಮನೆ ಮದ್ದಾಗಿದ್ದು ಹಳ್ಳಿಯ ಮನೆಯಗಳಲ್ಲಿ ಕೂಡ ಇದನ್ನು ನಾವು ಕಾಣಬಹುದು. ಟಿಂಚರ್ ಅಯೋಡಿನ್ ಕಂದು ಬಣ್ಣಕ್ಕಿದ್ದು ಗಾಳಿಗೆ ನಿಧಾನವಾಗಿ ಆವಿಯಾಗುತ್ತದೆ.

ಇದು ಸ್ಪರ್ಶ ಹಾಗೂ ಸೇವನಾ ವಿಷ.

### ಸ್ಪರ್ಶ ವಿಷ- ಲಕ್ಷಣಗಳು

ನಾಲ್ಕಾರು ಹನಿ ಟಿಂಚರ್ ಅಯೋಡಿನ್ ಅಕಸ್ಮಾತ್ ಕಣ್ಣಿಗೆ ತಗುಲಿದರೆ ಕಣ್ಣುನೋವು, ಉರಿ ಊತ ಮೊದಲಾದ ತೊಂದರೆಗಳು ಉಂಟಾಗಬಹುದು; ಅಂಧತ್ವ ಉಂಟಾಗುವ ಸಂಭವವೂ ಉಂಟು.

### ಪ್ರಥಮ ಚಿಕಿತ್ಸೆ

ಕಣ್ಣಿಗೆ ಟಿಂಚರ್ ಅಯೋಡಿನ್ ಸ್ಪರ್ಶವಾದರೆ ತಕ್ಷಣ ತಣ್ಣೀರಿನಿಂದ ಕಣ್ಣು ತೊಳೆಯಬೇಕು. ಅನಂತರ ಕಣ್ಣಿಗೆ ಸಡಿಲವಾದ ಬಟ್ಟೆಯ ಪಟ್ಟಿಯನ್ನು ಕಟ್ಟಿ ವೈದ್ಯ ಸಹಾಯಕ್ಕೆ ಧಾವಿಸಬೇಕು.

### ಸೇವನಾವಿಷ –ಲಕ್ಷಣಗಳು

ಅಕಸ್ಮಾತ್ ಟಿಂಚರ್ ಅಯೋಡಿನನ್ನು ಕುಡಿದರೆ ರೋಗಿಯ ನಾಲಿಗೆ ಮತ್ತು ಬಾಯಲ್ಲಿ ಕಂಡು ಬಣ್ಣದ ಛಾಯೆ ಹಾಗೂ ಲೋಹದ ರುಚಿ, ವಾಸನೆ ಕಾಣಿಸುತ್ತದ. ಗಂಟಲು ನೋವು, ನವೆ ಮತ್ತು ಅಸಹ್ಯ ಭಾವನೆ ಉಂಟಾಗುತ್ತದೆ. ಹೊಟ್ಟೆ

ನೋವು, ವಾಂತಿ ಬೇಧಿ, ನೀರಡಿಕೆ (ದಾಹ) ಮತ್ತು ಜ್ವರ ಕಾಣಿಸುತ್ತದೆ. ಮೂತ್ರವಿಸರ್ಜನೆ ಲೋಪವಾಗುತ್ತದೆ. ಕ್ರಮೇಣ ಮೂರ್ಛೆ–ಸಾವು ಸಂಭವಿಸಬಹುದು.

**ಪ್ರಥಮ ಚಿಕಿತ್ಸೆ**

ರೋಗಿಗೆ ತಕ್ಷಣ ಮೂರು ನಾಲ್ಕು ಲೋಟ ಹಾಲು ಕುಡಿಸಬೇಕು. (ಹಾಲು ದೊರಕದಿದ್ದರೆ ನೀರನ್ನಾದರೂ ಕುಡಿಸಬೇಕು) ನಾಲ್ಕಾರು ಕೋಳಿ ಮೊಟ್ಟೆಯ ಲೋಳೆಯನ್ನು ಹಾಲಿನಲ್ಲಿ ಅಥವಾ ನೀರಿನಲ್ಲಿ ಕಲಸಿ ಕುಡಿಸಬೇಕು. ಕೃತಕ ವಾಂತಿ ಮಾಡಿಸಬೇಕು.

ರೋಗಿಗೆ ತುರ್ತಾಗಿ ವೈದ್ಯಕೀಯ ನೆರವನ್ನು ಒದಗಿಸಬೇಕು.

**ಮುನ್ನೆಚ್ಚರಿಕೆ**

ಮಕ್ಕಳ ಕೈಗೆ ಎಟುಕದಂತೆ ಟಂಚರ್ ಅಯೋಡಿನ್ ಸೀಸೆಯನ್ನು ಎತ್ತರದಲ್ಲಿ ಇರಿಸಬೇಕು. ಸೇವಿಸುವ ಇತರ ಔಷಧಿ ಸೀಸೆಗಳ ಜತೆಯಲ್ಲಿ ಟಿಂಚರ್ ಅಯೋಡಿನ್ ಅನ್ನು ಇರಿಸಬಾರದು.

* * * *

**ಫಿನಾಯಿಲ್**

ಆಸ್ಪತ್ರೆಗೆ ಮುಂಜಾನೆ ಹೊತ್ತು ಭೇಟಿ ನೀಡಿದರೆ, ರೋಗಿಗಳ ವಾರ್ಡನ್ನು ಗುಡಿಸಿ ಚೊಕ್ಕಟಗೊಳಿಸುವುದನ್ನು ನೋಡಬಹುದು. ಅನಂತರ ಫಿನಾಯಿಲ್ ತೋಯಿಸಿದ ಬಟ್ಟೆಯಿಂದ ಒರೆಸುತ್ತಾರೆ. ಶುಚಿತ್ವದ ಕಡೆಗೆ ಹೆಚ್ಚು ಗಮನ ನೀಡಿ ಮನೆಯ ಪಡಸಾಲೆ, ಅಡುಗೆ ಕೋಣೆ, ಬಚ್ಚಲುಗಳನ್ನು ಫಿನಯಿಲ್ ಹಾಕಿ ತೊಳೆಯುವುದು ಈಗ ರೂಢಿಯಾಗಿದೆ.

ದಿನಸಿ ಅಂಗಡಿಯಲ್ಲೂ ದೊರಕುವ ಫಿನಾಯಿಲ್ ನಿತ್ಯ ಬಳಕೆಯ ಒಂದು ಕ್ರಿಮಿನಾಶಕ. ಸಾಮಾನ್ಯವಾಗಿ ದೊರಕುವ ಫಿನಾಯಿಲ್ ಕಂದು–ಕಪ್ಪು ಬಣ್ಣಕ್ಕಿರುವ ದ್ರವ. ನೀರು ಬೆರೆಸಿದಾಗ ಅದು ತೆಳು ಹಾಲಿನ ಬಣ್ಣಕ್ಕೆ ತಿರುಗುತ್ತದೆ. ಫಿನಾಯಿಲಿಗೆ ಮೂಗಿಗೆ ಬಡಿಯುವ ಗಾಟು ವಾಸನೆಯಿದೆ. ಈಗ ಸುವಾಸಿತ ಫಿನಾಯಿಲ್ ಸಹ ಮಾರುಕಟ್ಟೆಯಲ್ಲಿದೆ. ಇದ್ದಲು ಮೂಲದಿಂದ ಫಿನಾಯಲ್ ತಯಾರಿಸುತ್ತಾರೆ. ಇದೇ ಗುಂಪಿಗೆ ಸೇರಿದ ಡಾಂಬರ್ (ಕಲ್ಲೆಣ್ಣೆ–ಟಾರು) ಹಾಗೂ ಕಾರ್ಬಾಲಿಕ್ ಆಮ್ಲವನ್ನು ಕೂಡ ಆಕಸ್ಮಿಕವಾಗಿ ಸೇವಿಸಿದರೆ–ಪ್ರಾಣಾಪಾಯ ಸಂಭವಿಸಬಹುದು.

## ಸೇವನಾ ವಿಷ: ಲಕ್ಷಣಗಳು

ರೋಗಿಯ ಬಾಯಲ್ಲಿ ಫಿನಾಯಲ್ ವಾಸನೆ ಕಾಣಿಸುತ್ತದೆ; ನಾಲಿಕೆ, ಗಂಟಲು ಮತ್ತು ಬಾಯಿ ಸುಡುತ್ತದೆ. ಹೊಟ್ಟೆ ಉರಿ, ಹೊಟ್ಟೆನೋವು, ವಾಕರಿಕೆ, ನೊರೆ ಮತ್ತು ಶ್ಲೇಷ್ಮಬೆರೆತ ವಾಂತಿಯೂ ಭೇದಿಯೂ ಪ್ರಾರಂಭವಾಗುತ್ತದೆ. ರೋಗಿಯ ತುಟಿ ಮತ್ತು ಬಾಯಿಯ ಒಳಪದರು ಬಿರುಸಾಗುತ್ತದೆ. ಮೈಬೆವರುವುದು, ಮುಖ ಕಳೆಗುಂದುವುದು, ದವಡೆ ಬಿಗಿಯುವುದು ಹಾಗೂ ಉಸಿರಾಟದ ತೊಂದರೆ ಕಾಣಿಸುತ್ತದೆ. (ಉಸಿರಿನಲ್ಲಿಯೂ ಫಿನಾಯಿಲ್ ವಾಸನೆ ಇರುತ್ತದೆ) ಭಯ-ವಿಕಾರವಾದ ದೈಹಿಕ ಚಟುವಟಿಕೆಯೂ ಬುದ್ಧಿ ಭ್ರಮೆಯ ಲಕ್ಷಣಗಳೂ ಗೋಚರಿಸಬಹುದು. ಮೈನಡುಕ, ಮೂತ್ರಲೋಪ; ಮೂರ್ಛೆ ಮತ್ತು ಮರಣ ಕೂಡ ಸಂಭವಿಸಬಹುದು.

## ಪ್ರಥಮ ಚಿಕಿತ್ಸೆ:

ಫಿನಾಯಿಲ್ ಸೇವಿಸಿದ ರೋಗಿಗೆತಕ್ಷಣ ಒಂದಷ್ಟು ಹರಳೆಣ್ಣೆಯನ್ನು (ಔಡಲೆಣ್ಣೆ, ಕೈಎಣ್ಣೆ) ಕುಡಿಸಬೇಕು. ನೀರು, ಎಳನೀರು, ಗ್ಲೂಕೋಸ್ ನೀರು ಅಥವಾ ಉಪ್ಪು ಸಕ್ಕರೆ ಪಾನಕ ಕುಡಿಸಬೇಕು.

ವಿಳಂಬಿಸದೆ ವೈದ್ಯಕೀಯ ಸಹಾಯ ಒದಗಿಸಬೇಕು.

## ಸ್ಪರ್ಶವಿಷ: ಲಕ್ಷಣಗಳು

ಫಿನಾಯಿಲ್‌ನ್ನು ದೀರ್ಘಕಾಲ ಸ್ಪರ್ಶಿಸುತ್ತಿದ್ದರೆ ನವೆ, ಉರಿ, ಕೈಕಾಲು ಜೋಮು ಮೊದಲಾದ ತೊಂದರೆಗಳು ಕಾಣಿಸಬಹುದು. ಅಂತಹ ರೋಗಿಯನ್ನು ತಕ್ಷಣ ಫಿನಾಯಿಲ್ ಸಂಪರ್ಕದಿಂದ ತಪ್ಪಿಸಿ, ಆ ಭಾಗವನ್ನು ತಣ್ಣೀರಿನಿಂದ ತೊಳೆದು, ಹರಳೆಣ್ಣೆ ಸವರಬೇಕು.

## ವಿಶೇಷ ಸೂಚನೆ

ರಸ್ತೆಗೆ ಡಾಂಬರ್ (ಟಾರು) ಹಾಕುವ ಕೆಲಸಗಾರರು ಕೈಕಾಲುಗಳಲ್ಲಿ ಹುಣ್ಣಾಗದಂತೆ ರಬ್ಬರಿನ 'ಗಂಬೂಟ್' ಮತ್ತು ಕೈಕವಚ ಬಳಸಬೇಕು. ಡಾಂಬರ್ ಸ್ಪರ್ಶವಾದ ಭಾಗಕ್ಕೆ ಹರಳೆಣ್ಣೇ ಸವರಬೇಕು.

## ಮುನ್ನೆಚ್ಚರಿಕೆ

ಫಿನಾಯಿಲ್ ಸೀಸೆ ಮಕ್ಕಳ ಕೈಗೆ ಸಿಗದಂತೆ ಜೋಪಾನವಾಗಿ ಇರಿಸಬೇಕು.

## ಸೀಮೆ ಎಣ್ಣೆ

ಸೀಸೆಯಲ್ಲೊ ಡಬ್ಬದಲ್ಲೋ ತುಂಬಿಸಿ ಮುಚ್ಚಳ ಹಾಕಿ ಇರಿಸಿದಾಗ ನಿರುಪದ್ರಕಾರಿಯಾದ ಸೀಮೆಎರ್ಣಣೆ ಅಗನಿ ಸ್ಪರ್ಶವಾದರೆ ಭಗ್ಗನೆ ಉರಿದು ಅಪಯ ಉಂಟುಮಾಡಬಲ್ಲದು ಎಂಬುದು ಎಲ್ಲರಿಗೂ ಗೊತ್ತು. ಆದರೂ ನಿತ್ಯ ಜೀವನದಲ್ಲಿ ಉರಿಸುವ ಚಿಮಿಣಿದೀಪ ಲಾಟೀನಿನಿಂದ ತೊಡಗಿ, ಅಡಿಗೆಯ ಸ್ಟೌವಿನವರೆಗೆ ಒಂದಲ್ಲ ಒಂದು ರೀತಿಯಲ್ಲಿ ಸೀಮೆಎಣ್ಣೆಯನ್ನು ಬಳಸುತ್ತೇವೆ.

ಸೀಮೆಎಣ್ಣೆ ಸೇವನಾವಿಷ ಮತ್ತು ಮೂಸು-ಮುಟ್ಟು ವಿಷ. ನಾಲ್ಕು ಔನ್ಸ್‌ನಷ್ಟು ಸೀಮೆಎಣ್ಣೆ ಸೇವಿಸಿದರೆ ಪ್ರಾಣಾಪಾಯ ಸಂಭವಿಸಬಹುದು; ಮಕ್ಕಳು ಅರ್ಧ ಔನ್ಸ್‌ನಷ್ಟು ಸೀಮೆಎಣ್ಣೆ ಸೇವಿಸಿದರೂ ಅಪಾಯ ಉಂಟಯಬಹುದು.

## ಮೂಸು, ಮುಟ್ಟು ವಿಷ: ಲಕ್ಷಣಗಳು

ತಲೆಚಕ್ರ, ಉಸಿರಾಟಕ್ಕೆ ತೊಂದರೆ ಮೊದಲಾದ ಉಪದ್ರವಗಳು, ಕೈಕಾಲು ಸಂದುಗಳ ಮಂದವೇದನೆ ಕಾಣಿಸಬಹುದು; ಅನ್ನದ ಮೇಲೆ ತಿರಸ್ಕಾರ, ಬಲಹೀನತೆ ಕೂಡಾ ಉಂಟಾಗಬಹುದು.

## ಪ್ರಥಮ ಚಿಕಿತ್ಸೆ

ಇಂತಹ ತೊಂದರೆಗಳು ಗೋಚರಿಸಿದ ರೋಗಿಯನ್ನು ತಕ್ಷಣ ಇಂಧನ ದ್ರವ್ಯಗಳು ಎಂದರೆ ಸೀಮೆಎಣ್ಣೆ . ಡೀಸೆಲ್ ಮತ್ತು ಪೆಟ್ರೋಲ್ ಸಂಪರ್ಕ ತಪ್ಪಿಸಿ, ಸ್ವಚ್ಛ ಹವೆಯ ವಾತಾವರಣಕ್ಕೆ ಸ್ಥಳಾಂತರಿಸಬೇಕು.

ಸ್ಪರ್ಶ ವಿಷದಲ್ಲಿ ಕೈಬೆರಳು ಸಂದು, ಅಂಗೈಮುಂಗೈಗಳಲ್ಲಿ ಚರ್ಮ ಸುಲಿಯುವುದು, ನವೆ (ತುರಿಕೆ) ಕಾಣಿಸಬಹುದು. ಇಂತಹ ರೋಗಿಗಳನ್ನು ಸೀಮೆಎಣ್ಣೆ ಸಂಪರ್ಕದಿಂದ ಶಾಶ್ವತವಾಗಿ ತಪ್ಪಿಸಬೇಕು. ಅಗತ್ಯವಾದಲ್ಲಿ ವೈದ್ಯರ ಸಲಹೆಯಂತೆ ಚಿಕಿತ್ಸೆ ಮಾಡಬೇಕು.

## ಸೇವನಾ ವಿಷ: ಲಕ್ಷಣಗಳು

ಸೀಮೆಎಣ್ಣೆ ಸೇವಿಸಿದ ರೋಗಿಯ ಬಾಯಿ-ಉಸಿರುಗಳಲ್ಲಿ ಸೀಮೆಎಣ್ಣೆ ವಾಸನೆ ಕಾಣಿಸುತ್ತದೆ. ತಲೆ ಸುತ್ತುವುದು, ವಾಕರಿಕೆ, ಎದೆಉರಿ, ಗಂಟಲು-ನಾಲಿಗೆ ಕೆರೆತ, ವಾಂತಿ, ಹೊಟ್ಟೆನೋವು ಮತ್ತು ಭೇದಿ ಪ್ರಾರಂಭವಾಗಬಹುದು; ತಲೆಭಾರ, ತೂಕಡಿಕೆ, ಮೇಲುಬ್ಬಸ, ಜ್ವರ ಕಾಣಿಸಬಹುದು. ರೋಗಿಯ ಉಸಿರಾಟದ ಗತಿ ಮಂದವಾಗುತ್ತದೆ;

ಕಣ್ಣು ಬೊಂಬೆ ಮೊದಲಿಗೆ ಕಿರಿದಾಗಿ ಅನಂತರ (ಸ್ಮೃತಿ ತಪ್ಪಿದ ಮೇಲೆ) ಅರಳುತ್ತದೆ. ಮೈನಡುಕ, ಮೂರ್ಛೆ ಮರಣ ಕೂಡಾ ಸಂಭವಿಸಬಹುದು.

**ಪ್ರಥಮ ಚಿಕಿತ್ಸೆ**

ಸೀಮೆಎಣ್ಣೆ ಸೇವಿಸಿದ ರೋಗಿಯನ್ನು ತುರ್ತಾಗಿ ಆಸ್ಪತ್ರೆಗೆ ಸೇರಿಸಬೇಕು.

**ಮುನ್ನೆಚ್ಚರಿಕೆ**

ಸೀಮೆಎಣ್ಣೆಯನ್ನು ಮನೆಬಳಕೆಯ ಇತರ ವಸ್ತುಗಳಿಂದ ಪ್ರತ್ಯೇಕಿಸಿ, ಮಕ್ಕಳ ಕೈಗೆ ಸಿಗದಂತೆ ಹಾಗೂ ಮುಚ್ಚಳ ಹಾಕಿ ಇರಿಸಬೇಕು.

* * * *

**ಇಲಿ ಪಾಶಾಣ**

ಥಲ್ಲಿಯಂ ಎಂಬ ಔಷಧಿ ಸತ್ವದ ಪುಡಿಯನ್ನು ತಿಂಡಿ ತಿನಿಸುಗಳಲ್ಲಿ ಬೆರೆಸಿ, ಇಲಿಗಳನ್ನು ಸಾಯಿಸಲು ಇರಿಸುತ್ತಾರೆ. ಈ ವಿಷವನ್ನು ಅಕಸ್ಮಾತ್ ಮನುಷ್ಯರು, ಅದರಲ್ಲೂ ಮಕ್ಕಳು ಸೇವಿಸಿದರೆ ಪ್ರಾಣಾಪಾಯ ಸಂಭವಿಸಬಹುದು. ತಲೆಯ ತದ್ದು ರೋಗ ನಿವಾರಣೆಗೂ ಮೈಕೈಗಳಲ್ಲಿ ಅಸಹ್ಯವಾಗಿ ಬೆಳೆದ ಹೆಚ್ಚುವರಿ ರೋಮಗಳನ್ನು ನಾಶಪಡಿಸುವುದಕ್ಕೂ ಇದನ್ನು ಬೇರೆ ಬೇರೆ ವಿಧಾನದಲ್ಲಿ ಬಳಸುತ್ತಾರೆ.

ಥಲ್ಲಿಯಂ ಸೇವನೆ ಹಾಗೂ ಸ್ಪರ್ಶ ವಿಷ.

**ಸ್ಪರ್ಶ ವಿಷ –ಲಕ್ಷಣಗಳು**

ನಾಲಿಗೆ ಒಣಗುವುದು, ಮೂಗು ಸೋರುವುದ, ಕೈಕಾಲು ನೋವು, ಗಂಟಲು ನೋವು, ಹೊಟ್ಟೆ ನುಲಿತ, ವಾಕರಿಕೆ, ವಾಂತಿ ಮೊದಲಾದ ಉಪದ್ರವಗಳು ಕಾಣಿಸಬಹುದು. ಜ್ವರ, ಭೇದಿ, ಮೂತ್ರವಿಕಾರ, ಅದಿರುವಾಯು, ಉಸೊಇರಾಟದ ತೊಂದರೆ ಮೂರ್ಛೆ ಮತ್ತು ಮರಣ ಸಂಭವಿಸಬಹುದು.

**ಪ್ರಥಮ ಚಿಕಿತ್ಸೆ**

ರೋಗಿಗೆ ಕೃತಕ ವಾಂತಿ ಮಾಡಿಸಬೇಕು. ಕಂಬಳಿ ಹೊದಿಸಿ, ಬಿಸಿನೀರು ತುಂಬಿದ ಸೀಸೆಗಳನ್ನು ಪಕ್ಕದಲ್ಲಿರಿಸಿ ಮೈಕಾವು ಇಳಿಯದಂತೆ ಮಾಡಬೇಕು.

ವಿಳಂಬವಿಲ್ಲದೆ ವೈದ್ಯಕೀಯ ಸಹಾಯ ಒದಗಿಸಬೇಕು.

### ಮುನ್ನೆಚ್ಚರಿಕೆ

ಇಲಿಗಳಿಗೆ ವಿಷ ಹಾಕುವ ಕಾರ್ಯಕ್ರಮ ನಡೆಸುವುದಕ್ಕೆ ಮುಂಚಿತವಾಗಿ ಮನೆಯಲ್ಲಿ ಎಲ್ಲ ಜನರಿಗೂ ಈ ವಿಷಯ ತಿಳಿಸಬೇಕು. (ಮಕ್ಕಳನ್ನು ಒಂದೆರಡು ದಿವಸ ಸ್ಥಳಾಂತರಿಸುವುದು ಸೂಕ್ತ) ರಾತ್ರಿ ಹೊತ್ತು ಪಾಷಾಣ ಬೆರೆಸಿದ ತಿಂಡಿ ತಿನಿಸುಗಳನ್ನು ಇರಿಸಿದ ಮರುದಿನ ಮುಂಜಾನೆ ಮನೆಯನ್ನೆಲ್ಲ ಶೋಧಿಸಿ, ಸತು ಬಿದ್ದ ಇಲಿಗಳನ್ನೂ ವಿಷಪೂರಿತ ತಿಂಡಿ ತಿನಿಸನ್ನೂ ಒಟ್ಟು ಮಾಡಿ ಆಳವಾದ ಗುಂಡಿಯಲ್ಲಿ ಹುಗಿದು ಮಣ್ಣು ಮುಚ್ಚಬೇಕು.

ಇಲಿ ಪಾಷಾಣ ಮುಟ್ಟಿದ ಕೈಯನ್ನು ಸಾಬೂನು ಹಚ್ಚಿ ಚೆನ್ನಾಗಿ ತೊಳೆಯಬೇಕು.

* * * *

### ನೆಫ್ತಾಲಿನ್

ನೆಫ್ತಾಲಿನ್ ಗುಳಿಗೆಗೆ ನುಸಿಬಿಲ್ಲೆ, ಜಿರಳೆಮಾತ್ರೆ, ಎಕ್ಕಳೆ ಮುದ್ದು, ಡಾಂಬರುಗೋಲಿ ಎಂದು ವಿವಿಧ ಹೆಸರುಗಳಿವೆ. ಕಾಗದ, ಪುಸ್ತಕ ಮತ್ತು ಬಟ್ಟೆ ಬರೆಯನ್ನು ಜಿರಲೆ, ಇರುವೆ ಹಾಗೂ ಹುಳುಹುಪ್ಪಟೆಗಳ ಹಾವಳಿಯಿಂದ ರಕ್ಷಿಸಲು ಕಪಾಟು–ಪೆಟ್ಟಿಗೆಗಳಲ್ಲಿ ನೆಫ್ತಾಲಿನ್ ಗುಳಿಗೆಗಳನ್ನು ಇರಿಸುತ್ತಾರೆ. ಬಿಳಿ ಬಣ್ಣದ ನೆಫ್ತಾಲಿನ್ ಮಾತ್ರೆ ಮಿರಿ ಮಿಂಚುತ್ತದೆ; ಗಾಳಿಗೆ ನಿಧಾನವಾಗಿ ಕರಗುತ್ತದೆ. ಇದಕ್ಕೆ ಗಾಟು ವಾಸನೆ ಕೂಡ ಇರುತ್ತದೆ.

ನೆಫ್ತಾಲಿನ್‌ನ್ನು ಅನೇಕ ಕೈಗಾರಿಕೆಗಳಲ್ಲಿಯೂ ಬಳಸುತ್ತಾರೆ. ನೆಫ್ತಾಲಿನ್, ಸೇವನೆ ಮೂಸು ಮತ್ತು ಮುಟ್ಟು ವಿಷ.

### ಸ್ಪರ್ಶ ವಿಷ: ಲಕ್ಷಣಗಳು

ದೀರ್ಘಕಾಲ ನೆಫ್ತಾಲಿನ್ ಸ್ಪರ್ಶಿಸುತ್ತಿದ್ದರೆ, ಮೈಕೈ ನವೆ ಹಾಗೂ ನೀರು ಸೋರುವ ವ್ರಣಗಳು ಉಂಟಾಗಬಹುದು. ಕಣ್ಣಿಗೆ ಸ್ಪರ್ಶವಾದರೆ, ಕರ್ಣಣು ಕೆಂಪಾಗಿ ಕಣ್ಣೀರು ಸುರಿಯುವುದು ಹಾಗೂ ದೃಷ್ಟಿಮಾಂದ್ಯ ಕೂಡ ಉಂಟಾಗಬಹದು.

ಕೈಗಾರಿಕೆಯ ಬಳಕೆಗಾಗಿ ನೆಫ್ತಾಲಿನ್‌ನ್ನು ಬೇಯಿಸುವಾಗ ಅದರ ಉಗಿ (ಹೊಗೆ)ಯನ್ನು ಆಘ್ರಾಣಿಸಿದರೆ ತಲೆನೋವು, ತಲೆಚಕ್ರ, ದೃಷ್ಟಿದೋಷ ಮತ್ತು ಬುದ್ಧಿಭ್ರಮಣೆ ಉಂಟಾಗಬಹುದು.

**ಪ್ರಥಮ ಚಿಕಿತ್ಸೆ**

ನೆಫ್ತಾಲಿನ್ ಮುಟ್ಟು-ವ ೂಸು ವಿಷಕ್ಕೆ ತುತ್ತಾದ ರೋಗಿಯನ್ನು ತಕ್ಷಣ ಆ ಪರಿಸರದಿಂದ ಬೇರ್ಪಡಿಸಿ , ಸ್ವಚ್ಛ ಹವೆ ಇರುವಲ್ಲಿಗೆ ಸ್ಥಳಾಂತರಿಸಬೇಕು. ವಿಷ ಸ್ಪರ್ಶವಾದ ಭಾಗವನ್ನು ತಣ್ಣೀರಿನಿಂದ ತೊಳೆಯಬೇಕು. ಅನಂತರ ವೈದ್ಯರ ಸಲಹೆಯಂತೆ ಚಿಕಿತ್ಸೆ ನಡೆಸಬೇಕು.

**ಸೇವನಾವಿಷ: ಲಕ್ಷಣಗಳು**

ರೋಗಿಯ ಬಾಯಿ-ಉಸಿರಲ್ಲಿ ನೆಫ್ತಾಲಿನ್ ವಾಸನೆ, ವಾಕರಿಕೆ, ವಾಂತಿ, ಭೇದಿ ಉಂಟಾಗಬಹುದು. ಮೂತ್ರವಿಸರ್ಜನೆಯಲ್ಲಿ ತೊಂದರೆ, ಮೈನಡುಕ, ಮೂರ್ಛೆ ಮತ್ತು ಮರಣ ಸಂಭವಿಸಬಹುದು.

**ಪ್ರಥಮ ಚಿಕಿತ್ಸೆ**

ರೋಗಿಗೆ ಕೃತಕವಾಂತಿ ಮಾಡಿಸಿ, ವೈದ್ಯಕೀಯ ನೆರವನ್ನು ಒದಗಿಸಬೇಕು.

**ವಿಶೇಷ ಸೂಚನೆ**

ನೆಫ್ತಾಲಿನ್ ತೈಲಮಾಧ್ಯಮದಲ್ಲಿ ಕರಗುವುದರಿಂದ ರೋಗಿಗೆ ಎಣ್ಣೆ, ತುಪ್ಪ, ಕೊಬ್ಬು ಮೊದಲಾದವನ್ನು ವೈದ್ಯಕೀಯ ಚಿಕಿತ್ಸೆ ಮುಗಿಯುವವರೆಗೆ ಕೊಡಬಾರದು.

* * * * *

**ಕರ್ಪೂರ**

ಧಾರ್ಮಿಕ ವಿಧಿಗಳಲ್ಲಿ ಮುಖ್ಯವಾಗಿ ದೇವರ ಪೂಜೆಯಲ್ಲಿ ಕರ್ಪೂರಕ್ಕೆ ಅಗ್ರಮಾನ್ಯ ಸ್ಥಾನವಿದೆ. ಹಿತವಾದ ಸುವಾಸನೆ, ಕ್ರಿಮಿನಾಶಕ ಗುಣ, ಉರಿದ ಮೇಲೆ ಬೂದಿ ಸಹ ಇಲ್ಲದಂತಾಗುವುದು ಕರ್ಪೂರದ ವೈಶಿಷ್ಟ್ಯ. ಇದರಲ್ಲಿ ಆರತಿ ಕರ್ಪೂರ, ಪಚ್ಚಕರ್ಪೂರ ಎಂಬ ಎರಡು ಭೇದವಿದ್ದು, ಪಚ್ಚ ಕರ್ಪೂರವನ್ನು ತಿಂಡಿ ತೀರ್ಥಗಳಲ್ಲಿ ಉಪಯೋಗಿಸುತ್ತಾರೆ. ಕಫ, ಜ್ವರ, ಉಳುಕಿನ ನೋವುಗಳಲ್ಲಿ ಕರ್ಪೂರ ಮಿಶ್ರಿತ ಔಷಧಿಯನ್ನು ಬಳಸುತ್ತಾರೆ. ಬಟ್ಟೆ ಬರೆ ಮುಖ್ಯವಾಗಿ ರೇಷ್ಮೆ ಸೀರೆ, ಕುಪ್ಪಸಗಳಿಗೆ ಗೆದ್ದಲು, ಇರುವೆ ಮೊದಲಾದ ಹುಳುಹುಪ್ಪಟೆ ತಗಲದಂತೆ ಹಳ್ಳಿಗಳಲ್ಲಿ ಇಂದಿಗೂ ಬಟ್ಟೆಯ ಗಂಟು-ಪೆಟ್ಟಿಗೆಗಳಲ್ಲಿ ಒಂದೆರಡು ಕರ್ಪೂರಗಳ ಬಿಲ್ಲೆಯನ್ನು ಸೇರಿಸುವುದು ರೂಢಿಯಲ್ಲಿದೆ.

ಕರ್ಪೂರ ಸೇವನೆ ಹಾಗೂ ಮುಟ್ಟು ವಿಷ

### ಸೇವನಾ ವಿಷ: ಲಕ್ಷಣಗಳು

ರೋಗಿಯ ಬಾಯಲ್ಲಿ ಕರ್ಪೂರವಾಸನೆ, ಗಂಟಲು ಉರಿ, ನೀರಡಿಕೆ, ವಾಕರಿಕೆ, ವಾಂತಿ ಮತ್ತು ತಲೆ ಚಕ್ರ ಕಾಣಿಸಬಹುದು; ರೋಗಿಯ ವಾಂತಿಯಲ್ಲಿ ಸಹ ಕರ್ಪೂರ ವಾಸನೆ ಇರುತ್ತದೆ. ಉದ್ವೇಗ, ಗಾಬರಿ, ಬಡಬಡಿಸುವುದು ದೃಷ್ಟಿದೋಷ, ಕುಸಿತ ಮತ್ತು ಸಾವು ಸಂಭವಿಸಬಹುದು.

### ಪ್ರಥಮ ಚಿಕಿತ್ಸೆ

ರೋಗಿಗೆ ಒಂದೆರಡು ಲೋಟ ಹಾಲು ಕುಡಿಸಬೇಕು. (ಅಥವಾ ಅನ್ನ ಬಸಿದ ಗಂಜಿ ರಾಗಿಯ ಅಂಬಲಿ ಕುಡಿಸಬಹುದು) ಕೃತಕವಾಂತಿ ಮಾಡಿಸಬೇಕು. ಕೋಳಿ ಮೊಟ್ಟೆಯ ಲೋಳೆ ಮತ್ತು ಹೆಚ್ಚಿನ ಪ್ರಮಾಣದಲ್ಲಿ ದ್ರವ ಪದಾರ್ಥವನ್ನು ನೀಡಬೇಕು. ರೋಗಿಗೆ ಧೈರ್ಯ ಹೇಳಿ, ತುರ್ತು ವೈದ್ಯಕೀಯ ಚಿಕಿತ್ಸೆ ಒದಗಿಸಬೇಕು.

* * * * *

## ಬೋರಿಕ್ ಪೌಡರ್

ಮಕ್ಕಳ ಮೈಕೈಗಳಿಗೆ ದೊಡ್ಡವರು ಮುಖಕ್ಕೆ ಲೇಪಿಸುವ ಟಾಲ್ಕಂ ಪೌಡರನ್ನು 'ಬೋರಿಕ್ ಆಮ್ಲ' ಸತ್ವ ಬೆರೆಸಿ ತಯಾರಿಸುತ್ತಾರೆ. ಬೋರಿಕ್ ಪೌಡರಿನಲ್ಲಿ ನಂಜು ನಿರೋಧಕ-ಕ್ರಿಮಿನಾಶಕ ಗುಣವಿರುತ್ತದೆ. ಆಹಾರ ಧಾನ್ಯ ಮತ್ತು ಬೇಳೆ ಕಾಳುಗಳನ್ನು ದೀರ್ಘಕಾಲ ಜೋಪಾನ ಮಾಡುವಾಗ ತುಸು ಬೋರಿಕ್ ಪೌಡರನ್ನು ಬೆರೆಸುತ್ತಾರೆ. ಹುಣ್ಣು-ಗಾಯಕ್ಕೆ ಇದರ ಮುಲಾಮು ಸವರುತ್ತಾರೆ. ಬಾಯಿ ಹುಣ್ಣಾದರೆ ಬೋರಿಕ್ ಪೌಡರ್ ಮಿಶ್ರಿತ ಬಿಸಿ ನೀರಿನಿಂದ ಬಾಯಿ ಮುಕ್ಕಳಿಸುತ್ತಾರೆ. ಹೀಗೆ ನಾನಾ ರೀತಿಯಲ್ಲಿ ಉಪಯುಕ್ತವಾದ ನಿತ್ಯ ಬಳಕೆಯ ವಸ್ತು ಬೋರಿಕ್ ಪೌಡರ್. ಇದನ್ನು ಪ್ರಮಾಣ ತಪ್ಪಿ ಉಪಯೋಗಿಸಿದರೆ ಅಪಾಯವಿದೆ.

### ಸ್ಪರ್ಶವಿಷ ಲಕ್ಷಣಗಳು

ಬೋರಿಕ್ ಪೌಡರಿನ ತೀಕ್ಷ್ಣ (ಕಡು) ದ್ರಾವಣದಿಂದ ಬಾಯಿ ಮುಕ್ಕಳಿಸಿದರೆ ಬಾಯಿಯಲ್ಲಿ ಸುಟ್ಟಗಾಯ, ಒಸಡು ಊತ, ವ್ರಣ ಉಂಟಾಗಬಹುದು.

### ಪ್ರಥಮ ಚಿಕಿತ್ಸೆ

ರೋಗಿಗೆ ತಕ್ಷಣ ತಣ್ಣೀರಿನಿಂದ ನಾಲ್ಕಾರು ಬಾರಿ ಬಾಯಿ ಮುಕ್ಕಳಿಸಿ, ತುಪ್ಪ ಅಥವಾ ಬೆಣ್ಣೆ ಸವರಬೇಕು. ಮೈಕೈಗೆ ಸ್ಪರ್ಶವಾಗಿದ್ದರೆ, ಸಾಬೂನು ಹಚ್ಚಿ ತೊಳೆದು ಎಣ್ಣೆ ಸವರಬೇಕು.

## ಸೇವನಾ ವಿಷ: ಲಕ್ಷಣಗಳು

ಬೋರಿಕ್ ಪೌಡರನ್ನು ಅಲ್ಪ ಪ್ರಮಾಣದಲ್ಲಿ ದೀರ್ಘಕಾಲ ಸೇವಿಸುತ್ತಿದ್ದರೆ ಅಗ್ನಿ ಮಾಂದ್ಯ, ಆಹಾರ ಪಚನವಾಗದಿರುವುದು ಬಲಹೀನತೆ, ಆಯಾಸ ಮೊದಲಾದ ತೊಂದರೆಗಳು ಕಾಣಸಬಹುದು.

ಇಂತಹ ರೋಗಿಗಳು ಬೋರಿಕ್ ಪೌಡರು ಬಳಸುವುದನ್ನು ಸಂಪೂರ್ಣ ವರ್ಜಿಸಿ ಉತ್ತಮ ಆಹಾರ ಮತ್ತು ವಿಶ್ರಾಂತಿಗಳಿಂದ ಚೇತರಿಸಿಕೊಳ್ಳಬಹುದು.

ಪ್ರಾಣಾಪಾಯದ ಪ್ರಮಾಣದಲ್ಲಿ ಬೋರಿಕ್ ಪೌಡರನ್ನು ಸೇವಿಸಿದಲ್ಲಿ, ಆಲಸ್ಯ ವಾಂತಿ, ರಕ್ತಮಿಶ್ರಿತ ಭೇದಿ, ಮಾಂಸಖಂಡಗಳ ಸೆಳೆತ ಮತ್ತು ಜ್ವರ ಉಂಟಾಗಬಹುದು. ಮಕ್ಕಳಲ್ಲಿ ಪ್ರಾಣಾಪಾಯವೂ ಸಂಭವಿಸಬಹುದು.

## ಪ್ರಥಮಚಿಕಿತ್ಸೆ

ರೋಗಿಗೆ ಕೃತಕ ವಾಂತಿ ಮಾಡಿಸಬೇಕು. ಕೋಳಿಮೊಟ್ಟೆಯ ಲೋಳೆಯನ್ನು ಕೊಡಬಹುದು. ವೈದ್ಯಕೀಯ ನೆರವನ್ನು ಒದಗಿಸಬೇಕು .

## ಮುನ್ನೆಚ್ಚರಿಕೆ

ಬೋರಿಕ್ ಆಮ್ಲ ವಿಷಪ್ರಾಶನವಾದ ಮಕ್ಕಳಲ್ಲಿ ಹೆಚ್ಚಿನವರು ಪ್ರಾಣಾಪಾಯಕ್ಕೆ ತುತ್ತಾಗುವುದರಿಂದ ಚಿಕ್ಕ ಮಕ್ಕಳ ಕೈಗೆ ಇದು ದೊರಕದಂತೆ ಇರಿಸಬೇಕು.

ಚಿಕ್ಕ ಮಕ್ಕಳಿಗೆ ಡಬ್ಬಿ ಹಾಲು ಕುಡಿಸುವ ಬಾಟಲಿಯ ರಬ್ಬರ್ ತೊಟ್ಟಿನ ಮೇಲೆ ಬೋರಿಕ್ ಪೌಡರ್ ಮುಲಾಮು ಸವರಬಾರದು.

ಕೆಲವರು ಬೋರಿಕ್ ಪೌಡರನ್ನು ಚಪ್ಪರಿಸುವ (ಮುಕ್ಕುವ) ಚಟಕ್ಕೆ ಬಲಿಯಾಗುತ್ತಾರೆ. ಇದನ್ನು ರತ್ನ ಪೂರ್ವಕ ನಿಲ್ಲಿಸಬೇಕು.

* * * * *

## ಕಳ್ಳಭಟ್ಟಿ

ಪಾನನಿರೋಧ ಕಾರ್ಯಕ್ರಮ ಜಾರಿಗೆ ಬಂದ ಬೆನ್ನಲ್ಲೆ ಕಳ್ಳಭಟ್ಟಿ ತಯಾರಿಕೆ ಹೆಚ್ಚಿತು. ಗ್ರಾಮಾಂತರ ಪ್ರದೇಶಗಳಲ್ಲಿ ಕೆಲವರಿಗೆ ಈಗ ಇದೊಂದು 'ಗುಡಿಕೈಗಾರಿಕೆ' ಯಾಗಿದೆ! ಕದ್ದು ಮುಚ್ಚಿ, ಹೊಲಸಾದ ಪರಿಸರದಲ್ಲಿ ಕಳ್ಳಭಟ್ಟಿಯನ್ನು ತಯಾರಿಸುತ್ತಾರೆ. ಆರೋಗ್ಯಕ್ಕೆ ಹಾನಿಕರವಾದ ಅನೇಕ ಕೊಳಕು ಪದಾರ್ಥಗಳನ್ನು, ಕೆಲವು ಸಲ

ಹೆಚ್ಚಿನ 'ಮತ್ತು' (ನಿಶೆ) ಬರಲು ಹಾನಿಕಾರಕ ರಾಸಾಯನಿಕ ವಸ್ತುಗಳನ್ನೂ ಸೇರಿಸುತ್ತಾರೆ. ಕುಡಿತದ ಚಟಕ್ಕೆ ಬಲಿಯಾದವರು–ಮುಖ್ಯವಾಗಿ ಬಡವರು ಇದೊಂದನ್ನೂ ಲೆಕ್ಕಿಸದೆ ಕಳ್ಳಭಟ್ಟಿ ಸೇವಿಸಿ ಒಮ್ಮೊಮ್ಮೆ ಪ್ರಾಣಾಪಾಯಕ್ಕೆ ತುತ್ತಾಗುತ್ತಾರೆ.

ಕೈಗಾರಿಕೆಗಳಲ್ಲಿ ಬಳಸುವ 'ಸ್ಪಿರಿಟ್' ಸೇವನೆಯಿಂಧಲೂ ಇಂತಹ ಅಪಾಯ ಸಂಭವಿಸುತ್ತದೆ.

**ಸೇವನಾ ವಿಷ: ಲಕ್ಷಣಗಳು**

ಅಪಾಯಕಾರಿ ಪ್ರಮಾಣದಲ್ಲಿ ಅಥವಾ ವಿಷಸತ್ವ ಬೆರೆತ ಕಳ್ಳಭಟ್ಟಿ ಸೇವಿಸಿದರೆ ತಲೆನೋವು, ತಲೆಚಕ್ರ,ವಾಂತಿ, ಹೊಟ್ಟೆನೋವು, ಸಂಕಟ, ಶರೀರದ ಸಮತೋಲನೆ ತಪ್ಪುವುದು ಮೊದಲಾದ ಉಪದ್ರವಗಳು ಕಾಣಿಸುತ್ತವೆ. ಬಡಬಡಿಸುವುದು, ಉಸಿರಾಟದ ತೊಂದರೆ, ಕಣ್ಣು ಗುಡ್ಡೆ ಅರಳುವುದು, ದೃಷ್ಟಿದೋಷ, ಅದಿರುವಾಯು, ಮೂರ್ಛೆ ಮತ್ತು ಮರಣ ಸಂಭವಿಸಬಹುದು.

**ಪ್ರಥಮ ಚಿಕಿತ್ಸೆ**

ರೋಗಿಗಿಎ ಅಡುಗೆ ಸೋಡಾಪುಡಿ ಬೆರೆಸಿದ ನೀರು ನಾಲ್ಕಾರು ಲೋಟಗಳಷ್ಟು ಕುಡಿಸಿ ವಾಂತಿ ಮಾಡಿಸಬೇಕು. ರೋಗಿಯ ದೇಹದ ಶಾಖರಕ್ಷಣೆಗೆ ಕಂಬಳಿ ಹೊದಿಸಿ, ಬಿಸಿ ನೀರು ತುಂಬಿದ ಸೀಸೆಗಳನ್ನು ಪಕ್ಕದಲ್ಲಿರಸಬೇಕು. ರೋಗಿಯ ಕಣ್ಣುಗಳಿಗೆ ತಾತ್ಕಾಲಿಕ ಪಟ್ಟಿ ಕಟ್ಟಿ ಬೆಳಕು ಮರೆ ಮಾಡಬೇಕು.

**ಟಿಪ್ಪಣಿ:**

ವಿಷಮಿಶ್ರಿತ ಕಳ್ಳಭಟ್ಟಿ ಸೇವನೆಯಿಂದ ಶಾಶ್ವತವಾಗಿ ಕುರುಡುತನ ಉಂಟಾಗುವ ಸಂಭವವಿರುತ್ತದೆ.

* * * * *

**ಉಪ್ಪು**

ಆಹಾರದಲ್ಲಿ ರುಚಿಗೆ ಮತ್ತು ಆರೋಗ್ಯ ರಕ್ಷಣೆಗೆ ಉಪ್ಪು ಅಗತ್ಯ. ಆದರೆ ಮಿತಿ ತಪ್ಪಿ ಉಪ್ಪು ತಿಂದರೆ ಅನೇಕ ರೋಗಗಳು ಬರಬಹುದು. ಒಮ್ಮೆಲೆ ಎರಡು ಹಿಡಿ (ಮುಷ್ಟಿ) ಉಪ್ಪು ಮುಕ್ಕಿದರೆ ಸಾವು ಪ್ರಾಣಾಪಾಯ ಉಂಟಾಗಬಹುದು ಸಹ. ರೋಗಿಯು ಅತಿಯಾದ ನೀರಡಿಕೆ, ಉರಿ ತಾಪಗಳಿಂಧ ಬಳಲುತ್ತಾರೆ; ಕೋಪ ಸಂಕಟದಿಂದ ಬಾಧೆ ಪಡುತ್ತಾನೆ.

## ಪ್ರಥಮ ಚಿಕಿತ್ಸೆ

ಕೃತಕವಾಂತಿ ಮಾಡಿಸಬೇಕು. ನಿಂಬೆ ಅಥವಾ ಕಿತ್ತಳೆ ಹಣ್ಣಿನ ರಸ- ಇಲ್ಲವೇ ಹುಣಸೆ ಹಣ್ಣಿನ ಗೊಜ್ಜು ಬೆರೆಸಿದ ಒಂದೆರಡು ಬಿಂದಿಗೆಯಷ್ಟು ನೀರನ್ನು ಕುಡಿಸಬೇಕು. ಕೋಳಿ ಮೊಟ್ಟೆಯ ಲೋಳೆ, ಹುಳಿಮಜ್ಜಿಗೆ, ಬೆಣ್ಣೆ ಸಹ ಉಪಯುಕ್ತವಾಗಿರುತ್ತದೆ.

ರೋಗಿಗೆ ವೈದ್ಯಕೀಯ ಚಿಕಿತ್ಸೆ ಒದಗಿಸಬೇಕು.

## ಕೃತಕ ವಾಂತಿ ಮಾಡಿಸುವುದು ಹೇಗೆ?

ವಿಷಪ್ರಾಶನವಾದ ಸಂದರ್ಭದಲ್ಲಿ ವಿಷವನ್ನು ವಾಂತಿ ಮೂಲಕ ಹೊರಗೆ ಹಾಕಲು ಒಂದು ಬಿಂದಿಗೆ ನಸು ಬೆಚ್ಚಗೆ ಇರುವ ನೀರಿನಲ್ಲಿ ಒಂದು ಚಾ ಚಮಚದಷ್ಟು ಉಪ್ಪನ್ನು ಬೆರೆಸಿ, ಒಂದೊಂದು ಲೋಟ ಪ್ರಮಾಣದಲ್ಲಿ ರೋಗಿಗೆ ಕುಡಿಸಿ, ಗಂಟಲೊಳಕ್ಕೆ ಬೆರಳು ಹಾಕಿ ತುಸು ಅಲ್ಲಾಡಿಸಿ ವಾಂತಿ ಮಾಡಿಸಬೇಕು. ವಾಂತಿಯಲ್ಲಿ ಬರೀ ನೀರಷ್ಟೇ ವಾಪಸಾಗುವವರೆಗೂ ಕೃತಕ ವಾಂತಿ ಮಾಡಿಸುತ್ತಿರಬೇಕು. ಚಿಕ್ಕ ಮಕ್ಕಳಿಗೆ ಹಾಗಲಕಾಯಿ ರಸ, ಬೇವಿನ ಎಲೆ ರಸ, ಇತ್ಯಾದಿ ಕಹಿದ್ರವ ಕುಡಿಸ ವಾಂತಿ ಮಾಡಿಸಬಹುದು.

* * * * *

# ನೈರ್ಮಲ್ಯ ಪಾಲನೆ

## ಶುಚಿತ್ವದ ಮಹತ್ವ

'ಸುಖವಾಗಿರಲು ಶುಚಿಯಾಗಿರಬೇಕು' ಎಂದು ಹೇಳುತ್ತಾರೆ. ಶುಚಿತ್ವವು ಆರೋಗ್ಯದ ಬುನಾದಿ. ಆರೋಗ್ಯವು ಸುಖಜೀವನದ ಸೋಪಾನ. ಶರೀರ ಶುಭ್ರತೆ, ಚೊಕ್ಕಟವಾದ ಬಟೆಬರೆ, ನಿರ್ಮಲವಾದ ಮನೆ-ಪರಿಸರ-ಉತ್ತಮ ಆಹಾರ, ಒಳ್ಳೆಯ ಅಭ್ಯಾಸಗಳು ಸುಖಜೀವನ ನಡೆಸಲು ನೆರವಾಗುತ್ತವೆ.

ಉದಯವಾಯಿತು, ಏಳಿ.

ಮೂಡಣ ಬಾನು ಕೆಂಪಾಗಿದೆ; ಹಕ್ಕಿಗಳು ಚಿಲಿಪಿಲಿ ಗುಟ್ಟುತ್ತಿವೆ. ಹಸು-ಕರು ಅಂಬಾ ಎನ್ನುತ್ತಿವೆ. ತಂಪು ಗಾಳಿ, ಅರಳುವ ಹೂಗಳ ಸುವಾಸನೆ ಸೂರ್ಯೋದಯವನ್ನು ಸ್ವಾಗತಿಸಲು ಸಿದ್ಧವಾಗುವೆ, ನಿದ್ದೆ ಬಿಟ್ಟು ಎದ್ದೇಳಲು ಇದು ಸರಿಯಾದ ಸಮಯ.

ಹೊತ್ತಾರೆ ಎದ್ದು ಏನೇನು ಮಾಡಲಿ?

ಎದ್ದ ಕೂಡಲೆ ಮೂತ್ರ-ಮಲವಿಸರ್ಜನೆ ಮುಗಿಸುವುದು ಉತ್ತಮ ಅಭ್ಯಾಸ. ಇದರಿಂದ ಮಲಬದ್ಧತೆ ತೊಲಗಿ ಲವಲವಿಕೆ ಹಿಗ್ಗುತ್ತದೆ. ಕೆಲವರಿಗೆ ಬೀಡಿ-ಸಿಗರೇಟು ಉರಿಸಿದರೇನೇ ಸೂರ್ಯೋದಯ. ಆಲಸಿಗಳಿಗೆ ಉದಯರವಿಯ ದರ್ಶನ ಆಗುವುದೇ ಇಲ್ಲ. ಈ ಬಗೆಯ ದುರಭ್ಯಾಸಗಳನ್ನು ನಾವು ತಿದ್ದಿಕೊಳ್ಳಬೇಕು.

## ಹಲ್ಲು -ಒಸಡಿನ ರಕ್ಷಣೆ

ಎಳೆ ಬೇವಿನ ಕಡ್ಡಿ ಅಥವಾ ತೆಂಗಿನನಾರು (ಗುಂಜು), ಆಲ ಗೋಳಿಮರ)ದ ಬಿಳಲು, ಮೊದಲಾದ ಮೃದುವಸ್ತುಗಳಿಂದ ಹಳ್ಳಿಯ ಜನರು ತಿಕ್ಕುತ್ತಾರೆ. ಸುಟ್ಟ ಭತ್ತದ ಹೊಟ್ಟಿನ ಕರುಕು (ಉಮಿಕರಿ) ಅಥವಾ ಮನೆಯಲ್ಲೇ ತಯಾರಿಸಿದ ಹಲ್ಲುಪುಡಿಯನ್ನು ಸಹ ಹಳ್ಳಿಗರು ಬಳಸುತ್ತಾರೆ. ಇದಕ್ಕೆ ಹೆಚ್ಚಿನ ಖರ್ಚು ಇರುವುದಿಲ್ಲ.

ಆದರೆ ನಾಸೀಪುಡಿ (ತಂಬಾಕಿನ ನಶ್ಯ), ಇದ್ದಲಿ ಚೂರು, ಒಲೆಯ ಮಸಿ, ಉಪ್ಪಿನ ಹರಳು ಮೊದಲಾದವುಗಳಿಂದ

ಹಲ್ಲುಜ್ಜಬಾರದು; ಇದರಿಂದ ಹಲ್ಲಿನ ರಕ್ಷಣೆಗೆ ಇರುವ ಹಲ್ಲಿನ ಮೇಲಿನ ತೆಳ್ಳನೆಯ ಪದರು (ಹೊಳಪು) ಸವೆದು ಹಲ್ಲುಗಳು ಬಲಹೀನವಾಗುತ್ತವೆ; ಹುಳುಕುಹಲ್ಲು ಮೊದಲಾದ ತೊಂದರೆಗಳು ಉಂಟಾಗುತ್ತವೆ. ಹಲ್ಲುಜ್ಜುವಾಗ ಮೇಲಿಂದ ಕೆಳಕ್ಕೆ ಸಹ ತಿಕ್ಕಬೇಕು; ಒಸಡಿನ ಮೇಲೂ ಬೆರಳಾಡಿಸಬೇಕು. ಒಸಡು ಗಟ್ಟಿಯಾಗಿ ಆರೋಗ್ಯಕರವಾಗಿ ಇಲ್ಲದೆ ಹೋದರೆ ಹಲ್ಲಿನ ನಾನಾ ಬಾಧೆಗಳು ಉಂಟಾಗುತ್ತದೆ. ಹಲ್ಲುಜ್ಜುವಾಗ ಮೇಲಿಂದ ಕೆಳಕ್ಕೆ ಸಹ ತಿಕ್ಕಬೇಕು.; ಒಸಡಿನ ಮೇಲೂ ಬೆರಳಾಡಿಸಬೇಕು. ಒಸಡು ಗಟ್ಟಿಯಾಗಿ ಆರೋಗ್ಯಕರವಾಗಿ ಇಲ್ಲದೆ ಹೋದರೆ ಹಲ್ಲಿನ ನಾನಾ ಬಾಧೆಗಳು ಉಂಟಾಗುತ್ತವೆ. ದವಡೆ ನೋವು, ಹಲ್ಲುನೋವು, ಕೀವು-ಬಾವು ಉಂಟಾಗಬಹುದು; ಹಲ್ಲು ಅಕಾಲದಲ್ಲಿ ಕಳಚಿ ಬೀಳಬಹುದು. ಹಲ್ಲು ತಿಕ್ಕಿದ ಮೇಲೆ ಬಾಯಿ ಮುಕ್ಕಳಿಸಿ, ನಾಲಗೆ ಗಂಟಲನ್ನು ಶುಭ್ರಗೊಳಿಸಿ, ಕೈಕಾಲು ಮುಖ ತೊಳೆದು ಒಣಬಟ್ಟೆಯಿಂದ ಒರೆಸಿಕೊಳ್ಳಬೇಕು.

## ದಿನನಿತ್ಯ ಸ್ನಾನ

ಮೈಗೆ ಅಂಟಿದ ಕೆಸರು, ಕೊಳೆ, ಧೂಳು ಮತ್ತು ಬೆವರನ್ನು ಕಳೆಯಲು ಸ್ನಾನ ಮಾಡಬೇಕು. ಸ್ನಾನದಿಂದ ಮೈಕೈಗೆ ಅಂಟಿದ ರೋಗಾಣು ಮತ್ತು ದುರ್ವಾಸನೆ ದೂರವಾಗುತ್ತದೆ; ದೇಹಾಯಾಸ ತಗ್ಗಿ ಉಲ್ಲಾಸ, ಉತ್ಸಾಹ ಹೆಚ್ಚುತ್ತದೆ.

ಸ್ನಾನ ಮಾಡುವಾಗ ಮೇಮೇಲೆ-ಸಾಧ್ಯವಾದರೆ ತಲೆಯ ಮೇಲೆ ಕೂಡ ನೀರು ಸುರಿದು ಚೆನ್ನಾಗಿ ತಿಕ್ಕಬೇಕು. ಇದಕ್ಕಾಗಿ ಸೀಗೆಪುಡಿ, ಹಿಂಡಿ ಅಥವಾ ಧಾನ್ಯದ ಹಿಟ್ಟನ್ನು ಉಪಯೋಗಿಸಬಹುದು-ದುಬಾರಿ ಬೆಲೆಯ ಸಾಬೂನೇನೂ ಬೇಕಿಲ್ಲ. ಸ್ನಾನ ಮಾಡಿ ಒಣಬಟ್ಟೆಯಿಂದ ಮೈ ಒರೆಸಬೇಕು. ಮಕ್ಕಳಿಗೂ ಹಿರಿವಯಸ್ಸಿನವರಿಗೂ ನಸುಬೆಚ್ಚಗಿನ ನೀರು ಹಿತಿಕರ. ಎಣ್ಣೆ ಹಚ್ಚಿ ಸ್ನಾನ ಮಾಡುವುದು ಹಬ್ಬ ಹುಣ್ಣಿಮೆಗಳಲ್ಲಿ ಉತ್ತಮ ಸಂಪ್ರದಾಯ. ತಲೆಸ್ನಾನವನ್ನು ಕಡೆಗಣಿಸಿ ಅನೇಕ ಹೆಂಗಸರು-ಮಕ್ಕಳು ತಲೆಯಲ್ಲಿ ಹುಣ್ಣು-ಹೇನು, ಸೀರುಗಳ ಬಾಧೆಗೆ ತುತ್ತಾಗುತ್ತಾರೆ.

## ಉಗುರು -ಕೆಸರಿನ ತವರು

ಉಗುರನ್ನು ಅಡ್ಡಾದಿಡ್ಡಿ ಬೆಳೆಸಬಾರದು. ಉಗುರು ಸಂದಿನಲ್ಲಿ ಕೊಳೆ ಮತ್ತು ರೋಗಾಣುಗಳು ಸೇರದಂತೆ ಆಗಾಗ ಉಗುರನ್ನು ಮೊಟಕು ಗೊಳಿಸಬೇಕು.

## ಸರಳ ಉಡುಪು

ನಿತ್ಯ ಬಳಕೆಗೆ ಹತ್ತಿ ಬಟ್ಟೆಗಳು ನಮಗೆ ಹಿತಕರ. ಮನೆಯಲ್ಲಿ ಒಗೆದು ಒಣಗಿಸಿ ಇಸ್ತ್ರಿ ಮಾಡಿದ, ಸರಳ ಉಡುಪಿಗೆ ತನ್ನದೇ ಆದ ಘನತೆಯಿದೆ. ಅಲ್ಪ ಸ್ವಲ್ಪ ಹರಿದ ಬಟ್ಟೆಗೆ ನಯವಾಗಿ ತೇಪೆಹಚ್ಚಿ ಹೊಲಿದು ಬಳಸಬಹುದು. ಮಲಿನ ವಸ್ತ್ರಗಳನ್ನು ತೊಟ್ಟರೆ ಮುಜುಗರ; ಅಲ್ಲದೆ ಕಾಯಿಲೆ ಹಬ್ಬುವ ಸಂಭವವಿರುತ್ತದೆ.

ಹೊರಗೆ ಕೆಲಸಕ್ಕೆ ಹೋಗುವಾಗ ಧರಿಸಿದ ಬಟ್ಟೆಗಳನ್ನೂ ಶಾಲಾ ಮಕ್ಕಳ ಉಡುಪನ್ನೂ ಪ್ರತ್ಯೇಕವಾಗಿ ಕಳಚಿ ಇರಿಸುವ ಸಂಪ್ರದಾಯ ಹಿತವಾದದ್ದು.

## ಸೌಂದರ್ಯ ರಕ್ಷಣೆ

ಕಾಲಕಾಲಕ್ಕೆ ಮುಖಕ್ಷೌರ, ಮೀಸೆ-ಕೂದಲನ್ನು ಕತ್ತರಿಸಿ ಮೊಟಕುಗೊಳಿಸುವುದು, ಕೂದಲನ್ನು ಹಿಕ್ಕಿ ಬಾಚುವುದು ಗಂಡಸಿನ ವ್ಯಕ್ತಿತ್ವದ ಶೋಭೆಯನ್ನು ಹೆಚ್ಚಿಸುತ್ತದೆ. ತಲೆಬಾಚಿ, ಜಡೆ ಹೆಣೆದು ಅಥವಾ ತುರುಬು ಕಟ್ಟುವುದು, ಕುಂಕುಮ ಕಾಡಿಗೆ ಇರಿಸಿಕೊಳ್ಳುವುದು ಇವೆಲ್ಲ ಸ್ತ್ರೀಯರ ಸೌಂದರ್ಯಕ್ಕೆ ಮೆರಗು ಕೊಡುತ್ತವೆ.

ಹಳ್ಳಿಯಲ್ಲಿ ಮಹಿಳೆಯರು ಪಾದ, ಅಂಗಾಲು, ಮುಂಗೈ, ಕೆನ್ನೆಗೆ ಅರಸಿನ ಹಚ್ಚಿ ಕೊಳ್ಳುತ್ತಾರೆ. ಅರಸಿನ ಲೇಪ ಚರ್ಮದ ಕಾಂತಿಯನ್ನು ಹೆಚ್ಚಿಸುತ್ತದೆ. ಇದರಲ್ಲಿ ನಂಜು ನಿರೋಧಕ ಗುಣವಿದೆ. ಹಬ್ಬ ಹರಿದಿನಗಳಲ್ಲಿ ಯಾವ ಖರ್ಚು ಇಲ್ಲದ 'ಮೆಹಂದಿ' (ಮದರಂಗಿ) ಹಾಕಿಸಿಕೊಳ್ಳುತ್ತಾರೆ. ಮನೆಯಲ್ಲಿ ತಯಾರಿಸಿದ ತಾಜಾ ಕಾಡಿಗೆ ಕಣ್ಣಿಗೆ ತಂಪು; ಸೌಂದರ್ಯವರ್ಧಕ. ಆದರೆ ಅಂಗಡಿಯಲ್ಲಿ ದೊರಕುವ ಉಗುರು-ತುಟಿರಂಗು, ಕೂದಲ ಕಪ್ಪುಗಳ ಬಳಕೆ ಹಿತಕರವಲ್ಲ; ಅಪಾಯ ಕೂಡ ಸಂಭವಿಸಬಹುದು.

## ವಿಶ್ರಾಂತಿ, ಸುಖನಿದ್ರೆ

ಸಾಕಷ್ಟು ವಿಶ್ರಾಂತಿ, ಸುಖನಿದ್ರೆ ಉಲ್ಲಾಸದ ಬದುಕಿಗೆ ಬೆನ್ನೆಲುಬು ಇದ್ದ ಹಾಗೆ. ಬೇಸಿಗೆಯ ರಾತ್ರಿ ಮರಗಿಡಗಳ ಕೆಳಗೆ ನಿದ್ರಿಸುವ ಪದ್ಧತಿಯಿದೆ. ರಾತ್ರಿ ಹೊತ್ತು ಗಿಡಮರಗಳು ಅಂಗಾರಾಮ್ಲ (ಮಲಿನ ವಾಯು) ವನ್ನು ಹೊರಸೂಸುತ್ತವೆ. ಅದರಿಂದಲೂ ನಮ್ಮ ಆರೋಗ್ಯ ಕೆಡಬಹುದು.

ರಾತ್ರಿ ಮನೆಯ ಕಿಟಕಿಗಳನ್ನು ಮುಚ್ಚಿ ನಿದ್ರೆ ಮಾಡುವುದು ಕೂಡ ಸರಿಯಲ್ಲ. ಕಳ್ಳಕಾಕರ ಭಯ-ಸೊಳ್ಳೆಗಳ ಹಾವಳಿ ತಪ್ಪಿಸಲು ಸೂಕ್ತ ಕ್ರಮ ಕೈಗೊಳ್ಳಬೇಕು, ಅಷ್ಟೆ.

ವ್ಯಾಯಾಮ ಶಾಲಾ ಮಕ್ಕಳು ಸಂಜೆ ಹೊತ್ತಿನಲ್ಲಿ ಹೊರಬಯಲಲ್ಲಿ ವಿವಿಧ ಆಟಗಳನ್ನು ಆಡಬೇಕು. ಅಂಗಸಾಧನೆ, ಕವಾಯಿತು, ಕುಸ್ತಿ ಮತ್ತು ಆಟೋಟಗಳು ಯುವಕರಿಗೆ ಸೂಕ್ತ. ಪ್ರಾಣಾಯಾಮ, ಸೂರ್ಯನಮಸ್ಕಾರ, ಯೋಗಾಸನ ಮೊದಲಾದವು ಆರೋಗ್ಯ ರಕ್ಷಣೆಯಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ಇವನ್ನು ಮಹಿಳೆಯರು ಕೂಡ ಅನುಸರಿಸಬಹುದು.

## ಕೈಕಾಲು ತೊಳೆದುಕೊಂಡು ಒಳಗೆ ಬಾ

'ಮನೆ ಸಣ್ಣದಾದರೂ ಮನಸ್ಸು ಸಣ್ಣದಲ್ಲ' ಎಂಬುದು ಅರ್ಥಗರ್ಭಿತವಾದ ಮಾತು. ಹಳ್ಳಿಯಲ್ಲಿ ಮುಖ್ಯವಾಗಿ ಬಡಜನರ ಮನೆಗಳು ಕಿರುಗಾತ್ರದವು-ಹೆಚ್ಚಾಗಿ ಒಂದಂಕಣದ ಜೋಪಡಿಗಳು. ದಿನ ಬಳಕೆಗೆ ಬೇಕಾಗು ಎಲ್ಲ ಸಾಧನ ಸಾಮಗ್ರಿ, ಬಟ್ಟೆ ಬರೆ, ಪಾತ್ರೆ, ದವಸ ಧಾನ್ಯ, ಎಲ್ಲವೂ ಅಲ್ಲಿಯೇ. ಚಿಕ್ಕ ಮಗುವಿನ ತೊಟ್ಟಿಲಿಗೂ ದೇವರ ಪೂಜೆಯ ಗೂಡಿಗೂ ಅಲ್ಲೇ ಸ್ಥಾನ; ಓದುವ ಮಕ್ಕಳ ಪಡಸಾಲೆಯೂ ಅದೇ. ಅಲ್ಲೇ ಅಡುಗೆ; ಅಲ್ಲೇ ಊಟ; ಅಲ್ಲೇ ನಿದ್ರೆ-ಅದೊಂದು ಕಿಷ್ಕಿಂಧೆ!

ಇದ್ದಷ್ಟೇ ಸ್ಥಳಾವಕಾಶವನ್ನು ಕೂಡ ಅಚ್ಚುಕಟ್ಟಾಗಿ ರೂಪಿಸಿಕೊಳ್ಳಬಹುದು. ಚಾಪೆ ಚಾದರಗಳನ್ನೆಲ್ಲ ಸುರುಳಿ ಸುತ್ತಿ ಪಕ್ಕದಲ್ಲಿ ಜೋಡಿಸುವುದು; ದವಸ ಧಾನ್ಯಗಳನ್ನು ಪ್ಲಾಸ್ಟಿಕ್-ಚೀಲ ಡಬ್ಬಿಗಳಲ್ಲಿ ತುಂಬಿ ಮುಚ್ಚಿಡುವುದು; ಇತರ ವಸ್ತುಗಳನ್ನು ಗೋಣಿ ಚೀಲಗಳಲ್ಲಿ ತುಂಬಿಡುವುದರಿಂದ ಸ್ಥಳಾಭಾವ ತಕ್ಕಮಟ್ಟಿಗೆ ನೀಗುತ್ತದೆ.

## ಗಾಳಿ ಬೆಳಕು ಆಡುತ್ತಿರಲಿ

ಹಳ್ಳಿ ಮನೆಗಳಲ್ಲಿ ಗಾಳಿ ಬೆಳಕು ಆಡಲು ಅವಕಾಶ ಇರುವುದಿಲ್ಲ. ಕಿಟಕಿ ಬೆಳಕಿಂಡಿಗಳು ಕಮ್ಮಿ; ಇದ್ದರೂ ಸದಾ ಮುಚ್ಚಿಯೇ ಇರುತ್ತವೆ. ಹೀಗೆ ಮನೆ ಗುಡಿಸಲುಗಳು ಕತ್ತಲಿನ ಗೂಡುಗಳಾಗಿರುವುದನ್ನು ತಪ್ಪಿಸಿ, ಚೆನ್ನಾಗಿ ಗಾಳಿ ಬೆಳಕಿನ ವ್ಯವಸ್ಥೆ ಇರುವಂತೆ ಮಾಡಬೇಕು.

ಮನೆಗೆ ವರ್ಷಕ್ಕೊಮ್ಮೆಯಾದರೂಸುಣ್ಣ ಬಣ್ಣ ಮಾಡಿಸಬೇಕು, ಭಾವಣಿ, ಗೋಡೆ ಸಂದು ಗೊಂದಿನಲ್ಲಿ ಜೇಡರ ಬಲೆ-ಜಿರಲೆ, ಹಲ್ಲಿ , ಹೆಗ್ಗಣ, ಗೆದ್ದಲು, ಇರುವೆ ಇರದಂತೆ ಕಾಪಾಡಬೇಕು.

## ಹೊಗೆಯಿಲ್ಲದ ಅಡುಗೆ ಕೋಣೆ

ಸಾಂಪ್ರದಾಯಿಕ ಒಲೆಗಳೆಂದರೆ ಹೊಗೆ ಗೂಡುಗಳೇ ಸರಿ. ಅಡುಗೆ ಮಾಡುವ ಹೆಂಗಸರು ಸುರಿಸುವ ಕಣ್ಣೀರಿಗೆ ಮಿತಿಯಿಲ್ಲ. ಗೋಡೆಗಳೆಲ್ಲ ಕಪ್ಪು; ಸೌದೆ ಖರ್ಚು ಕೂಡ ಹೆಚ್ಚು. ಸೀಮೆಎಣ್ಣೆ ಸ್ಟೌವ್, ಗ್ಯಾಸ್-ವಿದ್ಯುತ್ ಒಲೆ, ಗೊಬ್ಬರ ಗ್ಯಾಸಿನ

ಒಲೆಗಳು ಉಪಯುಕ್ತವಾದರೂ ಅವುಗಳ ಬೆಲೆಲ ಹೆಚ್ಚು. ಆದರೆ ಈಚೆಗೆ ಪ್ರಚಾರಕ್ಕೆ ಬಂದ ಅಸ್ತ್ರದ ಒಲೆ ತೀರ ಸರಳ; ಸುಲಭ ಬೆಲೆ. ಸೌದೆ ಖರ್ಚು ಕಮ್ಮಿ; ಸಮಯದ ಉಳಿತಾಯ; ಮತ್ತು ಹೊಗೆಯಿಲ್ಲದೆ ಅಡುಗೆ ಮಾಡಬಹುದು. ಇದಕ್ಕೆ ಸರಕಾರದ ಧನ ಸಹಾಯವಿದೆ.

## ಉಣಿಸು-ತಿನಿಸುಗಳನ್ನು ಮುಚ್ಚಿಡಬೇಕು

ಅಡುಗೆ ಕೋಣೆಯ ಶುಚಿತ್ವವನ್ನು ಕಾಪಾಡುವುದರ ಜತೆಗೆ ಉಣ್ಣಲು ತಿನ್ನಲು ತಯಾರಿಸಿದ ತಿಂಡಿ ತಿನಿಸುಗಳನ್ನು ಕೂಡ ಮುಚ್ಚಿಟ್ಟಿರಬೇಕು. ಧೂಳು, ಕಸಕಡ್ಡಿ, ಮರ್ಣಣ ಮಸಿ ಸೇರಿ ಕಲುಷಿತವಾಗದಂತೆ ಕಾಪಾಡಬೇಕು. ನಾಯಿ, ಬೆಕ್ಕು, ಹಲ್ಲಿ, ಜಿರಲೆ, ಇಲಿ ಹೆಗ್ಗಣ ಬಾಯಿ ಹಾಕಿ ಮಲಿನಗೊಳಿಸದಂತೆ ರಕ್ಷಿಸಬೇಕು. ನೊಣ, ಕ್ರಿಮಿ ಕೀಟಗಳ ಸಂಪರ್ಕ ಬಾರದಂತೆ ಹಾಗೂ ರೋಗಾಣುಗಳು ಸೇರಿಕೊಳ್ಳದಂತೆ ನಾವು ಮುಂಜಾಗ್ರತೆ ವಹಿಸಿಬೇಕು.

## ಸಾಕು ಪ್ರಾಣಿಗಳಿಗೆ ಪ್ರತ್ಯೇಕ ವ್ಯವಸ್ಥೆ

ಹಸು-ಕರು, ಆಡು, ಕುರಿ ಕೋಳಿಗಳನ್ನು ಮನೆಯೊಳಗೆ ಕಟ್ಟುವುದುಂಟು. ಎತ್ತುಗಳಿಗೂ ಸಹ ಅಲ್ಲಿಯೇ ವಸತಿ ಕಲ್ಪಿಸುತ್ತಾರೆ. ಅವುಗಳ ಸಗಣಿ, ಗಂಜಲ ಹಿಕ್ಕೆಗಳಿಂದ ದುರ್ವಾಸನೆಯ ಕೊಳಕು ಪರಿಸರ ನಿರ್ಮಾಣವಾಗುತ್ತದೆ. ಇದನ್ನು ತಪ್ಪಿಸಲು ಸಾಕುಪ್ರಾಣಿಗಳಿಗೆ ಮನೆಗೆ ಹೊಂದಿಕೊಂಡಂತೆ ಇಳಿಚಪ್ಪರದ ದೊಡ್ಡಿಯನ್ನು ನಿರ್ಮಿಸಿ ಸಗಣಿ ಗಂಜಲವನ್ನು ತಿಪ್ಪೆಗುಂಡಿಗೆ ಸೇರಿಸುತ್ತಿದ್ದರೆ ಉತ್ತಮ ಗೊಬ್ಬರ ದೊರಕುತ್ತದೆ; ಶುಚಿತ್ವ ಪಾಲನೆಯಾಗುತ್ತದೆ.

ಕೋಳಿಗಳಿಗೊಂದು ಚಿಕ್ಕ ಗೂಡನ್ನು ಮನೆಯಲ್ಲಿ ಪ್ರತ್ಯೇಕವಾಗಿ ಒದಗಿಸಬೇಕು.

## ಚೊಕ್ಕಟ ಪರಿಸರ

ಮನೆಯ ಸುತ್ತಮುತ್ತ ಕಸಕಡ್ಡಿ, ಕಾಗದ, ಚಿಂದಿ, ಚೂರು, ಕೆಸರು, ಮಣ್ಣು, ಸಗಣಿ ಮೊದಲಾದ ವಸ್ತುಗಳನ್ನು ಅಲ್ಲಲ್ಲೇ ಹಾಕುತ್ತಾರೆ; ಅಥವಾ ಮೂಲೆಯಲ್ಲಿ ಗುಪ್ಪೆ ಹಾಕುತ್ತಾರೆ. ಇದರಿಂದ ಕ್ರಿಮಿಕೀಟಗಳು ವೃದ್ಧಿಸುತ್ತವೆ; ದುರ್ವಾಸನೆ ಹಬ್ಬುತ್ತದೆ. ಇದು ಸರಿಯಲ್ಲ. ಮನೆಗೆ ಬಹಳ ದೂರವಾಗದಂತೆ, ಹಿತ್ತಲಲ್ಲಿ ತಿಪ್ಪೇಗುಂಡಿಯನ್ನು ನಿರ್ಮಿಸಬೇಕು . ('ಕಾಂಪೋಸ್ಟ್ ಪಿಟ್') ಅನುಪಯುಕ್ತ ವಸ್ತುಗಳನ್ನೆಲ್ಲ ಅದರಲ್ಲಿ ಹಾಕುತ್ತ, ಮೇಲಿಂದ ಸ್ವಲ್ಪ ಮಣ್ಣೆರಚುತ್ತಿದ್ದರೆ, ಕ್ರಮೇಣ ಉತ್ತಮ ಕಾಂಪೋಸ್ಟ್ ಗೊಬ್ಬರ ತಯಾರಾಗುತ್ತದೆ; ಮನೆಯ ಆವರಣವೂ ಸ್ವಚ್ಛವಾಗಿ ಉಳಿಯುತ್ತದೆ- ಹೀಗೆ ಇಬ್ಬಗೆಯ ಲಾಭ ದೊರಕುತ್ತದೆ.

### ಬಚ್ಚಲ ನೀರು ಇಂಗಿ ಹೋಗಲು

ಬಚ್ಚಲು-ಅಡುಗೆ ಮನೆಯ ಕೊಚ್ಚೆ ನೀರು ಅಂಗಳದಲ್ಲಿ ಹಾದಿ-ಬೀದಿಯಲ್ಲಿ ನಿಂತು ನಾರುತ್ತ ದುರ್ವಾಸನೆ ಹರಡುವುದನ್ನು ತಪ್ಪಿಸಲು 'ಇಂಗುಬಚ್ಚಲು' ನಿರ್ಮಿಸುವುದು ಅಗತ್ಯ.

### ಹಿತ್ತಿಲ ಕೈತೋಟ

ಈ ಗಲೀಜು ನೀರನ್ನು ಸಣ್ಣ ಕಾಲುವೆ ಮೂಲಕ ಅಥವಾ ಪೈಪಿನಿಂದ ಹಾಯಿಸಿ ಚಿಕ್ಕ ಕೈತೋಟ ಬೆಳೆಸಬಹುದು. ಹೂವು, ತಾಜಾ ತರಕಾರಿ, ಪಪಾಯಿ(ಪರಂಗಿ), ನುಗ್ಗೆ, ಬಾಳೆ, ನಿಂಬೆಗಿಡಗಳು ಉತ್ತಮ ಫಲ ನೀಡುತ್ತವೆ.

### ಸುಲಭ ಶೌಚಾಲಯ

ಪ್ರತಿ ಕುಟುಂಬಕ್ಕೂ ಕಕ್ಕಸ್ಸು ಮನೆಯ ವ್ಯವಸ್ಥೆ ಇರಬೇಕು; ಆಧುನಿಕ ಕಕ್ಕಸ್ಸು ಮನೆಯನ್ನು ನಿರ್ಮಿಸಲು ಸಾವಿರಾರು ರೂಪಾಯಿ ಖರ್ಚು. ಆದರೆ ಈಚೆಗೆ ಪ್ರಚಾರಕ್ಕೆ ಬಂದ ಸುಲಭ ಕಕ್ಕಸ್ಸು ಗುಂಡಿ'ಯನ್ನು ಕಮ್ಮಿ ಖರ್ಚಿನಲ್ಲೇ ಕಟ್ಟಿಸಬಹುದು. ಲೀಚ್‌ಪಿಟ್ ಮಾದರಿಯ ಕಕ್ಕಸ್ಸು ಗುಂಡಿ ಹಳ್ಳಿ ಮನೆಗಳಿಗೆ ಸೂಕ್ತ. ಇದಕ್ಕೆ ಸರಕಾರದ ಧನ ಸಹಾಯವಿದೆ. ಹೊರ ಬಯಲಲ್ಲಿ ಕಕ್ಕಸ್ಸು ಮಾಡುವ ಕ್ರಮವನ್ನು ನಿಲ್ಲಿಸಬೇಕು. ಹಳ್ಳಿ ಪರಿಸರದಲ್ಲಿ ದುರ್ವಾಸನೆ, ಹೊಲಸು ಹಾಗೂ ಅಸಹ್ಯ ಸದಾ ಗೋಚರಿಸುತ್ತಿದ್ದು ಅದನ್ನು ನಿವಾರಿಸಬೇಕು. ಇಲ್ಲದಿದ್ದರೆ ಜಂತು ಹುಳುಬಾಧೆ ತಪ್ಪದು.

### ಕುಡಿಯಲು ಶುದ್ಧವಾದ ನೀರು

'ಬೋರ್‌ವೆಲ್'ನ (ಹ್ಯಾಂಡ್‌ಪಂಪ್')ನ ನೀರು ಶುದ್ಧವಾಗಿರುತ್ತದೆ. ಆಳವಾದ ಸೇದುಬಾವಿ, 'ಮಿನಿವಾಟರ್ ಟ್ಯಾಂಕ್' ಅಥವಾ ನಲ್ಲಿಯ ನೀರು ಸಾಮಾನ್ಯವಾಗಿ ಶುದ್ಧವಾಗಿ ಇದ್ದರೂ ಅವುಗಳ ಪರಿಸರವನ್ನು ಸದಾ ನಿರ್ಮಲವಾಗಿ ಇಟ್ಟಿರಬೇಕು. ವರ್ಷಕ್ಕೊಮ್ಮೆಯಾದರೂ ಕುಡಿಯುವ ನೀರಿನ ಬಾವಿಯನ್ನೂ, ನಲ್ಲಿ ನೀರಿನ ಟ್ಯಾಂಕ್‌ನ್ನೂ ಶುದ್ಧಮಾಡಬೇಕು.

ಬೀದಿನಲ್ಲಿ ಹ್ಯಾಂಡ್ ಪಂಪ್ ಅಥವಾ ಬಾವಿಯಿಂದ ನೀರನ್ನು ಮನೆಗೆ ತರುವಾಗ, ಮುಚ್ಚಳ ಮುಚ್ಚಿದ ಪಾತ್ರೆಯಲ್ಲಿ ತುಂಬಿ ತರಬೇಕು; ಮನೆಯಲ್ಲಿ ಸಹ ಮುಚ್ಚಿ ಇಟ್ಟಿರಬೇಕು. ನೀರಿನ ಪಾತ್ರೆಯೊಳಕ್ಕೆ ನೇರವಾಗಿ ಕೈ ಹಾಕಿ ನೀರು ತೆಗೆಯದೆ, ಉದ್ದನೆ ಹಿಡಿಕೆಯ ಸೌಟನ್ನು ಬಳಸಬೇಕು.

* * * * *

# ವೃದ್ಧಾಶ್ರಯ

ವೃದ್ಧಾಪ್ಯವು ಶಾಪವಲ್ಲ. ವರದಾನವೂ ಅಲ್ಲ. ಮಾನವ ಜೀವನದಲ್ಲಿ ಯೌವನಗಳ ಹಾಗೆ ಒಂದು ಮಜಲು. ಅದಕ್ಕೆ ಜೀವನಾಂತ್ಯದ ಬರುವ 'ಮುದುಕ' ಎನುವುದು ಗುರುತಿಸಲು ಬಳಸುವ ಸಾಮಾನ್ಯ ಮಾನದಂಡ. ದೈಹಿಕ ವಯಸ್ಸು (ಆಯುರ್ಮಾನ) 'ವಯೋವೃದ್ಧ' ಎಂಬ ಪದಕ್ಕೆ ಸಮಾನಾಂತರವಾಗಿ ಜ್ಞಾನವೃದ್ಧ ಎಂಬ ಪದ ಇದ್ದರೂ ಎರಡೂ ಒಂದೇ ಅಲ್ಲ. ಅರವತ್ತನೇ ವರ್ಷಕ್ಕೆ ಬಂತು ಎನ್ನುವಾಗ ಸರಕಾರಿ ಭಾಷೆಯಲ್ಲಿ () ಹಿರಿಯ ಪ್ರಜೆ ಎಂಬ ಗಂಭೀರವಾದ ಪದವನ್ನು ಬಳಸಿದರೂ ಅದರ ನಿಜವಾದ ಅರ್ಥ 'ಮುದುಕ' ಸಿದ್ಧನಾದ ಎಂಬುದೇ ಅಗಿದೆ!

ವೃದ್ಧಾಪ್ಯ ಜೀವನದ ಒಂದು ಘಟ್ಟವಾದರೂ, ಅದು ಬೇಕೆಂದಾಗ ಬರುವುದಿಲ್ಲ. ನಾವು ಬೇಡವೆಂದರೂ ಮುಂದೂಡಲಾಗುವುದಿಲ್ಲ. ಬಂದೇ ಬರುತ್ತದೆ. ವೃದ್ಧಪಟ್ಟ ಸ್ಥಿರವಾಗುತ್ತದೆ. (ಹೆಜ್ಜೆಯ ಮೇಲೆ ಹೆಜ್ಜೆಯನಿಟ್ಟು ಗೆಜ್ಜೆಯ ಸದ್ದು ಕೇಳಿಸುವಂತೆ ಇದ್ದರೂ ಮಜ್ಜಿಗೆಯೊಳಗಿನ ಬೆಣ್ಣೆಯ ಹಾಗೆ ಬಂದು ಬಿಡುತ್ತದೆ. ಕೆಲವರಿಗೆ ಪಿಂಚಣಿ (ಪೆನ್ಷನ್) ಇನ್ನು ಕೆಲವರಿಗೆ ಷಷ್ಠ್ಯಬ್ಧಿ ಸಮಾರಂಭ. ಬಹಳಷ್ಟು ಜನರ ಪಾಲಿಗೆ ಅರವತ್ತೆಂದರೆ ಅರೆನೆನಪಿನ ಆರಂಭ!

ಹಿಂದಿನ ಕಾಲದಲ್ಲಿ ಅವಿಭಕ್ತ ಕುಟುಂಬ. ಹಳ್ಳಿ ಮನೆತನ, ಪಾರಂಪರಿಕ ನೆಲೆಗಟ್ಟು, ಸಾಂಪ್ರದಾಯಿಕ ಕಟ್ಟು ಕಟ್ಟಲೆ, ಸುವ್ಯವಸ್ಥಿತವಾದ ಸಾಮಾಜಿಕ ನಡವಳಿಕೆಗಳಿದ್ದುದರಿಂದ ಹೊಸತಾಗಿ ಬಂದಿ ಸ್ಥಿತ್ಯಂತರಕ್ಕೆ ಹೊಂದಿಕೊಳ್ಳುವುದು ;ವೃದ್ಧರಿಗೊಂದು ಸಮಸ್ಯೆಯೇ ಆಗಿರಲಿಲ್ಲ. ಕೌಟುಂಭಿಕ ಕಾರ್ಯಕ್ರಮಗಳು ಬದುಕುವ ಸಂತೃಪ್ತ ಜೀವನ ಅಮ್ಮೆಂಬಳರದು.

ಎಡಬಿಡದೆ ಅಭ್ಯಸಿಸುವ ಮಥಿಸಿ ಮನನಿಸುವ ಅನುಭವಿಸಿ ಆನಂದಿಸುವ ಆ ಆನಂದವನ್ನು ಶಿಷ್ಯ ಬಳಗದ ಜೊತೆಗೆ ಹಂಚಿಕೊಳ್ಳುವ ಕ್ರಮ ಅಮ್ಮೆಂಬಳರದ್ದು. ವೃತ್ತಿಯಿಂದ ಅಭ್ಯಾಸವನ್ನು ಪ್ರವೃತ್ತಿಯಿಂದ ಸಾಹಿತ್ಯ ಪ್ರೇಮವನ್ನು ನಿರ್ವ್ಯಾಜ್ಯವಾಗಿ

ನಡೆಸುವ ನಮ್ಮ ಅಮ್ಮೆಂಬಳರಿಗೆ ಸಾವಿರಾರು ಸಂಖ್ಯೆ ಶಿಷ್ಯರಿದ್ದರು. ಅವರು ಬರೆದ ಕೃತಿಗಳು ಸಂಖ್ಯಾ ದೃಷ್ಟಿಯಿಂದ ಬಹುಕಡಿಮೆ. ಆದರೆ ಅವುಗಳಲ್ಲಿ ಕೆಲವಾದರೂ ಸ್ವಯಂ ಪ್ರತಿಭೆಯಿಂದ ಬೆಳಗಿ ಚಿರಕಾಲ ಉಳಿಯುವ ರಸಘಟ್ಟಗಳಿವೆ ಎನ್ನಲು ಅಡ್ಡಿಯಿಲ್ಲ. ತಮ್ಮ ಆತ್ಮತೃಪ್ತಿಗಾಗಿ ಬರೆದು ಬರೆದುದನ್ನು ಶಿಷ್ಯರ ಗೆಳೆಯರ ಮನ ಸಂತೋಷಕ್ಕಾಗಿ ಓದಿ-ಹಾಡಿ ಪ್ರಕಟಿಸಿ ಕನ್ನಡ ಸಾರಸ್ವತ ಲೋಕಕ್ಕೆ ಶಾಶ್ವತ ದೇಣಿಗೆ ನೀಡಿದ ದಕ್ಷಿಣ ಕನ್ನಡ ಜಿಲ್ಲೆ ಕವಿ ಗುರು ಪರಂಪರೆ ಮುದ್ದಣ್ಣ ಪಂಜೆ, ಮುಳಿಯ ತಿಮ್ಮಪ್ಪಯ್ಯನವರ ಪರಂಪರೆ ನಮ್ಮ ಅಮ್ಮೆಂಬಳರದ್ದು.

ಪ್ರಸಿದ್ಧಿಗಾಗಿ ಹಂಬಲಿಸದೆ, ಕೀರ್ತಿಗಾಗಿ ಹಾರೈಸದೇ ಹೊಸಗಾಳಿ ಬೀಸಿದಾಗ ಮುಗ್ಗರಿಸದೆ, ಹಳೆಯ ಪ್ರವಾಹದಲ್ಲಿ ಕಾಲು ಜಾರದೆ ತನ್ನತನವನ್ನು, ಪರಂಪರೆಯ ಸದ್ಗುಣಗಳನ್ನು ಅಧ್ಯಾಪಕರಾಗಿಯೂ ಉಳಿಸಿಕೊಂಡ ಆನಂದಾಶ್ರಮದ ನಮ್ಮ ಅಮ್ಮೆಂಬಳರಿಗೆ ನಮ್ಮೋನ್ನಮ:

(ಉಳ್ಳಾಲ (ದಕ್ಷಿಣ ಕನ್ನಡ)ದ ಆನಂದಾಶ್ರಮ ವಿದ್ಯಾಲಯದಲ್ಲಿ ಸಾಹಿತಿ ಶಿಕ್ಷಕ ಕವಿ ಶ್ರೀ ಅಮೋಳ ಶಂಕರನಾರಾಯಣ ನಾವ (ಕವಿಶಶ) ಅವರ ಸನ್ಮಾನ ಕುಜ್ಞ ಗ್ರಂಥ:1970)

(ಗುರುಹಿರಿಯರು ನಿಶ್ಚಯಿಸಿದಂತೆ' ಎಂಬ ಒಕ್ಕಣೆಯೊಂದಿಗೆ) ಜರುಗುತ್ತಿತ್ತು. ಅಧಿಕಾರ ಘೌಣವಾದರೂ ಅಂತಸ್ತಿನ ಅಸ್ತಿತ್ವ ಇದ್ದೇ ಇತ್ತು..... ಕಳೆದ 50-60 ವರ್ಷಗಳಿಂದ ಪರಿವರ್ತನೆಯ ಬಿರುಗಾಳಿ ಬೀಸತೊಡಗಿದ ಹಾಗೆ ನಾನು ಎಂಬ ಒಕ್ಕಣೆ ಬೆಳಕಿಗೆ ಬಂತು. ಅದರ ಬೆನ್ನಲ್ಲೇ ಹೊಸ ತಲೆಮಾರಿನ ನೂತನ ವ್ಯವಸ್ಥಾ ವಿಧಾನಗಳು ಒಂದೊಂದಾಗಿ ರೂಪಗೊಂಡವು. ಹಳ್ಳಿ ಹೋಬಲಿಗಳ ಗಡಿ ದಾಟಿ ಪೇಟೆ, ಪಟ್ಟಣ, ನಗರ, ಶಹರಗಳ ಪರಿಧಿಯಿಳಗೆ ಬದುಕುವುದು ಅನಿವಾರ್ಯವಾಯಿತು............... ಉದ್ಯೋಗ, ವ್ಯವಹಾರ,.....ರ..ರ ಎಂಬುದಾಗಿ ನಾನಾ ಕಾರಣಗಳಿಂದ ನಗರವಾಸಕ್ಕೆ ಬಂದು ಸೇರಿಕೊಂಡು ಕ್ರಮೇಣ () ಸೈಟು, ಮನೆ, ಬಂಗಲೆಯೆಂಬ ಕನಸನ್ನು ನನಸು ಮಾಡಿಕೊಂಡದ್ದೂ ಆಯಿತು. ಹಳ್ಳಿಮನೆ, ಮನೆತನವೆಂಬುದು ರಜಾದಿನಗಳಲ್ಲಿ, ವಿಶೇಷ ಸಂದರ್ಭಗಳಲ್ಲಿ ಹೋಗಿ ಸಂಭ್ರಮದಲ್ಲಿ ಒಂದಿಷ್ಟು ಕಾಲ ಕಳೆಯುವ ಅಪೇಕ್ಷಣೀಯ (ಪ್ರೇಕ್ಷಣೀಯ) ತಾಣವಾಯಿತು.

ನಗರ ಜೀವನ ಎಲ್ಲ ಆಧುನಿಕ ಸಲಕರಣೆ-ಸೌಲಭ್ಯಗಳು ಹೊಸ ನಿವಾಸವನ್ನು ತುಂಬಿದವು. ವಿಜೃಂಭಿಸಿದವು. ಹೊರಗಿನ ಸಿಟೌಟ್, ಹಾಲ್, ಬೆಡ್‌ರೂಂ, ಗೆಸ್ಟ್ ರೂಮ್- ಎಲ್ಲ ಎಲ್ಲವೂ ವ್ಯವಸ್ಥಿತವಾದರೂ ಟಿವಿ, ಡೈನಿಂಗ್ ಟೇಬಲ್,

ದೂರವಾಣಿಗಳ ಜೊತೆಗೆ ಮಕ್ಕಳ ಶಿಕ್ಷಣ ಪರಿಕರಗಳು ಆಕರ್ಷಕ ಗೋಡೆ ಅಲಂಕಾರಗಳು ಮುಕ್ಕಾಲಿಯ ಮೇಲೆ ಹೂದಾನಿಗಳು ಎಲ್ಲವೂ ವ್ಯವಸ್ಥಿತವಾದವು. ಅವ್ಯವಸ್ಥೆಗೊಳಗಾದದ್ದು ವೃದ್ಧಾಶ್ರಮ!

ಮುಂದಿನ ತಲೆಮಾರೊಂದು ಸಿದ್ಧವಾಯಿತು. ಮಗ, ಸೊಸೆ, ಮೊಮ್ಮಗಳು ಎಲ್ಲ ನಗರದ ನಾಗರೀಕರು; ಹೊಸ ವಿಚಾರಧಾರೆ, ವಿಧಿ ವಿಧಾನಗಳನ್ನು ಒಯ್ದು ಒಪ್ಪಿಕೊಂಡವರು, ಅಪ್ಪಿಕೊಂಡವರು. ಮನೆಯಲ್ಲಿ ಅವರದೇ ಕಾರುಬಾರು. ಈಗ, ವೃದ್ಧಾವಸ್ಥೆಯಲ್ಲಿರುವ ನಿಮ್ಮದೀಗ, ಅತಂತ್ರಕ್ಕೆ ಹತ್ತಿರವಾದ ಪರಿಸ್ಥಿರಿ. ಸ್ವಂತದೆನ್ನುವ ಸಹಾಯಕ್ಕಿಂತ, ವೃದ್ಧಾಪ್ಯದ ದ್ವೇಷ, ಮಾನಸಿಕ, ಸಾಮಾಜಿಕ ಜತೆಗೆ ಸಾಂಸಾರಿಕ ಕಿರುಕುಳಗಳ ಹೊಸ ಜನಾಂಗದ ರರೀತಿ ರಿವಾಜುಗಳು ನಿಮಗೆ ಒಗ್ಗವುದಿಲ್ಲ . ನಿಮ್ಮ ಎನರ್ಜಿಯನ್ನು ಅವರು ಗಣ್ಯ ಮಾಡುವುದಿಲ್ಲ. ಮನೆಯೊಳಗೇ ಅತೃಪ್ತಿ, ಹತಾಶೆ, ನಿರಾಶೆ, ನೆಮ್ಮದಿಯನ್ನು ಕಲಕುತ್ತದೆ. ಅವರನ್ನು ಒಲ್ಲೆ ಎಂದರೂ ಬಿಡಲಾರದ ನೀವು, ನಿಮ್ಮನ್ನು ಬೇಕೆಂದರೂ ದೂರ ಮಾಡಲಾರದವರಾಗುತ್ತಾರೆ ಅವರು!......... ಈಗ ಮನೆಯ ಯಜಮಾನ (ಮಗ /ಸೊಸೆ) ವರ್ಗಾವಣೆಯೋ ಸ್ಥಳಾಂತರವೋ ಆಗಿ ಬೇರೆ ನಗರಕ್ಕೆ ಹೋಗಬೇಕಾಗಿ ಬಂದರಂತೂ ಇನ್ನಷ್ಟು ತೊಂದರೆ, ಹೋಗುವಂತಿಲ್ಲ-ಹೋಗದೆ ಇರುವಂತಿಲ್ಲ. ಹೊಸ ಸ್ಥಳ, ಪರಿಸರ ಸನ್ನಿವೇಶಕ್ಕೆ "ಈ ವಯಸ್ಸಿನಲ್ಲಿ" ಒಗ್ಗಿಕೊಳ್ಳಲಾರೆ ಎನ್ನುತ್ತದೆ ನಿಮ್ಮ ಮನಸ್ಸು. ಇಲ್ಲೇ ಇದ್ದರೆ ಎಲ್ಲಿರುತ್ತೀರಿ, ಏನು ಮಾಡುತ್ತೀರಿ? ಇದು ವಾಸ್ತವ! ದೂರ ದೂರವೇ ಇದ್ದರಾದರೂ 'ಬಾಂಧವ್ಯವನ್ನು ಉಳಿಸಿಕೊಳ್ಳುತ್ತದೇನೋ ಎಂಬುದರ ಆಸೆ! ಆದರೆ ಎಲ್ಲಿರುವವರು ನೀವು? ಕೇಳಿ ಬಿಟ್ಟು ಬಂದ ಹಳ್ಳಿಗೆ ಹೋಗುವಂತಿಲ್ಲ. (ಅಲ್ಲಿ ಇನ್ನೊಂದು ರಂಪ ರಾಮಯಣ!) ಎಲ್ಲಿ ಬೇರೆ ಆಗಿ ಇರುವುದಿಲ್ಲ. (ಬೆಂಗಳೂರು ನಗರದಲ್ಲಿ ಹೀಗೆ, ಕುಟುಂಬವಿದ್ದರೂ ಒಂಟಿಯಾಗಿ ಬೇರೆ ಇರುವ ವೃದ್ಧರ ಸಂಖ್ಯೆ ಸುಮಾರು 20 ಸಾವಿರದಷ್ಟು ಎನ್ನಲಾಗಿದೆ).

ವೃದ್ಧಾಶರಮಗಳೆಂಬ ಸಂಸ್ಥೆಗಳು ತಲೆ ಎತ್ತಿವೆ, ಕೆಲವೆಡೆ ವೃದ್ಧರಿಗೆ ಉತ್ತಮವಾದ ಆಶ್ರಮ ದೊರಕುತ್ತದೆ. ತಕ್ಕಷ್ಟು ಹಣ ಖರ್ಚು ಮಾಡಲಾಗದಿದ್ದರೆ ಸಮ ವಯಸ್ಕರ, ಸಮ ಮನಗಳ ಸಹವಾಸ, ಮನರಂಜನೆಯಿಂದ ತೊಡಗಿ ಯೋಗಾಸನ, ಪುರಾಣಪುಣ್ಯ ಕಥೆಗಳ ಅನುಕೂಲತೆ ಸ್ವಯಂ ಪ್ರೇರಿತ ಸಂಸ್ಥೆಗಳ ಶಾಲಾ ಕಾಲೇಜುಗಳ ಮಕ್ಕಳು ಆಗೊಮ್ಮೆ-ಈಗೊಮ್ಮೆ ಬಂದು ಒಂದು ಗಳಿಗೆ ಇದ್ದು ಹೋಗುತ್ತಾರೆ. ಇನ್ನು ಕೆಲವೆಡೆ ಸರಕಾರಿ ವೃದ್ಧಾಶ್ರಮಗಳ ರೀತಿ ವಿಧಿಯಿಲ್ಲದೆ ಸಾವನ್ನೆದುರು ನೋಡುತ್ತ ಕಾಲಯಾಪನೆ ಮಾಡಬೇಕಾಗುತ್ತದೆ. (ಏಕೆ ಕಾಸಿಲ್ಲದೆ ಕೈಲಾಸ ಎಲ್ಲಿದೆ)

ಈ ಪರಿಸ್ಥಿತಿಯನ್ನು ಹೇಗೆ ಬದಲಿಸಬಹುದು? ವೃದ್ಧಾಪ್ಯವೇ ಬೇಡ ಎನ್ನಲಾರೆವು, ಮುಂದೂಡಲಾರೆವು; ಇಷ್ಟೇ ಸಾಕು ಎಂದು ಹೇಳಲು ಸಾಧ್ಯವಿಲ್ಲ. ಈಗಿನ, ಇಂದಿನ ವೃದೌರಿಗೆ ಮುಂದಿರುವ ಪರಿಸ್ಥಿತಿ ಇದು! ಇದಕ್ಕೆ ಪರಿಹಾರವೇನೂ ಏಕಸೂತ್ರವೇನೂ ಎಲ್ಲ. ತಮ್ಮ ತಮ್ಮ ಅನುಭವಕ್ಕೆ ತಕ್ಕಂತೆ ತಮ್ಮ ತಮ್ಮ ಇತಿಮಿತಿಗಳನ್ನು ಗುರುತಿಸಿಕೊಂಡು ಪರಿಣಾಮವನ್ನು ಕಂಡು ಕೊಳ್ಳಬೇಕು ಅಷ್ಟೇ. ಕಾಣದ ಸಹಾಯ ಹಸ್ತ ಬಂದು ನೆರವು ನೀಡೀತು ಎಂದು ಭ್ರಮಿಸುವುದು ಬೇಡ.

ನಾಳೆ ವೃದ್ಧರಾಗುವವರು–ಇಂದಿನ ಯೌವನಸ್ಥರು (40ರ ಹರೆಯದ ಘಟ್ಟದಲ್ಲಿರುವವರು) ಈಗಿನಿಂದಲೇ ಚಿಂತನೆಗೆ ಪ್ರಾರಂಭಿಸಬೇಕು. ಮುಂದೆ ಇನ್ನಿಪ್ಪತ್ತು ವರ್ಷಗಳ ನಂತರ ನನ್ನ ವೃದ್ಧಾಪ್ಯವನ್ನು ಹೇಗೆ ವ್ಯವಸ್ಥಿತಿಗೊಳಿಸಬೇಕು. ಅದಕ್ಕೆ ಬೇಕಾದ ಅನುಕೂಲತೆಗಳು, ಆರ್ಥಿಕ ಬೆಂಬಲ, ಕಾಯಿದೆ ಕಾನೂನಿನ ಚೌಕಟ್ಟುಗಳನ್ನೆಲ್ಲ 'ಚಿಂತನೆ' ನಡೆಸಿ ನಿಮ್ಮ ವೃದ್ಧಾಪ್ಯ ನಿಮ್ಮ ಕೈಯಲ್ಲೇ ರೂಪು ಗೊಳ್ಳುವಂತೆ ಈಗಿನಿಂದಲೇ ಕಾರ್ಯಪ್ರವೃತ್ತರಾಗಿರಿ. ಗಾಬರಿಯಾಗುವುದು ಬೇಡ. ಸೋಮಾರಿತನ ಸಲ್ಲದು. "ಮುದುಕನೇ ನಿನಗೆ ನೀನೇ ಹೊಣೆ" ಎಂಬ ಗಾದೆಯನ್ನು ಸೃಷ್ಟಿಸೋಣ.

ಇನ್ನೊಂದು ಅಂಶ ಮುಂದಿಡಬೇಕು. (ಗಂಡಸು ಎಂಬ ಪದವನ್ನು ಕೇವಲ ಮಾಧ್ಯಮವಾಗಿ ಬಳಸಿಕೊಂಡಿದ್ದೇ ವಿನಾ ಅನ್ಯಥಾ ಅಲ್ಲ) ಮಹಿಳೆ–ಹೆಂಡತಿ, ತಾಯಿ, ಅಜ್ಜಿ, ವೃದ್ಧಾಪ್ಯದ ದಿನಗಳು ಹೇಗೆ ಕಳೆಯಬೇಕು ಎಂಬುದರ ಬಗ್ಗೆ ಸ್ಪಷ್ಟವಾದ ಹೊಸ ಬೆಳಕು ಬೀರುವ ಕಾಲವೀಗ ಬಂದಿದೆ. ವೃದ್ಧಾಪ್ಯದಲ್ಲಿ ಮಗನ ಆಶ್ರಯ ಎಂಬುದು ಗಾದೆಯ ಮಾತಾಗಿಯಷ್ಟೇ ಉಳಿಯತೊಡಗಿದ್ದರಿಂದ ವೃದ್ಧಸ್ತ್ರೀಯರ ಬಗ್ಗೆ 'ಚಿಂತನ' ನಡೆಸಬೇಕಾದ್ದು ಅನಿವಾರ್ಯ. ಅದರಲ್ಲೂ 'ಪತಿಯನ್ನು ಕಳೆದುಕೊಂಡ' ಮಹಿಳೆಯರು ಅನೇಕರ ಪರಿಸ್ಥಿತಿ ಕರುಣೆಯ ಲಾವಣಿ! ಪತ್ನಿಯಾಗಿ ಕೈಹಿಡಿದು ಮನೆ ತುಂಬಿ, ಸಂಸಾರದಲ್ಲಿ ಸಹಬಾಳ್ವೆ ನಡೆಸಿ, ಮಕ್ಕಳನ್ನು ಹೆತ್ತು, ಸಾಕಿ ಸಲಹಿ, ದೊಡ್ಡವರನ್ನಾಗಿ ಮಾಡಿ, ಜತೆಗೆ 'ಗಂಡ' ನಿಮ್ಮನ್ನ ಬಾಳ ಪಥದಲ್ಲಿ ಮುಂದೆ ಸಾಗಲು ಹಿಂದಿನ ಶಕ್ತಿಯಾಗಿ ಹೆಂಡತಿ "ನಿಮ್ಮ ನಂತರ" ಬದುಕಬೇಕಾಗಿ ಬಂದರೆ, ಹೇಗೆ ಏನೆಲ್ಲ ವ್ಯವಸ್ಥೆಯಾಗಬೇಕು ಎಂಬುದನ್ನು ರೂಪಿಸಲು ಮರೆಯದಿರ–ಏಕೆಂದರೆ ಇದೇ "ವೃದ್ಧಾಶ್ರಮ"

(ಮಲ್ಲೇಶ್ವರ (ಬೆಂಗಳೂರು) ಹವ್ಯಕ ಅಧ್ಯಯನ ಕೇಂದ್ರದ ಚಿಂತನ ಚಕ್ರ ಕಾರ್ಯಕ್ರಮ:2004)

* * * *

# ಹವಿಗನ್ನಡ ನಾಟಕರಂಗ ಕಿರುನೋಟ

## 1. ಸ್ವಸ್ಥಿವಾಚನ ಮಾಡಿದ ಸೂರಿ ವೆಂಕಟ್ರಮಣ ಶಾಸ್ತ್ರಿ ಕರ್ಕಿ

1897ರಲ್ಲಿ ಬೊಂಬೈಲಿ ಸೂರಿ ವೆಂಕಟ್ರಮಣ ಶಾಸ್ತ್ರಿಗಳ ಸ್ವಸ್ಥಿವಾಚನದಿಂದ ಸುರುವಾದ ಹವಿಗನ್ನಡ ನಟಕರಂಗ ಕಾರ್ಯಕ್ರಮ ಇಂದು ಹೇಳಿದೆ 2006ನೇ ಇಸವಿಯವರೆಗೆ ಸುಮಾರು 120 ವರ್ಷದಷ್ಟು ಕಲ ಬದುಕಿಗೊಂಡಿದ್ದು ಹೇಳಿದರೆ ಅದು ಆಶ್ಚರ್ಯ ಹೇಳಿಕೊಂಡರೂ ಸತ್ಯ ಸಂಗತಿ. ಡಾ.ಹರಿಕೃಷ್ಣಭರಣ್ಯ ಹವಿಗನ್ನಡ ನಾಟಕಗಳ ಬಗ್ಗೆ () ಅಧಿಕಾರಯುತವಾಗಿ ಮಾತನಾಡುವ ವ್ಯಕ್ತಿ. ಇವರ ಪ್ರಕಾರ ಸುಮಾರು 40 ಹವಿಗನ್ನಡ ನಾಟಕಂಗಳ 20ರಷ್ಟು ಜನಂಗೋ ಬರದ್ದವು. ಹಾಗಿಪ್ಪಗ ಈ ದೀರ್ಘ ಪ್ರಯಾಣದ ಬಗ್ಗೆ ರಜಾ ಮಾಹಿತಿ ಬೇಡವೋ?

## 2) ನಡೆದು ಬಂದ ಹಾದಿಯ Land Mark

ಇಗ್ಗಪ್ಪ ಹೆಗ್ಗಡೆಯ ವಿವಾಹ ಪ್ರಹಸನ ಸೂರಿ ವೆಂಕಟ್ರಮಣ ಶಾಸ್ತ್ರಿ ಕರ್ಕಿ ಇವ್ರು ಬರೆದ ನಾಟಕ 1887ರಲ್ಲಿ ಮೊದಲನೆ ಅಚ್ಚು ಇತ್ತೀಚೆಗೆ ಅದು ನವತರುಣ ಬಾಷೆದಲಿ ಹೇಳ್ತೆ, "Terrible Ingredible" ಅದ್ಭುತ ನವ್ಯ ದಿವ್ಯ ಭವ್ಯ.

## 3) ದಕ್ಷಿಣ ದಿಕ್ಕಿನೋರ ಕಾಣಿಕೆ

ಉಡುಪಿ ಕಾಸರಗೋಡು ಸೇರಿಗೊಂಡು ದಕ್ಷಿಣ ಕನ್ನಡ ಜಿಲ್ಲೆಯ ಹತ್ತರೆ ಸುಳುದರೆ, ಕಾಂಬ ಗುರ್ತುಗಳೇ ಬೇರೆ.

ಹಿಂಗೊಂದು ಮದುವೆ ಡಾ. ಹರಿಕೃಷ್ಣ ಭರಣ್ಯ 1991.

ಬದ್ಧ ಡಾ. ಹರಿಕೃಷ್ಣ ಭರಣ್ಯ 1992.

ಮದಿಮಾಳು ಗುಂಡಿ ಡಾ. ಹರಿಕೃಷ್ಣ ಭರಣ್ಯ 1994

ಪಾಲು ಪಂಚಾತಿಕೆ ಡಾ. ಹರಿಕೃಷ್ಣ ಭರಣ್ಯ 1996 (ಧ್ವನಿ ಸುರುಳಿ)

ಪರಶುರಾಮ ಕ್ಷೇತ್ರೇ ಗೋಕರ್ಣ ಮಂಡಲೇ (ನಾಟಕ ಪ್ರದರ್ಶನ)- ಡಾ.ಕೃಷ್ಣ ಭೈರರ್ಣಣ.

ಡಾ. ಹರಿಕೃಷ್ಣ ಭರಣ್ಯ ಹುಟ್ಟಿದ್ದು ಪಣಾಜೆ ಕೇರಳ ಕರ್ನಾಟಕದ ಗಡಿಲ ಬೆಳೆದ್ದು, ಓದಿದ್ದು, ಎಲ್ಲ ಪುತ್ತೂರು, ಮಂಗಳೂರು (ಕರ್ನಾಟಕದಲ್ಲಿ) ಈಗ ತಮಿಳುನಾಡಿಲಿ ಕನ್ನಡ ಭಾಷೆಯ ತಮಿಳರಿಗೆ ಕಲಿಶಿಗೊಂಡಿದ್ದವು. ಮಧುರೆ ಕಾಮರಾಜ ವಿಶ್ವವಿದ್ಯಾಲಯ ಡಾಕ್ಟರೇಟ್ ಪಡೆದುಕೊಂಡ ವಿದ್ವಾಂಸರು. ಅಲ್ಲದೆ, ಹವಿಗನ್ನಡ ಕಾದಂಬರಿ, ತ್ರಿಪದಿ ಕೂಡ ಬರದ್ದು ವಿಶೇಷ. ಹೀಂಗೆ ಇವರ () ಆನೆ ಹೆಜ್ಜೆ ಗುರುತು.

**4)ಪಿಳ್ಳರ ಕಳಿ ಜವ್ವನಿಗರ ನಾಟಕ ಆತು**

ಭಟ್ಟು ಶಾಲೆಲಿ ಓದುವ ಕಾಲಕ್ಕೆ ಮಕ್ಕಳಾಟಿಕೆಲಿ ಬರೆದ ನಾಟಕವೊಂದರ 40 ವರ್ಷದ ಮೇಲೆ ಕಾಲೇಜು ವಿದ್ಯಾರ್ಥಿಗಳೂ ವಕೀಲಕ್ಕಳೂ ಇಪ್ಪ ಹವಿಗನ್ನಡ ನಾಟಕ "ನಂಬಂದ್ರ ಜೆಂದ್ರಿಕೆ" 1993ರಲ್ಲಿ ಪ್ರಕಟಣೆ ಆಯಿತು. ಹವೀಕರ ಜನಜೀವನ ಹಾಡುಪಾಡು, ಕತೆಗಳ ಬಗ್ಗೆ ಕೆಲವು ಪುಸ್ತಕಗಳು ಬಂದವು. ಕಾಲಕಾಲಕ್ಕೆ ಬದಲಾವಣೆ ಅಪ್ಪ ಯುಗಧರ್ಮದ ಮರ್ಮವ ಆರ್ತುಗೊಂಬ ಈ ನಾಟಕ ಒಂದು ಮೈಲಿಗಲ್ಲೇ.

**5) ವಿಶೇಷ ಉಡುಗೊರೆ:**

ಹವೀಕರ ಮದುವೆ ಉಪ್ನಾಯನಂಗಳಲ್ಲಿ ಹೊಟ್ಟೆ ಬಿರಿಯಪ್ಪ ಗಡದು ಪಂಚಭಕ್ಷ ಪರಮಾನ್ನದ ಊಟ ಗೊಡೆದು ರಜಾ ಒರಗಿದ್ದ ಮೇಲೆ ಸರ್ನಾಣ ಒಸಗೆ ಹೇಳುವ ಕಾರ್ಯಕ್ರಮ ಇದ್ದನ್ನೇ. ಅಲ್ಲಿ ಒಸಗೆ ಹರಿವಾಣಕ್ಕೆ ಬೆಳ್ಳಿರೂಪ (ಈಗನೋಟು) ಹಾಕಿ ಗಿಜಿಕ್ಕ ಶಬ್ದ ಮಾಡಿದ ಮೇಲೆ ಪುರೋಹಿತರು ಏನಯ್ಯ ಶ್ರೀಯುತರೇ ನಿಂಗೋ ಒಪ್ಪತ್ತು ಮೊದಲೇ ಬಂದು ಕಾರ್ಯಕ್ರಮಗಳ ಎಲ್ಲ ಚೆಂದಗಾಣಿಸಿ ಕೊಟ್ಟದ್ದಲ್ಲದೆ ವಿಶೇಷವಾದ ಉಡುಗೊರೆ ಭಾರವೇನು ಹೇಳಿ ಸಂತೋಷದಿಂದ ಕೇಳ್ತ ಮನೆಯಜಮಾನ ಹೇಳುವ 'ಥ್ಯಾಂಕ್ಸ್' ಕಾರ್ಯಕ್ರಮವೊಂದಿಪ್ಪ ಹಾಂಗೆ ಇಲ್ಲಿ ಎರಡು ಜೆನಾಪ್ತೇಷ್ಟರು ಕೊಟ್ಟ ಉಡುಗೊರೆ ಹವಿಗನ್ನಡ ನಾಟಕ ವಿಶೇಷವೇ. ಎಂತಂಗೆ ಹೇಳಿದರೆ ಇವ್ರು ಇಬ್ರೂ ಹವಿಗನ್ನಡ ಮಾತಿನೋರಲ್ಲ. ಆದರೂ ಹವಿಗನ್ನಡದಲ್ಲಿ ನಾಟಕ ಬರೆದು ಉಡುಗೊರೆ ಮಾಡಿದ್ದವು.

ಕೂಸಕ್ಕನ ಮದುವೆ ನರ್ಕಳ ಮಾರಪ್ಪಶೆಟ್ಟಿ 1930 ಸುಮಾರಿಂಗೆ ಮಾರಪ್ಪ ಮಾಷ್ಟ್ರ ಅಡ್ಯಡ್ಕದ ಹತ್ತಿರ ಮರಕ್ಕಿಣಿಲಿ (ಎಂಗಳ ಮರಕಿಣಿಮನೆ ಸಾಲಿಲೇ) ಅಡಕೆ ತೋಟ, ಮನೆ ಎಲ್ಲ ಮಾಡಿಗೊಂಡಿತ್ತಿದ್ದಲ್ಲದೆ ಹವೀಕ ಭಾಷೆಯ ಲ್ವಾಕಲ್ಲಿ ಮಾತಾಡುಗು. ಅವು ಸ್ವತ: ವೇಷಹಾಕಿ, ನಿರ್ದೇಶಿಸಿ ಪುಣಚಾಗ್ರಾಮ ಹಳ್ಳಿ

ರಂಗಮಂಟಪದಲ್ಲಿ ಆಡಿದ ನಾಟಕ ಈ ಕೂಸನ ಮದುವೆ ಈ ನಾಟಕದ ಹಸ್ತಪ್ರತಿಯ ಮಾಲೆ ಕೆ.ಪಿ ರಾಜಗೋಪಾಲ ಕನ್ಯಾನ ಮತ್ತೆ ದಿ. ಮಾರಪ್ಪ ಶೆಟ್ಟರ ಮಗ ಶ್ರೀ ರಘುನಾಥ ಶೆಟ್ಟಿ ಮುದ್ರಣ ವ್ಯವಸ್ಥೆ ಮಾಡಿದ್ದವು. (ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೇಲಿ ಪ್ರಕಟ ಆಯಿತದು) ಕಳೆದ ವರ್ಷ ಮಲ್ಲೇಶ್ವರ ಹವ್ಯಕ ಭವನದಲ್ಲಿ ರಂಗಪ್ರವೇಶ ಪ್ರದರ್ಶನವೂ ಆಯಿತದು.

ಒಪ್ಪುಕುಂಞ

ಗೌಡರ ಭಾಷೆ ಮನೆ ಮಾತಿನ ಸಾಹಿತಿ ಮಾಷ್ಟ್ರು ಟಿ.ಜಿ. ಮುಡ್ಲೂರು 1955ರಲ್ಲಿ 'ಒಪ್ಪುಕುಂಞ' ಹೇಳುವ ಹವಿಗನ್ನಡ ನಾಟಕ ಬರೆದ (ಇಂದು ಅದರ ಪ್ರದರ್ಶನ ನೋಡ್ತಿ ಇರಲಿ) ಪಂಜ ಸೀಮೆಯ ಕಲ್ಮಡ್ಕದ ಮುಡೂರಲ್ಲಿ ಇಪ್ಪ ಮುಡೂರರು ಕೂಡ, ಹವ್ಯಕ ಸಮಾಜದ ಮನೆ ಮುಂದೆ ಸುತ್ತ ಮುತ್ತ ಇದ್ದು ಅದರಿಂದ ಪ್ರೇಪೇಪಣೆ ಆಗಿ ಬರದ ಈ ಹವಿಗನ್ನಡ ನಾಟಕವೊಂದು ಮೈಲಿಗಲ್ಲು)

ಹವ್ಯಕ ಹವ್ಯಾಸಿ ನಾಟಕವೃಂದ ರಾಘವರಂಗ (ಬೆಂಗಳೂರು) ಉದ್ಘಾಟನಾ ಸಮಾರಂಭ: 2006.

* * * * **

# ಮಾನಿನಿಯರ ಧ್ವನಿ: ಹಳೇಮರಕ್ಕೆ ಹೊಸ ಚಿಗುರು

ಯಕ್ಷಗಾನ ಬಯಲಾಟದಲ್ಲಿ ಯುದ್ಧ-ಕಲ್ಯಾಣ ಹೇಳಿ ಪ್ರತ್ಯೇಕ ಇತ್ತು. ಉಮ್ಮೆಟ್ಟುಗುಳಿ ಕೇಚಣ್ಣಭಟ್ಟು ಅಂಥ ಪ್ರಸಿದ್ಧ (1040-50ರಲ್ಲಿ) ಇಡೀ ಇರುಳು ನಾಟಕ ನೋಡಿ ರೆಪ್ಪೆ ಮುಚ್ಚಲು ಸುರುವಾಗಿ ಒರಕ್ಕೂ ತೂಗುತ್ತ ಹೇಳುವಾಗ ಕೇಚಣ್ಣ ಭಟ್ರವೇಷ ಒಡ್ಡೋಲಗಕ್ಕೆ ಬಪ್ಪಹೊತ್ತಿಂಗೇ ಜೆನ ಎದ್ದು ಕೂರ್ತವು. ಕಣ್ಣ ತಿಕ್ಕಿಕೊಂಡು ಕೊರಳ ಮುಂದೆ ಮಾಡಿ ನೋಡ್ತವು ಅಷ್ಟು ವಿಶಿಷ್ಟ ಅವರ ವೇಷ. ಹಾಂಗೆ ಈಗ 21ನೇ ಶತಮಾನದ ಮದಲಾಣ ದಶಕದಲ್ಲಿ ಇಬ್ರು ಹೆಮ್ಮಕ್ಕೊ(ಹತ್ತರೆ ಎಪ್ಪತ್ತು ರೂಪಾಯಿ ಹಾಂಗಿ ಅಜ್ಜಿಯಕ್ಕೆ ಹೇಳ್ಳೆ ಅಕ್ಕು 2006ರಲ್ಲಿ ಕಮಲಕ್ಕನ ಕತೆ ಹೇಳುವ ಹವಿಗನ್ನಡ ಕತೆಯ ಶ್ರಾವ್ಯ ಮಾಧ್ಯಮಕ್ಕೆ ಅಳವಡ್ಸಿಗೊಂಡು ನಾಟಕ ಬರದ್ದವು. ಮೂಲ ಕತೆ ಡಾ. ಸವಿತಾ ಮರಕ್ಕಿಣಿ ಬರೆದ ಮುಗಿಲು ಬಿರಿಯಿತು ಪುಸ್ತಕದ ಒಂದು ಕತೆ ನಾಟಕಕ್ಕೆ ರೂಪಾಂತರ ದೊಡ್ಡೋರಿಂದ 'ಬಂಡಾಯಗಾರ್ತಿ' ಹೇಳುವ ಹೆಸರು ಪಡಕ್ಕೊಂಡ ಮಂಗ್ಳೂರಿನ ಮನೋರಮ (ದಿ. ಮುಳಿಯ ತಿಮ್ಮಪ್ಪ ಸೊಸೆ, ದಿ॥ ಮುಳಿಯ ಮಹಾಬಲ ಭಟ್ಟರ ಹೆಂಡತಿ) ಈ ನಾಟಕದಲ್ಲಿ ಹಳೆಯ ಮರಕ್ಕೆ ಹೊಸ ಚಿಗುರು ಹೇಳಿಗೊಂಡು ಸೂತ್ರಧಾರ, ನಟಿ, ಇತ್ಯಾದಿಗಳ ಜತೆಗೆ, ಕಾಲೇಜ್ ವಿದ್ಯಾರ್ಥಿನಿ ಕೂಡ ಇದ್ದವು. ಹಿಂದಾಣ ಕಾಲದ ಅಜ್ಜಿ, ಅತ್ತೆ, ಭಾವ, ಮಗಳು, ಪುಟ್ಟ ಹೆಂಡತ್ತಿ, ತಲೆಬೋಳಿಸಿಗೊಂಡ ಮುಂಡೆ ಹೀಗೆ ವೈವಿಧ್ಯಮಯ ಪಾತ್ರಂಗೋ, ಚಿತ್ರಂಗೋ, ಸಮಾಜಗಳ ಹೇರಿಪ್ಪಕೊಳ್ಳಕ್ಕಿ ನಾಟಕ ಹೆರಹಾಕಿ ಪರಿಶುದ್ಧ ಮೊಡೆಕ್ಕಾದ ಕಾಲಬೈಂದು ಹೇಳುವ ಧ್ವನಿ ಇಪ್ಪ ನಾಟಕ ಇದು.

ನಾಟಕಂಗಳ ಹುರುಳು ತಿರುಳು:

ಹೆಚ್ಚಿನ ನಾಟಕಂಗಳ ನೋಡಿದರೆ ಮೇಲಿಂದ ಮೇಲೆ ಹಾಸ್ಯ ಭರ್ತಿತ ಹೇಳಿ ಕಾಣ್ತು. ಹಿರಿಯ ಸಾಹಿತಿ ವಿಚಿತ್ರ ಏತಡ್ಕ ಹೇಳುವ ಮಾಡ್ಕ ಬೇರೆ. "ಮಾತುಕತೆ ಎಲ್ಲ ರುಚಿಕಟ್ಟಾಗಿ ಕಂಡರೂ ಒಳ ಇಪ್ಪದು ಅನುಕಂಪ. ತಪ್ಪು ತೊಂದರೆ ಅನ್ಯಾಯ ಅನಾಚಾರ ದಬ್ಬಾಳಿಕೆ ತೊಲಗ್ಗಿ.............ಬದುಕ್ಲೆ ಎಡೆ ಆಯೆಕ್ಕು ಹೇಳುವ ಸದಾಶಯ.

'ಜನರೆದುರು ನೋವುಗಳ ಮಥಿಸಿ ನಗೆಯ ಬೆಣ್ಣೆಯ ತೆಗೆದು ಅಳುವ ಜನರಿಗೆ ಕೊಡುವೆಯಾದರೆ ನೀನು ನಗೆಗಾರನಯ್ಯಾ' ಹೇಳುವ ಅರ್ಥದಲ್ಲಿ ಹವಿಗನ್ನಡ ನಾಟಕ.... ಹಾಸ್ಯ ವಿಡಂಬನೆಯ ನವಿರುಲೇಪ ಹಾಕಿದರೂ ಒಳಾಣ ಹೂರಣ, ಪ್ರಗತಿ ಚಿಂತನೆ, ಸಮಾಜ ಸ್ವಾಸ್ಥ್ಯದ ಆಸೆ.

## ರಂಗಮಂಟಪದ ಮೇಲೆ

ಒಂದು ನಾಟಕ ಬರದ್ದರ ಒಬ್ಬನ ಸಂತೋಷಕ್ಕೆ ಹೇಳಿ ಮಡಿಕ್ಕೊ..... ಅದರ ಪ್ರಿಂಟ್ ಮಾಡ್ಸಿದರೆ ಹತ್ತೆಂಟು ಓದುಗರು ಲೈಬ್ರರಿಗೆ ಸೇರಿದರೆ ಹತ್ತಾರು ವರ್ಷ ಅವು ಇದ್ದರೆ ಕೈಗೆತ್ತಿಗೊಂಗು 'ಆದರೆ, ಇಂದು ಇಲ್ಲಿ ರಾಘವ ರಂಗದೋರು ಮಾಡುವ ರಂಗಪ್ರದರ್ಶನವ ನೂರ್ಾರು ಜೆನ ನೋಡಲು ಸಂತೋಷಪಟ್ಟುಗೊಂಡು, ಅರ್ಥ ಅಂತರಾರ್ಥವ ರಜರಜಾದರೂ ಅರ್ಥ ಮಾಡಿಗೊಂಗು ಹೀಂಗಾಗಿ 'ರಂಗ'ಮಂಟಪದ ಚಟುವಟಿಕೆ ಇನ್ನಷ್ಟು ವಿಸ್ತಾರಾಯೆಕ್ಕು ದೂರ ದೂರಕ್ಕೂ ಹಬ್ಬೆಕ್ಕು. ಹವಿಗನ್ನಡ ಯುವಕಲಾವಿದರು ಮಾಡುವ ಈ ಪ್ರಯತ್ನಕ್ಕೆ ಎಲ್ಲೋರ ಸಹಾಯ ಬೇಕು. ಸರಕಾರದ ಸಹಾಯವು ಸಿಕ್ಕಿದರೆ ಇನ್ನಷ್ಟು ಒಳ್ಳೇದು. "ರಾಘವ ರಂಗ" ಹವಿಗನ್ನಡ ನಾಟಕ ಪ್ರಸಾರದ ಹರಿಕಾರ ಆಗಲಿ.

(ಬೆಂಗಳೂರು 'ರಂಗರಾಘವ ತಂಡದವರು ಹವಿಗನ್ನಡ ಸಂದರ್ಭದಲ್ಲಿ ಉಲ್ಲೇಖಿತ ಡಾ. ಸವಿತಾ ಮರಕ್ಕಿಣಿಯವರ ಮೂಲ ಕೃತಿ–ಕಮಲಕ್ಕನ ಕತೆಯ ನಾಟಕ ರೂಪಾಂತರ: ಶ್ರೀದೇವಿ, ಮನೋರಮಾ ಎಂ.ಭಟ್, ಮಂಗಳೂರು2007)

* * * * *

# ಮಸಾಲೆ ಮದ್ದು

## ಅರಿಸಿನ(ಅರಿಶಿಣ)

**ಗಂಟಲು ನೋವು**

ಒಂದು ಲೋಟ ಬಿಸಿಹಾಲಿನಲ್ಲಿ ಎರಡುಚಿಟಿಕೆ ಅರಿಶಿಣಪುಡಿ ಮತ್ತು ಒಂದು ಚಿಟಿಕೆ ಕಾಳುಮೆಣಸಿನ ಪುಡಿ ಹಾಕಿ ಸೇವನೆ (ದಿವಸಕ್ಕೆ 3ಸಲ 2ದಿವಸ)

ಇದು ಶೀತ ಮತ್ತು ಕೆಮ್ಮು ಬಾಧೆಯಲ್ಲೂ ಹಿತಕರ.

**ಅತಿಸಾರ ಭೇದಿ.**

ಒಂದು ಅಂಗುಲ ಉದ್ದದ ಅರಿಸಿನ ಕೊಂಬು (ಅರಿಸಿನಕೊನೆ)ಯನ್ನು ನುಣ್ಣಗೆ ಅರೆದು ಒಂದು ಲೋಟ ಮಜ್ಜಿಗೆಯಲ್ಲಿ ಬೆರೆಸಿ ಮುಂಜಾನೆ ಕುಡಿಯಬೇಕು (4ದಿವಸ)

ಇದು ಮೂಲವ್ಯಾಧಿ ಹಾಗೂ ರಕ್ತಭೇದಿ ರೋಗದಲ್ಲಿ ಕೂಡ ಹಿತಿಕರ.

**ಶೀತಬಾಧೆ**

ಅರಿಸಿನ ಪುಡಿಯನ್ನು ಕೆಂಡದ ಮೇಲೆ ಉದುರಿಸಿ ಆ ಹೊಗೆಯನ್ನು ಮೂಗಿನಿಂದ ಸೇವಿಸುವುದು. (ಅನಂತರ 3-4 ಗಂಟೆಗಳ ಕಾಲ ತಣ್ಣೀರು ಕುಡಿಯಬಾರದು.)

**ತಲೆನೋವು**

ಅರಿಸಿಣಪುಡಿ, ಉದ್ದಿನಹಿಟ್ಟು, ಕಡಲೆಹಿಟ್ಟು ಮತ್ತು ಚಹಾಪುಡಿ ಇವುಗಳನ್ನು ಒಟ್ಟು ಮಾಡಿ ಕೆಂಡದ ಮೇಲೆ ಉದುರಿಸಿ ಆ ಹೊಗೆಯನ್ನು ಸೇವಿಸಬೇಕು.

ಇದು ಉಬ್ಬಸ ರೋಗದವರಿಗೂ ಹಿತಕರ.

### ಗಂಟಲು ನೋವು

ಅರಿಸಿಣಕೊಂಬು ಮತ್ತು ಬೆಲ್ಲವನ್ನು ಹಾಲಿನಲ್ಲಿ ಅರೆದು ಗಂಟಲಿಗೆ ಹೊರಲೇಪ ಹಾಕುವುದರಿಂದ ಶೀತ ಮೂಲದ ಗಂಟಲು ನೋವು ಪರಿಹಾರ .

### ಮೊಡವೆ

ಅರಿಸಿನಕೊಂಬನ್ನೂ, ಶ್ರೀಗಂಧದಚಕ್ಕೆಯನ್ನೂ ಬೇರೆ ಬೇರೆಯಾಗಿ ಯೇಯ್ದು ದನದ ಹಾಲಿನಲ್ಲಿ ಕಲಸಿ, ಮುಖಕ್ಕೆ ಹಚ್ಚುವುದು

* * * * *

## ಇಂಗು

### ಮಕ್ಕಳ ಹೊಟ್ಟೆ ಉಬ್ಬರ

ಉದ್ದಿನಕಾಳಿನಷ್ಟು ಇಂಗನ್ನು ತುಪ್ಪದಲ್ಲಿ ಹುರಿದು ಮಜ್ಜಿಗೆಯಲ್ಲಿ ಬೆರೆಸಿ ಕುಡಿಯಬೇಕು. ಇದು ಕರುಳು ಕ್ರಿಮಿ ಉಪದ್ರವದಲ್ಲೂ ಹಿತಕರ.

### ಜೀರ್ಣಶಕ್ತಿ ಹೆಚ್ಚಲು

ಇಂಗು ಬೆರೆತ ಆಹಾರವನ್ನು ಉಣ್ಣುವುದು.

ಸೊಪ್ಪು ತರಕಾರಿಗಳನ್ನು ಬೇಯಿಸುವಾಗ ತುಸು ಇಂಗು ಸೇರಿಸುವುದು.

### ಮೊಡವೆ

ಇಂಗನ್ನು ನೀರಲ್ಲಿ ತೇಯ್ದು ಹಚ್ಚುವುದು (8–10ದಿವಸ).

### ಕೀಲುನೋವು

ಇಂಗು, ಹಸಿಶುಂಠಿ ಮತ್ತು ಬೆಳ್ಳುಳ್ಳಿ ಸಮಪಾಲು ತೆಗೆದುಕೊಂಡು ಜಜ್ಜಿ, ಎಳ್ಳೆಣ್ಣೆಯಲ್ಲಿ ಚೆನ್ನಾಗಿ ಕುದಿಸಿ ಸೋಸಿ ತಯಾರಿಸಿದ ತೈಲವನ್ನು ತಿಕ್ಕುವುದು.

### ಸಂಧಿವಾತ

ಇಂಗನ್ನು ಎಳ್ಳೆಣ್ಣೆ ಅಥವಾ ಕೊಬ್ಬರಿಎಣ್ಣೆಯಲ್ಲಿ ತೇಯ್ದು ಹಚ್ಚುವುದು.

### ಎದೆಹಾಲು ವೃದ್ಧಿಗೆ

ಬಾಣಂತಿಯ ಆಹಾರದಲ್ಲಿ ನಿತ್ಯ ಇಂಗನ್ನು ಬಳಸುವುದುರಿಂದ ಎದೆಹಾಲು ವೃದ್ಧಿಸುತ್ತದೆ.

## ಓಮ (ಅಜವಾನ)

**ಅತಿಸಾರ-ರಕ್ತ ಭೇದಿ**

ತುಸು ಓಮದಕಾಳುಗಳನ್ನು ಬೆಲ್ಲದೊಂದಿಗೆ ಅಗಿದು ನುಂಗಬೇಕು. (ದಿವಸಕ್ಕೆ 3ಸಲ 4ದಿವಸ)

**ಹೊಟ್ಟೆ ಉಬ್ಬರ**

ಊಟವಾದ ನಂತರ ನಾಲ್ಕಾರು ಕಾಳು ಓಮವನ್ನು ಚೆನ್ನಾಗಿ ಕುದಿಸಿ ಕಷಾಯ ತಯಾರಿಸಬೇಕು. ಒಂದೆರಡು ಚಾ ಚಮಚ ಕಷಾಯಕ್ಕೆ ಚಿಟಿಕೆಯ ಅರ್ಧದಷ್ಟು ಅಡಿಗೆ ಸೋಡದ ಪುಡಿ ಬೆರೆಸಿ ಕುಡಿಸುವುದು ಹಿತಕರ.

ಇದು ಮಕ್ಕಳ ಹೊಟ್ಟೆ ಉಬ್ಬರವನ್ನೂ ಪರಿಹರಿಸುತ್ತದೆ.

**ಹೊಟ್ಟೆನೋವು**

ಓಮದ ಕಷಾಯ ಸೇವನೆಯಿಂದ ಅಜೀರ್ಣಮೂಲದ ಹೊಟ್ಟೆನೋವು ಪರಿಹಾರವಾಗುತ್ತದೆ(ಪ್ರಮಾಣ: ಅರ್ಧ ಔನ್ಸ್)

ಇದು ವಾಂತಿ ಹಾಗೂ ಭೇದಿಯನ್ನು ಕೂಡ ನಿಲ್ಲಿಸುತ್ತದೆ.

**ಕೆಮ್ಮು-ದಮ್ಮು**

ಓಮದಕಾಳು ಮತ್ತು ಮೆಂತೆ-ಇವನ್ನು ಒಂದೊಂದು ಚಾ ಚಮಚದಷ್ಟು ತೆಗೆದುಕೊಂಡು ಕುಟ್ಟಿ ಪಪುಡಿ ಮಾಡಿ ಎರಡು ಲೋಟ ನೀರಿನಲ್ಲಿ ಕುದಿಸಿ, ಕಷಾಯ ತಯಾರಿಸಬೇಕು. ಒಂದು ಔನ್ಸ್ ಕಷಾಯಕ್ಕೆ ಎರಡು ಚಾ ಚಮಚ ಜೇನುತುಪ್ಪ ಬೆರೆಸಿ ಸೇವಿಸುವುದು ಕೆಮ್ಮು ದಮ್ಮು ರೋಗಿಗಳಿಗೆ ಹಿತಕರವಾಗಿರುತ್ತದೆ.(ದಿವಸಕ್ಕೆ 3ಸಲ)

* * * * *

## ಕೊತ್ತಂಬರಿ (ದನಿಯ)

**ಪಿತ್ತ- ಹುಳಿತೇಗು**

ತುಸು ಕೊತ್ತಂಬರಿ ಬೀಜವನ್ನು ಹುರಿದು ಕುಟ್ಟಿ ಪುಡಿ ಮಾಡಿ ಒಂದು ಲೋಟ ಹಾಲು ಮತ್ತು ಒಂದು ಚಾ ಚಮಚ ಸಕ್ಕರೆ ಬೆರೆಸಿ ಕಷಾಯ ತಯಾರಿಸಿ ಕುಡಿಯಬೇಕು.

ಇದು ವಾಕರಿಕೆಯನ್ನೂ ತಲೆನೋವನ್ನೂ ಪರಿಹರಿಸುತ್ತದೆ.

**ಅಜೀರ್ಣ, ಹೊಟ್ಟೆನೋವು**

ಅರ್ಧಲೋಟ ನೀರಿನಲ್ಲಿ ಅರ್ಧ ಚಾ ಚಮಚ ಕೊತ್ತಂಬರಿ ಬೀಜ ಮತ್ತು ಒಂದು ಚೂರು ಒಣಶುಂಠಿ ಹಾಕಿ ಕುದಿಸಿ ಸೋಸಿದ ಕಷಾಯವನ್ನು ಒಂದೆರಡು ಬಾರಿ ಸೇವಿಸಬೇಕು.

**ಎದೆನೋವು**

ಒಂದು ಚಾ ಚಮಚ ಕೊತ್ತಂಬರಿ ಬೀಜವನ್ನು ನೆನೆ ಹಾಕಿ 2ತಾಸುಗಳ ನಂತರ ಚೆನ್ನಾಗಿ ಕಿವುಚಿ ಶೀತ ಕಷಾಯ ತಯಾರಿಸಬೇಕು. ಅರ್ಧ ಲೋಟದಷ್ಟು ಈ ಕಷಾಯುವನ್ನು ಸಕ್ಕರೆ ಬೆರೆಸಿ ಸೇವಿಸಿದರೆ ಸಾದಾ ಎದೆನೋವು ಉಪಶಮನವಾಗುತ್ತದೆ.

ಇದು ವಾಂತಿಯನ್ನೂ ಪರಿಹರಿಸುತ್ತದೆ.

**ಆಹಾರ ಪಚನವಾಗಲು**

ಅರ್ಧ ಚಾ ಚಮಚ ಕೊತ್ತಂಬರಿ ಬೀಜವನ್ನೂ ಅರ್ಧ ಚಾಚಮಚ ಜೀರಿಗೆಯನ್ನೂ ಒಂದು ಲೋಟ ನೀರಿನಲ್ಲಿ ನೆನೆ ಹಾಕಬೇಕು. 2 ಗಂಟೆಗಳ ತರುವಾಯ ಚೆನ್ನಾಗಿ ಕಿವುಚಿ, ಸೋಸಿ ತಯಾರಿಸಿದ ಶೀತ ಕಷಾಯವನ್ನು ತುಸು ಸಕ್ಕರೆ ಬೆರೆಸಿ ಸೇವಿಸಬೇಕು.

ಇದು ಅತಿಯಾದ ಬಾಯಾರಿಕೆ (ನೀರಡಿಕೆ)ಯನ್ನು ಸಹ ಪರಿಹರಿಸುತ್ತದೆ.

**ಕೆಂಗಣ್ಣು, ಕಣ್ಣು ಉರಿ**

ಒಂದು ಲೋಟ ತಣ್ಣೀರಿನಲ್ಲಿ ಒಂದು ಚಾ ಚಮಚ ಕೊತ್ತಂಬರಿ ಬೀಜವನ್ನು ರಾತ್ರಿ ನೆನೆಹಾಕಿ ಮುಂಜಾನೆ ಆ ನೀರನ್ನು ಸೋಸಿ ಕಣ್ಣುಗಳನ್ನು ತೊಳೆಯುವುದು.

* * * * * *

## ಜೀರಿಗೆ

**ಪಿತ್ತ ಶಮನ**

ಜೀರಿಗೆ ಪುಡಿ, ಜೇನುತುಪ್ಪ, ಹುಣಸೆಹಣ್ಣುಗೊಜ್ಜು ಇವು ಮೂರನ್ನೂ ಅರ್ಧರ್ಧ ಚಾ ಚಮಚದಷ್ಟು ಕಲಸಿ ಚಪ್ಪರಿಸುವುದು (2–3 ದಿವಸ ದಿವಸಕ್ಕೆ 3ಸಲ)

ಒಂದು ಲೋಟ ತಾಜಾ ಮಜ್ಜಿಗೆಯಲ್ಲಿ ಅರ್ಧ ಚಾ ಚಮಚದಷ್ಟು ಜೀರಿಗೆ ಪುಡಿಯನ್ನು ಬೆರೆಸಿ ಸೇವಿಸಬೇಕು.

**ವಾಕರಿಕೆ**

ಜೀರಿಗೆ, ಹಳೇ ಬೆಲ್ಲ ಮತ್ತು ಹುಣಸೆಹಣ್ಣು– ಇವನ್ನು ಸಮಪ್ರಮಾಣದಲ್ಲಿ ತೆಗೆದುಕೊಂಡು ಚೆನ್ನಾಗಿ ಕುಟ್ಟಿ ನೆಲ್ಲಿಕಾಯಿ ಗಾತ್ರದ ಉಂಡೆ ಮಾಡಿ ಚಪ್ಪರಿಸುವುದು.

ಇದರಿಂದ ತಲೆಚಕ್ರವೂ ಉಪಶಮನವಾಗುತ್ತದೆ.

**ವಾಂತಿ–ವಾಕರಿಕೆ**

ನಿಂಬೆ ಹಣ್ಣಿನ ರಸ, ಸಕ್ಕರೆ ಹಾಕಿ ತಯಾರಿಸಿದ ತಣ್ಣೀರಿನ ಪಾನಕದಲ್ಲಿ ಒಂದು ಚಿಟಿಕೆ ಉಪ್ಪು ಮತ್ತು 2ಚಿಟಿಕೆ ಜೀರಿಗೆ ಪುಡಿ ಹಾಕಿ ಸೇವಿಸುವುದು.

**ಹಸಿವು ವೃದ್ಧಿ**

ನಾಲ್ಕಾರು ದಿವಸ, ಪ್ರತಿಸಲ ಊಟಕ್ಕೆ ಮೊದಲು ಎರಡು ಚಿಟಿಕೆ ಜೀರಿಗೆಕಾಳುಗಳನ್ನು ಅಗಿದು ತಿನ್ನುವುದು.

ಊಟದ ನಂತರ ಸೇವಿಸುವುದರಿಂದ ಜೀರ್ಣ ಶಕ್ತಿ ವೃದ್ಧಿಸುತ್ತದೆ.

**ಮೊಲೆ ಹಾಲು (ಎದೆಹಾಲು) ವೃದ್ಧಿ**

ಗರ್ಭಿಣಿ ಸ್ತ್ರೀಗೆ ಜೀರಿಗೆ ಕಷಾಯವನ್ನು ಜೇನುತುಪ್ಪ ಬೆರೆಸಿ ಸೇವಿಸುತ್ತಿದ್ದರೆ ಬಾಣಂತನದಲ್ಲಿ ಎದೆಹಾಲು ಸಮೃದ್ಧವಾಗುತ್ತದೆ.

**ಗರ್ಭಿಣಿಯ ದೇಹಾಲಸ್ಯ**

ಜೀರಿಗೆ ಕಷಾಯಕ್ಕೆ ತುಸು ದನದ ತುಪ್ಪ ಸೇವಿಸುವುದರಿಂದ ಹುಳಿತೇಗು, ಹೊಟ್ಟೆ ಉಬ್ಬರ ಮೊದಲಾದ ಗರ್ಭಿಣಿಯರ ಸಣ್ಣ ಪುಟ್ಟ ತೊಂದರೆಗಳು ಪರಿಹಾರ.

* * * * *

## ಸಾಸಿವೆ (ಸಾಸುವೆ)

**ಹಸಿವು ವೃದ್ಧಿ**

ತರಕಾರಿ ಬೇಯಿಸುವಾಗ ತುಸು ಸಾಸಿವೆಕಾಳು ಬೆರೆಸುವುದು ಇದು ಜೀರ್ಣಕಾರಿಯೂ ಆಗಿರುತ್ತದೆ.

**ಹಲ್ಲುನೋವು**

ತುಸು ಸಾಸಿವೆಕಾಳನ್ನು ಅಗಿದು ಬಾಯಲ್ಲಿ ಇರಿಸುವುದರಿಂದ ಹಲ್ಲುನೋವು ತಾತ್ಕಾಲಿಕವಾಗಿ ಉಪಶಮನವಾಗುತ್ತದೆ.

**ಹುಳುಕಡ್ಡಿ (ಗಜಕರ್ಣ-ರಿಂಗ್‌ವರ್ಮ್)**

ರಿಂಗ್‌ವರ್ಮ್ ತೊಂದರೆ ಕಾಣಿಸಿದ ಭಾಗವನ್ನು ಕಡಲೆಹಿಟ್ಟು ಹಚ್ಚಿ ಬಿಸಿನೀರಿನಿಂದ ತೊಳೆಯಬೇಕು. ಅನಂತರ ನೀರಿನಲ್ಲಿ ಅರೆದ ಸಾಸಿವೆಕಾಳಿನ ಲೇಪ ಹಾಕಬೇಕು. (ಒಂದು ವಾರ)

**ಮಕ್ಕಳ ರಿಕೆಟ್ಸ್**

ರಿಕೆಟ್ಸ್ ಕಾಯಿಲೆ ಪೀಡಿತ ಮಕ್ಕಳ ಮೈಗೆ ಸಾಸಿವೆ ಎಣ್ಣೆ ಸವರಿ ಸಂಜೆ ಬಿಸಿಲಲ್ಲಿ ಆಡಲು ಬಿಡುವುದು ಹಿತಕರ.

**ಕೃತಕ ವಾಂತಿ**

ವಿಷವಸ್ತುವನ್ನಾಗಲಿ, ಹಾನಿಕರ ಆಹಾರ ಪದಾರ್ಥಗಳನ್ನಾಗಲೀ ಸೇವಿಸಿದಾಗ ಕೃತಕ ವಾಂತಿ ಮಾಡಿಸಿ ವಿಷವನ್ನು ಕಕ್ಕಿಸುವುದು ಅಗತ್ಯ. ಇದಕ್ಕಾಗಿ ಎರಡು ಲೋಟ ನಸು ಬೆಚ್ಚಗಿನ ನೀರಿಗೆ ಎರಡು ಚಾ ಚಮಚ ಸಾಸಿವೆ ಕಾಳನ್ನು ಅರೆದು ಸೇರಿಸಿ ಸ್ವಲ್ಪ ಸ್ವಲ್ಪವಾಗಿ ಕುಡಿಸಿ, ವಾಂತಿ ಮಾಡಿಸಬೇಕು.

(ಇದು ಮೊದಲ ನೆರವು ಅಥವಾ ಪ್ರಥಮ ಚಿಕಿತ್ಸೆಮಾತ್ರ)

* * * * *

## ಹುಣಸೆ

**ಹೊಟ್ಟೆ ನುಲಿತ**

ನೆಲ್ಲಿಕಾಯಿ ಗಾತ್ರದಷ್ಟು ಹುಣಸೆಹರ್ಣಣು, ಒಂದು ಚೂರು ಬೆಲ್ಲ ಮತ್ತು ಒಂದು ಚಾಚಮಚ ಜೀರಿಗೆ ಪುಡಿ ಇವು ಮೂರನ್ನು ಸೇರಿಸಿ ಚೆನ್ನಾಗಿ ಕುಟ್ಟಿ ಪುಡಿ ಮಾಡಿ, ಚಿಕ್ಕ ಚಿಕ್ಕ ಉಂಡೆ ಮಾಡಿ ಬಾಯಲ್ಲಿರಿಸಿಕೊಂಡು ಚಪ್ಪರಿಸಬೇಕು.

ಇದು ವಾಂತಿ-ವಾಕರಿಕೆಗಳನ್ನೂ ಪರಿಹರಿಸುತ್ತದೆ.

ತಲೆಚಕ್ರದ ಉಪದ್ರವವನ್ನು ನಿವಾರಿಸುತ್ತದೆ.

**ವಾಂತಿ ಭೇದಿ**

ನೆಲ್ಲಿಕಾಯಿ ಗಾತ್ರ ಹುಣಸೆಹಣ್ಣು, ಸ್ವಲ್ಪ ಪುದೀನ ಸೊಪ್ಪು ಎಂಟು ಹತ್ತು ಕಾಳು ಮೆಣಸು ಮತ್ತು ನಾಲ್ಕು ಯಾಲಕ್ಕಿ ಸೇರಿಸಿ, ನುಣ್ಣಗೆ ಅರೆದು ಒಂದು ಚಿಟಿಕೆ ಉಪ್ಪು ಬೆರೆಸಿ ಸಣ್ಣ ಉಂಡೆ ಮಾಡಿ ತಿನ್ನಬೇಕು. ದಿವಸಕ್ಕೆ 3ಸ ಸಲ 3ದಿವಸ)

**ಅಜೀರ್ಣ**

ನೆಲ್ಲಿಕಾಯಿ ಗಾತ್ರ ಹುಣಸೆಹರ್ಣಣು, ಸ್ವಲ್ಪ ಉಪ್ಪು ಮತ್ತು ನಾಲ್ಕು ಮೆಣಸು ಒಟ್ಟು ಮಾಡಿ ಜಗಿದು ನುಂಗಬೇಕು. (ದಿವಸಕ್ಕೆ 2ಸಲ 2ದಿವಸ.)

**ಅತಿಸಾರ ಭೇದಿ**

ಚೆನ್ನಾಗಿ ಕಳಿತ (ಹಣ್ಣಾದ) 3 ಬಾಳೆಹಣ್ಣನ್ನು ಒಂದು ಲೋಟ ಮಜ್ಜಿಗೆಯಲ್ಲಿ ಕಿವುಚಿ ಒಂದು ಚಾ ಚಮಚ ಹುಣಸೆ ಗೊಜ್ಜು ಸೇರಿಸಿ ಸೇವನೆ (ದಿವಸಕ್ಕೆ 3ಸಲ 2ದಿವಸ)

**ತಲೆನೋವು**

ಹುಣಸೆ ಹಣ್ಣಿನ ಪಾನಕ ಸೇವಿಸಬೇಕು.

**ಉಳುಕು ನೋವು-ಬಾವು**

ಹುಣಸೆಹಣ್ಣಿನ ಗೊಜ್ಜಿಗೆ ಸ್ವಲ್ಪ ಉಪ್ಪು, ಬೆಲ್ಲ ಸೇರಿಸಿ ಬಿಸಿಯಾದ ಲೇಪ ಹಾಕುವುದು.

**ಶುಂಠಿ (ಹಸಿ ಶುಂಟಿ)**

**ಹಸಿವು ವೃದ್ಧಿ**

ಚೆನ್ನಾಗಿ ಹಸಿವೆ ಆಗದಿದ್ದರೆ ಪ್ರತಿದಿನ ಊಟದ ನಂತರ ಒಂದು ಚೂರು ಹಸಿ ಶುಂಠಿಯನ್ನು ಜಗಿದು ಚಪ್ಪರಿಸಬೇಕು.

ಇದು ಹೊಟ್ಟೆ ಉಬ್ಬರವನ್ನೂ ಅಜೀರ್ಣವನ್ನೂ ನಿವಾರಿಸುತ್ತದೆ.

**ಬಾಯಿರುಚಿ ವೃದ್ಧಿ**

ಒಂದು ಚೂರು ಹಸಿಶುಂಠಿ, ಒಂದು ಚಿಟಿಕೆ ಜೀರಿಗೆ ಮತ್ತು ಕಲ್ಲುಸಕ್ಕರೆ ತುಣುಕು ಇವುಗಳನ್ನು ಬಾಯಲ್ಲಿ ಇರಿಸಿ ಕೊಂಡು ಚಪ್ಪರಿಸಬೇಕು. ಇದು ಹಸಿವನ್ನು ಹೆಚ್ಚಿಸುತ್ತದೆ.

**ಕಫ ದೋಷ**

ಒಂದು ಚಾ ಚಮಚ ಹಸಿ ಶುಂಟಿಯನ್ನೂ ಎರಡು ಚಾ ಚಮಚ ಜೇನುತುಪ್ಪವನ್ನೂ ಮೆಂತೆಸೊಪ್ಪಿನ ಕಷಾಯಕ್ಕೆ ಬೆರೆಸಿ ಸೇವನೆ (ದಿವಸಕ್ಕೆ 3ಸಲ; 4–6ದಿವಸ)

**ಹೊಟ್ಟೆ ನೋವು**

ಅರ್ಧ ಚಾ ಚಮಚ ಸುಂಠಿ ರಸ, 2ಚಾ ಚಮಚ ಜೇನುತುಪ್ಪ ಮತ್ತು 4 ಚಾಚಮಚ ಎಳ್ಳೆಣ್ಣೆ- ಇವುಗಳನ್ನು ಮಿಶ್ರ ಮಾಡಿ ಸೇವನೆ.

**ಸ್ವರ ಒಡೆದಾಗ**

ಗಂಟಲು ನೋವಿನಿಂದಾಗಿ ಸ್ವರ ಒಡೆದಾಗ, ಹಸಿಶುಂಠಿ ಚೂರಿನೊಂದಿಗೆ ಕಲ್ಲು ಸಕ್ಕರೆ ಸೇರಿಸಿ ಚಪ್ಪರಿಸಬೇಕು.

**ತಲೆನೋವು**

ಒಣಶುಂಠಿಯನ್ನು ನೀರಿನಲ್ಲಿ ತೇಯ್ದು, ಹಣೆಗೆ ಹಚ್ಚಿಕೊಂಡು, ಬೆಚ್ಚಗೆ ಹೊದೆದುಕೊಂಡು, ಸ್ವಲ್ಪ ಸಮಯ ವಿಶ್ರಮಿಸಿದಾಗ ಬೆವರುಬಿಟ್ಟು ತಲೆಶೂಲೆ ಶಮನವಾಗುತ್ತದೆ.

**ನೀರುಳ್ಳಿ (ಈರುಳ್ಳಿ, ಉಳ್ಳಾಗಡ್ಡೆ)**

**ಆಮಶಂಕೆ**

ಸಾಧಾರಣ ಗಾತ್ರದ ಒಂದು ಗಡ್ಡೆ ನೀರುಳ್ಳಿಯನ್ನು ಕೆಂಡದಲ್ಲಿ ಸುಟ್ಟು ತಿನ್ನುವುದು (ದಿವಸಕ್ಕೆ 2ಸಲ 3ದಿವಸ)

**ರಕ್ತಭೇದಿ**

ಸಾಧಾರಣ ಗಾತ್ರದ ಒಂದು ಗಡ್ಡೆ ನೀರುಳ್ಳಿಯನ್ನು ಸಣ್ಣ ಚೂರುಗಳಾಗಿ ಕತ್ತರಿಸಿ ತುಪ್ಪದಲ್ಲಿ ಹುಡಿದು ಚೆನ್ನಾಗಿ ಬೆಂದ ಅನ್ನದೊಂದಿಗೆ ಕಲಸಿ ಸೇವಿಸಬೇಕು. (ಕೊಟ್ಟಣ ಅಕ್ಕಿ ಉತ್ತಮ) (ದಿವಸಕ್ಕೆ 3ಸಲ; 3ದಿವಸ)

**ರಕ್ತವೃದ್ಧಿ**

ನಿತ್ಯದ ಆಹಾರದಲ್ಲಿ ಮಿತವಾಗಿ ನೀರುಳ್ಳಿಯನ್ನು ಉಪಯೋಗಿಸುವುದು ರಕ್ತವೃದ್ಧಿಗೆ ನೆರವಾಗುತ್ತದೆ.

**ರಕ್ತಮೂಲವ್ಯಾಧಿ**

ಪ್ರತಿದಿನ ಒಂದು ಗಡ್ಡೆ ನೀರುಳ್ಳಿಯನ್ನು ತುರಿದು ಮೊಸರಲ್ಲಿ ಕಲಸಿ ಸೇವಿಸಬೇಕು. (1ವಾರ)

ಒಂದು ಚಾ ಚಮಚ ನೀರುಳ್ಳಿ ರಸ ಒಂದು ಚಾ ಚಮಚ ಸಕ್ಕರೆ ಮತ್ತು ಅರ್ಧ ಚಾ ಚಮಚ ಜೇನುತುಪ್ಪ ಸೇರಿಸಿ ಸೇವಿಸುತ್ತಿರುವುದು ಮೂಲವ್ಯಾಧಿ ರೋಗಿಗಳಿಗೆ ಹಿತಕರ.

**ವಾಂತಿ ಭೇದಿ**

2 ಚಾ ಚಮಚ ನೀರುಳ್ಳಿ ರಸಕ್ಕೆ ಎರಡು ಚಾ ಚಮಚ ಕೊತ್ತುಂಬರಿ ಪುಡಿ, ಎರಡು ಚಾ ಚಮಚ ಬಡೇ ಸೋಪಿನ ಪುಡಿಯನ್ನು ತುಪ್ಪದಲ್ಲಿ ಹುರಿದ ಒಂದು ಚಿಟಿಕಿ ಇಂಗನ್ನೂ ಸೇರಿಸಿ ಸೇವಿಸಬೇಕು.

**ಬೆಳ್ಳುಳ್ಳಿ (ಬೊಳ್ಳೊಳ್ಳಿ-ಲಸುನ)**

**ಅಜೀರ್ಣ**

ಒಂದು ಸಾಧಾರಣ ಗಾತ್ರದ ಬೆಳ್ಳುಳ್ಳಿ ಗೆಡ್ಡೆಯನ್ನು ಬಿಸಿ ಬೂದಿಯಲ್ಲಿ ಸುಟ್ಟು ಸುಲಿದು ತಿನ್ನಬೇಕು.

ಇದು ಹೊಟ್ಟೆ ಉಬ್ಬರವನ್ನು ಪರಿಹರಿಸುತ್ತದೆ.

**ರಕ್ತದ ಅಧಿಕ ಒತ್ತಡ**

ನಿತ್ಯವೂಹಾರದಲ್ಲಿ ಸ್ವಲ್ಪ ಬೆಳ್ಳುಳ್ಳಿಯನ್ನು ಬಳಸುವುದು ರಕ್ತದ ಅಧಿಕ ಒತ್ತಡ ಇರುವವರಲ್ಲಿ ಹಿತಕರ ಪರಿಣಾಮವನ್ನು ಉಂಟು ಮಾಡುತ್ತದೆ.

**ಕೀವು ಸೋರುವ ಹುಣ್ಣು**

ಕೀವು ಸೋರುವ ಹುಣ್ಣನ್ನು ಬೆಳ್ಳುಳ್ಳಿ ಕಷಾಯದಿಂದ ತೊಳೆಯಬೇಕು. ಅನಂತರ ಬೆಣ್ಣೆಯಲ್ಲಿ ಅರೆದ ಬೆಳ್ಳುಳ್ಳಿಯನ್ನು ಲೇಪಿಸಬೇಕು.

**ಹುಣ್ಣು-ವ್ರಣ**

ಬೆಳ್ಳುಳ್ಳಿ, ಹೊಂಗೆಬೀಜ, ತುಸು ಉಪ್ಪು-ಇವನ್ನು ಚೆನ್ನಾಗಿ ಅರೆದು ಲೇಪಿಸಿದರೆ ವ್ರಣವು ಬೇಗನೆ ಮಾಯುತ್ತದೆ.

**ಕಿವಿ ನೋವು**

ಒಂದು ಪಕಳೆ (ಎಸಳು) ಬೆಳ್ಳುಳ್ಳಿಯನ್ನು ಜಜ್ಜಿ ತುಸು ಕೊಬ್ಬರಿ ಎಣ್ಣೆ ಅಥವಾ ಎಳ್ಳೆಣ್ಣೆಯನ್ನು ಒಂದು ಚಮಚಕ್ಕೆ

ಸುರಿದು ಬಿಸಿ ಮಾಡಬೇಕು. ಅದು ತಣ್ಣಗಾಗುತ್ತಿದ್ದಂತೆಯೇ ನಸುಬೆಚ್ಚಗಿನ 2 ಹನಿ ಎರ್ಣಣೆಯನ್ನು ಕಿವಿಗೆ ಹಾಕಬೇಕು. (2-3 ದಿವಸ)

**ಉಬ್ಬಸ**

ಪ್ರತಿದಿನ ರಾತ್ರಿ ಮಲಗುವ ಮುನ್ನ ತುಸು ಬೆಳ್ಳುಳ್ಳಿ ರಸವನ್ನು ಜೇನುತುಪ್ಪದಲ್ಲಿ ಕಲಸಿ ಸೇವಿಸುವುದು ಉಬ್ಬಸ ರೋಗಿಗಳಿಗೆ ಹಿತಕರ.

ಏಲಕ್ಕಿ (ಯಾಲಕ್ಕಿ–ಯಾಲಕ್ಕಾಯಿ)

**ವಾಕರಿಕೆ**

ವಾಕರಿಕೆ, ಬಾಯಲ್ಲಿ ನೀರೂರುವ ಲಕ್ಷಣ ಕಾಣಿಸಿದ ಕೂಡಲೇ ನಾಲ್ಕಾರು ಕಾಳು ಯಾಲಕ್ಕಿ ಬೀಜವನ್ನು ಜಗಿದು ನುಂಗಬೇಕು.

**ವಾಂತಿ**

ಯಾಲಕ್ಕಿ ಬೀಜದ ಕಷಾಯವನ್ನು ಗುಟುಕು ಗುಟುಕಾಗಿ ಸೇವಿಸುವುದರಿಂದ ವಾಂತಿ ಶಮನವಾಗುತ್ತದೆ.

**ತಲೆಚಕ್ರ (ತಲೆ ತಿರುಗುವುದು)**

ನಿಂಬೆ ಶರಬತ್ತಿಗೆ ಒಂದು ಚಿಟಿಕೆ ಯಾಲಕ್ಕಿ ಪುಡಿ ಬೆರೆಸಿ ಸೇವನೆ. ಇದರಿಂದ ವಾಂತಿಯೂ ಪರಿಹಾರವಾಗುತ್ತದೆ.

**ತಲೆನೋವು**

ಒಂದು ಚಿಟಿಕ ಯಾಲಕ್ಕಿಯ ನಯವಾದ ಚೂರ್ಣವನ್ನು ನಸ್ಯದಂತೆ ಮೂಗಿಗೇರಿಸುವುದರಿಂದ ತಲೆನೋವು ನಿವಾರಣೆಯಾಗುತ್ತದೆ.

**ಹಲ್ಲುನೋವು**

ಯಾಲಕ್ಕಿ ಕಷಾಯದಿಂದ ಬಾಯಿ ಮುಕ್ಕಳಿಸುತ್ತಿರುವುದು ಹಿತಕರ.

**ಕಿವಿನೋವು**

ಕಿವಿನೋವಿದ್ದಾಗ ಯಾಲಕ್ಕಿ ತೈಲ ಎರಡು ಹನಿ ಹಾಕಬೇಕು.

* * * * *

## ಲವಂಗ

**ಬಾಯಿವಾಸನೆ**

ಬಾಯಿವಾಸನೆ ಇದ್ದರೆ ಲವಂಗವನ್ನು ಚಪ್ಪರಿಸುವುದು ಬಾಯಿ ವಾಸನೆಗೆ ತಾತ್ಕಾಲಿಕ ಪರಿಹಾರ.

**ಗಂಟಲು ಕೆರೆತ**

2 ಲವಂಗವನ್ನು ಉಪ್ಪಿನ ಹರಳಿನೊಂದಿಗೆ ಚಪ್ಪರಿಸಬೇಕು.

**ಅಜೀರ್ಣ**

ಲವಂಗದ ಕಷಾಯ ಸೇವನೆಯಿಂದ ಅಜೀರ್ಣ ಪರಿಹಾರವಾಗುತ್ತದೆ. ಇದು ಹೊಟ್ಟೆ ಉಬ್ಬರವನ್ನು ನಿವಾರಿಸುತ್ತದೆ.

**ಬಿಕ್ಕಳಿಕೆ**

ಬಿಕ್ಕಳಿಕೆ ಪ್ರಾರಂಭವಾದರೆ , ಕೂಡಲೇ ಲವಂಗವನ್ನು ಜಗಿದು ಚಪ್ಪರಿಸಬೇಕು.

**ಹಲ್ಲುನೋವು**

ಲವಂಗದ ಎಣ್ಣೆಯನ್ನು ಹತ್ತಿಗೆ ಸವರಿ ಹಲ್ಲಿನಲ್ಲಿ ಇರಿಸುವುದರಿಂದ ಹಲ್ಲುನೋವಿನಿಂದ ತಾತ್ಕಾಲಿಕ ಮುಕ್ತಿ.

**ಕಾಳು ಮೆಣಸು**

**ಹೊಟ್ಟೆ ಉಬ್ಬರ**

ಎಂಟುಹತ್ತು ಕಾಳು ಮೆಣಸನ್ನು ಕುಟ್ಟಿ ಪುಡಿ ಮಾಡಿ ಎರಡು ಚಾ ಚಮಚ ತುಪ್ಪ ಮತ್ತು ಸ್ವಲ್ಪ ಉಪ್ಪು ಬೆರೆಸಿ ಬಿಸಿ ಮಾಡಿ ಬಿಸಿ ಅನ್ನದಲ್ಲಿ ಕಲಸಿ ತಿನ್ನಬೇಕು.

ಇದು ಅಜೀರ್ಣವನ್ನೂ ಪರಿಹರಿಸುತ್ತದೆ.

**ಜೀರ್ಣಶಕ್ತಿ ಹೆಚ್ಚಿಸಲು**

ಕಾಳುಮೆಣಸು ಬೆಳ್ಳುಳ್ಳಿ ಸೇರಿಸಿ ತಯಾರಿಸಿದ ಚಟ್ನಿ ಸೇವನೆಯಿಂದ ಜೀರ್ಣಶಕ್ತಿ ವೃದ್ಧಿ.

**ನೆಗಡಿ**

2ಚಿಟಿಕೆ ಕಾಳುಮೆಣಸಿನ ಪುಡಿಯನ್ನು ಅರ್ಧಚಮಚ ಜೇನುತುಪ್ಪದಲ್ಲಿ ಕಲಸಿ, ನೆಕ್ಕಬೇಕು. (ದಿವಸಕ್ಕೆ 2ಸಲ 2ದಿವಸ)

**ಕೆಮ್ಮು-ಶೀತ ಬಾಧೆ**

ಕಾಳುಮೆಣಸನ್ನು ತುಪ್ಪದಲ್ಲಿ ಹುರಿದು, ಸಕ್ಕರೆ ಬೆರೆಸಿ, ಚೆನ್ನಾಗಿ ಕುಟ್ಟಿ ಪುಡಿ ಮಾಡಿ ಸಣ್ಣ ಸೀಸೆಯಲ್ಲಿ ಮುಚ್ಚಿ ಇರಿಸಬೇಕು. ಇದನ್ನು 2-3ದಿನ, ದವಸಕ್ಕೆ 3ಸಲ ಸೇವಿಸುವುದರಿಂದ ಕೆಮ್ಮು ಶೀತ, ನೆಗಡಿ ಪರಿಹಾರವಾಗುತ್ತದೆ.

* * * * *

# ಸುಲಭ ಚಿಕಿತ್ಸೆ

## ಅಜೀರ್ಣ

1. ಹುರಿದ ಕೊತ್ತಂಬರಿ ಬೀಜದ ಕಷಾಯ ಹಾಲು ಸಕ್ಕರೆ ಸಹಿತ ಸೇವನೆ. ಎರಡು ದಿವಸ.

2. ಕಾಳುಮೆಣಸು ಮತ್ತು ಬೆಳ್ಳುಳ್ಳಿಯನ್ನು ಸಮ ಪ್ರಮಾಣ ಸೇರಿಸ ಚಟ್ನಿ ತಯಾರಿಸಿ ಸೇವನೆ ಬಳಸುವುದು.

3. ಬೆಳ್ಳುಳ್ಳಿ ಗಡ್ಡೆಯನ್ನು ಬೂದಿಯಲ್ಲಿ ಸುಟ್ಟು ಸುಲಿದು ತಿನ್ನುವುದು.

4. ಪ್ರತಿದಿನ ಊಟಕ್ಕೆ ಮುಂಚೆ ಎರಡು ಚಿಟಿಕೆ ಜೀರಿಗೆಯನ್ನು ಜಗಿದು ತಿನ್ನುವುದು.

5. ತಿಳಿಸಾರಿಗೆ ಬೆಳ್ಳುಳ್ಳಿ ಒಗ್ಗರಣೆ ಕೊಟ್ಟು ಸ್ವಲ್ಪ ನಿಂಬೆರಸ ಸೇರಿಸಿ ಊಟ ಮಾಡುವುದು.

6. ನಿಂಬೆರಸ, ಹಸಿ ಶುಂಠಿ ರಸ ಕಲಸಿ ಸೇವನೆ, ಪ್ರಮಾಣ: ಒಂದು ಚಾ ಚಮಚ .

7. ನೆಲ್ಲಿಕಾಯಿಗಾತ್ರದ ಹುಣಸೆ ಹಣ್ಣು, ಸ್ವಲ್ಪ ಉಪ್ಪು 4ಕಾಳು ಮೆಣಸು ಸೇರಿಸಿ ಜಗಿದು ಚಪ್ಪರಿಸಬೇಕು.

### ಆಹಾರ ರುಚಿಸದಿದ್ದಾಗ–ಹಸಿವಾಗದಿದ್ದಾಗ

1 ಒಂದು ಚೂರು ಹಸಿ ಶುಂಠಿ, 4–5 ಕಾಳುಮೆಣಸು, ಸ್ವಲ್ಪ ಕಲ್ಲುಸಕ್ಕರೆಯೊಂದಿಗೆ ಜಗಿದು ತಿನ್ನುವುದು.

2. ಅವರೆಕಾಳು ಗಾತ್ರದಷ್ಟು ಹಸಿ ಶುಂಠಿ, ಸ್ವಲ್ಪ ಜೀರಿಗೆಯನ್ನು ಕಲ್ಲುಸಕ್ಕರೆಯೊಂದಿಗೆ ಜಗಿದು ತಿನ್ನುವುದು.

**ನೆಗಡಿ ಕೆಮ್ಮು ಶೀತ**

1. ಒಣ ಅರಿಸಿಣ ಕೊಂಬನ್ನು ಕೆಂಡದ ಮೇಲೆ ಹಾಕಿ ಬರುವ ಹೊಗೆಯನ್ನು ಮೂಗಿನ ಮೂಲಕ ಸೆಳೆದುಕೊಳ್ಳುವುದು.

2. ತುಳಸಿ ಸೊಪ್ಪಿನ ರಸಕ್ಕೆ ಜೇನು ತಪ್ಪ ಸೇರಿಸಿ ಸೇವನೆ. ಪ್ರಮಾಣ 2 ಚಾ ಚಮಚ ದಿವಸಕ್ಕೆ 3ಸಲ;2–3ದಿವಸ.

3. ಹಸಿಶುಂಠಿ ರಸ ಸೇರಿಸಿದ ತುಳಸಿ ಸೊಪ್ಪಿನ ರಸ ಸೇವನೆ. ಪ್ರಮಾಣ 1ಚಾ ಚಮಚ ದಿವಸಕ್ಕೆ 3ಸಲ; 2–3ದಿವಸ.

4. ಕಾಳು ಮೆಣಸಿನ ಚೂರ್ಣವನ್ನು ಜೇನುತುಪ್ಪದಲ್ಲಿ ಸೇವನೆ. ಪ್ರಮಾಣ ಅರ್ಧ ಚಾ ಚಮಚ; ದಿವಸಕ್ಕೆ 3ಸಲ, 3ದಿವಸ.

5. 1/2ಚಾ ಚಮಚ ಅರಿಸಿಣಪುಡಿ ಮತ್ತು ಅದರರ್ಧ ಪ್ರಮಾಣ ಕಾಳು ಮೆಣಸಿನ ಪುಡಿ 1ಲೋಟ ಬಿಸಿ ಹಾಲಿಗೆ ಸೇರಿಸಿ ಸೇವನೆ. ದಿವಸಕ್ಕೆ 2–3ಸಲ; 2–3ದಿವಸ.

6. ಕಾಳುಮೆಣಸಿನ ಪುಡಿ ಕಾಲು ಚಮಚ, 1ಚಮಚ ಜೇನುತುಪ್ಪದಲ್ಲಿ ಕಲಸಿ ಸೇವನೆ; ದಿವಸಕ್ಕೆ 3ಸಲ; 2–3ದಿವಸ.

**ಕೆಮ್ಮು**

1. ಕಾಳುಮೆಣಸನ್ನು ಹುರಿದು ಸಮ ಪ್ರಮಾಣ ಸಕ್ಕರೆ ಸೇರಿಸಿ ಪುಡಿ ಮಾಡಿ ಸಣ್ಣ ಡಬ್ಬಿಯಲ್ಲಿ ಮುಚ್ಚಿಟ್ಟಿದ್ದು ದಿನಕ್ಕೆ 3–4ಸಲ 1/4 (ಕಾಲು) ಚಮಚದಂತೆ 3–4ದಿನ ಸೇವನೆ.

**ಸಾದಾ ಜ್ವರ**

1. ಅಳಲೆಕಾಯಿಯನ್ನು ಶುಂಠಿ ರಸದಲ್ಲಿ ತೇದು, ಜೇನುತುಪ್ಪದಲ್ಲಿ ಕಲಸಿ ನಾಲಗೆ ಮೇಲೆ ಸವರಬೇಕು. (ಇದು ಮಕ್ಕಳಿಗೆ ಹೆಚ್ಚು ಫಲಕಾರಿ) ದಿವಸಕ್ಕೆ 3ಸಲ;3ದಿವಸ

2. 2ಚಿಟಿಕೆ ಕಾಳು ಮೆಣಸಿನ ಚೂರ್ಣ, 2ಚಾ ಚಮಚ ಕೃಷ್ಣ ತುಳಸಿರಸ ಮತ್ತು ಜೇನುತುಪ್ಪ ಕಲಸಿ ಸೇವನೆ; ದಿವಸಕ್ಕೆ 3ಸಲ3–4ದಿವಸ.

3. ಅಮೃತ ಬಳ್ಳಿಯನ್ನು ಜಜ್ಜಿ, 4ಲೋಟ ನೀರಿನಲ್ಲಿ ಚೆನ್ನಾಗಿ ಕುದಿಸಿ 1ಲೋಟಕ್ಕೆ ಇಂಗಿಸಿ, 3ಸಲ ಕುಡಿಸಬೇಕು. ದಿವಸಕ್ಕೆ 2ಸಲ; 3ದಿವಸ.

4. ಒಂದು ಲೋಟ ನೀರನ್ನು ಚೆನ್ನಾಗಿ ಕುದಿಸಿ, ಅದರಲ್ಲಿ ಕಾಳುಮೆಣಸಿನ ಪುಡಿ 1/4 ಚಾ ಚಮಚ ಮತ್ತು 4ಬೆಳ್ಳುಳ್ಳಿ ಪಕಳೆಗಳನ್ನು ಜಜ್ಜಿ ಹಾಕಿ 5ನಿಮಿಷ ಮತ್ತೆ ಕುದಿಸಿ, ಸೋಸಿದ ಕಷಾಯ ಒಂದು ಔನ್ಸ್‌ಗೆ 2 ಚಾಚಮಚ ಜೇನುತುಪ್ಪ ಸೇರಿಸಿ ಸೇವನೆ ದಿವಸಕ್ಕೆ 3ಸಲ;3–4ದಿವಸ.

5. ಒಂದು ಚಾಚಮಚ ದಾಲ್ಚಿನಿಪುಡಿ ಮತ್ತು ಒಂದು ಚಿಟಿಕೆ ಕಾಳು ಮೆಣಸಿನ ಪುಡಿಯನ್ನು ಒಂದು ಲೋಟ ನೀರಿನಲ್ಲಿ ಚೆನ್ನಾಗಿ ಕುದಿಸಿ ಆರಿಸಿದ ಕಷಾಯ 1ಔನ್ಸ್‌ಗೆ 2 ಚಾ ಚಮಚ ಜೇನುತುಪ್ಪ ಸೇರಿಸಿ ಸೇವನೆ ದಿವಸಕ್ಕೆ 3ಸಲ;3–4 ದಿವಸ.

ಅತಿಸಾರ (ಅತಿಭೇದಿ)

1. 1/4 ಚಾ ಚಮಚ ಓಮ ಕಾಳಿನ ಚೂರ್ಣವನ್ನು ಒಂದು ಲೋಟ ಕುದಿಸದ ನೀರಲ್ಲಿ ಕಲಸಿ ಕುಡಿಸಬೇಕು. ದಿವಸಕ್ಕೆ 3ಸಲ, 2ದಿವಸ.

2. ಒಂದು ಲೋಟ ಮಜ್ಜಿಗೆಯಲ್ಲಿ 1ಚಾ ಚಮಚದಷ್ಟು ಹುಣಸೆಹಣ್ಣು ಗೊಜ್ಜನ್ನು ಬೆರೆಸಿ, ಚೆನ್ನಾಗಿ ಮಾಗಿದ 2 ಬಾಳೆಹಣ್ಣುಗಳನ್ನು ಈ ಮಿಶ್ರಣದಲ್ಲಿ ಚೆನ್ನಾಗಿ ಕಿವುಚಿ ಸೇವಿಸಬೇಕು. ದಿವಸಕ್ಕೆ 2ಸಲ; 3ದಿವಸ.

3. ದಾಳಿಂಬೆ ಹಣ್ಣಿನ ರಸವನ್ನು 2–3ಗಂಟೆಗೆ ಒಮ್ಮೆ ಸೇವಿಸುವುದು. ಪ್ರಮಾಣ 1ಚಾ ಚಮಚ 2–3ದಿವಸ.

4. ಬಿಲ್ವದ ಹಣ್ಣಿನ ಒಳತಿರುಳಿನ ಶರಬತ್ ಸೇವನೆ, ಪ್ರಮಾಣ 1ಚಾ ಚಮಚ 2–3ದಿವಸ.

5. ಒಂದು ಅಂಗುಲ ಉದ್ದದ ಅರಿಸಿನ ಕೊಂಬನ್ನು ನುಣ್ಣಗೆ ಅರೆದು ಒಂದು ಲೋಟ ಮಜ್ಜಿಗೆಯಲ್ಲಿ ಕಲಸಿ ಕುಡಿಸಬೇಕು. ದಿವಸಕ್ಕೆ 2ಸಲ; 2–3ದಿವಸ.

6. ಮೆಂತೆಪುಡಿ 1ಚಾ ಚಮಚದಷ್ಟು 1ಲೋಟ ಮಜ್ಜಿಗೆಯಲ್ಲಿ ಕಲಸಿ ಕುಡಿಸಬೇಕು. ದಿವಸಕ್ಕೆ 2ಸಲ; 4ದಿವಸ.

**ಉಪ್ಪು ಸಕ್ಕರೆ ಪಾನಕ ಕುಡಿಸಿ**

**ಅತಿ ಭೇದಿಯಿಂದ ನರಳುವ ಮಕ್ಕಳ ಪ್ರಾಣ ಉಳಿಸಿ.**

ಉಪ್ಪು ಸಕ್ಕರೆ ಪಾನಕ ತಯಾರಿಸುವ ವಿಧಾನ:

1ಲೀಟರ್ ನೀರಿನಲ್ಲಿ ಒಂದು ಚಿಟಿಕೆ ಉಪ್ಪು, ಒಂದು ಒಳ ಹಿಡಿಯಷ್ಟು ಹಿಡಿ ಸಕ್ಕರೆ ಕಲಸಿ ಆಗಾಗ ಕುಡಿಸುತ್ತಿರಬೇಕು. (ಪ್ರತಿ ಭೇದಿಗೂ ಒಂದು ಲೋಟ ಪ್ರಮಾಣದಂತೆ ಚಿಕ್ಕವರಿಗೆ;ದೊಡ್ಡವರಿಗೆ-ಎರಡು ಲೋಟ ಪ್ರಮಾಣದಂತೆ)

**ಇದು ಜೀವ ಜಲ-ತಪ್ಪದೆ ಬಳಸಿರಿ**

**ಆಮಶಂಕೆ (ರಕ್ತಭೇದಿ)**

1. ದಾಳಿಂಬೆ ಹಣ್ಣಿನ ಸಿಪ್ಪೆ ಒಂದು ಹಿಡಿಯನ್ನು 2ಲೋಟ ಹಾಲಿನಲ್ಲಿ ಬೇಯಿಸಿ, ಕಷಾಯ ಬಸಿದು 3ಭಾಗ ಮಾಡಿ, ದಿನಕ್ಕೆ 3ಸಲ ಸೇವನೆ 3-4ದಿವಸ.

2. ದಾಳಿಂಬೆ ಹಣ್ಣಿನ ಪಾನಕ ಸೇವನೆ.

3. ಹಣ್ಣಾಗಿರದ (ಬಲಿತ) ಬಿಲ್ವಪತ್ರೆ ಕಾಯಿ ತಿರುಳಿಗೆ ಸಕ್ಕರೆ ಬೆರೆಸಿ ಸೇವನೆ. ಪ್ರಮಾಣ; ನೆಲ್ಲಿಕಾಯಿ ಗಾತ್ರ, ದಿವಸಕ್ಕೆ 3ಸಲ; 3ದಿವಸ.

4. ಬಿಸಿ ಹಾಲಿಗೆ ನಿಂಬೆ ಹಣ್ಣು ಹಿಂಡಿ ಆಗಾಗ್ಗೆ ಕುಡಿಸುವುದು ಹಿತಕರ.

5. ಅರ್ಧ ತೊಲೆ ಮುಟ್ಟಿದರೆ ಮುನಿ ಸೊಪ್ಪಿನ ರಸವನ್ನು ಅರ್ಧ ತೊಲೆ ಕೊಡಸಿಗೆ ಮರದ ತೊಗಟೆಯನ್ನು ಸ್ವಲ್ಪ ಮಜ್ಜಿಗೆಯಲ್ಲಿ ತೇದು ಸೇವಿಸಬೇಕು. ದಿವಸಕ್ಕೆ 3ಸಲ; 4ದಿವಸ.

6. ಒಣಗಿಸಿದ ನೆಲ್ಲಿಕಾಯಿ ಪುಡಿ 2ಚಾ ಚಮಚ, 1ಲೋಟ ಮಜ್ಜಿಗೆಯಲ್ಲಿ ಕಲಸಿ ಸೇವನೆ. ದಿವಸಕ್ಕೆ 3ಸಲ; 3-4ದಿವಸ.

7. ದಾಳಿಂಬೆ ಹಣ್ಣಿನ ಒಣಸಿಪ್ಪೆ ಚೂರ್ಣ ಮತ್ತು ಸೀಬೆ ಚಿಗುರುರಸ ಸೇರಿಸಿ ಸೇವನೆ; 2ಚಾ ಚಮಚ ಪ್ರಮಾಣ; ದಿವಸಕ್ಕೆ 3ಸಲ; 4ದಿವಸ.

**ತಲೆನೋವು**

1.ತಾಜಾ ಹಸಿಶುಂಠಿಯನ್ನು ನೀರಲ್ಲಿ ತೇಯ್ದು ಹಣೆಗೆ ಪಟ್ಟಿ ಹಾಕಿ ಮಲಗಿ ವಿಶ್ರಾಂತಿ ಪಡೆಯುವುದು.

2. ದಾಲ್ಚಿನ್ನಿಯನ್ನು ನಿಂಬೆರಸದಲ್ಲಿ ತೇದು ಕೆನ್ನೆ ಮತ್ತು ಹಣೆಗೆ ಲೇಪಿಸಿ ವಿಶ್ರಾಂತಿ ಪಡೆಯುವುದು.

3. ನುಗ್ಗೆಸೊಪ್ಪಿನ ರಸದಲ್ಲಿ ಕಾಳುಮೆಣಸು ತೇಯ್ದು ಹಣೆ ಮತ್ತು ಕೆನ್ನೆಗಳಿಗೆ ಹಚ್ಚುವುದು.

4. ಎಳೆ ಬೇವಿನ ಎಲೆಯನ್ನು ಕುಟ್ಟಿ, ರಸ ಹಿಂಡಿ 2ಚಾ ಚಮಚದಷ್ಟು ರಸ ಸೇವಿಸುವುದು.

5. ಏಲಕ್ಕಿಯ ನಯವಾದ ಚೂರ್ಣವನ್ನು ನಸ್ಯದಂತೆ ಮೂಗಿಗೇರಿಸುವುದು ಕೂಡ ಹಿತಕರ.

6. ಹುಣಸೆಹಣ್ಣಿನ ರಸದಲ್ಲಿ ಸಕ್ಕರೆ ಬೆರಸಿ ಪಾನಕ ಮಾಡಿ ಸೇವನೆ ಮಾಡುವುದು.

**ಅರೆತಲೆನೋವು**

1. ನುಗ್ಗೆಸೊಪ್ಪನ್ನು ಜಜ್ಜಿ ಹಿಂಡಿ ರಸ ತೆಗೆದು, ಸಮಭಾಗ ಹಸಿ ಶುಂಟಿರಸ ಸೇರಿಸಿ ಕಿವಿಗಳಿಗೆ ಹಾಕುವುದು. ಪ್ರಮಾಣ 3–4ಹನಿ.

**ಹಲ್ಲುನೋವು**

1. ಲವಂಗದ ಚೂರಿಗೆ ಜೇನುತುಪ್ಪ ಸವರಿ ಹತ್ತಿಯಲ್ಲಿ ಮುಚ್ಚಿ ಹಲ್ಲು ನೋವಿರುವಲ್ಲಿ ಇರಿಸಬೇಕು.

2. ಹತ್ತಿಗಿಡದ ಹಾಲಲ್ಲಿ ಅಡಿಗೆ ಸೋಡ ಬೆರೆಸಿ, ಹತ್ತಿಯಲ್ಲಿ ಸವರಿ ಇರಿಸಬೇಕು.

3. ಲವಂಗದ ಎಣ್ಣೆಯನ್ನು ಹತ್ತಿಯಲ್ಲಿ ಅದ್ದಿ ಹಲ್ಲುನೋವಿರುವಲ್ಲಿ ಇರಿಸುವುದು.

**ಗಂಟಲು ನೋವು**

1. ಮಾವಿನ ತೊಗಟೆ ಕಷಾಯಕ್ಕೆ ಸ್ವಲ್ಪ ಉಪ್ಪು ಬೆರೆಸಿ ಬಾಯಿ ಮುಕ್ಕಳಿಸಬೇಕು.

2. ಕಾಳುಮೆಣಸು ಮತ್ತು ಕೊತ್ತಂಬರಿ ಬೀಜದ ಕಷಾಯ ಸೇವನೆ.

3. ನಾಲ್ಕೈದು ಕಾಳುಮೆಣಸು, ಚಿಟಿಕೆ ಓಮ ಮತ್ತು 3ಹರಳು ಉಪ್ಪು ಬಾಯಿಗೆ ಹಾಕಿಕೊಂಡು ಚಪ್ಪರಿಸಬೇಕು.

4. ಒಂದು ಲೋಟ ಬಿಸಿ ನೀರಿಗೆ ಒಂದು ಹೋಳು ನಿಂಬೆಹಣ್ಣು ಹಿಂಡಿ, ನಾಲ್ಕು ಚಾ ಚಮಚ ಜೇನುತುಪ್ಪ ಎರಡು ಚಿಟಿಕೆ ಉಪ್ಪು ಬೆರೆಸಿ, ಸೇವನೆ.

5. ಬಿಸಿಯಾದ ಉಪ್ಪು ನೀರಿನಿಂದ ಗಂಟಲಿಗೆ ಶಾಖ ತಗಲುವಂತೆ ಬಾಯಿ ಮುಕ್ಕಳಿಸಬೇಕು.

6. ಜೀರಿಗೆ, ಕೊತ್ತಂಬರಿ, ಕಾಳು ಮೆಣಸಿನ ಕಷಾಯ ಸೇವನೆ.

**ಕಿವಿನೋವು**

1. ಒಳಕಿವಿಯಲ್ಲಿ ಹುಣ್ಣಾಗಿದ್ದರೆ ತುಳಸಿ ಎಲೆ ರಸವನ್ನು ಒಂದೆರಡು ತೊಟ್ಟು ಹಾಕಬೇಕು.

2. ಈರುಳ್ಳಿ ರಸ ಒಂದೆರಡು ಹನಿ ಹಾಕಬೇಕು.

3. ಬೆಳ್ಳುಳ್ಳಿ ರಸ ಹಾಗೂ ಸೈಂದವ ಲವಣ ಮಿಶ್ರ ಮಾಡಿ, 3–4ತೊಟ್ಟು ಹನಿ ಹನಿಯಾಗಿ ಹಾಕಬೇಕು.

4. ಬೆಳ್ಳುಳ್ಳಿ ಪಕಳೆ ಜಜ್ಜಿ ಕೊಬ್ಬರಿ ಎಣ್ಣೆ ಹಾಕಿ ಒಂದು ಚಮಚದಲ್ಲಿ ಹುರಿದು ತುಸು ಬೆಚ್ಚಗಿನ ಒಂದೆರಡು ಹನಿ ಎಣ್ಣೆಯನ್ನು ದಿನಕ್ಕೆರಡು ಬಾರಿ ಹಾಕಬೇಕು.

5. ಲವಂಗವನ್ನು ಜಜ್ಜಿ ಕೊಬ್ಬರಿ ಎಣ್ಣೆಯಲ್ಲಿ ಬಿಸಿ ಮಾಡಿದ ಎಣ್ಣೆ ಒಂದೆರಡು ಹನಿ ಹಾಕಬಹುದು.

6. ಲಕ್ಕಿ ಸೊಪ್ಪಿನ ರಸ ಎಣ್ಣೆ ಸೇರಿಸಿ ಸವರುವುದು ಕೂಡಾ ಉಪಯುಕ್ತ.

**ಉಳುಕಿನ ನೋವು**

1. ಬಿಸಿ ಮಾಡಿದ ಹುಣಸೇ ಗೊಜ್ಜನ್ನು ಉಳುಕು, ಊತವಿರುವ ಭಾಗಕ್ಕೆ ಲೇಪಿಸುವುದು.

2. ತಿನ್ನುವ ಸುಣ್ಣವನ್ನು ಜೇನುತುಪ್ಪದಲ್ಲಿ ಕಲಸಿ ವೀಳ್ಯದೆಲೆಗೆ ಸವರಿ ಬಿಸಿ ಮಾಡಿ ಸ್ವಲ್ಪ ಕಾಸುವುದು.

3. ಮೆಂತೆ ಸೊಪ್ಪಿಗೆ ನಿಂಬೆರಸ ಬೆರೆಸಿ ಅರೆದು ಪಟ್ಟು ಹಾಕುವುದು.

4. ಬೆಲ್ಲವನ್ನು ಪುಡಿ ಮಾಡಿಕೊಂಡು, ತುಪ್ಪದಲ್ಲಿ ಕಲಸಿ ಬಿಸಿ ಮಾಡಿ ಹದ ಬಿಸಿಯಿರುವಾಗ ಲೇಪಿಸಿ ಕಟ್ಟು ಕಟ್ಟುವುದು.

5. ಮೆಂತೆಕಾಳನ್ನು ಅರೆದು ಲೇಪ ಹಾಕಬೇಕು. ಹೆಚ್ಚು ನೋವಿದ್ದರೆ ಒಮ್ಮೆ ಬಜೆ ಒಮ್ಮೆ ಮೆಂತೆ ಅರೆದು ಲೇಪ ಹಾಕಬೇಕು.

6. ಹುಣಸೆಹಣ್ಣಿನ ಗೊಜ್ಜಿನಲ್ಲಿ ತುಸು ಉಪ್ಪು ಮತ್ತು ಬೆಲ್ಲ ಸೇರಿಸಿ ಕುದಿಸಿ, ಬಿಸಿ ಬಿಸಿ ಪಟ್ಟು ಹಾಕುವುದು.

**ತುರಿಕಜ್ಜಿ**

1. ಆಲೂಗೆಡ್ಡೆಯನ್ನು ನಿಂಬೆರಸದಲ್ಲಿ ನುಣ್ಣಗೆ ಅರೆದು ಲೇಪ ಹಾಕುವುದು.

2. ಬೇವಿನ ಎಣ್ಣೆ ಸವರಿ ಸ್ವಲ್ಪ ಹೊತ್ತು ಬಿಸಿಲಲ್ಲಿ ಕುಳಿತಿದ್ದು, ಅನಂತರ ಬೇವಿನ ಸೊಪ್ಪು ಕಷಾಯದಲ್ಲಿ ಸ್ನಾನ ಮಾಡುವುದು.

3. ಬೇವಿನ ಎಲೆ, ಹಸಿ ಅರಿಸಿಣ, ಉಪ್ಪು ಸೇರಿಸ ಅರೆದು ಲೇಪಿಸಿ ಸ್ವಲ್ಪ ಹೊತ್ತು ಬಿಸಿಲಿಗೆ ಮೈ ಒಡ್ಡಿದ ಮೇಲೆ ಬಿಸಿ ನೀರಿನಲ್ಲಿ ಸ್ನಾನ ಮಾಡಿಸುವುದು.

4. ಅಡಿಕೆಯ ಸಿಪ್ಪೆಯನ್ನು ಸುಟ್ಟು ತಯಾರಿಸಿದ ಇದ್ದಿಲನ್ನು ಎಳ್ಳೆಣ್ಣೆಯಲ್ಲಿ ಕಲಸಿ ಹಚ್ಚುವುದು ಹಾಗೂ 8–10 ಬೇವಿನ ಎಲೆ ಮತ್ತು ಅರಿಸಿಣ ಚೂರ್ಣ ಅರೆದು ಗುಳಿಗೆ ತಯಾರಿಸಿ ಸೇವಿಸಿ ನೀರು ಕುಡಿಯುವುದು. (ಕೀವು ಸಹಿತವಾದ ಕಜ್ಜಿ ಇದ್ದಾಗ ಇದು ಉಪಯುಕ್ತ)

5. ಹುಣಸೆ ಎಲಗಳನ್ನು ನುಣ್ಣಗೆ ಅರೆದು ಪಟ್ಟಿ ಹಾಕುವುದು.

6. ನಿಂಬೆಹರ್ಣಣಿನ ರಸದಲ್ಲಿ ಗಂಧದ ಪುಡಿ ಬೆರೆಸಿ ಲೇಪನ.

7. ಎಳೆ ಸೀಬೆ ಮತ್ತು ಹೂವನ್ನು ಅರಸಿಣದೊಂದಿಗೆ ಅರೆದು ಲೇಪ ಹಾಕುವುದು.

8. ಓಮ ಮತ್ತು ಹಸಿ ಅರಸಿಣವನ್ನು ಅರೆದು ತೆಳು ಲೇಪ ಹಾಕುವುದು.

**ಕುರು, ಬಾವು**

1. ಮೊದಲು ಬಿಸಿನೀರಿನ ಶಾಖ ಕೊಡಬೇಕು. ಅನಂತರ ಸುತ್ತಲೂ ಶುಂಠಿಯ ಲೇಪ ಹಚ್ಚಬೇಕು. ತೆಳು ಪಟ್ಟಿ ಹಾಕಿ ನೀರು ಹಾಕಬೇಕು. (3ತಾಸಿಗೆ ಒಮ್ಮೆ ಮೂರು ದಿವಸ)

2. ಶುಂಠಿಯ ಲೇಪ ಸಹ ಹಿತಕರ.

3. ದತ್ತೂರ ರಸ ಹಚ್ಚುವುದು.

4. ಕೀವಾದಾಗ ಕುರುವಿನ ಮೇಲೆ ಹುಣಸೆ ಸೊಪ್ಪು ಮತ್ತು ಬೆಲ್ಲ ಬೇಯಿಸಿ ಪಟ್ಟು ಹಾಕುವುದು.

**ಸುಟ್ಟಗಾಯ**

1. ಎಳ್ಳೆಣ್ಣೆ ಜೇನುತುಪ್ಪ ಸವರುವುದು.

2. ದಾಳಿಂಬೆ ಗಿಡದ ಎಲೆಗಳನ್ನು ನುಣ್ಣಗೆ ಅರೆದು ಲೇಪ ಹಾಕುವುದು.

3. ಆಲೂಗೆಡ್ಡೆಯನ್ನು ಚೆನ್ನಾಗಿ ತೊಳೆದು ನುಣ್ಣಗೆ ಅರೆದು ಲೇಪಿಸುವುದು.

4.ಉಪ್ಪು ಸೇರಿಸದೇ ಇರುವ ಹಳೆ ಅಥವಾ ಹೊಸ ಹುಣಸೆಹಣ್ಣನ್ನು ತಕ್ಷಣ. ಹಚ್ಚುವುದು. ಅನಂತರ ಅರಸಿನ ಸೇರಿಸಿ ಹಚ್ಚಬೇಕು. (ನೀರು ತಾಗಿಸಬಾರದು)

**ಕಣ್ಣು ಉರಿ (ಕೆಂಗಣ್ಣು-ಕಣ್ಣು ಕೆಂಪು)**

1. ಸೌತೆಕಾಯಿಯನ್ನು ತೆಳ್ಳಗೆ ಬಿಲ್ಲೆಗಳಾಗಿ ಕತ್ತರಿಸಿ, ಕಣ್ಣುಮಿಚ್ಚಿ ರೆಪ್ಪೆಗಳ ಮೇಲಿಟ್ಟು ವಿಶ್ರಾಂತಿ ಪಡೆಯಬೇಕು

2. ಗರಿಕೆ ಹುಲ್ಲಿನ ರಸವನ್ನು ತೊಟ್ಟು ತೊಟ್ಟಾಗಿ ಕಣ್ಣಿಗೆ ಬಿಡಬೇಕು. (ಕಣ್ಣು ಕೆಂಪಾದರೆ).

**ರೆಪ್ಪೆ ಕುರುವಿಗೆ**

1. ಅರಸಿಣ ಕೊಂಬು ಹಾಗೂ ಒಂದೆರಡು ಕಾಳು ಮೆಣಸನ್ನು ನುಣ್ಣಗೆ ಅರೆದು ಪುಡಿ ಮಾಡಿ, ತೆಂಗಿನ ಎಣ್ಣೆಯಲ್ಲಿ ಕಲಸಿ, ಬಟ್ಟೆಯಲ್ಲಿ ಅದ್ದಿ ಕಣ್ಣಿನ ರೆಪ್ಪೆ ಮೇಲೆ ಆಗಾಗ ಇರಿಸಿಕೊಳ್ಳಬೇಕು. ಕಣ್ಣು ನೋವು ಇದ್ದರೆ ಕಣ್ಣಿಗೆ ಒಂದು ಹನಿ ಹಾಕುವುದು.

**ಕೀವು ಸುರಿಯುವ ವ್ರಣ (ಹುಣ್ಣು)**

1. ಬೆಳ್ಳುಳ್ಳಿ ಕಷಾಯದಕಿಂದ ಹುಣ್ಣುಗಳನ್ನು ತೊಳೆದು, ಬೆಣ್ಣೆಯೊಂದಿಗೆ ಕರೆದ ಬೆಳ್ಳುಳ್ಳಿ ಮುಲಾಮು ಲೇಪಿಸಬೇಕು.

2. ಬೆಳ್ಳುಳ್ಳಿ, ಹೊಂಗೆಬೀಜ ಮತ್ತು ಉಪ್ಪನ್ನು ನಯವಾಗಿ ಅರೆದು ಲೇಪಿಸುವುದು. 1ಪಾಲು ಎಳ್ಳು ಮತ್ತು 4ಪಾಲು ಬೇವಿನ ಎಲೆಯನ್ನು ನುಣ್ಣಗೆ ಅರೆದು ಜೇನುತುಪ್ಪ ಸೇರಿಸಿ ಹಚ್ಚಬೇಕು.

**ಉಗುರುಸುತ್ತು.**

1. ಉಗುರುಸುತ್ತು ಅಗಿರುವ ಬೆರಳಿನ ಆಕಾರಕ್ಕೆ ಸರಿಯಾಗಿ ನಿಂಬೆಹಣ್ಣಿನಲ್ಲಿ ರಂಧ್ರ ಕೊರೆದು ಬೆರಳಿಗೆ ಸಿಕ್ಕಿಸಬೇಕು. (2–3 ದಿವಸ)

2. ಪರಂಗಿ ಎಲೆ, ಈರುಳ್ಳಿ, ಅರ್ಧಚಮಚ ಅಪ್ಪಟ ಅರಸಿಣ ಪುಡಿ ಅರೆದು ಉಗುರುಸುತ್ತಿನ ಮೇಲೆ ಲೇಪ ಹಾಕಿ ಬ್ಯಾಂಡೇಜ್ ಕಟ್ಟಬೇಕು.

3. ಬಿಸಿ ಉಪ್ಪು ನೀರನ್ನು ಆಗಾಗ ಸುರಿಯುತ್ತಿರಬೇಕು.

4. ಅಕ್ಕಿ ತೊಳೆದ ರೀತಿಯಲ್ಲಿ ಉಪ್ಪನ್ನು ಕದಡಿ ಬಿಸಿ ಮಾಡಿ ಬಟ್ಟೆಯಲ್ಲಿ ಅದ್ದಿ, ಪಟ್ಟಿ ಹಾಕಬೇಕು.

**ಮಲಬದ್ಧತೆ**

1. ಹುಳಿ ಮಜ್ಜಿಗೆಗೆ ಬೆಲ್ಲ ಸೇರಿಸಿ ಕುಡಿಸುವುದು.

2. ಒಂದು ಲೋಟ ಹುಳಿ ಮಜ್ಜಿಗೆಗೆ ಸಕ್ಕರೆ, ಚಿಟಿಕೆ ಉಪ್ಪು ಮತ್ತು ಚಿಟಿಕೆ ಇಂಗು ಸೇರಿಸಿ ಸೇವನೆ.

**ಹೊಟ್ಟೆನೋವು.**

1. ಅರ್ಧ ಚಾ ಚಮಚ ಹಸಿ ಶುಂಠಿರಸ, 2ಚಾ ಚಮಚ ಜೇನುತುಪ್ಪ ಮತ್ತು 4ಚಾ ಚಮಚ ಎಳ್ಳೆಣ್ಣೆ ಬೆರೆಸಿ ಸೇವನೆ.

**ಅಂಗಾಲು ಒಡೆದು ಬಿರುಕು ಬಿಟ್ಟರೆ (ನಂಜು)**

1. ಬಾಳೆಹಣ್ಣಿನ ಸಿಪ್ಪೆಯನ್ನು ಬಿಸಿಲಿಗಿಟ್ಟು ಸುಟ್ಟು ಬೂದಿ ಮಾಡಿ ತಯಾರಿಸಿ ಅಂಗಾಲ ಬಿರುಕಿಗೆ ಹಾಕಿ ತಿಕ್ಕಬೇಕು.

2. ಈರುಳ್ಳಿಯನ್ನು ಜಜ್ಜಿ ಲೇಪ ಹಾಕಬೇಕು.

3. ಸಾಗುವಾನಿ ಚಿಗುರೆಲೆಗಳ ರಸ ತಿಕ್ಕಬೇಕು.

4. ಸಾಗುವಾನಿ ಚಿಗುರೆಲೆಗಳನ್ನು ಕುದಿಸಿದ ಎಣ್ಣೆಯನ್ನು ಹಚ್ಚುವುದು.

ಬಾಯಿಹುಣ್ಣು

ಮಾವಿನ ಚಿಗುರೆಲೆಯನ್ನು ಅಗಿದು ಬಾಯಲ್ಲಿಟ್ಟುಕೊಳ್ಳಬೇಕು. (ಸ್ವಲ್ಪ ಹೊತ್ತು).

2. ಅತ್ತಿಯ ಚಿಗುರೆಲೆಯ ತಂಬುಳಿ ಸೇವನೆ.

**ಸೂಚನೆ:** ಇಲ್ಲಿ ಕೊಟ್ಟಿರುವ ಚಿಕಿತ್ಸೆಗಳ ಜತೆಗೆ ಅಗತ್ಯವಾದ ಆಹಾರ, ಅನುಪಾನ ಮತ್ತು ಶುಶ್ರೂಷೆಗಳನ್ನು ಒದಗಿಸಬೇಕು. 2–3 ' ದಿವಸಗಳ ಚಿಕಿತ್ಸೆಯಿಂದ ಗುಣ ಕಾಸಣಿಸದಿದ್ದಲ್ಲಿ ವೈದ್ಯರನ್ನು ಸಂಪರ್ಕಿಸಬೇಕು.

* * * * .

# ಪೌಷ್ಟಿಕ ಆಹಾರ

## ಮಕ್ಕಳಿಗೆ ಹೆಚ್ಚಿನ ಆಹಾರ ಬೇಕು-ಏಕೆ?

## ಮಕ್ಕಳಿಗೆ ಆಹಾರ ಅಗತ್ಯವಾದರೂ ಇದೆಯೆ?

ಮಕ್ಕಳು ಶಕ್ತಿವಂತರಾಗಿ ಬೆಳವಣಿಗೆ ಹೊಂದಬೇಕಾದರೆ ನಾವು ಅವರಿಗೆ ಆಹಾರ ಕೊಡಬೇಕು. ಮಕ್ಕಳಿಗೆ ನಾವು ಕೊಡುವ ಆಹಾರ ಕ್ಯಾಲೋರಿ (ಅಂದರೆ ಉಷ್ಣಜನಕ ಆಹಾರ ದ್ರವ್ಯಗಳು) ಮತ್ತು ಪ್ರೋಟೀನ್ (ಅಂದರೆ ದೇಹದ ಬೆಳವಣಿಗೆಗೆ ಬೇಕಾದ ಪೌಷ್ಟಿಕಾಂಶಗಳು)ಗಳನ್ನು ಹೊಂದಿರಬೇಕು.

ಮಕ್ಕಳಿಗೆ ಬೇಕಾಗುವಷ್ಟು ಆಹಾರ ಸಿಗದಿದ್ದಲ್ಲಿ ಅವರಿಗೆ ಸಾಕಷ್ಟು ಕ್ಯಾಲೋರಿಗಳು ಮತ್ತು ಪೌಷ್ಟಿಕಾಂಗಳು ಸಹ ದೊರೆಯದಿದ್ದಲ್ಲಿ ಉಷ್ಣಜನಕ ಆಹಾರ ದ್ರವ್ಯಗಳ ಮತ್ತು ಪೌಷ್ಟಿಕ ಅಹಾರ ದ್ರವ್ಯಗಳ ಕೊರತೆ ಸಹ ಉಂಟಾದಲ್ಲಿ, ಮಕ್ಕಳು ಕ್ವಾಶಿಯೋಕೋರ ಮತ್ತು ಮರಾಸ್ಮಸ್‌ನಂತಹ ಅನೇಕ ರೋಗಗಳಿಗೆ ತುತ್ತಾಗುವ ಅಪಾಯವಿರುತ್ತದೆ.

ಕ್ವಾಶಿಯೋಕೋರ ಮತ್ತು ಮರಾಸ್ಮಸ್ ರೋಗಗಳು ಯಾರಿಗೆ ಬರಬಹುದು (ಪ್ರೋಟೀನ್-ಕ್ಯಾಲೋರಿ ಕೊರತೆ.)

1ರಿಂದ 5ವಯಸ್ಸಿನ ಮಕ್ಕಳು, ಪೌಷ್ಟಿಕ ದ್ರವ್ಯಗಳ ಮತ್ತು ಉಷ್ಣಜನಕ ಆಹಾರ ದ್ರವ್ಯಗಳ ಕೊರತೆಯಿಂದಾಗಿ ತೊಂದರೆಗೆ ಈಡಾಗುವ ಸಾಧ್ಯತೆಗಳು ಹಚ್ಚಾಗಿವೆ. ಅದರಲ್ಲೂ ವಿಶೇಷವಾಗಿ 1ರಿಂದ 3ವರ್ಷ ವಯಸ್ಸಿನ ಮಕ್ಕಳಿಗೆ ಇದು ತೀರ ಅಪಾಯಕಾರಿಯಾಗಿದೆ.

ಮಕ್ಕಳಿಗೆ ಕ್ವಾಶಿಯೋಕೋರ ಮತ್ತು ಮರಾಸ್ಮಸ್‌ನಂತಹ ರೋಗಗಳು ಏಕೆ ಬರುತ್ತವೆ(ಪ್ರೋಟೀನ್ ಕ್ಯಾಲೊರಿ ಕೊರತೆ)

ಮಕ್ಕಳಿಗೆ ಸಾಕಷ್ಟು ಅಹಾರ ಸಿಗದಿದ್ದಲ್ಲಿ ಅವರು ಉಷ್ಣಜನಕ ಆಹಾರ ದ್ರವ್ಯಗಳಿಂದ ಮತ್ತು ಪೌಷ್ಟಿಕ ಆಹಾರ ದ್ರವ್ಯಗಳಿಂದ ವಂಚಿತರಾಗುತ್ತಾರೆ.

ಹಸುಗೂಸುಗಳು, 4ತಿಂಗಳವರೆಗೆ ತಮ್ಮ ತಾಯಿಯ ಮೊಲೆ ಹಾಲಿನಿಂದಲೇ ತಮಗೆ ಬೇಕಾಗುವಷ್ಟು ಪೌಷ್ಟಿಕಾಂಶಗಳನ್ನು ಮತ್ತು ಕ್ಯಾಲೋರಿಗಳನ್ನು ಪಡೆಯುತ್ತವೆ. ಆದರೆ ನಾಲ್ಕು ತಿಂಗಳ ನಂತರ ಮಕ್ಕಳಿಗೆ ತಾಯಿಯ ಮೊಲೆ ಹಾಲಿನ ಜೊತೆಗೆ ಧಾನ್ಯಗಳು ಬೇಳೆಕಾಳುಗಳು, ಹಾಲು ಅಥವಾ ಮೊಟ್ಟೆ ಇವೇ ಮುಂತಾದ ಆಹಾರ ವಸ್ತುಗಳ ಅವಶ್ಯಕತೆ ತಲೆದೋರುತ್ತದೆ. ಈ ಅಹಾರ ವಸ್ತುಗಳಿಂದ ಮಗುವಿಗೆ ಅಗತ್ಯವಾದ ಶಕ್ತಿ ಲಭಿಸುತ್ತದೆ. ದೇಹದ ಬೆಳವಣಿಗೆಗೆ ಬೇಕಾದ ಪೌಷ್ಟಿಕಾಂಶಗಳೂ ಸಹ ಲಭಿಸುತ್ತವೆ.

ಮಗುವಿಗೆ ಸಾಕಷ್ಟು ಆಹಾರ ದೊರೆಯದಿದ್ದಲ್ಲಿ ಅದಕ್ಕೆ ಬೇಕಾಗುವಷ್ಟು ಕ್ಯಾಲೊರಿಗಳು ಮತ್ತು ಪೌಷ್ಟಿಕಾಂಶಗಳೂ ಸಹ ದೊರೆಯುವುದಿಲ್ಲ. ಇದರಿಂದಾಗಿ ಮಗುವಿನ ಬೆಳವಣಿಗೆ ಸರಿಯಾಗಿ ಆಗದೆ, ಅದು ಕ್ವಾಶಿಯೋಕೋರ ಅಥವಾ ಮರಾಸ್ಮಸ್‌ನಂತಹ ರೋಗಗಳಿಗೆ ಗುರಿಯಾಗಬಹುದು.

ಕ್ವಾಶಿಯೋರೆ ಕೋರೆ ಮತ್ತು ಮರಾಸ್ಮಸ್ ರೋಗವನ್ನು ಗುರುತಿಸುವುದಾದರೂ ಹೇಗೆ?

ಕ್ವಾಶಿಯೋರೆ ಕೋರೆ ರೋಗಕ್ಕೆ ಗುರಿಯಾದ ಮಗುವಿನ ಕಾಲುಗಳು ಉಬ್ಬಿಕೊಂಡಿರುತ್ತವೆ. ಆ ನಂತರ ಮಗುವಿನ ಮುಖ ಮತ್ತು ಇಡೀ ದೇಹ ಬಾತುಕೊಳ್ಳುತ್ತದೆ.

ಕ್ವಾಶಿಯೋ–ಗೆ ಗುರಿಯಾದ ಮಗುವಿನ ಚರ್ಮ ಒರಟಾಗಿ ಹುಣ್ಣುಗಳಾಗುತ್ತವೆ. ಕ್ವಾಶಿಯೋರೆ ಕೋರೆ ರೋಗಕ್ಕೆ ಗುರಿಯಾದ ಮಗುವಿನ ಕೂದಲು ತುಂಬ ವಿರಳವಾಗುತ್ತವೆ ಮತ್ತು ಆ ಮಗುವಿನ ಕೂದಲಿನ ಬಣ್ಣ ಕಪ್ಪಿನಿಂದ ಕಂದು ಬಣ್ಣಕ್ಕೆ ತಿರುಗುತ್ತದೆ.

ಕ್ವಾಶಿಯೋರೆ ಕೋರೆ ರೋಗಕ್ಕೆ ಗುರಿಯಾದ ಮಗುವು ಮುಂಗೋಪಿಯಾಗಿ, ತನ್ನ ಸುತ್ತಮುತ್ತಲಿನ ಪರಿಸರದಲ್ಲಿ ಯಾವ ರೀತಿಯ ಆಸಕ್ತಿಯನ್ನೂ ತೋರುವುದಿಲ್ಲ.

**ಮರಾಸ್ಮಸ್ (ಮೈಸವೆತ)**

ಮರಾಸ್ಮಸ್ ರೋಗಕ್ಕೆ ತುತ್ತಾದ ಮಗುವಿನ ಸ್ನಾಯುಗಳು ಬಡವಾಗುತ್ತವಾದ್ದರಿಂದಮಗುವು ತೆಳುವಾಗಿ ತುಂಬ ಬಲಹೀನವಾಗುತ್ತದೆ. ಅವನ ದೇಹದಲ್ಲಿನ ಎಲುಬುಗಳು ಎದ್ದು ಕಾಣತೊಡಗುತ್ತದೆ.

ಮರಾಸ್ಮಸ್ ರೋಗಕ್ಕೆ ತುತ್ತಾದ ಮಗುವಿನ ದೇಹ ಬಾತುಕೊಳ್ಳುವುದಿಲ್ಲ

ಕೆಲವೊಮ್ಮೆ ಮಗುವು ಲಘುವಾದ ಅಥವಾ ಮಧ್ಯಮ ಪ್ರಮಾಣದ ಅತಿಸಾರ ಇಲ್ಲವೆ ಅತಿಭೇದಿಯಿಂದ ನರಳಬಹುದು.

ಅದು ಮುಂಗೋಪಿಯಾಗಬಹುದು ಮತ್ತು ಬಲಹೀನಗೊಳ್ಳಬಹುದು. ಇಂತಹ ಸಣ್ಣ ಪುಟ್ಟ ಆದೇಶಗಳನ್ನು ನಾವು ಕೂಡಲೇ ಗಮನಿಸಿ ಸರಿಯಾದ ಚಿಕಿತ್ಸೆ ನೀಡದಿದ್ದಲ್ಲಿ ರೋಗ ಉಲ್ಬಣಗೊಳ್ಳಬಹುದು.

## ಕ್ವಾಶಿಯೋರೆ ಕೋರೆ ಮತ್ತು ಮರಾಸ್ಮಸ್ ರೋಗದ ಚಿಕಿತ್ಸೆ.

ಕ್ಯಾಲೊರಿಗಳ ಮತ್ತು ಪೌಷ್ಟಿಕಾಂಶಗಳ ಕೊರತೆ ಅಲ್ಪವಾಗಿದ್ದಲ್ಲಿ ಮಗುವಿಗೆ ನಾವು ಮನೆಯಲ್ಲೇ ಚಿಕಿತ್ಸೆ ನೀಡಬಹುದು. ಇಂತಹ ಮಕ್ಕಳಿಗೆ ನಿತ್ಯಕ್ಕಿಂತ ಹೆಚ್ಚು ಮತ್ತು ಮೇಲಿಂದ ಮೇಲೆ ಆಹಾರ ಕೊಡಬೇಕು. ಆದರೆ, ಮಗುವು ಕ್ಯಾಲೊರಿಗಳ ಮತ್ತು ಪೌಷ್ಟಿಕಾಂಶಗಳ ತೀವ್ರ ಕೊರತೆಯಿಂದ ನರಳುತ್ತಿದ್ದಲ್ಲಿ, ಹಾಗೂ ಊಟ ಮಾಡಲು ನಿರಾಕರಿಸಿದ್ದಲ್ಲಿ ಅದು ಆಸ್ಪತ್ರೆಗೆ ಸೇರುವುದು ಒಳಿತಾಗುತ್ತದೆ. ಕ್ಯಾಲೊರಿಗಳ ಮತ್ತು ಆಹಾರ ದ್ರವ್ಯಗಳ ಕೊರತೆ ಇರುವ ಮಕ್ಕಳಿಗೆ ಬಹು ಬೇಗನೆ ಅಂಟುರೋಗಗಳು ತಗಲುತ್ತವೆ. ಅಶುದ್ಧ ಮತ್ತು ಅಸ್ವಚ್ಛವಾದ ಆಹಾರ, ನೀರು ಅಥವಾ ಪಾತ್ರೆಗಳಿಂದ ಜಟಿಲಗೊಳಿಸಬಹುದು. ಆದ್ದರಿಂದ ಮಕ್ಕಳಿಗೆ ನಿರ್ಮಲವಾದ ನೀರನ್ನು ಕೊಡುವುದನ್ನು ಮರೆಯಬೇಡಿ. ಅಸ್ವಸ್ಥವಾದ ಮಗುವಿಗೆ ಇತರ ಯಾವುದೇ ರೋಗದ ಸೋಂಕು ತಗುಲಿದಲ್ಲಿ ಅಥವಾ ಅತಿಭೇದಿಯಾದಲ್ಲಿ, ಕೂಡಲೇ ತಕ್ಕ ಚಿಕಿತ್ಸೆಗೆ ವ್ಯವಸ್ಥೆ ಮಾಡಿ. ಇಲ್ಲದಿದ್ದಲ್ಲಿ ಮಗುವಿನ ರೋಗ ಉಲ್ಬಣಗೊಳ್ಳಬಹುದು.

ಕ್ವಾಶಿಯೋರೆ ಕೋರೆ ಅಥವಾ ಮರಾಸ್ಮಸ್ ರೋಗಕ್ಕೆ ಗುರಿಯಾದ ಮಗುವಿಗೆ ನಾವು ಹೆಚ್ಚು ಕ್ಯಾಲೊರಿಗಳಿರುವ ಅಂದರೆ ಉಷ್ಣಜನಕ ದ್ರವ್ಯಗಳಿರುವ ಮತ್ತು ಹೆಚ್ಚು ಪ್ರೊಟೀನ್ ಅಂದರೆ ಪೌಷ್ಟಿಕ ಆಹಾರ ದ್ರವ್ಯಗಳಿರುವ ಆಹಾರವನ್ನು ಕೊಡಬೇಕು. ಧಾನ್ಯಗಳು, ಸಾವೆ–ರಾಗಿ, ಮೊದಲಾದವುಗಳು ಬೇಳಕಾಳುಗಳು ಮತ್ತು ಎಣ್ಣೆ ಬೀಜಗಳು ಮಗುವಿಗೆ ಒಳ್ಳೆಯ ಪೋಷಣೆ ನೀಡುತ್ತವೆ. ಸಾಧ್ಯವಾದಲ್ಲಿ ಮಗುವಿಗೆ ಹಾಲು ಅಥವಾ ಮೊಟ್ಟೆಗಳನ್ನು ಸಹ ನೀಡಬಹುದಾಗಿದೆ.

## ಹೈದ್ರಾಬಾದ್ ಮಿಕ್ಸ್ ಎಂದರೇನು?

ಹೈದ್ರಾಬಾದ್ ಮಿಕ್ಸ್‌ನಲ್ಲಿರುವ ಆಹಾರ ಪೋಷಣೆಗೆ ಸಂಬಂಧಪಟ್ಟ ರಾಷ್ಟ್ರೀಯ ಸಂಸ್ಥೆಯು ಹೈದ್ರಾಬಾದ್ ಮಿಕ್ಸ್ ಎಂಬ ಪೋಷಕ ಆಹಾರ ಮಿಶ್ರಣವೊಂದನ್ನು ತಯಾರಿಸಿದೆ. ಕ್ಯಾಲೊರಿ ಮತ್ತು ಪೌಷ್ಟಿಕಾಂಶಗಳ ಕೊರತೆ ಇರುವ ಮಕ್ಕಳ ಚಿಕಿತ್ಸೆಗಾಗಿ ನಾವು ಈ ಮಿಶ್ರಣವನ್ನು ಬಳಸುತ್ತೇವೆ. ಬೇಕಾದಲ್ಲಿ ನೀವೂ ಸಹ ಈ ಮಿಶ್ರಣವನ್ನು ಮನೆಯಲ್ಲೇ ತಯಾರಿಸಬಹುದು.

ಈ ಪೋಷಕ ಆಹಾರ ಮಿಶ್ರಣವನ್ನು ಗೋಧಿ, ಹುರಿಗಡಲೆ, ಶೇಂಗಾ ಮತ್ತು ಬೆಲ್ಲದಿಂದ ತಯಾರಿಸಬಹುದು. ನಿಮಗೆ ಈ ಪದಾರ್ಥಗಳು ದೊರೆಯದಿದ್ದಲ್ಲಿ, ನೀವು ನಿಮ್ಮಲ್ಲಿ ದೊರೆಯಬಹುದಾದ ಇಂತಹ ಇತರ ಪದಾರ್ಥಗಳನ್ನು ಬಳಸಿ ಈ ಮಿಶ್ರಣವನ್ನು ತಯಾರಿಸಬಹುದು.

**ಹೈದ್ರಾಬಾದ್ ಮಿಕ್ಸ್ ಅನ್ನು ತಯಾರಿಸಲು ಯಾವ ಪದಾರ್ಥಗಳು ಬೇಕು?**

ಹೈದ್ರಾಬಾದ್ ಮಿಕ್ಸ್‌ನ್ನು ತಯಾರಿಸಲು ಬೇಕಾದ ಆಹಾರ ಪದಾರ್ಥಗಳು

| | |
|---|---|
| ಗೋಧಿ (ಹುರಿದದ್ದು) | 40ಗ್ರಾಂ |
| ಹುರಿಗಡಲೆ | 16ಗ್ರಾಂ |
| ಶೇಂಗಾ | 10ಗ್ರಾಂ |
| ಬೆಲ್ಲ | 20ಗ್ರಾಂ |
| ಒಟ್ಟು | 86ಗ್ರಾಂ |
| ಕ್ಯಾಲೊರಿಗಳು | 330 |
| ಪೌಷ್ಟಿಕ ಆಹಾರ ದ್ರವ್ಯಗಳು | 11.3ಗ್ರಾಂ |

ಹೈದ್ರಾಬಾದ್ ಮಿಕ್ಸ್ ಅನ್ನು ನಾವು ಯಾರಿಗೆ ಕೊಡಬಹುದು?

ಕ್ವಾಶಿಯೋರೆ ಕೋರೆ ಮತ್ತು ಮರಾಸ್ಮಸ್ ರೋಗದಿಂದ ನರಳುತ್ತಿರುವ ಅನೇಕ ಮಕ್ಕಳಿಗೆ ನಾವು ಹೈದ್ರಾಬಾದ್ ಮಿಕ್ಸ್ ಅನ್ನು ಕೊಟ್ಟು ಚಿಕಿತ್ಸೆ ನಡೆಸಿದ್ದೇವೆ. ಉತ್ತಮ ಪರಿಣಾಮ ದೊರಕಿದೆ.

ಮಕ್ಕಳನ್ನು ಕುರುಡುತನದಿಂಥ (ಅಂಧತ್ವ)ದಿಂದ ರಕ್ಷಿಸಲು ಸಾಧ್ಯ.

ನಮ್ಮ ಆಹಾರದಲ್ಲಿ ಸಾಕಷ್ಟು ವಿಟಮಿನ್ 'ಎ' ಅನ್ನು ಪಡೆಯದ ಮಕ್ಕಳು ಕುರುಡಾಗಬಹುದು. ಇಂತಹ ಮಕ್ಕಳಲ್ಲಿ ವಿಟಮಿನ್ 'ಎ' ಕೊರತೆ ಇರುತ್ತದೆ. ಭಾರತದಲ್ಲಿನ ಸಾವಿರಾರು ಮಕ್ಕಳು ಅಂಧರಾಗಿದ್ದಾರೆ. ಅವರು ತಿನ್ನುವ ಸಾಕಷ್ಟು ವಿಟಮಿನ್ 'ಎ' ಇಲ್ಲದಿರುವುದೇ ಇದಕ್ಕೆ ಕಾರಣವಾಗಿದೆ.

**ವಿಟಮಿನ್ 'ಎ' ಕೊರತೆಯಿಂದಾಗಿ ಯಾರು ಅಂಧರಾಗುತ್ತಾರೆ?**

1ರಿಂದ 5ವರ್ಷ ವಯಸ್ಸಿನ ಮಕ್ಕಳು ವಿಟಮಿನ್ 'ಎ' ಕೊರತೆಯಿಂದಾಗಿ ಅಂಧರಾಗುವ ಸಾಧ್ಯತೆಗಳು ಹೆಚಾಗಿವೆ. ಭಾರತದ ಕೆಲವು ಪ್ರದೇಶಗಳಲ್ಲಿನ ಜನರು ಹೆಚ್ಚಾಗಿ ಅನ್ನವನ್ನೇ ಉಣ್ಣುತ್ತಾರಂತೆ. ಆದ್ದರಿಂದ ಈ ಪ್ರದೇಶದಲ್ಲಿನ ಮಕ್ಕಳಿಗೆ ಅವರು ತಿನ್ನುವ ಆಹಾರದಿಂದ ಸಾಕಷ್ಟು ವಿಟಮಿನ್ 'ಎ' ಲಭಿಸುವುದಿಲ್ಲ. ಅರ್ಥಾತ್ ಈ ಮಕ್ಕಳಲ್ಲಿ ವಿಟಮಿನ್ 'ಎ' ಕೊರತೆ ಇರಬಹುದಾಗಿದೆ.

**ಮಗುವು ವಿಟಮಿನ್ 'ಎ' ಕೊರತೆಯಿಂದಾಗಿ ಕುರುಡಾಗಿದೆ ಎಂಬುದನ್ನು ಹೇಗೆ ಹೇಳಬಹುದು?**

ಯಾವುದಾದರೂ ಮಗುವಿನಲ್ಲಿ ವಿಟಮಿನ್ 'ಎ' ಕೊರತೆಯಿದ್ದಲ್ಲಿ ಅದು ಹಠಾತ್ತನೆ ಕುರುಡಾಗುವುದಿಲ್ಲ. ಅಂತಹ ಮಗು ಕ್ರಮೇಣವಾಗಿ ಮತ್ತು ನಿಧಾನವಾಗಿ ತನ್ನ ದೃಷ್ಟಿಯನ್ನು ಕಳೆದುಕೊಳ್ಳುತ್ತದೆ. ಮಗುವಿಗೆ ವಿಟಮಿನ್ 'ಎ' ಕೊರತೆ ಇದೆ ಎಂಬುದು ನಿಮಗೆ ಮೊದಲೇ ತಿಳಿದಲ್ಲಿ ಅದನ್ನು ನೀವು ಸರಿಪಡಿಸಬಹುದು. ನೀವು ಅಂತಹ ಮಗುವಿನ ಕಣ್ಣನ್ನು ಸಂಪೂರ್ಣವಾಗಿ ರಕ್ಷಿಸಲೂಬಹುದು.

**ವಿಟಮಿನ್ 'ಎ' ಕೊರತೆಯ ಲಕ್ಷಣಗಳು:**

ಮಂದವಾದ ಬೆಳಕಿನಲ್ಲಿ ಮಗುವಿಗೆ ಕಣ್ಣು ಕಾಣದಿದ್ದಲ್ಲಿ ಅವನಿಗೆ ಇರುಳುಕಣ್ಣಾಗಿದೆ ಎಂದು ಹೇಳಬಹುದು. ಇರುಳು ಕಣ್ಣು ವಿಟಮಿನ್ 'ಎ' ಕೊರತೆಯ ಮೊದಲ ಲಕ್ಷಣವಾಗಿದೆ.

ಕಣ್ಣುಗುಡ್ಡೆಯ ಬಿಳಿಯ ಭಾಗವು ತನ್ನ ತೇವವನ್ನು ಕಳೆದುಕೊಂಡು ಮಬ್ಬಾಗಿದ್ದಲ್ಲಿ ಅದು ವಿಟಮಿನ್ 'ಎ' ಕೊರತೆಯ ಇನ್ನೂ ಒಂದು ಸೂಚನೆಯಾಗಿದೆ.

ಮಗುವಿನ ಕಣ್ಣು ಗುಡ್ಡೆಯ ಬಿಳಿಭಾಗ ಮೇಲೆ ತ್ರಿಕೋಣಾಕಾರದ ಬೂದುಬಣ್ಣದ ನೊರೆಯಿಂದ ಕೂಡಿದ ಮಚ್ಚೆಗಳು ಕಾಣಿಸಿಕೊಂಡಲ್ಲಿ ಮಗುವಿಗೆ ಬಿಟೊಟ್ಟೆ ಸ್ಪಾಟ್ (ಬೀಟೂಟ್ಸ್ ಮಚ್ಚೆಗಳು) ಬಂದಿವೆ ಎಂದು ತಿಳಿಯಬಹುದು. ಬಿಟೊಟ್ಟೆ ಸ್ಪಾಟ್ ವಿಟಮಿನ್ 'ಎ' ಕೊರತೆಯು ತೀವ್ರವಾಗಿದ್ದಲ್ಲಿ ಮಗುವಿನ ಕಣ್ಣಿನ ಕರಿಯಭಾಗಕ್ಕೂ ಸಹ ತೀವ್ರ ಹಾನಿಯುಂಟಾಗುತ್ತದೆ. ಅದರಿಂದ ಮಗುವು ಸಂಪೂರ್ಣವಾಗಿ ಕುರುಡಾಗುತ್ತದೆ. ಇಂತಹ ಅಂಧತೆಗೆ ಕರೆಟೊ ಮೂಲಾಸಿಯಾ ಅನ್ನುತ್ತಾರೆ.

## ವಿಟಮಿನ್ 'ಎ' ಕೊರತೆಯಿಂದ ಆಗುವ ಅಂಧತ್ವವನ್ನು ಹೇಗೆ ಗುಣಪಡಿಸಬಹುದು?

ವಿಟಮಿನ್ 'ಎ' ಕೊರತೆಯನ್ನು ಆಹಾರದಿಂದ ನೀಗಿಸಬಹುದಾಗಿದೆ. ಕೆಲವೊಂದು ಆಹಾರ ಪದಾರ್ಥಗಳಲ್ಲಿ 'ಎ' ವಿಟಮಿನ್ ಹೆಚ್ಚಾಗಿರುತ್ತದೆ. ನಾವು ನಮ್ಮ ಮಕ್ಕಳಿಗೆ ಈ ಆಹಾರ ಪದಾರ್ಥಗಳನ್ನು ಕೊಟ್ಟಲ್ಲಿ ನಮ್ಮ ಮಕ್ಕಳು ವಿಟಮಿನ್ 'ಎ' ಕೊರತೆಯಿಂದ ಅಂಧರಾಗುವುದು ತಪ್ಪುತ್ತದೆ.

ಹಾಲು ತುಪ್ಪ ಮೊಟ್ಟೆಗಳು ಮತ್ತು ಮೀನಿನ ಜಠರದ ಎಣ್ಣೆಯಲ್ಲಿ ವಿಟಮಿನ್ 'ಎ' ಹೆಚ್ಚಾಗಿರುತ್ತದೆ. ಆದರೆ, ಈ ಅಹಾರ ಪದಾರ್ಥಗಳು ತುಂಬಾ ದುಬಾರಿಯಾಗಿದ್ದು, ಇವುಗಳನ್ನು ಎಲ್ಲರೂ ಪಡೆಲು ಅಗ್ಗವಾದ ಇತರ ಅನೇಕ ಪದಾರ್ಥಗಳಿಂದಲೂ ನಾವು ವಿಟಮಿನ್ 'ಎ' ಪಡೆಯಬಹುದಾಗಿದೆ. ಪಾಲಕ, ಮೇಥಿ, ಅಮರಂತ, ಗಜ್ಜರಿ, ಪರಂಗಿ ಮಾವಿನ ಹಣ್ಣು ಇವು ಅಗ್ಗವಾಗಿದ್ದು ಪಲಕ, ತರಕಾರಿ ಮತ್ತು ಹಣ್ಣುಗಳು ಸಾಕಷ್ಟು ಪ್ರಮಾಣದಲ್ಲಿ ವಿಟಮಿನ್ 'ಎ' ಹೊಂದಿವೆ.

ನಮ್ಮ ದೇಶದಲ್ಲಿನ ಕೆಲವು ಜನರು ಈ ಪದಾರ್ಥಗಳನ್ನು ತಿನ್ನುವುದಿಲ್ಲ. ಅವರ ದೃಷ್ಟಿಯಲ್ಲಿ ಇವು ಹಾನಿಕಾರಕವಾಗಿವೆ. ಬಹುಶ: ಅವರಿಗೆ ಈ ಆಹಾರ ಪದಾರ್ಥಗಳ ಮಹತ್ವ ತಿಳಿದಿಲ್ಲ. ಅಥವಾ ಮೂಢ ನಂಬಿಕೆಗಳಿಗೆ ಬಲಿಯಾಗಿ ಅವರು ಇವುಗಳನ್ನು ತಿನ್ನುತ್ತಿಲ್ಲ. ಆದರೆ, ಈ ಎಲ್ಲ ಅಹಾರ ಪದಾರ್ಥಗಳು ತುಂಬ ಉತ್ತಮವಾಗಿದೆ ಎಂಬುದನ್ನು ನಾವು ಅರಿತಿದ್ದೇವೆ. ಆದ್ದರಿಂದ ಇವುಗಳನ್ನು ತಿನ್ನುವಂತೆ ನಾವು ನಮ್ಮ ಮಕ್ಕಳನ್ನು ಪ್ರೋತ್ಸಾಹಿಸಬೇಕು.

ನಮ್ಮ ಮಕ್ಕಳ ಕಣ್ಣುಗಳನ್ನು ರಕ್ಷಿಸಲು ಇನ್ನೂ ಒಂದು ಮಾರ್ಗವಿದೆ. ಬೇಕಾದಲ್ಲಿ ನಾವು ನಮ್ಮ ಮಕ್ಕಳಿಗೆ ಸಾಕಷ್ಟು ಪ್ರಮಾಣದಲ್ಲಿ ವಿಟಮಿನ್ 'ಎ' ಮಾತ್ರೆಗಳನ್ನು ನೀಡಬಹುದು. ಹೈದ್ರಾಬಾದ್ ಮಿಕ್ಸ್‌ನಲ್ಲಿರುವ ಅಹಾರ ಪೋಷಣೆಗೆ ಸಂಬಂಧಪಟ್ಟ ರಾಷ್ಟ್ರೀಯ ಸಂಸ್ಥೆಯು ಈಗಾಗಲೇ ಈ ವಿಧಾನದ ಬಗ್ಗೆ (ಮಕ್ಕಳಿಗೆ ವಿಟಮಿನ್ 'ಎ' ಮಾತ್ರೆಗಳನ್ನು ಕೊಡುವ ಬಗ್ಗೆ) ಜಾಗರೂಕತೆಯಿಂದ ಅಧ್ಯಯನ ನಡೆಸಿದೆ. ಯಾವುದೇ ಒಂದು ಮಗುವಿಗೆ 6ತಿಂಗಳಿಗೊಮ್ಮೆ 200,000 ಐ.ಯು (ಸುಮಾರು60 ಸಾವಿರ ಮೈಕ್ರೊ ಗ್ರಾಂ) ವಿಟಮಿನ್ 'ಎ' ಕೊರತೆಯಿಂದ ಸಂಪೂರ್ಣ ರಕ್ಷಣೆ ಪಡೆಯುತ್ತದೆಂಬುದನ್ನು ಈ ಸಂಸ್ಥೆಯು ಪತ್ತೆ ಹಚ್ಚಿದೆ. 1ರಿಂದ 3ವಯಸ್ಸಿನ ಮಕ್ಕಳ ವಿಷಯದಲ್ಲಂತೂ ಇದು ತೀರ ಮುಖ್ಯವಾಗಿದೆ.

ಮಕ್ಕಳಿಗೆ ಹೆಚ್ಚಿನ ಪ್ರಮಾಣದಲ್ಲಿ ವಿಟಮಿನ್ 'ಎ' ಮಾತ್ರೆಗಳನ್ನು ನೀಡುವುದರ

ಮೂಲಕ ಅವರಿಗೆ ಕುರುಡು ಬಾರದಂತೆ ನೋಡಿಕೊಳ್ಳಬಹುದಾಗಿದೆ. ಆದ್ದರಿಂದಲೇ ಭಾರತ ಸರ್ಕಾರ ಮಕ್ಕಳಲ್ಲಿನ ವಿಟಮಿನ್ 'ಎ' ಕೊರತೆಯನ್ನು ನಿವಾರಿಸಲು ಒಂದು ರಾಷ್ಟ್ರೀಯ ಕರ್ಯಕ್ರಮವನ್ನು ರೂಪಿಸಿದೆ. ಈ ಕಾರ್ಯಕ್ರಮದಲ್ಲಿಯೂ ಕೂಡ ಇದೇ ವಿಧಾನವನ್ನು ಅನುಸರಿಸಲಾಗುತ್ತಿದೆ.

## ಹೆಂಗಸರು ಅಥವಾ ಗರ್ಭಿಣಿಯರು ತಮ್ಮ ಹೊಟ್ಟೆಯಲ್ಲಿರುವ ಮಗುವಿಗೆ ವಿಟಮಿನ್ 'ಎ' ಕೊರತೆ ಉಂಟಾಗದಂತೆ ಹೇಗೆ ನೋಡಿಕೊಳ್ಳಬಹುದು?

ಗರ್ಭಿಣಿಯರು ವಿಟಮಿನ್ 'ಎ' ಕೊಹೆಚ್ಚಾಗಿರುವ ಆಹಾರ ಪದಾರ್ಥಗಳನ್ನು ಸಾಕಷ್ಟು ಪ್ರಮಾಣದಲ್ಲಿ ತಿನ್ನಬೇಕು. ಆಗ, ಆಕೆಗೆ ತನ್ನ ಗರ್ಭದಲ್ಲಿರುವ ಮಗುವಿಗೆ ವಿಟಮಿನ್ 'ಎ' ಒದಗಿಸಲು ಸಾಧ್ಯವಾಗುತ್ತದೆ. ಗರ್ಭಿಣಿಯರು ಹೆಚ್ಚಿನ ಪ್ರಮಾಣದಲ್ಲಿ ವಿಟಮಿನ್ 'ಎ' ಪದಾರ್ಥಗಳು ತಿಂದಲ್ಲಿ ಅವರ ಗರ್ಭದಲ್ಲಿರುವ ಮಗುವಿಗೂ ಸಹ ಸಾಕಷ್ಟು ವಿಟಮಿನ್ 'ಎ' ಲಭಿಸುತ್ತದೆ. ಇದರಿಂದಾಗಿ ವಿಟಮಿನ್ 'ಎ' ಕೊರತೆಯಿಂದಾಗಿ ಬರುವ ಅಂಧತ್ವವನ್ನು ಮಗುವು ಹೆಚ್ಚು ಸುರಕ್ಷಿತವಾಗಿರುತ್ತದೆ.

"ಸುಖವಾಗಿರಲು ಶುಚಿಯಾಗಿರಬೇಕು."

## ಸ್ವಚ್ಛತೆ

ಆಹಾರ ತಯಾರಿಸುವದಕ್ಕೆ ಮುಂಚೆ, ಮಗುವಿಗೆ ಆಹಾರ ನೀರುವುದಕ್ಕೆ ಮುಂಚೆ ಮೊದಲು ಕೈಗಳನ್ನು ಶುಭ್ರವಾಗಿ ತೊಳೆದಿರಬೇಕು.

ಮಗುವನ್ನು ಚೊಕ್ಕಟವಾಗಿಡಬೇಕು. ಅದರ ಪರಿಸರವನ್ನು ಶುಚಿಯಾಗಿಡಬೇಕು.

ಮಕ್ಕಳು ಆಟವಾಡುವಲ್ಲಿ ಕೆಸರು-ಕೊಳಕು, ಪದಾರ್ಥಗಳಿರದಂತೆ ನೋಡಿಕೊಳ್ಳಬೇಕು. ಇದ್ದರೆ ಮಗುವನ್ನು ಕೂಡಲೇ ತೆಗೆದು ಶುಚಿ ಮಾಡಬೇಕು.

ಮಗುವಿನ ಕೈ ಮೈಗೆ ಅಂಟಿಕೊಂಡ ಕೊಳೆ, ಕೆಸರು , ಧೂಳುಗಳನ್ನು ಆಗಿಂದಾಗ್ಗೆ ಶುಚಿಗೊಳಿಸಬೇಕು. ಸಾಬೂನು ಹಚ್ಚಿ ಕೈ ತೊಳೆಯುವ ಅಭ್ಯಾಸ ಮಾಡಿಸಬೇಕು.

"ಕೊಳಕಾದ ಮೈ ಕೈ ಕಾಯಿಲೆಯ ಬೀಗದ ಕೈ"

ಮಕ್ಕಳಿಗೆ ಬೇಕು ಪೌಷ್ಟಿಕ ಆಹಾರ.

**ಕೂಸಿಗೆ ಏನನ್ನು ಉಣಿಸಬೇಕು?**

ಮಗುವಿಗೆ ಸುಮಾರು ನಾಲ್ಕು ತಿಂಗಳು ತುಂಬಿದಾಗ, ನೀವು ಅದಕ್ಕೆ ಮೊಲೆಹಾಲಿನ ಜೊತೆಗೆ ಇತರ ಆಹಾರವನ್ನೂ ಸಹ ಕೊಡಲು ಪ್ರಾರಂಭಿಸಬೇಕು . ಮಗುವಿನ ಮೊಲೆ ಹಾಲಿನ ಜೊತೆಗೆ ಇತರ ಆಹಾರವನ್ನು ಕೊಡಲು ಆರಂಭಿಸುವುದನ್ನು ಮೊಲೆಹಾಲು ಬಿಡಿಸುವುದಕ್ಕೆ ನಾಂದಿಯಾಗಿದೆ. ಇದನ್ನೇ ವೀನಿಂಗ್ (ಮೊಲೆ ಹಾಲನ್ನು ಬಿಡಿಸುವುದು ) ಅನ್ನುತ್ತೇವೆ.

**ಮಗುವಿಗೆ ಮೊಲೆಹಾಲಿನ ಜೊತೆಗೆ ಹೆಚ್ಚುವರಿ ಆಹಾರದ ಅವಶ್ಯಕತೆಯಾದರೂ ಇದೆಯೇ?**

ತಾಯಿಯ ಮೊಲೆಹಾಲು ಪೌಷ್ಟಿಕ ಅಹಾರವಾಗಿದೆ. ತಾಯಿಯ ಮೊಲೆಹಾಲಿನಲ್ಲಿ 4ತಿಂಗಳ ಮಗುವಿಗೆ ಬೇಕಾಗುವಷ್ಟು ಪೋಷಕ ಆಹಾರ ದ್ರವ್ಯಗಳಿರುತ್ತವೆ. ಆದರೆ, 4ತಿಂಗಳು ತುಂಬಿದ ನಂತರ, ಮಗುವಿಗೆ ತಾಯಿಯ ಮೊಲೆಹಾಲಿನಿಂದಲೇ ಸಾಲದು. ಬೆಳೆಯುವ ಮಗುವಿಗೆ ಇತರ ಆಹಾರ ವಸ್ತುಗಳು ಸಹ ಬೇಕಾಗುತ್ತವೆ. ಮಗುವಿಗೆ ಅಗತ್ಯವಾದ ಹೆಚ್ಚುವರಿ ಆಹಾರವನ್ನು ಕೊಡದಿದ್ದಲ್ಲಿ ಮಗುವು ಸರಿಯಾಗಿ ಬೆಳೆಯಲಾರದು. ಒಟ್ಟಿನಲ್ಲಿ ಅದರ ಬೆಳವಣಿಗೆ ಕುಂಠಿತಗೊಳ್ಳುತ್ತದೆ.

**ಮೊಲೆಹಾಲನ್ನು ಬಿಡಿಸುವುದಕ್ಕೆ ಪೂರಕವಾಗಿ, ಮಗುವಿಗೆ ಯಾವ ಆಹಾರವನ್ನು ಕೊಡಬಹುದು?**

ಪ್ರಾರಂಭದಲ್ಲಿ ನೀವು ಮಗುವಿಗೆ ದ್ರವರೂಪದ ಅಹಾರಗಳನ್ನು ಕೊಡಬೇಕು. ಬೇಕಾದಲ್ಲಿ ನೀವು ಮಗುವಿಗೆ ಎದೆ ಹಾಲು ಆಕಳಹಾಲು, ಅಥವಾ ಬೇಯಿಸಿದ ಆಲೂಗೆಡ್ಡೆ, ಎಳೆಯ ಮತ್ತು ಬೇಯಿಸಿದ ಅವರೆಕಾಳು ಗಜ್ಜರಿ ಹಾಗೂ ಹಸಿರು ತರಕಾರಿಗಳನ್ನು ಕೊಡಬಹುದಾಗಿದೆ. ಮಗುವಿಗೆ ನೀವು ಕೊಡುವ ಹಾಲಿಗೆ ಸ್ವಲ್ಪೇ ಸ್ವಲ್ಪ ನೀರು ಬೆರೆಸಬೇಕು. ಆದರೆ ಹೆಚ್ಚಿಗೆ ನೀರು ಬೆರೆಸಲೇಬಾರದು. ಹೆಚ್ಚಿಗೆ ನೀರು ಬೆರೆಸುವುದರಿಂದ ಹಾಲಿನ ಪ್ರಮಾಣ ಕಡಿಮೆಯಾಗುತ್ತದೆ. ಹಾಲಿನ ಪ್ರಮಾಣ ಕಡಿಮೆಯಾದಲ್ಲಿ ಅದರಲ್ಲಿನ ಪೋಷಕ ದ್ರವ್ಯಗಳ ಪ್ರಮಾಣವೂ ಸಹ ಕಡಿಮೆಯಾಗುತ್ತದೆಂಬುದನ್ನು ಮರೆಯಬೇಡಿ.

**ಮಗುವು ನಂತರ ಏನನ್ನು ತಿನ್ನಬೇಕು?**

5 ಅಥವಾ 6ತಿಂಗಳು ತುಂಬಿದ ಮಗುವಿಗೆ ನೀವು ಗಂಜಿಯನ್ನು ಕೊಡಬಹುದು. ಈ ಗಂಜಿಯನ್ನು ಆಹಾರ ಧಾನ್ಯಗಳಿಂದ ಸವಾರಾಗಿ ಮುಂತಾದವುಗಳಿಂದ ತಯಾರಿಸಬಹುದು.

**ಮಗುವಿಗೆ ನೀವು ಕೊಡುವ ಅಂಬಲಿ ಅಥವಾ ಗಂಜಿಯನ್ನು ಹೆಚ್ಚು ಪುಷ್ಟೀಕರಗೊಳಿಸುವುದು ಹೇಗೆ?**

ಅಂಬಲಿ ಅಥವಾ ಗಂಜಿಯನ್ನು ತಯಾರಿಸುವಾಗ ಅದಕ್ಕೆ ಸ್ವಲ್ಪ ಬೇಳೆಕಾಳುಗಳನ್ನು ಹಾಕುವುದನ್ನು ಮರೆಯಬೇಡಿ. ಕೆಲವು ಜನರು, ಮಕ್ಕಳಿಗೆ ಬೇಳಕಾಳುಗಳನ್ನು ತಿನ್ನಿಸುವುದನ್ನು ಇಷ್ಟಪಡುವುದಿಲ್ಲ. ಈ ಜನರು ಬೇಳಕಾಳುಗಳನ್ನು ತಿನ್ನಿಸುವುದರಿಂದ ಮಗುವಿನ ಹೊಟ್ಟೆಯಲ್ಲಿ ವಾಯು ತುಂಬಿಕೊಂಡು ಹೊಟ್ಟೆ ಉಬ್ಬುತ್ತದೆಂದು ನಂಬಿದ್ದಾರೆ. ಆದರೆ, ಬೇಳಕಾಳುಗಳಿಂದಾಗಿ ಗಂಜಿ ಅಥವಾ ಅಂಬಲಿ ಹೆಚು ಪುಷ್ಟಿಕರವಾಗುತ್ತದೆಂಬುದನ್ನು ಬಹುಶ: ಇವರು ಅರಿಯರು. ಮಕ್ಕಳು ಸಾಕಷ್ಟು ಪ್ರಮಾಣದಲ್ಲಿ ಬೇಳಕಾಳುಗಳನ್ನು ತಿಂದು ಜೀರ್ಣಿಸಿಕೊಳ್ಳಬಲ್ಲರೆಂಬುದು ಮಾತ್ರ ನಿಜ.

ಮಕ್ಕಳಿಗಾಗಿ ನೀವು ತಯಾರಿಸುವ ಅಂಬಲಿಯನ್ನು ನೀವು ತೊಪ್ಪಲು ಅಥವಾ ಎಲೆ ಪಲ್ಯಯನ್ನು ಸಹ ಬೆರೆಸಬಹುದಾಗಿದೆ. ಎಲಪಲ್ಯೆಗಳಲ್ಲಿ ವಿಟಮಿನ್ 'ಎ' ಮತ್ತು 'ಸಿ' ಇರುತ್ತವಲ್ಲದೆ ಸುಣ್ಣ ಮತ್ತು ಕಬ್ಬಿಣಾಂಶಗಳೂ ಸಹ ಇರುತ್ತವೆ. ಆದ್ದರಿಂದ ಅವು ಹೆಚ್ಚು ಪುಷ್ಟಿಕರವಾದ ಈ ಆಹಾರ ದ್ರವ್ಯಗಳಿಂದ ಮಕ್ಕಳ ದೃಷ್ಟಿ ಉತ್ತಗೊಳ್ಳುತ್ತದಲ್ಲದೆ, ಅವರ ರಕ್ತ ಮತ್ತು ಎಲುಬುಗಳು ಸ್ವಸ್ಥವಾಗುತ್ತದೆ.

ಹುಗ್ಗಿ (ಖಿಚಡಿ) ಒಂದು ಪುಷ್ಟಿಕರ ಆಹಾರವಾಗಿದೆ. ಚಿಕ್ಕ ಮಕ್ಕಳು ಇದನ್ನು ಸುಲಭವಾಗಿ ಅರಗಿಸಿಕೊಳ್ಳಬಲ್ಲರು. ಆದ್ದರಿಂದ ಇಲ್ಲಿ ಹುಗ್ಗಿಯನ್ನು ತಯಾರಿಸುವ ವಿಧಾನವನ್ನು ವಿವರಿಸಲಾಗಿದೆ. ಇದು ಒಂದು ಮಗುವಿಗೆ ಒಂದು ದಿನಕ್ಕೆ ಸಾಕಾಗುವಷ್ಟು ಪ್ರಮಾಣದಲ್ಲಿ ವಿವರಿಸಲಾಗಿದೆ.

**ಹುಗ್ಗಿ (ಖಿಚಡಿ)**

ಬೇಕಾದ ಪದಾರ್ಥಗಳು

| | |
|---|---|
| ಅಕ್ಕಿ | 15ದೊಡ್ಡ ಚಮಚ (50) |
| ಹೆಸರುಬೇಳೆ (ಹುರಿದ್ದದ್ದು) | 2ದೊಡ್ಡ ಚಮಚ (25ಗ್ರಾಂ) |
| ಎಲಪಲ್ಯ (ಪಾಲಕ ಅಥವಾ ಅಮರಂತ) | 1ಕಟ್ಟು (15ಗ್ರಾಂ) |
| ಉಪ್ಪು ರುಚಿಗೆ ತಕ್ಕಷ್ಟು | |

### ಹುಗ್ಗಿ (ಖಿಚಡಿ)ಯನ್ನು ತಯಾರಿಸುವ ವಿಧಾನ

ಅಕ್ಕಿಯನ್ನು ಆರಿಸಿ ತೊಳೆದು ಹೆಸರು ಬೇಳೆಯ ಜೊತೆಗೆ ಜೇಯಿಸಿ ಪಾಲಕ ಅನ್ನು ಪ್ರತ್ಯೇಕವಾಗಿ ಬೇಯಿಸಿ, ಅನಂತರ ಅದನ್ನು ಸ್ವಚ್ಛವಾದ ಒಂದು ಬಟ್ಟೆಯಲ್ಲಿಟ್ಟು ಹಿಂಡಿ, ಅದರ ರಸ ತೆಗೆಯಿರಿ. ಪಾಲಕನ ಈ ರಸವನ್ನು ಬೆಂದ ಅಕ್ಕಿ ಮತ್ತು ಬೇಳೆಯ ಮಿಶ್ರಣದಲ್ಲಿ ಹಾಕಿ ಕಲಕಿ, ರುಚಿಗೆ ಬೇಕಾದಷ್ಟು ಉಪ್ಪು ಹಾಕಿ.

**ಈ ಎಲ್ಲ ಪದಾರ್ಥಗಳ ಮಿಶ್ರಣವನ್ನು ಚೆನ್ನಾಗಿ ಬೆರೆಸಿ ಮಗುವಿಗೆ ತಿನ್ನಿಸಿ.**

### ಮೊಲೆಯೂಡಿಸುವುದನ್ನು ಬಿಡಿಸಲು ಇಒತರ ಒಳ್ಳೆಯ ಆಹಾರಗಳು ಯಾವುವು?

ಮಕ್ಕಳು ಬಾಳೆಹಣ್ಣಿನಂತಹ ಮೃದುವಾದ ಮನತ್ತು ಪಕ್ವಾದ ಹರ್ಣಣುಗಳನ್ನು ತಿನ್ನಲು ಇಷ್ಟಪಡುತ್ತಾರೆ. ಹಣ್ಣುಗಳನ್ನು ಜಜ್ಜಿ ಅದರ ದ್ರವವೇಷ ಮಾಡಿದಲ್ಲಿ ಮಕ್ಕಳಿಗೆ ಅದೊಂದು ಒಳ್ಳೆಯ ಆಹಾರವಾಗುತ್ತದೆ. ಹಣ್ಣಿನ ದ್ರವವೇಷ ಅಥವಾ ಕಕುಟ್ಟಿ ಮೃದು ಮಾಡಲಾದ ಹಣ್ಣುಗಳು ಪುಷ್ಟಿಕರವಾಗಿವೆಯಲ್ಲದೆ, ಮಗುವು ಅದನ್ನು ಸುಲಭವಾಗಿ ಅರಗಿಸಿಕೊಳ್ಳಬಹುದಾಗೆ.

ಸಂತ್ರಾ, ವುತ್ತು ವೋಸಂಬಿಯು ಹಣ್ಣಿನ ರಸವೂ ಕೂಡ ಮೊಲೆಯೂಡಿಸುವುದನ್ನು ಬಿಡಿಸುವುದಕ್ಕೆ ಹೆಚ್ಚು ಪೂರಕವಾದ ಉತ್ತಮವಾದ ಆಹಾರವಾಗಿದೆ. ಈ ಹಣ್ಣುಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ವಿಟಮಿನ್ 'ಸಿ' ಇರುತ್ತದೆಂಬುದನ್ನು ನೆನಪಿಡಿ.

ಮಗುವಿಗೆ ಒಂದು ವರ್ಷ ತುಂಬಿದಾಗ ಅದು ಮೊಟ್ಟೆ ಮತ್ತು ಮಾಂಸವನ್ನು ಸಹ ತಿನ್ನಿಸಬಹುದಾಗಿದೆ. ಪ್ರಾರಂಭದಲ್ಲಿ ಮಗುವಿಗೆ ನೀವು ಕೊಡುವ ಮೊಟ್ಟೆಯನ್ನು ಮೃದುವಾಗಿ ಬೇಯಿಸಿ ಮಗುವಿಗೆ ಮೊಟ್ಟೆ ಮತ್ತು ಮಾಂಸವನ್ನು ತಿನ್ನಿಸುವುದು ನಿಮಗೆ ಸಾಧ್ಯವಿದ್ದಲ್ಲಿ ಅವುಗಳನ್ನು ತಿನ್ನಿಸುವುದು ಒಳ್ಳೆಯದು.

### ಮೊಲೆಹಾಲನ್ನು ಬಿಡಿಸಲು ಯೋಗ್ಯವಾದ ಮತ್ತು ಹೆಚ್ಚು ದಿನ ಸಂಗ್ರಹಿಸಿ ಇಡಬಹುದಾದ ಆಹಾರ ಪದಾರ್ಥಗಳೇನಾದರೂ ಇವೆಯೇ?

ಮೊಲೆಹಾಲನ್ನು ಬಿಡಿಸಲು ಯೋಗ್ಯವಾದ ಮತ್ತು ಅಗತ್ಯವಾದ ಆಹಾರವನ್ನು ಆಗಿಂದಾಗ್ಗೆ ಕೂಡಲೇ ತಯಾರಿಸಲು ತಾಯಂದಿರಿಗೆ ಅಷ್ಟೊಂದು ವ್ಯವಧಾನ ಅಥವಾ ಸಮಯ ಇರಲಿಕ್ಕಿಲ್ಲ. ಅಂತಹ ಸಂದರ್ಭಗಳಿಗಾಗಿ ಬೇಕಾದಲ್ಲಿ ಕೆಲವೊಂಧು ಪುಡಿಗಳನ್ನು ತಯಾರಿಸಿ ಇಟ್ಟು ಕೊಳ್ಳಬಹುದು.

ಬೇಕಾದಾಗ ಕೂಡಲೇ ಬೆರೆಸಲು ಯೋಗ್ಯವಾದ ಪುಡಿಗಳನ್ನು ತಯಾರಿಸುವುದು ಸುಲಭ. ಮೊದಲು ನಿಮಗೆ ಬೇಕಾದ ಧಾನ್ಯಗಳನ್ನು (ಗೋದಿ, ರಾಗಿ, ಸಜ್ಜೆ) ಹಾಗೂ ಕಡಲೇ ಬೇಳೆ ಇಲ್ಲವೆ ಹೆಸರು ಬೇಳಯನ್ನು ಹುರಿದು ಪ್ರತ್ಯೇಕವಾಗಿ ಹಿಟ್ಟು ಮಾಡಿ ಅನಂತರ ಹಿಟ್ಟುಗಳನ್ನು ಬೆರೆಸಿ, ಸ್ವಚ್ಛವಾದ ಟಿನ್ನಿನಲ್ಲಿ ಹಾಕಿ ಮುಚ್ಚಿಡಿ. ಈ ಹಿಟ್ಟನ್ನು ಕೆಲವು ತಿಂಗಳ ಮಟ್ಟಿಗಾದರೂ ಕೆಡದೆ ಹಾಗೆಯೇ ಇರುತ್ತದೆ. ನಿಮ್ಮ ಮಗುವಿಗೆ ಬೇಕಾದಾಗಲೆಲ್ಲಾ ನೀವು ಈ ಹಿಟ್ಟನ್ನು ಬೆರೆಸಿ ಅಂಬಲಿ ಮಾಡಬಹುದು.

ರಾಗಿನಾ, ದಿಢೀರನೇ ಬೆರೆಸಲು ಯೋಗ್ಯವಾದ ಇಂತಹ ಪುಡಿಗಳಲ್ಲಿ ಒಂದಾಗಿದೆ. ಅದನ್ನು ತಯಾರಿಸುವ ವಿಧಾನವನ್ನು ಇಲ್ಲಿ ಕೊಡಲಾಗಿದೆ. ಇದು ಒಂದು ಮಗುವಿಗೆ ಒಂದು ದಿನಕ್ಕೆ ಸಾಕಾಗುವಷ್ಟು ಪ್ರಮಾಣದಲ್ಲಿದೆ.

**ರಾಗಿನಾ**

**ಬೇಕಾದ ಪದಾರ್ಥಗಳು:**

| | |
|---|---|
| ರಾಗಿ | 4ದೊಡ್ಡ ಚಮಚ (60ಗ್ರಾಂ) |
| ಕಡಲೆ (ಹುರಿದದ್ದು | 4ಚಹಾ ಚಮಚ (20ಗ್ರಾಂ) |
| ಸಕ್ಕರೆ | 3.5ದೊಡ್ಡ ಚಮಚ (50ಗ್ರಾಂ) |

**ರಾಗಿನಾ ತಯಾರಿಸುವ ವಿಧಾನ**

ರಾಗಿ, ಕಡಲೆಬೇಳೆ ಮತ್ತು ಸಕ್ಕರೆಯನ್ನು ಪ್ರತ್ಯೇಕವಾಗಿ ಬೀಸಿ ಪುಡಿ ಮಾಡಿಟ್ಟುಕೊಳ್ಳಿ. ಈ ಪುಡಿಗಳನ್ನು ಚೆನ್ನಾಗಿ ಬೆರೆಸಿ, ನೀರನ್ನು ಹಾಕಿ ಕಲಸಿ. ಈ ಮಿಶ್ರಣವನ್ನು ಬೇಯಿಸಿ ಅಂಬಲಿ ಮಾಡಿ.

ಈ ಅಂಬಲಿಗೆ ಬೇಕಾದಲ್ಲಿ ನೀವು ಹಾಲನ್ನೂ ಸಹ ಹಾಕಬಹುದು. ಹಾಲಿನಿಂದಾಗಿ ಈ ಅಂಬಲಿ ಹೆಚ್ಚು ಪುಷ್ಟಿಕರವಾಗುತ್ತದೆ.

ರಾಗಿ ಸಿಗದಿದ್ದಲ್ಲಿ ನೀವು ಗೋಧಿ ಅಥವಾ ಸಜ್ಜೆಯನ್ನು ಬಳಸಬಹುದಾಗಿದೆ. ಕಡಲೆಬೇಳೆ ಸಿಗದಿದ್ದಲ್ಲಿ ನೀವು ಇತರ ಯಾವುದಾದರೂ ಬೇಳೆಯನ್ನು ಬಳಸಬಹುದಾಗಿದೆ.

## ಮಗುವನ್ನು ಅಂಟುರೋಗಗಳಿಂದ ರಕ್ಷಿಸುವುದು ಹೇಗೆ?

ಮಗುವಿಗೆ ಮೊಲೆ ಹಾಲು ಕೊಡುವುದನ್ನು ಬಿಡಿಸುವಾಗ ನೀವು ಕೊಡುವ ಆಹಾರವನ್ನು ತಯಾರಿಸಲು ನೀವು ನೆನಪಿಡಬೇಕಾದ ಕೆಲವೊಂದು ಸರಳ ನಿಯಮಗಳು ಇವು. ಈ ನಿಯಮಗಳನ್ನು ಅನುಸರಿಸಿದಲ್ಲಿ ಮಗುವನ್ನು ಅಂಟುರೋಗಗಳಿಂದ ರಕ್ಷಿಸುವುದು ಸುಲಭವಾಗುತ್ತದೆ.

ಮೊಲೆಯೂಡಿಸುವುದನ್ನು ಬಿಡಿಸುವುದಕ್ಕಾಗಿ ಆಹಾರವನ್ನು ತಯಾರಿಸುವ ಮುನ್ನ ನೀವು ನಿಮ್ಮ ಕೈಗಳನ್ನು ತೊಳೆದುಕೊಳ್ಳಲು ಮರೆಯಬೇಡಿ.

ಮಗುವು ಬಳಸುವ ಪಾತ್ರೆಗಳನ್ನು ಕಪ್ ಅಥವಾ ಲೋಟ ಚೆನ್ನಾಗಿ ತೊಳೆದಿಡಿ.

ಅಂಬಲಿಯನ್ನು ತಯಾರಿಸಲು ಅಥವಾ ಹಿಟ್ಟನ್ನು ಬೆರೆಸಲು ಉಪಯೋಗಿಸುವ ಪಾತ್ರೆಯನ್ನು ಸಹ ಸ್ವಚ್ಛವಾಗಿ ತೊಳೆದಿಡಿ.

ಮಗುವಿನ ಆಹಾರವನ್ನು ತಯಾರಿಸಲು ಬಳಸುವ ನೀರನ್ನು ಮೊದಲೇ ಮರಳಿಸಿ ಆರಿಸಿಟ್ಟಿರಿ.

## ಮೊಲೆಹಾಲನ್ನು ಬಿಡಿಸುವುದಕ್ಕೆ ಪೂರಕವಾದ ಇತರ ಆಹಾರ ಕೊಡಲು ಕೆಲವು ತಾಯಂದಿರು ಹಿಂಜರಿಯುತ್ತಾರೆ ಏಕೆ?

ಭಾರತದ ಗ್ರಾಮೀಣ ಪ್ರದೇಶಗಳಲ್ಲಿರುವ ಮಹಿಳೆಯರು ತಮ್ಮ ಹಸು ಗೂಸುಗಳಿಗೆ ಪೂರಕವಾದ ಆಹಾರ ಕೊಡುವುದಿಲ್ಲ. ಅವರ ವಿಚಾರದಲ್ಲಿ ಚಿಕ್ಕ ಮಕ್ಕಳು ಗಟ್ಟಿಯಾದ ಅಥವಾ ಭಾಗಶ: ಗಟ್ಟಿಯಾದ ಆಹಾರವನ್ನು ಜೀರ್ಣಿಸಿಕೊಳ್ಳಲಾರರು.

ಆದರೆ, ಇದೊಂದು ತಪ್ಪು ಕಲ್ಪನೆಯಾಗಿದೆ. ನೀವು ನಿಮ್ಮ ಮಗುವಿನ ವಿಷಯದಲ್ಲಿ ಇಲ್ಲಿ ಕೊಡಲಾಗಿರುವ ಈ ಮೂರು ಅಂಶಗಳನ್ನು ನೆನಪಿಟ್ಟಲ್ಲಿ ನಿಮ್ಮ ಮಗುವು ನೀವು ಕೊಡುವ ಆಹಾರವನ್ನು ಸುಲಭವಾಗಿ ಅರಗಿಸಿಕೊಳ್ಳುತ್ತದೆ.

ಮಗುವಿಗೆ ಸರಿಯಾದ ಆಹಾರ ಕೊಡಿ.

ಮಗುವಿಗೆ ಆಹಾರವನ್ನು ಸರಿಯಾದ ರೀತಿಯಲ್ಲಿ ತಯಾರಿಸಿ.

ಮಗುವಿಗೆ ಪ್ರತಿದಿನ ನೀವು ಆಹಾರಕ್ಕೆ ಕ್ರಮೇಣವಾಗಿ ಪೂರಕ ಆಹಾರಗಳನ್ನು ಸೇರಿಸಲು ಪ್ರಯತ್ನಿಸಿ.

## ಕಡಿಮೆ ವೆಚ್ಚ ಪೂರಕ ಪೌಷ್ಟಿಕ ಆಹಾರ

ನೀವು ಒಬ್ಬ ಸರ್ಕಾರಿ ದಾದಿ ಒಬ್ಬ ಸಮುದಾಯ ಕಾರ್ಯಕರ್ತ ಅಥವಾ ಒಬ್ಬ ಮಕ್ಕಳಿಗಾಗಿ ಪುಷ್ಟಿಕರವಾದ ಮತ್ತು ಪೂರಕವಾದ ಪದಾರ್ಥಗಳನ್ನು ಸಿದ್ಧಪಡಿಸುವವರಾಗಿದ್ದಲ್ಲಿ ಈ ಲೇಖನ ನಿಮ್ಮದೇ ಆಗಿದೆ, ನಿಮಗಾಗಿ ಸಿದ್ಧಪಡಿಸಲಾಗಿದೆ.

ಈ ಲೆಖನದಲ್ಲಿ ರುಚಿಕರವಾದ ಕೆಲವೊಂದು ಆಹಾರ ಪದಾರ್ಥ ಸುಲಭವಾಗಿ ದೊರಕುವ ವಸ್ತುಗಳನ್ನು ಬಳಸಿಕೊಂಡು ಕಡಿಮೆ ವೆಚ್ಚದ ಮತ್ತು ಪುಷ್ಟಿಕರವಾದ ಆಹಾರವನ್ನು ತಯಾರಿಸುವ ವಿಧಾನವನ್ನೂ ಸಹ ಇಲ್ಲಿ ಕೊಡಲಾಗಿದೆ. ಈ ಪೂರಕ ಆಹಾರಗಳು ಶಿಶುಗಳಿಗೆ ಮತ್ತು 5ವರ್ಷಗಳಿಗೂ ಕಡಿಮೆ ವಯಸ್ಸಿನ ಮಕ್ಕಳಿಗೆ ಯೋಗ್ಯವಾಗಿದೆ. ಈ ಪೂರಕ ಆಹಾರ ಪದಾರ್ಥಗಳನ್ನು ತಯಾರಿಸುವ ವಿಧಾನವನ್ನು ನೀವು ನಿಮ್ಮ ನೆರೆಹೊರೆಯಲ್ಲಿರುವ ಮಕ್ಕಳ ತಾಯಂದಿರಿಗೂ ಸಹ ವಿವರಿಸ ಹೇಳಬಹುದಾಗಿದೆ.

## ಪೂರಕ ಆಹಾರ ಎಂದರೇನು?

ಬಡ ಕುಟುಂಬಗಳಿಗೆ ಸೇರಿದ ಮಕ್ಕಳಿಗೆ ಅವರು ಉಣ್ಣುವ ಆಹಾರದಲ್ಲಿ ಸಾಕಷ್ಟು ಪೋಷಕ ದ್ರವ್ಯಗಳು ಇರಲಿಕ್ಕಿಲ್ಲ. ಅಥವಾ ಈ ಮಕ್ಕಳಿಗೆ ಸಾಕಷ್ಟು ಆಹಾರವೇ ದೊರೆಯಲಿಕ್ಕಿಲ್ಲ. ದೊರೆತರೂ ಸರಿಯಾದ ಮತ್ತು ಪೂರ್ಣವಾದ ಆಹಾರ ಲಭ್ಯವಾಗಲಿಕ್ಕಿಲ್ಲ. ಪೋಷಕ ಆಹಾರ ದ್ರವ್ಯಗಳಿಲ್ಲದೆ ಮಕ್ಕಳ ದೇಹ ಮತ್ತು ಮೆದುಳು ಸರಿಯಾಗಿ ಬೆಳೆಯಲಾರದು. ಆದ್ದರಿಂದ ಇಂತಹ ಮಕ್ಕಳಿಗೆ ಪೋಷಕ ಆಹಾರ ದರವ್ಯಗಳನ್ನು ಒಳಗೊಂಡ ಪೂರಕ ಆಹಾರವನ್ನು ಒದಗಿಸುವುದು ಅನಿವಾರ್ಯವಾಗಿದೆ. ಅಂದರೆ ಈ ಮಕ್ಕಳಿಗೆ ಹೆಚ್ಚಿನ ಪ್ರಮಾಣದ ಮತ್ತು ಹೆಚ್ಚು ಪುಷ್ಟಿಕರವಾದ ಆಹಾರ ಒದಗಿಸಬೇಕಾಗುತ್ತದೆ. ಆಗ ಮಾತ್ರ ಅವರ ಬೆಳವಣಿಗೆ ಸರಿಯಾಗುತ್ತದೆ.

## ಮಕ್ಕಳಿಗೆ ಘನರೂಪದ ಅಥವಾ ಗಟ್ಟಿಯಾದ ಆಹಾರವನ್ನು ಯಾವಾಗಿನಿಂಥ ಕೊಡಬೇಕು?

ಮಗುವಿಗೆ 4ತಿಂಗಳು ತುಂಬುವವರೆಗೆ ಅದಕ್ಕೆ ಗಟ್ಟಿಯಾದ ಆಹಾರದ ಅವಶ್ಯಕತೆ ಇರುವುದಿಲ್ಲ. ಅದುವರೆಗೆ ಅದಕ್ಕೆ ತಾಯಿಯ ಮೊಲೆ ಹಾಲೇ ಸಾಕು. ಆದರೆ, ಮಗುವಿಗೆ ನಾಲ್ಕು ತಿಂಗಳು ತುಂಬಿದ ನಂತರ ಅದಕ್ಕೆ ಮೊಲೆಹಾಲಿನ ಜೊತೆಗೆ ಆಹಾರ ಧಾನ್ಯಗಳು ಬೇಳಕಾಳುಗಳು, ತರಕಾರಿಗಳು, ಮೊಟ್ಟೆ, ಮಾಂಸ,

ಹಾಲು ಮತ್ತು ಹಣ್ಣುಗಳ ಅವಶ್ಯಕತೆ ತಲೆದೋರುತ್ತದೆ. ನೀವು ಈ ಆಹಾರಗಳನ್ನು ಕ್ರಮೇಣವಾಗಿ ಮಗುವಿಗೆ ತಿನ್ನಿಸಲು ಪ್ರಯತ್ನಿಸಬೇಕು. ಮಗುವು ದೊಡ್ಡದಾದಂತೆಲ್ಲಾ ಅದು ವಯಸ್ಕರು ತಿನ್ನುವ ಎಲ್ಲಾ ಪದಾರ್ಥಗಳನ್ನು ತಿನ್ನಲು ಆರಂಭಿಸುತ್ತದೆಂಬ ಮಾತು ನಿಜವಾಗಿದೆ.

**ಮಕ್ಕಳಿಗಾಗಿ ನೀವು ಎಂತಹ ಆಹಾರ ಅಥವಾ ತಿನಿಸುಗಳನ್ನು ತಯಾರಿಸಬಹುದು?**

ಮಗುವಿಗಾಗಿ ನೀವು ಮೊದಲೇ ಮಾಡಿಟ್ಟುಕೊಂಡ ಪುಡಿಗಳನ್ನು ಬಳಸಬಹುದು. ಈ ಪುಡಿಗಳನ್ನು ಒಮ್ಮೆ ಮಾಡಿಟ್ಟುಕೊಂಡಲ್ಲಿ ಅವುಗಳನ್ನು ಮತ್ತೆ ಮತ್ತೆ ಮಾಡುವ ಅಗತ್ಯವಿಲ್ಲ. ಇವುಗಳಲ್ಲದೆ ನೀವು ಮಗುವಿಗೆ ಅಂಬಲಿ ಅಥವಾ ಗಂಜಿಯನ್ನು ಮಾಡಿಕೊಳ್ಳಬಹುದು. ಉಪ್ಪಿಟ್ಟು ಇಲ್ಲವೆ ಲಾಡು ಮಾಡಿ ತಿನ್ನಿಸಬಹುದು. ಆದರೆ, ನೀವು ಇವುಗಳನ್ನು ಮಗುವಿಗೆ ತಿನ್ನಿಸಬೇಕೆಂದಾಗ ನಿಂತು ಮಾಡಬೇಕಾಗುತ್ತದೆ. ಕೆಲವೊಂದು ತಿನಿಸಿಗಳು ವಾಣಿಜ್ಯಕ ಉತ್ಪನ್ನಗಳಾಗಿದ್ದು ಇವುಗಳನ್ನು ನೀವು ಮಾಡಬಹುದು.

ಈ ತಿನಿಸುಗಳನ್ನು ತಯಾರಿಸುವ ಅತ್ಯುತ್ತಮವಾದ ಮತ್ತು ಸರಳವಾದ ವಿಧಾನ ಯಾವುದು?

ಸ್ಥಳ ಜನ್ಯ ವಸ್ತುಗಳನ್ನು ಅಥವಾ ನಿಮ್ಮ ಊರಿನಲ್ಲಿ ಸಿಗುವ ವಸ್ತುಗಳನ್ನು ಬಳಸಿ.

**ಸರಳವಾದ ಅಡಿಗೆ ವಿಧಾನವನು ಅನುಸರಿಸಿ.**

ತುಟ್ಟಿಯಾದ ಪದಾರ್ಥಗಳನ್ನು ಅಥವಾ ಹೆಚ್ಚು ಬೆಲೆಬಾಳುವ ಪಾತ್ರೆಗಳನ್ನು ಬಳಸಬೇಡಿ.

ನೀವು ತಯಾರಿಸುವ ತಿನಿಸು, ಮಗು ಮತ್ತು ಮಗುವಿನ ತಾಯಿಗೆ ಹಿಡಿಸುವಂತಿರಬೇಕು. ಅದರ ರುಚಿ ಮತ್ತು ಪ್ರಮಾಣ ಸರಿಯಾಗಿರಬೇಕು.

ನೀವು ತಯಾರಿಸುವ ತಿನಿಸು, ತಾಯಿಯ ಮೊಲೆಹಾಲಿನ ಜೊತೆಗೆ ಹೊಂದಿಕೊಂಡು, ಮಗುವಿಗೆ ಅಗತ್ಯವಾದ ಕ್ಯಾಲೊರಿಗಳನ್ನು ಪೌಷ್ಟಿಕಾಂಶಗಳನ್ನು ಮತ್ತು ಇತರ ಪೋಷಕ ದ್ರವ್ಯಗಳನ್ನು ಒದಗಿಸುವಂತಿರಬೇಕು.

ಆ ಪೂರಕ ಅಹಾರ ಪದಾರ್ಥಗಳನ್ನು ತಯಾರಿಸುವುದು ಹೇಗೆ?

ಪೂರಕ ಅಹಾರವಾಗಿ ಬಳಸಲು ಯೋಗ್ಯವಾದ ಮತ್ತು ಕಡಿಮೆ ವೆಚ್ಚದ ಹಾಗೂ ಪುಷ್ಟಿಕರವಾದ ಕೆಲವೊಂದು ತಿನಿಸುಗಳನ್ನು ಇಲ್ಲಿ ಕೊಡಲಾಗಿದೆ. ಈ ತಿನಿಸುಗಳು ಶಿಶುಗಳಿಗೆ ಮತ್ತು ಶಾಲೆಗೆ ಹೋಗುವ ವಯಸ್ಸಿಗೂ ಕಡಿಮೆ ವಯಸ್ಸಿನ ಮಕ್ಕಳಿಗೆ ಯೋಗ್ಯವಾಗಿವೆ. ಈ ತಿನಿಸುಗಳನ್ನು ನೀವು ಧಾನ್ಯಗಳು, ಬೇಳೆಕಾಳುಗಳು,ಶೇಂಗಾ ಮತ್ತು ಇತರ ಎಣ್ಣೇ ಕಾಳುಗಳನ್ನು ನಮ್ಮ ದೇಶದಲ್ಲಿ ತುಂಬ ಅಗ್ಗವಾಗಿದ್ದು ಇವು ಮಕ್ಕಳಿಗೆ ಅಗತ್ಯವಾದ ಕ್ಯಾಲೊರಿ ಮತ್ತು ಪೌಷ್ಟಿಕಾಂಶಗಳನ್ನು ಒದಗಿಸುತ್ತವೆ.

ಮೊದಲೇ ತಯಾರಿಸಿ ಇಡಬಹುದಾದ ಮಿಶ್ರಣಗಳು: ಸಜ್ಜೆಯ ಶಿಶು ಆಹಾರ ಬೇಕಾದ ಪದಾರ್ಥಗಳು.

ಸಜ್ಜೆ (ಹುರಿದದ್ದು) 60ಗ್ರಾಂ (4ದೊಡ್ಡ ಚಮಚ)

ಹೆಸರುಬೇಳೆ (ಹುರಿದದ್ದು) ಅಥವಾ ಇತರ ಯಾವುದಾದರೂ ಬೇಳೆ 15 ಗ್ರಾಂ (1ದೊಡ್ಡ ಚಮಚ)

ಶೇಂಗಾ (ಹುರಿದದ್ದು) 10ಗ್ರಾಂ

ಎಳ್ಳು (ಹುರಿದದ್ದು) 5ಗ್ರಾಂ

ಕೆನೆತೆಗೆದ ಹಾಲಿನ ಪುಡಿ 15ಗ್ರಾಂ (ಸಣ್ಣ ಚಮಚ)

**ತಯಾರಿಸುವ ವಿಧಾನ**

ಹುರಿದ ಎಲ್ಲಾ ಪದಾರ್ಥಗಳನ್ನು ಪ್ರತ್ಯೇಕವಾಗಿ ಪುಡಿ ಮಾಡಿ ಅನಂತರ ಅವುಗಳನ್ನು ಹಾಲಿನ ಪುಡಿಯ ಜೊತೆಗೆ ಬೆರೆಸಿ.

ಈ ಮಿಶ್ರಣವನ್ನು ಗಾಳಿಯಾಡದಂತಹ ಯಾವುದಾದರೂ ಒಂದು ಡಬ್ಬದಲ್ಲಿ ಮುಚ್ಚಿಡಿ.

ರಾಗಿಯ ಶಿಶು ಅಹಾರ:

ರಾಗಿ (ಹುರಿದದ್ದು) 60ಗ್ರಾಂ (4ದೊಡ್ಡ ಚಮಚ)

ಹೆಸರುಬೇಳೆ ಅಥವಾ ಇತರ ಬೇಳೆ ಯಾವುದಾದರೂ ಬೇಳೆ 5ಗ್ರಾಂ (1ದೊಡ್ಡ ಚಮಚ)

ಶೇಂಗಾ ಹುರಿದದ್ದು 10ಗ್ರಾಂ (1ಸರ್ಣಣ ಚಮಚ)

ಕೆನೆ ತೆಗೆದ ಹಾಲಿನ ಪುಡಿ 15ಗ್ರಾಂ (1ದೊಡ್ಡ ಚಮಚ)

**ತಯಾರಿಸುವ ವಿಧಾನ**

ರಾಗಿಯನ್ನು ಹಿಂದಿನ ರಾತ್ರಯೇ ನೆನಸಿಡಿ. ಮರುದಿನ ನೆನೆದ ರಾಗಿಯನ್ನು ತೆಗೆದು ಒಂದು ತಟ್ಟೆಯಲ್ಲಿ ಹಾಕಿ. ಆ ತಟ್ಟೆಯ ಮೇಲೆ ಒಂದು ಒದ್ದೆ ಬಟ್ಟೆಯನ್ನು ಹಾಕಿ ಒಂದು ದಿನದ ಮಟ್ಟಿಗೆ ಹಾಗೆಯೇ ಇಡಿ. ಇದರಿಂದಾಗಿ ರಾಗಿಯ ಕಾಳು ಮೊಳಕೆಯೊಡೆಯುತ್ತದೆ. ಮರುದಿನ ಮೊಳಕೆಯೊಡೆದ ರಾಗಿಯನ್ನು ಬಿಸಿಲಿನಲ್ಲಿಟ್ಟು ಒಣಗಿಸಿ. ಈ ರೀತಿ ಒಣಗಿದ ರಾಗಿಯನ್ನು ಮಲ್ಟ್‌ನ ವಾಸನೆ ಬರುವವರೆಗೆ ಹುರಿಯಿರಿ. ಇನ್ನು ಹುರಿದ ರಾಗಿಯನ್ನು ಮತ್ತು ಇತರ ಪದಾರ್ಥಗಳನ್ನು ಪ್ರತ್ಯೇಕವಾಗಿ ಪುಡಿ ಮಾಡಿ. ಕೆನೆ ತೆಗೆದ ಹಾಲಿನ ಪುಡಿಯಲ್ಲಿ ಹಕಿ ಬೆರೆಸಿ. ಹೀಗೆ ತಯಾರಿಸಲಾದ ಪುಡಿಯನ್ನು ಡಬ್ಬದಲ್ಲಿ ಹಾಕಿ ಮುಚ್ಚಿಡಿ. ಕೆನೆ ತೆಗೆದ ಹಾಲಿನ ಪುಡಿ ಸಿಗದಿದ್ದಲ್ಲಿ ಇತರ ಪದಾರ್ಥಗಳನ್ನು ಬೆರೆಸಿಯೂ ಸಹ ಈ ಶಿಶು ಅಹಾರವನ್ನು ತಯಾರಿಸಬಹುದಾಗಿದೆ. ಆದರೆ, ಆಗ ಮಕ್ಕಳಿಗೆ ಈ ತಿನಿಸುಗಳನ್ನು ಕೊಡುವುದಕ್ಕೂ ಮುಂಚೆ 100 ಮಿಲಿಗ್ರಾಂ ಹಾಲನ್ನು ಬೆರೆಸಬೇಕಾಗುತ್ತದೆ.

**ಸಾಜಿನಾ**

ಬೇಕಾದ ಆಹಾರ ಪದಾರ್ಥಗಳು

ಸಜ್ಜೆ (ಹುರಿದದ್ದು) 60ಗ್ರಾಂ (4ದೊಡ್ಡ ಚಮಚ)

ಹೆಸರುಬೇಳೇ(ಹುರಿದದ್ದು) 15ಗ್ರಾಂ (1ದೊಡ್ಡ ಚಮಚ)

ಸಕ್ಕರೆ 40ಗ್ರಾಂ (2.5 ದೊಡ್ಡ ಚಮಚ)

**ಗೆಹುನಾ**

**ಬೇಕಾದ ಆಹಾರ ಪದಾರ್ಥಗಳು**

ಗೋಧಿ(ಹುರಿದದ್ದು) 40ಗ್ರಾಂ (2.5ದೊಡ್ಡ ಚಮಚ)

ಹೆಸರುಬೇಳೆ(ಹುರಿದದ್ದು) 25ಗ್ರಾಂ (2.5 ಸಣ್ಣ ಚಮಚ)

ಶೇಂಗಾ (ಹುರಿದದ್ದು) 10ಗ್ರಾಂ (2ಸಣ್ಣ ಚಮಚ)

ಬೆಲ್ಲ 30ಗ್ರಾಂ (2ದೊಡ್ಡ ಚಮಚ)

### ತಯಾರಿಸುವ ವಿಧಾನ

ಈ ಎರಡು ತಿನಿಸುಗಳನ್ನು ನೀವು ಒಂದೇ ರೀತಿಯಲ್ಲಿ ತಯಾರಿಸಬಹುದು. ಈ ತಿನಿಸುಗಳಿಗೆ ಬೇಕಾದ ಎಲ್ಲಾ ಪದಾರ್ಥಗಳನ್ನು ಪ್ರತ್ಯೇಕವಾಗಿ ಹುರಿದು ಪ್ರತ್ಯೇಕವಾಗಿ ಪುಡಿ ಮಾಡಿ, ಬೆರೆಸಿ ಇಟ್ಟುಕೊಳ್ಳಿ. ಪುಡಿಗಳ ಈ ಮಿಶ್ರಣವನ್ನು ಗಾಳಿಯಾಡದ ಡಬ್ಬಗಳಲ್ಲಿ ತುಂಬಿ ಮುಚ್ಚಿಡಿ.

### ಈ ತಿನಿಸುಗಳನ್ನು ತಿನ್ನಿಸುವ ವಿಧಾನ:

ಪುಡಿ ಮಾಡಿ ಇಟ್ಟುಕೊಳ್ಳಲಾಗಿರುವ ಈ ಮಿಶ್ರಣವನ್ನು 3ದೊಡ್ಡ ಚಮಚಗಳನ್ನು ತೆಗೆದುಕೊಂಡು ಬಿಸಿನೀರಿನಲ್ಲಿ ಬೆರೆಸಿ ಚೆನ್ನಾಗಿ ಕಲಕಿ ಮಗುವಿಗೆ ಕೊಡಿ.

### ಬೇಯಿಸಿ ಮಾಡಬೇಕಾದ ತಿನಿಸುಗಳು:

### ಗೋಧಿ ಮತ್ತು ಕಡಲೆಯ ಅಂಬಲಿ:

**ಬೇಕಾದ ಪದಾರ್ಥಗಳು**

| | |
|---|---|
| ಗೋಧಿ ಹಿಟ್ಟು (ಹುರಿದದ್ದು) | 40ಗ್ರಾಂ (2.5ದೊಡ್ಡ ಚಮಚ) |
| ಕಡಲೆ (ಹುರಿದದ್ದು) | 25ಗ್ರಾಂ (1.5ದೊಡ್ಡ ಚಮಚ |
| ಶೇಂಗಾ (ಹುರಿದದ್ದು) | 10ಗ್ರಾಂ (1ಸಣ್ಣ ಚಮಚ) |
| ಸಕ್ಕರೆ ಅಥವಾ ಬೆಲ್ಲ | 40ಗ್ರಾಂ (2.5ದೊಡ್ಡ ಚಮಚ) |

ಪಾಲಕ ಅಥವಾ ಇತರ ಯಾವುದಾದರೂ ಸೊಪ್ಪು 30ಗ್ರಾಂ (1.5ದೊಡ್ಡ ಚಮಚ)

### ತಯಾರಿಸುವ ವಿಧಾನ

ಗೋಧಿಹಿಟ್ಟು, ಕಡಲೆಬೇಳೆ ಮತ್ತು ಶೇಂಗಾ ಹುರಿದು ಪ್ರತ್ಯೇಕವಾಗಿ ಪುಡಿ ಮಾಡಿ. ಆನಂತರ ಈ ಪುಡಿಗಳನ್ನು ಬೆರೆಸಿ ಬೆಲ್ಲಕ್ಕೆ ಸ್ವಲ್ಪ ಬಿಸಿನೀರು ಹಾಕಿ ಪಾಕ ಮಾಡಿ, ಈ ತೆಳುವಾದ ಪಾಕದಲ್ಲಿ ಪುಡಿಗಳನ್ನು ಹಾಕಿ ಹದ ಮಾಡಿ ಮುದ್ದೆ ತಯಾರಿಸಿ.

ಪಾಲಕ ಅನ್ನು ನೀರಿನಲ್ಲಿ ಅದು ಮೆತ್ತಗಾಗುವವರೆಗೆ ಬೇಯಿಸಿ. ಬೆಂದ ಈ ಪಾಲಕವನ್ನು ಸ್ವಚ್ಛವಾದ ಒಂದು ಬಟ್ಟೆಯಲ್ಲಿ ಹಾಕಿ ಹಿಂಡಿ. ಅದರ ರಸ ತೆಗೆಯಿತಿ, ಈ ರಸವನ್ನು ಹದವಾಡಿದ ಮುದ್ದಗೆ ಹಾಕಿ ಕೆಲವು ನಿಮಿಷ ಒಲೆಯ ಮೇಲಿಟ್ಟು ಕಲಸುತ್ತಿರಿ. ಅದು ಗಟ್ಟಿಯಾಗುವುದಕ್ಕೆ ಸ್ವಲ್ಪ ಮುಂಚೆ ಇಳಿಸಿ ಮಕ್ಕಳಿಗೆ ತಿನ್ನಲು ಕೊಡಿ.

**ರಕ್ತಹೀನತೆ ಎಂದರೇನು?**

ನಮ್ಮ ರಕ್ತ ಕೆಂಪು ಕಣಗಳನ್ನು ಒಳಗೊಂಡಿದೆ. ಇದನ್ನೇ ನಾವು ಹಿಮೋಗ್ಲೋಬಿನ್ ಅನ್ನುತ್ತೇನೆ. ನಮ್ಮ ರಕ್ತದಲ್ಲಿ ಪ್ರತಿ 100 ಮಿಲಿಲೀಟರಿನಲ್ಲಿ 13ರಿಂದ 14 ಗ್ರಾಂಗಳಷ್ಟು ಹಿಮೋಗ್ಲೋಬಿನ್ ಇರುತ್ತದೆ. ಹಿಮೋಗ್ಲೋಬಿನ್ ಈ ಪ್ರಮಾಣ 11ರಿಂದ 12ಗ್ರಾಂಗಳುಗೂ ಕಡಿಮೆಯಾದಲ್ಲಿ ಅದಕ್ಕೆ ನಾವು ರಕ್ತಹೀನತೆ ಅನ್ನುತ್ತೇವೆ.

**ರಕ್ತಹೀನತೆ ಹೇಗೆ ಉಂಟಾಗುತ್ತದೆ.**

ನಮ್ಮ ದೇಹಕ್ಕೆ ಕಬ್ಬಿಣ, ಫಾಲಿಕ್ ಆಮ್ಲ, ವಿಟಮಿನ್ 'ಬಿ' 12 ಮತ್ತು ವಿಟಮಿನ್ 'ಸಿ' ಅಂತಹ ಪೋಷಕ ದ್ರವ್ಯಗಳ ಅಗತ್ಯವಿದೆ. ಈ ಪೋಷಕ ದ್ರವ್ಯಗಳಿಂದಾಗಿಯೇ ನಮ್ಮ ರಕ್ತ ಸ್ವಸ್ಥವಾಗಿರುತ್ತದೆ. ನಮಗೆ ಅಗತ್ಯವಾದ ಈ ಪೋಷಕ ದ್ರವ್ಯಗಳನ್ನು ನಾವು ನಮ್ಮ ಆಹಾರದಿಂದ ಪಡೆಯಬಹುದಾಗಿದೆ. ನಾವು ತಿನ್ನುವ ಪದಾರ್ಥಗಳಲ್ಲಿ ನಮಗೆ ಈ ಪೌಷ್ಟಿಕಾಂಶಗಳು ದೊರೆಯದಿದ್ದಲ್ಲಿ ಅದರಲ್ಲೂ ವಿಶೇಷವಾಗಿ ಕಬ್ಬಿಣಾಂಶ ದೊರೆಯದಿದ್ದಲ್ಲಿ ಅದು ರಕ್ತಹೀನತೆಗೆ ಮಾರ್ಗವಾಗುತ್ತದೆ.

**ರಕ್ತಹೀನತೆ ಯಾರಿಗೆ ಆಗುತ್ತದೆ?**

ಭಾರತದ ಜನರಲ್ಲಿ ಅನೇಕರಿಗೆ ರಕ್ತ ಹೀನತೆ ಇದೆ. ಗರ್ಭಿಣಿಯರು ಮತ್ತು ಇನ್ನೂ ಶಾಲೆಗೆ ಹೋಗದೇ ಇರುವ ಮಕ್ಕಳಲ್ಲಿ ರಕ್ತ ಹೀನತೆ ಇರುವುದು ತೀರಾ ಹೆಚ್ಚಾಗಿದೆ. ಗರ್ಭಿಣಿಯರಿಗೆ ಮತ್ತು ಶಾಲೆಗೆ ಹೋಗದೆ ಇರುವ ಮಕ್ಕಳಿಗೆ ಚಿಕ್ಕ ಮಕ್ಕಳಿಗೆ ಕಬ್ಬಿಣಾಂಶ ಅಗತ್ಯ ಬಹಳವಾಗಿದೆ.

**ಪುರುಷರಿಗಿಂತ ಮಹಿಳೆಯರಲ್ಲಿ ರಕ್ತಹೀನತೆ ತಲೆದೋರುವುದು ತೀರಾ ಸಹಜವಾಗಿದೆ ಏಕೆ?**

ಪುರುಷರಿಗಿಂತ ಮಹಿಳೆಯರಿಗೆ ಹೆಚ್ಚಿನ ಕಬ್ಬಿಣಾಂಶ ಅಗತ್ಯವಿದೆ. ಮುಟ್ಟಿನ ಸಮಯದಲ್ಲಿ ಮಹಿಳೆಯರಿಗೆ ಹೆಚ್ಚಿನ ಪ್ರಮಾಣದಲ್ಲಿ ಕಬ್ಬಿಣಾಂಶವನ್ನು ಕಳೆದುಕೊಳ್ಳುವುದೇ ಇದಕ್ಕೆ ಕಾರಣವಾಗಿದೆ.

**ರಕ್ತಹೀನತೆ ಕಾರಣವಾದ ಸಾಧಾರಣವಾದ ಅಂಶಗಳಾವುವು?**

ನಾವು ಹಸಿರು ತರಕಾರಿಯಂತಹ ಪುಷ್ಟಿಕರವಾದ ಆಹಾರವನ್ನು ಸಾಕಷ್ಟು ಪ್ರಮಾಣದಲ್ಲಿ ತಿನ್ನದೇ ಇದ್ದಲ್ಲಿ ಅದರಿಂದ ನಮಗೆ ರಕ್ತ ಹೀನತೆ ಉಂಟಾಗಬಹುದು. ಹಸಿರು ತರಕಾರಿ ಮತ್ತು ಎಲೆ ಪಲ್ಯೆಗಳು ಅಗ್ಗವಾಗಿದ್ದು ಹೆಚ್ಚು ಪುಷ್ಟಿಕರವಾಗಿದೆ. ಆದಗ್ಯೂ ಅನೇಕ ಜನರು ಇವುಗಳನ್ನು ತಿನ್ನುವುದಿಲ್ಲ. ಬಹುಶ: ಈ ಜನರಿಗೆ ರಕ್ತ ಹೀನತೆ ಬಗ್ಗೆ ಏನೇನೂ ತಿಳಿಯದು.

ಮಲೇರಿಯಾದಂತಹ ಅಥವಾ ಕೊಕ್ಕೆ ಹುಳುವಿನಿಂದ ನಾವು ಪೀಡಿತರಾಗಿದ್ದಲ್ಲಿ ಅದರಿಂದಲೂ ಸಹ ರಕ್ತ ಹೀನತೆ ಉಂಟಾಗುತ್ತದೆ. ಇದಕ್ಕೆ ಮುಖ್ಯವಾದ ಎರಡು ಕಾರಣಗಳಿವೆ..

1. ಹೆರಿಗೆಯ ಸಮಯದಲ್ಲಿ ಬಹಳಷ್ಟು ರಕ್ತ ಹೋಗುತ್ತದೆ. ಅದರ ಜೊತೆಗೆ ಸಾಕಷ್ಟು ಪ್ರಮಾಣದಲ್ಲಿ ದೇಹದಲ್ಲಿನ ಕಬ್ಬಿಣಾಂಶವೂ ಹೋಗುತ್ತದೆ.

2. ಸಂಸಾರ ದೊಡ್ಡದಾದಂತೆಲ್ಲಾ ಬೆಳೆಯುವ ಮಕ್ಕಳಿಗೆ ಆಹಾರ ಒದಗಿಸುವಲ್ಲಿ ತಾಯಿಗೆ ಹೆಚ್ಚಿನ ಆಹಾರ ಉಳಿಯಲಿಕ್ಕಿಲ್ಲ.

**ರಕ್ತಹೀನತೆಯನ್ನು ಹೇಗೆ ಗುರುತಿಸಬಹುದು?**

ಇಲ್ಲಿ ಕೊಡಲಾಗಿರುವ ಲಕ್ಷಣಗಳಲ್ಲಿ ಯಾವುದಾದರೂ ಆಗಿದ್ದಲ್ಲಿ ಅದು ರಕ್ತಹೀನತೆಯೇ ಆಗಿರಬಹುದು.

ನೀವು ಬಹು ಬೇಗನೆ ಆಯಾಸಗೊಳ್ಳುತ್ತೀರಿ.

ಏನನ್ನೇ ಆಗಲಿ ತಿನ್ನಲು ನಿಮಗೆ ಮನಸ್ಸಾಗದು.

ನಿತ್ಯಕ್ಕಿಂತ ಸ್ವಲ್ಪ ಹೆಚ್ಚಿನ ಕೆಲಸ ಮಾಡಿದಾಗ ಉಸಿರುಗಟ್ಟುತ್ತದೆ.

ತಲೆಸುತ್ತುವುದು.

ಮುಖ ಬಿಳಿಸಿಕೊಂಡಿರುವುದು. ಮೈಮೇಲೆ ಅದರಲ್ಲೂ ವಿಶೇಷವಾಗಿ ಕೈ ಗಡ್ಡೆಗಳು ಉಗುರುಗಳು ಮತ್ತು ಮುಖದ ಸುತ್ತಲೂ ರಕ್ತ ಹೆಪ್ಪುಗಟ್ಟಿದಂತಾಗುತ್ತದೆ.

**ತೀವ್ರ ರಕ್ತಹೀನತೆಗೆ ಸಂಕೇತ ಅಥವಾ ಚಿನ್ಹೆಗಳು.**

ನಿಮ್ಮ ನಾಲಿಗೆ ಸಾಪಾಗಿ ಬಿಳಿಚಿಕೊಂಡು ಸವೆದುಹೋದಂತೆ ಕಾಣತೊಡಗುತ್ತದೆ. ಕಣ್ಣಿನ ಪೆರೆಯ ಲೋಳೆ ಪದಾರ್ಥ ವರ್ಣಹೀನವಾಗುತ್ತದೆ.

ಅಥವಾ 'ಬಿ' ಕಾಂಪ್ಲೆಕ್ಸ್ ಕೊರತೆಯಿಂದಾಗಿ ಉಂಟಾಗುವ ರೋಗವೆಂದೂ ಭ್ರಾಂತಿ ಪಡಬಾರದು.

ನಿಮ್ಮಲ್ಲಿ ಈ ಚಿನ್ಹೆಗಳು ಅಥವಾ ಸಂಕೇತಗಳು ಕಂಡು ಬಂದಲ್ಲಿ ನಿಮಗೆ ರಕ್ತಹೀನತೆ ತಲೆದೋರಿದೆ ಎಂಬುದು ಖಚಿತವೇ ಸರಿ.

ನಿಮ್ಮ ಬೆಟ್ಟುಗಳು, ಉಗುರುಗಳು ಚಮಚದ ಆಕಾರ ತಳೆಯುತ್ತವೆ. ಮೊದಲು ಉಗುರುಗಳು ಒಣಗಿದಂತಾಗಿ ಬಿರುಸಾಗುತ್ತವೆ. ಅನಂತರ ಅವು ಚಮಚದ ಆಕಾರ ತಳೆಯುತ್ತವೆ. ನಾವು ಇದನ್ನೇ ಕೊಯಿಲೊನ್ವಿಶಿಯಾ ಅನ್ನುತ್ತೇವೆ.

**ರಕ್ತಹೀನತೆಯಿಂದ ನಮ್ಮನ್ನು ನಾವು ರಕ್ಷಿಸಿಕೊಳ್ಳುವುದು ಹೇಗೆ?**

ರಕ್ತಹೀನತೆಯನ್ನು ತಡೆಗಟ್ಟಲು ನಾವು ಕಬ್ಬಿಣಾಂಶವುಳ್ಳ ಆಹಾರ ಪದಾರ್ಥಗಳನ್ನು ಆದಷ್ಟು ಹೆಚ್ಚಿಗೆ ತಿನ್ನಬೇಕು. ಇಡಿಯಾದ ಅಹಾರ ಧಾನ್ಯಗಳು ಬೇಳೆಕಾಳುಗಳು, ಮೊಸರು, ಹಸಿರು ತರಕಾರಿ ಮತ್ತು ಎಲೆಪಲ್ಯಗಳು ದರಾಕ್ಷಿ, ಅಂಜೀರ ಮುಂತಾದ ಹಣ್ಣುಗಳು, ಮಾಂಸ ಮೊಟ್ಟೆ ಹಾಗೂ ಯಕೃತ್ತು ಇವುಗಳಲ್ಲಿ ಕಬ್ಬಿಣಾಂಶವಿರುತ್ತದೆ.

ಎಲೆಪಲ್ಯೆ ಮತ್ತು ಇತರ ತರಕಾರಿಯಲ್ಲಿ ಸಾಕಷ್ಟು ಕಬ್ಬಿಣಾಂಶವಿರುತ್ತದಲ್ಲದೆ ಅವು ತುಂಬ ಅಗ್ಗವಾಗಿದೆ. ಆದ್ದರಿಂದ ನಾವು ಈ ತರಕಾರಿಗಳನ್ನು ಎಲೆಪಲ್ಯಗಳನ್ನು ಆದಷ್ಟು ಜಾಸ್ತಿ ತಿನ್ನಬೇಕು. ಹಸಿರು ತರಕಾರಿಗಳಿಂದ ನಾವು ವಿಟಮಿನ್ 'ಸಿ'ಯನ್ನು ಸಹ ಪಡೆಯುತ್ತೇವೆ. ವಿಟಮಿನ್ 'ಸಿ' ಕಬ್ಬಿಣಾಂಶವನ್ನು ಮೈಗೂಡಿಸಿಕೊಳ್ಳುವಲ್ಲಿ ನಮಗೆ ನೆರವಾಗುತ್ತದೆ.

ಕಬ್ಬಿಣದ ಬಾಣಲೆ ಅಥವಾ ಪಾತ್ರೆಯಲ್ಲಿ (ಸ್ಟೈನ್‌ಲೆಸ್ ಸ್ಟೀಲ್ ಅಲ್ಲ) ನಾವು ನಮ್ಮ ಆಹಾರವನ್ನು ಬೇಯಿಸಿದಲ್ಲಿ ಕಬ್ಬಿಣದ ಪಾತ್ರೆಯಿಂದ ಅಹಾರದಲ್ಲಿ ಕಬ್ಬಿಣಾಂಶ ಬೆರೆತುಹೋಗುತ್ತದೆ. ಉದಾಹರಣೆಯಾಗಿ ಕಬ್ಬಿನ ಹಾಲನ್ನು ಕಬ್ಬಿಣದ ಬಾಣಲೆಗೆ ಹಾಕಿ ಬೇಯಿಸಿ ನಾವು ಬೆಲ್ಲ ತಯಾರಿಸುತ್ತೇವೆ. ಈ ರೀತಿ ತಯಾರಿಸಿದ ಬೆಲ್ಲದಲ್ಲಿ ಕಬ್ಬಿಣಾಂಶ ಹೆಚ್ಚಾಗುತ್ತದೆ.

ನಿಮಗೆ ರಕ್ತ ಹೀನತೆಯಾದಲ್ಲಿ ಏನು ಮಾಡಬೇಕು?

ನಿಮಗೆ ತೀವ್ರ ಹೀನತೆಯಾದಲ್ಲಿ ಆದಷ್ಟು ಹೆಚ್ಚಿನ ಪ್ರಮಾಣದಲ್ಲಿ ನೀವು ಕಬ್ಬಿಣಾಂಶವುಳ್ಳ ಆಹಾರ ಪದಾರ್ಥಗಳನ್ನು ತಿನ್ನಬೇಕು. ಅಗತ್ಯವಾದಲ್ಲಿ ಮತ್ತೊಬ್ಬರ ರಕ್ತನಾಳದಿಂದ ರಕ್ತಪಡೆಯಬೇಕು. ನೀವು ಗರ್ಭವತಿಯರಾಗಿದ್ದಲ್ಲಿ ನೀವು ನಿಮ್ಮ

ರಕ್ತ ಪರೀಕ್ಷೆ ಮಾಡಿಸಿಕೊಳ್ಳಬೇಕು. ರಕ್ತಹೀನತೆ ಇರದೆ ಇದ್ದಾಗ್ಯೂ ಕೂಡ ಹೆರಿಗೆಗೆ ಸುಮಾರು 100 ದಿನಗಳಾಗಿರುವುದರಿಂದ ನೀವು ಪ್ರತಿದಿನ ಕಬ್ಬಿಣಾಂಶವುಳ್ಳ ಮಾತ್ರೆಗಳನ್ನು ತೆಗೆದುಕೊಳ್ಳಬೇಕು.

**ರಕ್ತ ಹೀನತೆಗೂ ಗರ್ಭಾವಸ್ಥೆಗೂ ಏನು ಸಂಬಂಧ?**

ಭಾರತದಲ್ಲಿನ ಮಹಿಳೆಯರಲ್ಲಿ ಗರ್ಭವತಿಯರಲ್ಲಿ ಶೇಕಡ 50ರಷ್ಟು ಮಹಿಳೆಯರು ರಕ್ತ ಹೀನತೆಯಿಂದ ನರಳುತ್ತಾರೆ. ಗರ್ಭವತಿಯರಲ್ಲಿ ರಕ್ತಹೀನತೆ ಉಂಟಾದಲ್ಲಿ ಅವರಿಗೆ ಎದೆನೋವು ಅಥವಾ ಹೃದಯಾಘಾತವಾಗಲೂಬಹುದು. ರಕ್ತಹೀನತೆಯಿಂದಾಗಿ ಹೆರಿಗೆ ಸಮಯದಲ್ಲಿ ಸಾಯಲೂಬಹುದು. ಗರ್ಭವತಿ ಸ್ತ್ರೀಯು ರಕ್ತಹೀನಳಾಗಿದ್ದಲ್ಲಿ ಅವಳಿಗೆ ಹುಟ್ಟುವ ಮಗುವಿನ ತೂಕ ಕಡಿಮೆಯಾಗುತ್ತದೆ. ನಿಗದಿತ ಸಮಯಕ್ಕಿಂತ ಮೊದಲೇ ಹೆರಿಗೆ ಆಗಬಹುದು. ಅಥವಾ ಮಗುವು ಸಾಯಲೂಬಹುದು.

ನೀವು ಗರ್ಭವತಿಯಾಗಿದ್ದಲ್ಲಿ ನೀವು ನಿಯಮಿತವಾಗಿ ಕಬ್ಬಿಣಾಂಶವುಳ್ಳ ಮತ್ತು ಪಾಲಿಕ್ ಆಮ್ಲವುಳ್ಳ ಮಾತ್ರೆಗಳನ್ನು ತೆಗೆದುಕೊಳ್ಳಬೇಕು. ನೀವು ಈ ಮಾತ್ರೆಗಳನ್ನು ಪ್ರಾಥಮಿಕ ಆರೋಗ್ಯ ಕೇಂದ್ರದಿಂದ ಉಚಿತವಾಗಿ ಪಡೆದುಕೊಳ್ಳಬಹುದು.

**ಗರ್ಭಿಣಿಯರು ತಮ್ಮ ಗರ್ಭ ಧರಿಸಿರುವ ಮಗುವಿಗೆ ಸಾಕಷ್ಟು ಕಬ್ಬಿಣಾಂಶ ದೊರೆಯುತ್ತದೆಂಬುದನ್ನು ಹೇಗೆ ಖಚಿತಪಡಿಸಿಕೊಳ್ಳಬೇಕು.**

ಗರ್ಭವತಿಯರು ಹೆರಿಗೆಗೆ ಮುಂಚಿನ 3ತಿಂಗಳು ಅಂದರೆ ಆರರಿಂದ ಒಂಬತ್ತು ತಿಂಗಳ ಅವಧಿಯಲ್ಲಿ ಸಾಧ್ಯವಾದಷ್ಟು ಹೆಚ್ಚಿನ ಪ್ರಮಾಣದಲ್ಲಿ ಕಬ್ಬಿಣಾಂಶಗಳನ್ನು ತೆಗೆದುಕೊಂಡಲ್ಲಿ ಆಕೆಯ ಗರ್ಭದಲ್ಲಿರುವ ಮಗುವಿಗೂ ಸಹ ಅದು ಲಭ್ಯವಾಗುತ್ತದೆ. ಆಗ ಆ ಮಗುವು ಬಲಿಷ್ಟವಾಗಿ ಹೆಚ್ಚು ಆರೋಗ್ಯವಾಗಿರುತ್ತದೆ. ಗರ್ಭದಲ್ಲಿರುವ ಮಗುವಿಗೆ ಕಬ್ಬಿಣಾಂಶ ಅಗತ್ಯ ಹೆಚ್ಚಾಗಿದೆ. ಗರ್ಭದಲ್ಲಿರುವ ಮಗುವು ತನ್ನಲ್ಲಿ ಕಬ್ಬಿಣಾಂಶವನ್ನು ಸಂಗ್ರಹಿಸಿ ಇಟ್ಟುಕೊಳ್ಳುವ ಸಾಮರ್ಥ್ಯ ಹೊಂದಿರುತ್ತದೆ. ಗರ್ಭದಿಂದ ಹೊರಬರುವ ಮಗು ಹಾಲನ್ನು ಬಿಟ್ಟು ಇನ್ನೇನನ್ನು ತೆಗೆದುಕೊಳ್ಳಬಾರದು. ಆದರೆ ತಾಯಿಯ ಮೊಲೆಹಾಲಿನಲ್ಲಿ ಮಗುವು ಇತರ ಯಾವುದೇ ಹಾಲಿನಲ್ಲಿ ಬೆಳೆಯುವ ಕೂಸಿಗೆ ಬೇಕಾದಷ್ಟು ಕಬ್ಬಿಣಾಂಶ ಇರುವುದಿಲ್ಲ. ಆದ್ದರಿಂದ ಹುಟ್ಟುವ ಮಗುವಿನ ದೇಹದಲ್ಲಿ ಸಾಕಷ್ಟು ಕಬ್ಬಿಣಾಂಶ ಇರುವುದು ತೀರ ಅಗತ್ಯ.

ರಕ್ತಹೀನತೆಯನ್ನು ನಿವಾರಿಸಲು ಸರ್ಕಾರ ಏನು ಮಾಡುತ್ತಿದೆ?

ಭರತದಲ್ಲಿ ರಕ್ತ ಹೀನತೆಯು ಒಂದು ದೊಡ್ಡ ಸಮಸ್ಯೆಯಾಗಿದೆ. ರಕ್ತ ಹೀನತೆಯನ್ನು ತಡೆಗಟ್ಟಲು ಸರ್ಕಾರ ಈಗ ಒಂದು ರಾಷ್ಟ್ರೀಯ ಕಾರ್ಯಕ್ರಮವನ್ನೂ ಸಹ ಜಾರಿಗೆ ತಂದಿದೆ. ಗರ್ಭವತಿಯರಿಗೆ ಮತ್ತು ಶಾಲೆಗೆ ಹೋಗುವ ವಯಸ್ಸಿಗೂ ಕಡಿಮೆ ವಯಸ್ಸಿನ ಮಕ್ಕಳಿಗೆ ಬೇಕಾದ ಕಬ್ಬಿಣಾಂಶ ಮತ್ತು ಪಾಲಿಕ್ ಆಮ್ಲದ ಮಾತ್ರೆಗಳನ್ನು ಪ್ರಾಥಮಿಕ ಆರೋಗ್ಯ ಕೇಂದ್ರಗಳ ಮೂಲಕ ಉಚಿತವಾಗಿ ಒದಗಿಸಲಾಗುತ್ತಿದೆ. ಗರ್ಭವತಿಯರು ಪ್ರತಿದಿನ 50 ಮಿಲಿಗ್ರಾಂಗಳಷ್ಟು ಅಸಂಯುಕ್ತವಾದ ಕಬ್ಬಿಣಾಂಶ ಮತ್ತು 50 ಮೈಕ್ರೊ ಗ್ರಾಂಗಳಷ್ಟು ಪಾಲಿಕ್ ಆಮ್ಲದ ಮಾತ್ರೆಗಳನ್ನು ತೆಗೆದುಕೊಳ್ಳಬೇಕು. ಶಾಲೆಗೆ ಹೋಗು ವಯಸ್ಸಾದ ಮಕ್ಕಳಿಗೆ ಇದಕ್ಕೂ ಕಡಿಮೆ ಪ್ರಮಾಣದ ಮಾತ್ರೆಗಳನ್ನು ಕೊಡಬಹುದು.

**ಮಗುವಿಗೆ ಮೊಲೆ ಹಾಲು ಉತ್ತಮ ನೈಜ ಅಹಾರ.**

ಮೊಲೆಹಾಲು ಸ್ವಚ್ಚವಾಗಿರುತ್ತದೆ. ಮಗುವನ್ನು ಕಾಯಿಲೆಗಳಿಂದ ರಕ್ಷಿಸುತ್ತದೆ. ತಾಯಿಯ ಮೊಲೆಹಾಲು ಸದಾ ದೊರೆಯುತ್ತಿರುತ್ತದೆ.

ಸಾಂಕ್ರಾಮಿಕ ರೋಗಗಳಿಂದ ಮಗುವನ್ನು ಸಂರಕ್ಷಿಸುವ ರೋಗ ನಿರೋಧಕ ಶಕ್ತಿ ನೀಡುವ ಸ್ತನವೇ ಮಗುವಿಗೆ ಬಹಳ ಒಳ್ಳೆಯದು. ಹುಟ್ಟಿದ 3–4ಗಂಟೆಗಳಲ್ಲಿಯೇ ಎದೆ ಹಾಲು ಕೊಡಲು ಪ್ರಾರಂಭಿಸಬೇಕೆಂದು ತಿಳಿವಳಿಕೆ ನೀಡಬೇಕು.

2–3 ವರ್ಷದ ತನಕ ಮಗುವಿಗೆ ತಾಯಿ ಹಾಲು ಕುಡಿಸಬಹುದು. ಆದರೆ ಐದಾರು ತಿಂಗಳ ವಯಸ್ಸಿನ ನಂತರ ಮಗುವಿಗೆ ಅದು ಸಾಲುವುದಿಲ್ಲ. ಆದ್ದರಿಂದ ಇತರ ಆಹಾರ ಪದಾರ್ಥಗಳ ಮೇಲಹಾರವನ್ನು 4–5ತಿಂಗಳಿನಿಂದಲೇ ಮಕ್ಕಳಿಗೆ ಕೊಡಲು ಪ್ರಾರಂಭಿಸಬೇಕು.

ಮಗುವಿಗೆ ಹಾಲೂಡಿಸುವ ತಾಯಿ ಸಾಮಾನ್ಯವಾಗಿ ತಿನ್ನುವುದಕ್ಕಿಂತ ಅಹಾರ ಕೊಡುವುದನ್ನು ಮುಂದುವರಿಸಿ ಸರಳವಾದ, ಮೃದುವಾದ, ಸುಲಭವಾದ, ಜೀರ್ಣವಾಗುವಂತಹ ಅಹಾರವನ್ನು ಮಾತ್ರ ಕೊಡಬೇಕು. ಮೇಲಿಂದ ಮೇಲೆ ಸ್ವಲ್ಪ ಸ್ವಲ್ಪವಾಗಿ ತಿನ್ನಿಸುವುದು ಒಳ್ಳೆಯದು. ಅನಾರೋಗ್ಯದಿಂದಿರುವ ಮಗುವಿಗೆ ಆಹಾರ ನೀಡುವಾಗ ಹೆಚ್ಚಿನ ತಾಳ್ಮೆ ಮತ್ತು ಸಂಯಮ ಮತ್ತು ಜಾಗರೂಕತೆ ಅವಶ್ಯ.

**ಮಗುವಿಗೆ ತಾಯಿಯ ಮೊಲೆಹಾಲು ಅಮೃತಸಮಾನ ಹೌದೆ?**

**ತಾಯಂದಿರು ಎಷ್ಟು ಹಾಲನ್ನು ಉತ್ಪಾದಿಸಬಲ್ಲರು?**

ಮಗುವನ್ನು ಹೆತ್ತ ತಾಯಿಯೊಬ್ಬಳು ಉತ್ಪಾದಿಸುವ ಮೊಲೆಹಾಲು ಮಗುವಿನ ನಿಸರ್ಗದತ್ತವಾದ ಆಹಾರವಾಗಿದೆ. ಭಾರತದ ಹಳ್ಳಿ ಹೆಂಗಸರು ಹೆರಿಗೆಯಾದ ಮೊದಲ 6ತಿಂಗಳು ದಿನಕ್ಕೆ ಸುಮಾರು 600 ಮಿ.ಲಿ. ಮೊಲೆಹಾಲನ್ನು ಉತ್ಪಾದಿಸುತ್ತಾರೆ. ಇದು 4ಲೋಟ ಹಾಲಿಗೆ ಸಮನಾಗಿದೆ.

ಮಗುವು ಬೆಳೆದು ದೊಡ್ಡವನಾದಂತೆಲ್ಲ ತಾಯಿಯು ಉತ್ಪಾದಿಸುವ ಮೊಲೆಹಾಲಿನ ಪ್ರಮಾಣ ಕಡಿಮೆಯಾಗುತ್ತದೆ.

| ಮಗುವಿನ ವಯಸ್ಸು | ದಿನಕ್ಕೆ ಉತ್ಪಾದಿಸುವ ಮೊಲೆ ಹಾಲಿನ ಪ್ರಮಾಣ : |
|---|---|
| 6–12 | 600ಮಿ.ಲಿ ಅಥವಾ 20ಔನ್ಸ್‌ಗಳು |
| 1–2 ವರ್ಷ | 450 ಮಿ.ಲಿ ಅಥವಾ 15ಔನ್ಸ್‌ಗಳು |
| 2–3ವರ್ಷ | 425 ಮಿ.ಲಿ. ಅಥವಾ 14ಔನ್ಸ್‌ಗಳು |

## ಮೊಲೆಯೂಡಿಸುವುದರಿಂದ ಮಗುವಿಗೆ ಆಗುವ ಪ್ರಯೋಜನಗಳಾವುವು?

ಆಕಳು, ಎಮ್ಮೆಯ ಹಾಲಿಗಿಂತ ತಾಯಿಯ ಮೊಲೆ ಹಾಲು ಹೆಚ್ಚು ಪುಷ್ಟಿಕರವಾಗಿದೆ. ಇದು ಮಗುವಿನ ಅತ್ಯಂತ ಹಿತಕರವಾದ ಮತ್ತು ಮಿತವ್ಯಯಕಾರಿಯಾದ ಆಹಾರವಾಗಿದೆ. ಮೊಲೆಹಾಲಿಗಾಗಿ ನಾವು ಯಾವುದೇ ಶ್ರಮಪಡಬೇಕಾಗಿಲ್ಲ. ತಾಯಿಯ ಮೊಲೆಹಾಲು ಯಾವಾಗಲೂ ಸ್ವಚ್ಛವಾಗಿರುತ್ತದೆ ನಿರ್ಮಲವಾಗಿರುತ್ತದೆ.

## ಮೊಲೆಯೂಡಿಸುವ ಬಗ್ಗೆ ಇರುವ ಮೂಢ ನಂಬಿಕೆಗಳು:

ಹೆರಿಗೆಯಾದ ಮೊದಲ ಎರಡು ದಿನಗಳಲ್ಲಿ ತಾಯಿಯ ಮೊಲೆಯಿಂದ ಹಳದಿ ಬಣ್ಣದ ದ್ರವವೊಂದು ಹರಿದು ಬರುತ್ತದೆ. ಇದನ್ನೇ ನಾವು ಕೊಲೆಸ್ಟ್ರಂ ಅನ್ನುತ್ತೇವೆ. ಹಳದಿ ಬಣ್ಣದ ಈ ದ್ರವ (ಕೊಲೆಸ್ಟ್ರಂ) ಮಗುವಿನ ಆರೋಗ್ರಕ್ಕೆ ಒಳ್ಳೆಯದಲ್ಲವೆಂಬುದು ಅನೇಕ ಮಹಿಳೆಯರ ಅಭಿಪ್ರಾಯವಾಗಿದೆ. ಆದ್ದರಿಂದ ಅವರು ಮಗುವಿಗೆ ಈ ಹಾಲನ್ನು ಊಡಿಸುವುದರ ಬದಲು ಚೆಲ್ಲಿ ಬಿಡುತ್ತಾರೆ.

ವಾಸ್ತವವಾಗಿ ಹಳದಿ ಬಣ್ಣದ ಈ ದ್ರವ (ಕೊಲೆಸ್ಟ್ರಂ) ಮಗುವಿನ ಆರೋಗ್ಯಕ್ಕೆ ಅತ್ಯುತ್ತಮವಾಗಿದೆ. ಇದರಲ್ಲಿ ಅನೇಕ ಪೋಷಕ ದ್ರವ್ಯಗಳಿರುತ್ತವೆಯಲ್ಲದೆ ವಿಟಮಿನ್ 'ಎ' ಕೂಡ ಇದರಲ್ಲಿ ವಿಪುಲವಾಗಿರುತ್ತದೆ. ಹಳದಿ ಬಣ್ಣದ ಈ ದ್ರವ್ಯ (ಕೊಲೆಸ್ಟ್ರಂ) ಮಗುವನ್ನು ರೋಗರುಜಿನಗಳಿಂದ ಸಂರಕ್ಷಿಸುತ್ತದೆ. ಆದ್ದರಿಂದ ಮಕ್ಕಳ ತಾಯಂದಿರು ತಮ್ಮ ಕಂದಮ್ಮಗಳಿಗೆ ಇದನ್ನು ಊಡಿಸುವುದು ಅಗತ್ಯ.

ಕೆಲವು ಆಹಾರ ಪದಾರ್ಥಗಳನ್ನು ತಿಂದಲ್ಲಿ ತಾವು ಹೆಚ್ಚಿನ ಉತ್ಪಾದಿಸಬಹುದೆಂದು ಅನೇಕ ಮಹಿಳೆಯರು ನಂಬಿದ್ದಾರೆ. ಈ ಆಹಾರ ಪದಾರ್ಥಗಳಿಗೆ ನಾವು ಕ್ಷೀರ ಸ್ರಾವಕಗಳು (ಗೆಲ್ಯಾಕ್ಟೊಗೋಗ್ಸ್) ಎನ್ನುತ್ತೇವೆ. ಬೆಳ್ಳುಳ್ಳಿ, ಮೇಕೆಯ ಮಾಂಸ, ಪಾಲಕ ಖಸಕಸ, ಗೋಂದು, ಮಿಠಾಯಿ, (ಅಂಟಿನುಂಡೆ) ಮತ್ತು ಜೀರಾ ಈ ಕ್ಷೀರಸ್ರಾವಕ ವಸ್ತುಗಳಲ್ಲಿ ಸೇರಿವೆ. ಈ ಆಹಾರ ಪದಾರ್ಥಗಳು ಮಹಿಳೆಯರಿಗೆ ಯಾವ ಹಾನಿಯನ್ನೂ ಉಂಡು ಮಾಡುವುದಿಲ್ಲ. ಆದರೆ, ಈ ಪದಾರ್ಥಗಳಿಂದ ಮೊಲೆಹಾಲಿನ ಉತ್ಪಾದನೆ ಹೆಚ್ಚುವುದೆಂದು ಮಾತ್ರ ಹೇಳಲಾಗದು.

**ಮಗುವಿಗೆ ಯಾವ ರೀತಿ ಮೊಲೆಯೂಡಿಸಬೇಕು.**

ತಾಯಂದಿರು ಮಗುವಿಗೆ ಮೊಲೆಯೂಡಿಸುವುದಕ್ಕೂ ಮೊದಲು ತಮ್ಮ ಕೈಗಳನ್ನು ಮತ್ತು ಸ್ತನಗಳನ್ನು ತೊಳೆದುಕೊಳ್ಳಬೇಕು. ಆ ನಂತರ ನಿರಾತಂಕವಾಗಿ ಕುಳಿತುಕೊಂಡು ನಿಧಾನವಾಗಿ ಮಗುವಿಗೆ ಮೊಲೆಯೂಡಿಸಬೇಕು. ಪ್ರತಿ ಐದು ನಿಮಿಷಕ್ಕೊಮ್ಮೆ ಮಗುವನ್ನು ಒಂದು ಸ್ತನದಿಂಧ ಬಿಡಿಸಿ, ಮತ್ತೊಂದು ಸ್ತನ ಕೊಡಬೇಕು. ಹೀಗೆ ಮೊಲೆಯೂಡಿಸಿದ ನಂತರ ಮಗುವಿನ ಮೈದಡವಿ ತೇಗು ಬರುವಂತೆ ಮಾಡಬೇಕು.

**ಮಗುವಿಗೆ ತಾಯಿಯ ಮೊಲೆ ಹಾಲಿನ ಜೊತೆಗೆ ಇತರ ಆಹಾರದ ಅವಶ್ಯಕತೆ ಯಾವಾಗ ತಲೆದೋರುತ್ತದೆ?**

ಮಗುವಿಗೆ ನಾಲ್ಕು ತಿಂಗಳ ನಂತರ ಮೊಲೆಹಾಲಿನ ಜೊತೆಗೆ ಇತರ ಆಹಾರದ ಅವಶ್ಯಕತೆ ತಲೆದೋರುತ್ತದೆ. ನಾಲ್ಕು ತಿಂಘಳ ಮಗುವಿಗೆ ಮೊಲೆಹಾಲಿನ ಜೊತೆಗೆ ದ್ರವರೂಪದ ಮತ್ತು ಭಾಗಶ: ದ್ರವರೂಪದ ಪೂರಕ ಆಹಾರವನ್ನು ಕೊಡಬೇಕು. ಈ ವಯಸ್ಸಿನ ಮಕ್ಕಳಿಗೆ ನೀವು ಹಣ್ಣಿನ ರಸ, ಬೆಂದ ಧಾನ್ಯಗಳು, ಬೇಯಿಸಿದ ತರಕಾರಿ ಅಥವಾ ಸೊಪ್ಪು ಮತ್ತು ಮೊಟ್ಟೆ ಕೊಡಬಹುದು.

ಮಗುವಿಗೆ 6ತಿಂಘಳು ತುಂಬಿದ ನಂತರ ಯಾವ ಆಹಾರ ಕೊಡಬೇಕು ಅಥವಾ ಏನನ್ನು ತಿನ್ನಿಸಬೇಕು?

ಹೆರಿಗೆಯಾದ 6ತಿಂಗಳ ನಂತರ ತಾಯಿಯು ಉತ್ಪಾದಿಸುವ ಹಾಲಿನ ಪ್ರಮಾಣ ಕಡಿಮೆಯಾಗುತ್ತದೆ. ಅದೇ ಸಮಯದಲ್ಲಿ ಮಗುವಿನ ಬೆಳವಣಿಗೆ ತೀವ್ರವಾಗುತ್ತದೆ. ಆದ್ದರಿಂದ ಆಗ, ಅದಕ್ಕೆ ಹೆಚ್ಚಿನ ಅವಶ್ಯಕತೆ ತಲೆದೋರುವುದು ತೀರಾ ಸಹಜವಾಗಿದೆ.

ಆದಾಗ್ಯೂ ಮಗುವಿಗೆ ತಾಯಿಯ ಮೊಲೆ ಹಾಲು ಮೊದಲಿನಷ್ಟು ಮುಖ್ಯವಾಗಿರುತ್ತದೆ.

ಆದ್ದರಿಂದ ಇತರ ಆಹಾರವನ್ನು ಕೊಟ್ಟಾಗಲೂ ಮೊಲೆಯೂಡಿಸುವುದನ್ನು ನಿಲ್ಲಿಸಬಾರದು. ಇದರಲ್ಲಿ ಯಾವುದೇ ಒಂದನ್ನು ಮಾತ್ರ ಮಾಡುವುದು ಹಿತಕರವಲ್ಲ.

ಕೆಲವು ಗ್ರಾಮೀಣ ಪ್ರದೇಶಗಳಲ್ಲಿನ ತಾಯಂದಿರು ತಮ್ಮ ಹಸುಗೂಸುಗಳಿಗೆ 6ತಿಂಗಳಿಗೂ ಹೆಚ್ಚಿನ ಕಾಲ ಮೊಲೆಯೂಡಿಸುವುದುಂಟು. ಮಗುವಿಗೆ 3ವರ್ಷ ತುಂಬುವವರೆಗೆ ಅಥವಾ ಅದಕ್ಕೂ ಸ್ವಲ್ಪ ಹೆಚ್ಚಿನ ಕಲ ಮೊಲೆಯೂಡಿಸುವುದುತಪ್ಪೇನಿಲ್ಲ

ಆದರೆ ಆರು ತಿಂಗಳ ನಂತರ ಮಗುವಿಗೆ ಮೊಲೆಹಾಲಿನ ಜೊತೆ ಇತರ ಆಹಾರಗಳ ಅವಶ್ಯಕತೆಯೂ ಸಹ ಇರುತ್ತದೆಂಬುದನ್ನು ಮರೆಯಬೇಡಿ.

ಮಗುವಿಗೆ ಮೊಲೆಯೂಡಿಸುವ ತಾಯಂದಿರು ತಮ್ಮ ಆರೋಗ್ಯ ಹೇಗೆ ಕಾಪಾಡಿಕೊಳ್ಳಬಹುದು?

ತಾಯಂದಿರು ಮೊಲೆಹಾಲು ಉತ್ಪಾದಿಸುವುದು ನಿಸರ್ಗದತ್ತ ಕ್ರಿಯೆಯಾಗಿದೆ. ಆದರೆ, ಮಗುವಿಗೆ ಮೊಲೆಯೂಡಿಸುವುದರಿಂದ ತಾಯಿಗಾಗುವ ಆಯಾಸ ಅಥವಾ ಆಕೆಯ ದೇಹದ ಮೇಲೆ ಬೀಳುವ ಭಾರ ಬಸುರಿಯಾಗಿದ್ದಾಗಿನ ಆಯಾಸಕ್ಕಿಂತ ಹೆಚ್ಚಾಗಿರುತ್ತದೆ. ತೀವ್ರಗತಿಯಲ್ಲಿ ಬೆಳೆಯುವ ಮಗುವನ್ನು ಪೋಷಿಸುವುದು ತಾಯಿಯ ಹೊಣೆಯಾಗಿದ್ದು, ಇದರಲ್ಲಿ ತಾಯಿಗೆ ಆಯಾಸವಾಗುವುದು ಸಹಜವಾಗಿದೆ. ದಿನಗಳು ಉರುಳಿದಂತೆ, ಮಗುವಿಗೆ ಹೆಚ್ಚಿನ ಆಹಾರ ಬೇಕಾಗುತ್ತದೆ. ಈ ಆಹಾರವನ್ನು ಒದಗಿಸುವಲ್ಲಿ ತಾಯಿಗೆ ಪ್ರಯಾಸವಾಗಬಹುದಾಗಿದೆ.

ಮಕ್ಕಳ ತಾಯಂದಿರು ತಮಗೆ ಹೆಚಿನ ಆಯಾಸವಾಗದಂತೆ ನೋಡಿಕೊಳ್ಳಬೇಕು. ಇದಕ್ಕಾಗಿ ಅವರು ಸರಿಯಾದ ಆಹಾರವನ್ನು ಸಾಧ್ಯವಾದಷ್ಟು ಹೆಚ್ಚಿಗೆ ತಿನ್ನಬೇಕು. ಮಗುವಿನ ತಾಯಿಯು ಬಲಿಷ್ಟವಾಗಿ ಆರೋಗ್ಯದಿಂದ ಇದ್ದಲ್ಲಿ ಆಕೆ ತನ್ನ ಮಗುವಿಗೆ ಬೇಕಾದಷ್ಟು ಹಾಲನ್ನು ಒದಗಿಸಬಲ್ಲಳು.

ಮಕ್ಕಳ ತಾಯಂದಿರು ಸಾಧ್ಯವಾದಷ್ಟು ಹೆಚ್ಚಿಗೆ ಧಾನ್ಯಗಳನ್ನು, ಬೇಳೆಕಾಳುಗಳನ್ನು, ಸೊಪ್ಪನ್ನು ತಿನ್ನಬೇಕು. ಮತ್ತು ಹಾಲನ್ನು ಕುಡಿಯಬೇಕು. ಬೇಕಾದಲ್ಲಿ ಮತ್ತು ಸಾಧ್ಯವಿದ್ದಲ್ಲಿ ಮೀನು ಮಾಂಸ ಮತ್ತು ಮೊಟ್ಟೆಗಳನ್ನು ಸಹ ತಿನ್ನಬೇಕು.

ಮಕ್ಕಳ ತಾಯಂದಿರು ಇಲ್ಲಿ ಕೊಡಲಾಗಿರುವ ಆಹಾರ ವಸ್ತುಗಳಲ್ಲಿ ಕೆಲವನ್ನಾದರೂ ನಿಯಮಿತವಾಗಿ ಉಂಡಲ್ಲಿ ಅವರ ಆರೋಗ್ಯ ಸುಧಾರಿಸಿ ಅವರು ಸಾಕಷ್ಟು ಬಲಿಷ್ಠರಾಗುತ್ತಾರೆ.

ಮಕ್ಕಳ ತಾಯಂದಿರು, ಅಡಿಗೆ ಮಾಡುವುದಕ್ಕೂ, ಮೊದಲು ಅಥವಾ ಊಟಕ್ಕೆ ಕೂಡುವುದಕ್ಕೂ ಮೊದಲು ತಮ್ಮ ಕೈಗಳನ್ನು ತೊಳೆದುಕೊಳ್ಳಬೇಕು. ರೋಗ ರುಜಿನಗಳನ್ನು ಅಥವಾ ಅಂಟುಜಾಡ್ಯಗಳನ್ನು ತಡೆಗಟ್ಟುವ ಒಂದು ಕ್ರಮವಾಗಿ ಹಿತಕರವಾದ ಮತ್ತು ಸ್ವಚ್ಛ ಮತ್ತು ಆರೋಗ್ಯಕರವಾದ ಪರಿಸರದಲ್ಲಿ ಅಡುಗೆ ಮಾಡಬೇಕು. ತಾಯಿಗೆ ಜ್ವರ ಬಂದಲ್ಲಿ ಅಥವಾ ಯಾವುದಾದರೂ ಅಂಟುರೋಗ ತಗುಲಿದಲ್ಲಿ ಆಕೆಯಿಂದ ಆ ರೋಗ ಅವಳ ಮಗುವಿಗೂ ತಗುಲಬಹುದು. ಒಟ್ಟಿನಲ್ಲಿ ಅಸ್ವಸ್ಥರಾಗಿರುವುದು ಸಹಜವಾಗಿದೆ.

## ಮಕ್ಕಳಿಗೆ ಮೊಲೆಯೂಡಿಸುವ ಸ್ತ್ರೀಯರಿಗೆ ಸಾಕಷ್ಟು ಮತ್ತು ಸರಿಯಾದ ಆಹಾರ ಸಿಗದಿದ್ದಲ್ಲಿ ಏನಾಗುತ್ತದೆ?

ಭಾರತದ ಮಹಿಳೆಯರಲ್ಲಿ ಅನೇಕರು ತಮ್ಮ ಗರ್ಭಾವಸಥೆಯಲ್ಲಿ ಹೆಚ್ಚಿಗೆ ಊಟ ಮಾಡುವುದಿಲ್ಲ. ಅಥವಾ ಸರಿಯಾದ ಮತ್ತು ಉತ್ತಮವಾದ ಆಹಾರ ತಿನ್ನುವುದಿಲ್ಲ.

ಭಾರತದ ಮಹಿಳೆಯರು ತೆಗೆದುಕೊಳ್ಳುವ ಆಹಾರ ಪುಷ್ಟಿಕರವಾಗಿಲ್ಲವಾದರೂ ಮೊಲೆಹಾಲನ್ನು ಉತ್ಪಾದಿಸುವ ಅವರ ಸಾಮರ್ಥ್ಯ ಕುಂದುವುದಿಲ್ಲ. ಆದರೆ ದೇಹ ಮಾತ್ರ ಬಡವಾಗುತ್ತದೆ.

ಮಗುವಿನ ತಾಯಿಯು ಸರಿಯಾದ ಮತ್ತು ಸಾಕಷ್ಟು ಪ್ರಮಾಣದ ಆಹಾರ ತೆಗೆದುಕೊಳ್ಳದಿದ್ದಲ್ಲಿ ಆಕೆಯ ಮೊಲೆಹಾಲಿಗೆ ಬೇಕಾದ ಪೋಷಕ ದ್ರವ್ಯಗಳು ಆಕೆಯ ಎಲುಬು ಮೂಳೆಗಳಿಂದ ಮತ್ತು ಕೋಶಗಳಿಂದ ಹರಿದು ಬರುತ್ತವೆ. ಇದರಿಂದಾಗಿ ಆಕೆ ಅಸ್ವಸ್ಥಳಾಗಿ ಹಾಲನ್ನು ಉತ್ಪಾದಿಸುವ ಆಕೆಯ ಸಾಮರ್ಥ್ಯವೂ ಸಹ ಕುಗ್ಗುತ್ತದೆ. ಹೀಗಾಗುವುದನ್ನು ತಪ್ಪಿಸಲು ಮಕ್ಕಳ ತಾಯಂದಿರು ಸಾಕಷ್ಟು ಆಹಾರವನ್ನು ಮತ್ತು ಸರಿಯಾದ ಹಾಗೂ ಸಮರ್ಪಕವಾದ ಆಹಾರವನ್ನು ತೆಗೆದುಕೊಳ್ಳಬೇಕು.

## ಮಗುವಿಗೆ ಮೇಲಾಹಾರ:

ಐದು ಅಥವಾ ಆರು ತಿಂಗಳು ತುಂಬುತ್ತಿದ್ದಂತೆಯೇ ಮಗುವಿಗೆ ಮೇಲಾಹಾರವನ್ನು ಕೊಡಲು ಪ್ರಾರಂಭಿಸಬೇಕು.

ಮಗುವಿಗೆ ಮುಂದೆ ಹಸಿರು ತರಕಾರಿ, ಅನ್ನ, ಧಾನ್ಯ, ಬೇಳೆಕಾಳುಗಳು ಹಣ್ಣು ಮೊದಲಾದವನ್ನು (ಯೋಗ್ಯರೋತಿಯಲ್ಲಿ ಸ್ವಲ್ಪ ಸ್ವಲ್ಪವಾಗಿ ಕೊಡಲು) ಐದನೇ ತಿಂಗಳಿನಿಂದಲೇ ಪ್ರಾರಂಭಿಸಬೇಕು.

ಮಗು ಬೆಳೆದಂತೆ ಆಹಾರ ಪ್ರಮಾಣ ಹೆಚ್ಚಿಸಬೇಕು. ವೈವಿಧ್ಯತೆಯೂ ಬೇಕು.

ಒಂದು ವರ್ಷದ ಮಗುವಿಗೆ ಕುಟುಂಬದ ಇತರ ಸದಸ್ಯರು ತಿನ್ನುವ ಧಾನ್ಯ ಬೇಳೆಕಾಳು, ತರಕಾರಿಗಳನ್ನು ಕೊಡಬಹುದು.

ಆಹಾರ ಪದಾರ್ಥಗಳನ್ನು ಸ್ವಲ್ಪ ಸ್ವಲ್ಪವಾಗಿ ದಿನಕ್ಕೆ 4–6ಬಾರಿ ಕೊಡಬೇಕು.

ತಾಯಿಯ ಹಾಲು ಮಗುವಿಗೆ ಸಾಲದಾದಾಗ ಮೇಲಾಹಾರವನ್ನು ದಿನಕ್ಕೆ 5–6ಸಾರಿ ಕೊಡಬೇಕು. ಅದರಲ್ಲಿ ಹಾಲು ಸಹ ಸೇರಿಸಬಹುದು.

ತಾಯಿಯ ಹಾಲನ್ನೇ ಮಗು ಕುಡಿಯುತ್ತಿರುವಾಗಲೂ 4ಅಥವಾ 5ನೇ ತಿಂಗಳಿನಿಂದ ಮೇಲಾಹಾರವನ್ನು ಪ್ರಾರಂಭಿಸಬೇಕು.

**ಮಕ್ಕಳಿಗೆ ಒದಗಿಸುವ ಪೌಷ್ಟಿಕ ಸ್ಥಳೀಯ ಆಹಾರ ಹೇಗಿರಬೇಕು.?**

ಮಕ್ಕಳಿಗೆ ಸುಲಭವಾಗಿ ತಿನ್ನುವಂತೆ ಪಚನವಾಗುವಂತೆ ಇರಬೇಕು.

ರುಚಿಕರವಾಗಿರಬೇಕು. ಒಪ್ಪಿಗೆಯಾಗುವಂತಿರಬೇಕು.

ಆಗತ್ಯವಾದ ಪೂರಕ ಪೋಷಕಾಂಶಗಳನ್ನು ಒದಗಿಸಬೇಕು.

ಸಾಧ್ಯವಾದಲ್ಲಿ ಸ್ಥಳದಲ್ಲೇ ದೊರೆಯುವಂತೆ (ತಯಾರಿಸುವಂತೆ) ಇರಬೇಕು.

10–15ದಿವಸಗಳ ಕಾಲ ಸುರಕ್ಷಿತವಾಗಿ ಉಳಿಯುವಂತಿರಬೇಕು.

ಅಡಿಗೆ ಮನೆ ಪಾತ್ರೆಗಳು, ಊಟದ ತಟ್ಟೆ ಇತ್ಯಾದಿ ನಿರ್ಮಲವಾಗಿರಬೇಕು. ನೊಣಗಳು ಆಕರ್ಷಿತವಾಗುವಂತೆ ಇರಬಾರದು.

ಆಹಾರ ಪದಾರ್ಥಗಳ ಮೇಲೆ ನೊಣಗಳು ಮುತ್ತದಂತೆ, ಧೂಳು ಬೀಳದಂತೆ ಸಂರಕ್ಷಿಸಬೇಕು.

ಅಡಿಗೆ ಮಾಡುವ, ಬಡಿಸುವ ಕೈಗಳು ಸ್ವಚ್ಛವಾಗಿರಬೇಕು.

**ಗರ್ಭಿಣಿಯರ ಆರೋಗ್ಯ ರಕ್ಷಣೆ:**

ಗರ್ಭಾವಸ್ಥೆಯಲ್ಲಿರುವಾಗ ಅಷ್ಟೊಂದು ಮುಖ್ಯವಾಗಿರುವುದಾದರೂ ಏತಕ್ಕೆ?

ಮಹಿಳೆಯರ ಜೀವನದಲ್ಲಿ ಗರ್ಭಧಾರಣೆಯು ಅತಿ ಮುಖ್ಯವಾದ ಮತ್ತು ಸಂದಿಗ್ಧವಾದ ಅವಧಿಯಾಗಿದೆ. ಗರ್ಭಿಣಿಯ ಆರೋಗ್ಯ ಸರಿಯಾಗಿದ್ದಲ್ಲಿ ಹೆರಿಗೆ ಸುರಕ್ಷಿತವಾಗುತ್ತದಲ್ಲದೆ, ಮಗುವೂ ಸಹ ಆರೋಗ್ಯವಾಗಿರುತ್ತದೆ. ಆದ್ದರಿಂದ ಗರ್ಭಿಣಿಯರು ತಮ್ಮ ಆರೋಗ್ಯವನ್ನು ಕಾಪಾಡಿಕೊಂಡು ಬರಬೇಕು. ಇದಕ್ಕಾಗಿ ಅವರು ತಮ್ಮ ಗರ್ಭಾವಸ್ಥೆಯಲ್ಲಿ ಅಂದರೆ ಹೆರಿಗೆ ಆಗುವುದಕ್ಕೂ ಮೊದಲೇ ಒಳ್ಳೆಯ ಶುಶ್ರೂಷೆ ಪಡೆಯಬೇಕು.

## ಗರ್ಭಿಣಿಯರು ಎಷ್ಟು ಆಹಾರ ಸೇವಿಸಬೇಕು?

. ಗರ್ಭಿಣಿಯರಿಗೆ ಸಾಮಾನ್ಯರಿಗಿಂತ ಸ್ವಲ್ಪ ಹೆಚ್ಚಿಗೆ ಆಹಾರ ಅವಶ್ಯಕತೆ ಇರುತ್ತದೆ. ಗರ್ಭಿಣಿಯರು ತಮ್ಮ ಆರೋಗ್ಯವನ್ನು ಕಾಪಾಡಿಕೊಂಡು ಬರುವುದಕ್ಕಾಗಿ ಸಾಕಷ್ಟು ಆಹಾರ ತಿನ್ನಬೇಕು. ಅವರು ತಮ್ಮ ಆರೋಗ್ಯದ ಜೊತೆಗೆ ಹೊಟ್ಟೆಯಲ್ಲಿರುವ ಭ್ರೂಣದ ಬೆಳವಣಿಗೆಗೆ ಸಹ ಬೇಕಾಗುವಷ್ಟು ಆಹಾರ ತಿನ್ನಬೇಕು.

ಗರ್ಭಿಣಿಯರು ತಮಗಾಗಿ ಒಂದೇ ಅಲ್ಲದೇ, ತಮ್ಮ ಹೊಟ್ಟೆಯಲ್ಲಿರುವ ಮಗುವಿಗೂ ಸಹ ಆಹಾರ ಒದಗಿಸಲು ಊಟ ಮಾಡಬೇಕು. ಆದ್ದರಿಂದ ಅವರು ಸಾಮಾನ್ಯರಿಗಿಂತ ಹೆಚ್ಚಿಗೆ ಆಹಾರ ಸೇವಿಸಬೇಕು. ನಿತ್ಯದ ಊಟದಲ್ಲಿ ಹೆಚ್ಚಿಗೆ ತಿನ್ನಲು ಆಗದಿದ್ದಲ್ಲಿ ಅವರು ದಿನಕ್ಕೆ ಮೂರು ಅಥವಾ ನಾಲ್ಕು ಸಲವಾದರೂ ಊಟ ಮಾಡಬೇಕು.

## ಗರ್ಭಿಣಿಯರಲ್ಲಿ ಯಾರಿಗೆ ರಕ್ತಹೀನತೆ ಅಥವಾ ಅಶಕ್ತತೆಯಾಗುತ್ತದೆ?

ಗರ್ಭಿಣಿಯರು ತಿನ್ನುವ ಆಹಾರದಲ್ಲಿ ಸಾಕಷ್ಟು ಕಬ್ಬಿಣಾಂಶವು ಇಲ್ಲದಿದ್ದಲ್ಲಿ ರಕ್ತಹೀನತೆ ತಲೆದೋರುತ್ತದೆ. ಭಾರತದಲ್ಲಿನ ಗರ್ಭಿಣಿಯರಲ್ಲಿ ಅನೇಕರು ರಕ್ತಹೀನತೆಯಿಂದ ನರಳುತ್ತಾರೆಂಬುದು ತಿಳಿದುಬಂದಿದೆ. ಗರ್ಭಿಣಿಯರಲ್ಲಿ ಮೂರರಿಂದ ಆರು ಮತ್ತು ಆರರಿಂದ ಒಂಭತ್ತನೇ ತಿಂಗಳ ಅವಧಿಯಲ್ಲಿ ವಿಶೇಷವಾಗಿ ರಕ್ತಹೀನತೆ ತಲೆದೋರುತ್ತದೆ.

## ಮಹಿಳೆಯರಲ್ಲಿ ತಲೆದೋರುವ ರಕ್ತಹೀನತೆಯನ್ನು ಹೇಗೆ ಗುರುತಿಸಬಹುದು?

## ರಕ್ತಹೀನತೆಗೆ ಗುರಿಯಾದ ಗರ್ಭಿಣಿಯರು ಏನು ಮಾಡಬೇಕು?

ಗರ್ಭಿಣಿಯರು ರಕ್ತ ಹೀನತೆಯ ಯಾವುದಾದರೂ ಸಂಕೇತ ಕಂಡ ಕೂಡಲೇ ಸೂಕ್ತವಾದ ಚಿಕಿತ್ಸೆ ಪಡೆಯಬೇಕು. ರಕ್ತಹೀನತೆಯು ಹೆಚ್ಚಾಗಿದ್ದಲ್ಲಿ, ಹೆರಿಗೆ ಸಮಯದಲ್ಲಿ ಅನೇಕ ಜಟಿಲ ಸಮಸ್ಯೆಗಳು ಉದ್ಭವಿಸುತ್ತವೆ. ಹುಟ್ಟುವ ಮಗುವು ಸಣಕಲಾಗಿ

ಅದರ ತೂಕ ಕಡಿಮೆಯಾಗಬಹುದು ಅಥವಾ ಹೆರಿಗೆ ಸಮಯದಲ್ಲಿ ತೊಂದರೆಯುಂಟಾಗಿ ಆಕೆ ಸಾಯಲೂಬಹುದು.

**ಗರ್ಭಿಣಿಯರು ತಮ್ಮ ಆರೋಗ್ಯವನ್ನು ಹೇಗೆ ಕಾಪಾಡಬಹುದು?**

ಗರ್ಭಿಣಿಯರು ಸರಿಯಾದ ಹಾಗೂ ಸಮರ್ಪಕವಾದ ಆಹಾರ ತೆಗೆದುಕೊಳ್ಳಬೇಕು.ಅವರು ಧಾನ್ಯಗಳು, ಬೇಳಕಾಳುಗಳು ಮತ್ತು8 ಎಲೆಸಿಪ್ಪೆ(ಸೊಪ್ಪು)ಗಳಂತಹ ಪೋಷಕಾಹಾರಗಳನ್ನು ಹೆಚ್ಚಾಗಿ ತಿನ್ನಬೇಕು. ಸಾಧ್ಯವಾದಲ್ಲಿ ಅವರು ಹಾಲು ಕುಡಿಯಬೇಕು. ಹಣ್ಣು ತಿನ್ನಬೇಕು. ಮಾಂಸ ತಿನ್ನಬೇಕು . ಈ ಎಲ್ಲ ಆಹಾರ ಪದಾರ್ಥಗಳು ಗರ್ಭಿಣಿಯರಿಗೆ ಅಗತ್ಯವಾದ ಕ್ಯಾಲೊರಿಗಳನ್ನು ಪೌಷ್ಟಿಕ ಆಹಾರ ದ್ರವ್ಯಗಳನ್ನು ವಿಟಮಿನ್ 'ಎ' (ಅನ್ನಸತ್ವ)ಗಳನ್ನು ಸುಣ್ಣ ಮತ್ತು ಕಬ್ಬಿಣಾಂಶಗಳನ್ನೂ ಒದಗಿಸುತ್ತವೆ.

ಗರ್ಭಿಣೀಯರು ನಿಯಮಿತವಾಗಿ ತಮ್ಮ ಆರೋಗ್ಯದ ವೈದ್ಯಕೀಯ ತಪಾಸಣೆ ಮಾಡಿಸಿಕೊಳ್ಳಬೇಕು. ಇದಕ್ಕಾಗಿ ಅವರು ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಹೋಗಬೇಕು. ಗರ್ಭಧಾರಣೆಯ ಮೊದಲ ಆರು ತಿಂಗಳು ಅವರು ತಿಂಗಳಿಗೊಮ್ಮೆಯಾದರೂ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಹೋಗಬೇಕು. ಮೂರು ತಿಂಘಳು ತುಂಬಿದ ನಂತರ ಒಂಭತ್ತನೆಯ ತಿಂಗಳಿನವರೆಗೆ ಅವರು ಹದಿನೈದು ದಿನಗಳಿಗೊಮ್ಮೆ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಭೇಟಿ ನೀಡಬೇಕು. ಅದಾದ ನಂತರ ಅವರು ವಾರಕ್ಕೆ ಒಮ್ಮೆಯಾದರೂ , ಅನಿವಾರ್ಯವಾಗಿಯಾದರೂ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಹೋಗಬೇಕು. ಗರ್ಭಿಣೀಯರು ನಿಯಮಿತವಾಗಿ ಮತ್ತು ತಪ್ಪದೇ ಕಬ್ಬಿಣಾಂಶವುಳ್ಳ ಹಾಗೂ ಆಮ್ಲವುಳ್ಳ ಮಾತ್ರೆಗಳನ್ನು ತೆಗೆದುಕೊಳ್ಳಬೇಕು. ಅವರು ಈ ಮಾತ್ರೆಗಳನ್ನು ಪ್ರಾಥಮಿಕ ಆರೋಗ್ಯ ಕೇಂದ್ರದಿಂದ ಇಲ್ಲವೆ ಸಹಾಯಕ ದಾದಿಗಳಿಂದ ಪಡೆಯಬಹುದು.

## ಹೆರಿಗೆ ಆದನಂತರ ಮಗುವಿಗೆ ಬೇಕಾಗುವಷ್ಟು ಮೊಲೆ ಹಾಲನ್ನು ಉತ್ಪಾದಿಸುವುದನ್ನು ಹೇಗೆ ಖಚಿತಪಡಿಸಿಕೊಳ್ಳಬೇಕು?

ತಾಯಂದಿರಲ್ಲಿ ಕೆಲವರು ಮಗುವಿಗೆ ಬೇಕಾಗುವಷ್ಟು ಹಾಲನ್ನು ಉತ್ಪಾದಿಸಲು ಅಸಮರ್ಥರಾಗಿರುತ್ತಾರೆ. ಗರ್ಭಾವಸ್ಥೆಯಲ್ಲಿ ತಮ್ಮ ಆರೋಗ್ಯವನ್ನು ಸರಿಯಾಗಿ ನೋಡಿಕೊಳ್ಳದೇ ಇದ್ದಲ್ಲಿ ಈ ರೀತಿ ಆಗುತ್ತದೆ. ಮೊಲೆಯೂಡಿಸುವ ಸ್ತ್ರೀಯರು ತಮ್ಮ ಮಗುವಿಗೆ ಬೇಕಾಗುವಷ್ಟು ಹಾಲನ್ನು ಉತ್ಪಾದಿಸುವುದಕ್ಕಾಗಿ ತಮ್ಮ ಆರೋಗ್ಯವನ್ನು ಸುಧಾರಿಸಿ–ಕಾಪಾಡಿಕೊಳ್ಳಬೇಕು ಮತ್ತು ಸಮರ್ಪಕವಾದ ಹಾಗೂ ಪುಷ್ಟಿಕರವಾದ ಆಹಾರ ತೆಗೆದುಕೊಳ್ಳಬೇಕು.

**ಸಂಕಷ್ಟದಲ್ಲಿರುವ ಮಕ್ಕಳು:**

ಹುಟ್ಟಿದಾಗ ಮಗುವಿನ ತೂಕ 2.5ಕೆ.ಜಿಗಿಂತ ಕಡಿಮೆ ತೂಕ ಇದ್ದ ಮಕ್ಕಳು 3ಮತ್ತು 4ನೇ ದರ್ಜೆಯ ನ್ಯೂನ್ಯ ಪೋಷಣೆಗೊಳಗಾದ ಮಕ್ಕಳು, ಅವಳಿ ಜವಳಿ ಮಕ್ಕಳು. 3ತಿಂಗಳ ಸತತ ತೂಕ ವೃದ್ಧಿಯಾಗದೇ ಇರುವ ಮಕ್ಕಳು.

**ಪದೇ ಪದೇ ಭೇದಿಯಿಂದ ನರಳುವ ಮಕ್ಕಳು**

ಎರಡು ಅಥವಾ ಹೆಚ್ಚಿನ ಸೋದರ ಸೋದರಿಯರು ಸತ್ತ ದಾಖಲೆಯ ಕುಟುಂಬದ ಮಕ್ಕಳು.

ತಂದೆ ತಾಯಿಯು ಮರಣ ಹೊಂದಿ ಮಕ್ಕಳು.

ತಂದೆ ನಿರುದ್ಯೋಗಿಯಾಗಿ ಮದ್ಯಪಾನಿಯಾಗಿರುವ ಮಕ್ಕಳು.

ನಾಲ್ಕು ಅಥವಾ ಅದಕ್ಕಿಂತ ಹೆಚ್ಚಿನ ಹೆರಿಗೆಯಲ್ಲಿ ಹುಟ್ಟಿದ ಮಗು.

ಎರಡು ವರ್ಷದ ಅಂತರದೊಳಗೆ ಜನಿಸಿದ ಮಗು.

ವಿವಾಹ ಜೀವನ ಬಹುಕಾಲದ ನಂತರ ಜನಿಸಿದ ಮಗು.

ಸಂಕಷ್ಟದಲ್ಲಿರುವ ಇಂತಹ ಮಕ್ಕಳಿಗೆ ಆರೋಗ್ಯ ರಕ್ಷಣೆ ಪೋಷಣೆಗಳ ವಿಶೇಷ ಸೌಲಭ್ಯ ದೊರೆಯುವಂತೆ ಪ್ರಯತ್ನ ಮಾಡಬೇಕು.

**ರೋಗ ನಿರೋಧಕ ಚುಚ್ಚುಮದ್ದುಗಳು:**

ರೋಗಾಣುಗಳು ಶರೀರವನ್ನು ಆಕ್ರಮಿಸಿದರೆ ಮಕ್ಕಳಿಗೆ ಕಾಯಿಲೆ ಬರುತ್ತದೆ. ಇದನ್ನು ತಡೆಗಟ್ಟಲು ಚುಚ್ಚುಮದ್ದು ಅಥವಾ ಹಿನಿಗಳ ಮೂಲಕ ರೋಗ ನಿರೋಧಕವನ್ನು ಮಕ್ಕಳಿಗೆ ಕೊಡಬೇಕು. (ವ್ಯಾಕ್ಸಿನೇಷನ್)

ಸಕಾಲದಲ್ಲಿ ವ್ಯಾಕ್ಸಿನ್ ಕೊಡುವುದರ ಮೂಲಕ ಮಕ್ಕಳಿಗೆ ಕಾಯಿಲೆ ಬರುವುದನ್ನು ಕಾಯಿಲೆಯಿಂದ ಸಾಯುವ ಪ್ರಕರಣಗಳನ್ನು ಕಡಿಮೆ ಮಾಡಬಹುದು.

ನ್ಯೂನ್ಯ ಪೋಷಣೆಗಳಿಂದ ಮಕ್ಕಳಲ್ಲಿ ಸೋಂಕು ರೋಗ ತುಂಬ ಅಪಾಯಕಾರಿ. ಅವರ ಬೆಳವಣಿಗೆಯನ್ನು ಕುಗ್ಗಿಸಿ ಅಂಗಾಂಗಳ ಊನತೆಯನ್ನು ಉಂಟುಮಾಡಬಹುದು.

ಸಾಮಾಜಿಕವಾಗಿ ಆರ್ಥಿಕವಾಗಿಯೂ ಹಿಂದುಳಿದ ಕುಟುಂಬಗಳ ಮಕ್ಕಳಿಗೆ ರೋಗ ನಿರೋಧಕ ಚುಚ್ಚುಮದ್ದು ಅತ್ಯಾವಶ್ಯಕ.

ರೋಗ ನಿರೋಧಕ ಚುಚ್ಚುಮದ್ದನ್ನು ಮಕ್ಕಳಿಗೆ ಹಾಕಿಸುವಂತೆ ತಂದೆತಾಯಿಗಳಿಗೆ ಆಸಕ್ತಿ ಉಂಟಾಗಲು ಈ ಕಾರ್ಯಕ್ರಮವನ್ನು ಪ್ರಾರಂಭಿಸುವ ಮೊದಲೇ ಅವರಿಗೆ ಕಾಯಿಲೆಗಳು ಹೇಗೆ ಉಂಟಾಗುತ್ತವೆ ಮತ್ತು ವ್ಯಾಕ್ಸಿನ್ ಹಾಕಿಸಿ ಅದನ್ನು ಹೇಗೆ ತಡೆಗಟ್ಟಬಹುದೆಂಬುದನ್ನು ತಿಳಿಸಬೇಕು.

ಜೀವಸತ್ವಗಳು ಮತ್ತು ನಿಮ್ಮ ಆಹಾರ

ಜೀವಿತಕ್ಕೆ ಅಹಾರವು ಅತಿ ಮುಖ್ಯ. ನಮ್ಮ ಆರೋಗ್ಯವು ನಾವು ಸೇವಿಸುವ ಆಹಾರದ ಗುಣಮಟ್ಟವನ್ನು ಅವಲಂಬಿಸಿದೆ. ದೇಹದ ಬೆಳವಣಿಗೆಗೆ, ಆರೋಗ್ಯ ರಕ್ಷಣೆಗೆ ಮತ್ತು ರೋಗಗಳ ನಿರೋಧಕ್ಕೂ ಸಹ ಅವಶ್ಯಕ ಪ್ರಮಾಣದ ಆಹಾರವು ಬೇಕು.

ನಮ್ಮ ದೇಹ ಬೆಳವಣಿಗೆಗೆ ಮತ್ತು ಅದರ ರಕ್ಷಣೆಗೆ ಪ್ರತಿನಿತ್ಯ ಚಟುವಟಿಕೆಗಳಿಗೆ ಬೇಕಾಗುವ ಪೌಷ್ಟಿಕಗಳೆಂದೂ ಸಹ ಕರೆಯಲ್ಪಡುವ ಸತ್ವವು ನಾವು ಸೇವಿಸುವ ಅಹಾರದಿಂದ ದೊರೆಯುತ್ತದೆ. ಸಸಾರಜನಕ, ಕೊಬ್ಬು, ಶರ್ಕರಪಿಷ್ಟ, ಖನಿಜ ,ಮತ್ತು ಜೀವಸತ್ವಗಳೇ ಈ ಪೌಷ್ಟಿಕಗಳು.

ನಮ್ಮ ಅಹಾರದಲ್ಲಿರುವ ಸಸಾರಜನಕಗಳು ದೇಹಾಭಿವೃದ್ಧಿಗೆ ಬೇಕಾದ ವಸ್ತುಗಳಾಗಿವೆ. ಕೊಬ್ಬು ಮತ್ತು ಶರ್ಕರಪಿಷ್ಟಗಳು ಶರೀರದ ದಿನನಿತ್ಯ ಚಟುವಟಿಕೆಗಳಿಗೆ ಬೇಕಾಗುವ ಶಕ್ತಿಯನ್ನು ಒದಗಿಸುತ್ತವೆ. ಕ್ರಮವಾದ ಆರೋಗ್ಯ ರಕ್ಷಣೆಗೆ ಜೀವಸತ್ವಗಳು ಅತಿ ಮುಖ್ಯ.

ಜೀವಸತ್ವಗಳ ಬಗ್ಗೆ ನಾವು ಸ್ವಲ್ಪ ತಿಳಿಯೋಣ. ಈ ವಿಷಯದಲ್ಲಿ ನಾವು ಬಹಳ [illegible]ತ್ತೇವೆ. ಜನರು ಅವುಗಳ ಬಗ್ಗೆ ನಾವು ಸ್ವಲ್ಪ ತಿಳಿಯೋಣ. [illegible]ವುಗಳ ಬಗ್ಗೆ ಮಾತನಾಡುತ್ತಾರೆ. ವೈದ್ಯರುಗಳು ತಮ್ಮ ರೋಗಿಗಳೊಡನೆ ಅವುಗಳ ವಿಚಾರದಲ್ಲಿ ಸಂಭಾಷಿಸುತ್ತಾರೆ. ಮತ್ತು ಶಿಕ್ಷಕರು ವಿದ್ಯಾರ್ಥಿಗಳಿಗೆ ಜೀವಸತ್ವಗಳ ಬಗ್ಗೆ ಹೇಳುತ್ತಾರೆ.

**ಜೀವಸತ್ವ ಎಂದರೇನು?**

ಜೀವಸತ್ವ ಎಂಬ ಪದವು "ಜೀವ ಕೊಡುವ ಪದಾರ್ಥ" ಎಂದು ಅರ್ಥ ಕೊಡುತ್ತದೆ. ನಾವು ಸೇವಿಸುವ ಎಲ್ಲಾ ಆಹಾರ ಪದಾರ್ಥಗಳಲ್ಲೂ

ಸಹ ಅತಿ ಕಡಿಮೆ ಪ್ರಮಾಣದಲ್ಲಿ ಜೀವಸತ್ವಗಳು ಸರ್ವೇ ಸಾಮಾನ್ಯವಾಗಿ ಇದ್ದೇ ಇರುತ್ತದೆ. 'ಎ' 'ಬಿ' ಸಂಯೋಜನೆ (ಕಾಂಪ್ಲೆಕ್ಸ್) 'ಸಿ' 'ಡಿ' 'ಇ' ಎಂಬ ಬಹು ಸಂಖ್ಯೆಯ ಜೀವಸತ್ವಗಳಿವೆ. ಇವುಗಳಲ್ಲಿ ಯಾವುದಾದರೊಂದು ಸತ್ವವು ನಮ್ಮ ಆಹಾರದಲ್ಲಿ ಸಾಕಷ್ಟು ದೊರೆಯದಿದ್ದರೆ ಆ ಕೊರತೆಗೆ ಸಂಬಂಧಿಸಿದ ಕಾಯಿಲೆಗಳು ನಮ್ಮ ದೇಹದಲ್ಲಿ ಉತ್ಪತ್ತಿಯಾಗುವ ಸಂಭವವಿರುತ್ತದೆ.

ಒಳ್ಳೆಯ ದೃಷ್ಟಿ ಆರೋಗ್ಯದ ಚರ್ಮ ಮುಂತಾದವಕ್ಕೆ 'ಎ' ಜೀವಸತ್ವ ಅವಶ್ಯಕ. ಹೆಚ್ಚು 'ಎ' ಜೀವಸತ್ವವಿರುವ ಹಣ್ಣುಗಳು ಮತ್ತು ತರಕಾರಿಗಳನ್ನು ಸೇವಿಸುವುದರಿಂದ ಅನೇಕ ಸಂದರ್ಭಗಳಲ್ಲಿ ಅದರಲ್ಲೂ ಹೆಚ್ಚಾಗಿ ಮಕ್ಕಳಲ್ಲಿ ಇರುಳಗಣ್ಣನ್ನು ತಡೆಗಟ್ಟಬಹುದು.

ಮೊಟ್ಟೆ ಯಕೃತ್ (ಪಿತ್ತಜನಕಾಂಗ ಗುಲ್ಮ) ಹಾಲು ಬೆಣ್ಣೆ ಮುಂತಾದವುಗಳಿಂದ ' ಜೀವಸತ್ವವನ್ನು ಪಡೆಯಬಹುದಾಗಿದೆ. ಕಿತ್ತಳೆ ಮತ್ತು ಹಳದಿ ಬಣ್ಣದ ಹಣ್ಣುಗಳು ಪರಂಗಿ (ಪಪಾಯಿ)ಮಾವು, ಕರಬೂಜ, ಕಲ್ಲಂಗಡಿ, ಹಳದಿ ಕುಂಬಳ, ಟೊಮ್ಯಾಟೊ, ಕೆಂಪು ಮೂಲಂಗಿ (ಕ್ಯಾರೆಟ್) ಇವುಗಳು ಎ ಜೀವಸತ್ವ ಮೂಲವಾದ ಕ್ಯಾರೋಟಿನ್ ಅತಿ ಹೆಚ್ಚು ಸಂಗ್ರಹವಾಗಿದೆ. ಅಗ್ಗವಾಗಿ ಮತ್ತು ಸುಲಭವಾಗಿ ದೊರೆಯುವ ಪಾಲಕ, ಬಸಳೆ, ಅಮರಾಂತಿನ ಮುಂತಾದ ಹಸಿರು ಸೊಪ್ಪುಗಳಲ್ಲೂ ಸಹ ಕ್ಯಾರೋಟಿನ್ (ಎ ಜೀವಸತ್ವ ಮೂ) ಇರುತ್ತದೆ.

## ಬಿ ಜೀವಸತ್ವ

ಈ ಗುಂಪಿನಲ್ಲಿ ಬಿ1,ಬಿ2,ಬಿ6 ಮತ್ತು ನಿಕೊಟಿನ್ ಆಮ್ಲ ಇವು ಮುಖ್ಯವಾದವುಗಳು.

ಬಿ1 ಜೀವಸತ್ವದ ಕೊರತೆಯಿಂದ 'ಬೆರಿಬೆರಿ' ಎಂಬ ರೋಗವು ಉಂಟಾಗುತ್ತದೆ. ಈ ರೋಗವು ಕಾಲುಗಳ ನಿ:ಶಕ್ತಿಯಿಂದ ಪ್ರಾರಂಭವಾದರೂ ಸಹ, ಅದು ಹೃದಯಹಿಗ್ಗುವಿಕೆಗೆ ಮತ್ತು ಕೆಲವು ಸಂದರ್ಭಗಳಲ್ಲಿ ಹೃದಯಾಘಾತಕ್ಕೂ ಸಹ ಕಾರಣವಾಗಬಲ್ಲದು. ಈ ಜೀವಸತ್ವ ಕೊರತೆಯು ಸಾಮಾನ್ಯ ನಿ:ಶಕ್ತಿ, ಕಾಲುಗಳ ಜೌಗು (ಜುಮ್ ಜುಮ್ ಗುಟ್ಟುವುದು) ಮಾಂಸ ಖಂಡಗಳ ಪಾರ್ಶ್ವ ವಾಯು ಹಸಿವೆ ನಾಶ, ಹೊಟ್ಟೆಯಲ್ಲಿ ಆರಾಮವಿಲ್ಲದಿರುವುದು (ಹೊಟ್ಟೆ ತೊಳೆಸುವುದು) ಮತ್ತು ತಲೆ ಸುತ್ತುವಿಕೆಗೂ ಸಹ ಕಾರಣವಾಗಬಲ್ಲದು.

'ಬಿ' ಜೀವಸತ್ವವು ಕುಟ್ಟಿದ ಅಥವಾ ಮೆರಗು (ಪಾಲಿಶ) ಕೊಡದ ಅಕ್ಕಿಯಲ್ಲಿ ಹೆಚ್ಚಾಗಿರುತ್ತದೆ. ಹೊಟ್ಟು ತೆಗೆಯುವ, ಧಾನ್ಯಗಳು ದ್ವಿದಳ ಧಾನ್ಯಗಳು (ಅದರಲ್ಲೂ ಮೊಳಕೆ ಬಂದವುಗಳು) ಕಾಯಿಗಳು (ಅದರಲ್ಲೂ ನೆಲಗಡಲೆಕಾಯಿ) ನೊರೆ (ಶರ್ಕರ ದ್ರವಗಳೊಡನೆ ಸೇರಿ ಉತ್ಪತ್ತಿಯಾಗುವ ನೊರೆ ಈಸ್ಟ್) ಕೊಬ್ಬಿಲ್ಲದ ಮಾಂಸ, ಯಕೃತ್ (ಪಿತ್ತಕೋಶ ಗುಲ್ಮ) ಮತ್ತು ಮೊಟ್ಟೆ ಈ ಜೀವಸತ್ವಗಳಿರುವ ವಿವಿಧ ಮೂಲಗಳು.

ಬಿ ಸಂಯೋಜನಾ (ಕಾಂಪ್ಲೆಕ್ಸ) ಕೊರತೆಯು ಅದರಲ್ಲೂ ಬಿ2 ಸತ್ವ ಕೊರತೆಯು ನೋವು ಸಹಿತವವಾದ ನಾಲಿಗೆಯೂತ ಬಾಯಿ ಮೂಲೆಗಳಲ್ಲಿ ಬಿರುಕು ಕಣ್ಣು ರೆಪ್ಪೆಗಳಲ್ಲಿ ಗೀಜು ಕಟ್ಟುವುದು ಇವಕ್ಕೂ ಸಹ ಕಾರಣವಾಗಬಲ್ಲದು.

**ಸಿ ಜೀವಸತ್ವ**

ಸಿ ಜೀವಸತ್ವವು ಸ್ನಾಯುಗಳನ್ನು ಶಕ್ತಿಯುತವಾಗಿಟ್ಟು ದೇಹದ ರೋಗ ಪ್ರತಿಬಂಧಕ ಶಕ್ತಿಗೆ ಸಹಾಯ ಮಾಡುತ್ತದೆ.

ಈ ಸತ್ವ ಕೊರತೆಯಿಂದ ಹುಣ್ಣು ಮತ್ತು ಗಾಯುಗಳು ಬೇಗ ಗುಣಹೊಂದುವುದಿಲ್ಲ. ಒಸಡಿನ ರಕ್ತ ಸೋರುತ್ತವೆ. ಸಿ ಜೀವಸತ್ವದ ಕೊರತೆಯ ಗುರುತಿನ ಮಕ್ಕಳಲ್ಲಿ ಈ ಜೀವಸತ್ವ ಕೊರೆಯು ಕಲುಗಳ ಅತಿಸೂಕ್ಷ್ಮತೆಗೆ (ಎಳವಿಗೆ) ಎಡೆಮಾಡಿಕೊಡಬಹುದು.

ಇದರ ಕೊರತೆಯು ನೋವು ಸಹಿತ ಸಂದುಗಳು, ಒಸಡು ಊತ ನಿ:ಶಕ್ತಿ ಮತ್ತು ತೂಕ ನಾಶಕ್ಕೆ ಕಾರಣವಾಗುವ ಸ್ಕರ್ವಿ ಎಂಬ ರೋಗಕ್ಕೂ ಸಹ ಕಾರಣವಾಗಬಹುದು.

ಸಿ ಜೀವಸತ್ವವು ಮೊಳಕೆಯೊಡೆದ ಹೆಸರು ಮತ್ತು ಕಡಲೆ ಕಾಳುಗಳಲ್ಲಿಯೂ ಹುಳಿಯಾದ ಹಣ್ಣುಗಳಲ್ಲಿಯೂ ಸೀಬೆ, ಟೊಮ್ಯಾಟೊ ಮತ್ತು ಹಸಿರು ತರಕಾರಿಗಳಲ್ಲಿಯೂ ದೊರೆಯುತ್ತದೆ. ನೆಲ್ಲಿಕಾಯಿಯ (ಅದರಲ್ಲೂ ಬೆಟ್ಟದನೆಲ್ಲಿ) ಸಿ ಜೀವಸತ್ವದ ಒಂದು ಅಮೂಲ್ಯ ನಿಧಿಯಾಗಿದೆ.

ಸಿ ಜೀವಸತ್ವವು ಮುಚ್ಚದೆ ಅತಿ ಹೆಚ್ಚು ಶಾಖದಲ್ಲಿ ಬೇಯಿಸುವುದರಿಂದ ನಷ್ಟವಾಗುತ್ತದೆ. ಆದ್ದರಿಂದ ಬೇಯಿಸಿ ತಿನ್ನಬಹುದಾದಂತಹ ಟೊಮ್ಯಾಟೊ, ಸೌತೆ ಮುಂತಾದ ತರಕಾರಿಗಳನ್ನು ಸೇವಿಸುವುದಕ್ಕೆ ಸ್ವಲ್ಪ ಮೊದಲು ಮಾತ್ರ ಹೆಚ್ಚುವುದು (ಕತ್ತರಿಸುವುದು) ಒಳ್ಳೆಯದು. ಸಿ ಜೀವಸತ್ವವನ್ನು ಉಳಿಸಿಕೊಳ್ಳಬೇಕಾದರೆ ತರಕಾರಿಗಳನ್ನು ಅವಶ್ಯಕ ಪ್ರಮಾಣ (ಇಂಗುವಷ್ಟು ) ನೀರಿನಲ್ಲಿ ಮುಚ್ಚಿ ಬೇಯಿಸಬೇಕು.

## 'ಡಿ' ಜೀವಸತ್ವ:

ಡಿ ಡಿ ಜೀವಸತ್ವ ಮೂಳೆ ಮತ್ತು ಹಲ್ಲಗಳನ್ನು ಬಲಗೊಳಿಸುವ ಸುಣ್ಣದಂಶವನ್ನು (ನಮ್ಮ ದೇಹವು) ಉಪಯೋಗಿಸಿಕೊಳ್ಳಲು ಸಹಯ ಮಾಡುತ್ತದೆ. ಅದು ಮಕ್ಕಳಲ್ಲಿ ಮೃದು ಮೂಳೆಗೆ ಕಾರಣವಾದ ರಿಕೆಟ್ಸ್ (ಹಕ್ಕಿ) ಎಂಬ ರೋಗವನ್ನು ಗರ್ಭಿಣಿಯರಲ್ಲಿ (ಮೃತ್ತಿಕಾ ಲವಣಗಳು ನಷ್ಟದಿಂದಾದ) ಎಲುಬುಗಳು ಮೆದುವಾಗಿ ಹೋಗುವ ವ್ಯಾಧಿಯನ್ನೂ (ಮೂಳೆಗಳ ಅದರಲ್ಲೂ ಸೊಂಟದ ಮೂಳೆಗಳ ನ್ಯೂನತೆಯನ್ನು) ತಡೆಗಟ್ಟುತ್ತದೆ.

ಈ ಜೀವಸತ್ವವನ್ನು ಪಡೆಯುವ ಅತಿ ಸುಲಭ ಮಾರ್ಗವೆಂದರೆ ದೇಹವನ್ನು ಸೂರ್ಯನ ಬಿಸಿಲಿಗೆ ಒಯ್ಯುವುದು. ಅದು ಯಕೃತ್ ಎಣ್ಣೆ (ಲಿವರ್ ಆಯಿಲ್) ಮೊಟ್ಟೆಯ ಬಂದಾರ, ಸೂರ್ಯನ ಬಿಸಿಲು ಮತ್ತು ಹೊರಗೆ ಸೂರ್ಯನ ಬಿಸಿಲಿನಲ್ಲಿ ಮೇಯುವ ದನಗಳ ಹಾಲು ಮತ್ತು ಹಾಲಿನ ಕೆನೆಯಲ್ಲಿಯೂ ಇರುತ್ತದೆ.

## ಜೀವಸತ್ವಗಳನ್ನು ರಕ್ಷಿಸುವ ದಾರಿ

ಏನನ್ನು ತಿನ್ನಬೇಕೆಂಬುದನ್ನು ಮಾತ್ರ ತಿಳಿದರೆ ಸಾಲದು. ಜತೆಯಲ್ಲಿಯೇ ಆಹಾರದ ಪೋಷಣಾಗುಣವು ನಾಶ ಹೊಂದದಂತೆ ಅಡಿಗೆ ಮಾಡುವ ವಿಧಾನವನ್ನು ಸಹ ತಿಳಿದಿರಬೇಕು. ಈ ಕೆಳಗಿನವು ಜೀವಸತ್ವಗಳನ್ನು ಪಡೆಯಲು ಸಹಾಯ ಮಾಡಬಲ್ಲ ಮಾಡಬೇಕಾದ ಮಾಡಬಾರದ ಕೆಲವು ಮಾರ್ಗಗಳು.

1. ತರಕಾರಿಗಳನ್ನು ಸಿಪ್ಪೆ ಸಹಿತ ಬೇಯಿಸಿ.

2. ಹಣ್ಣು ಮತ್ತು ತರಕಾರಿಗಳನ್ನು ಹೆಚ್ಚು (ಆಳವಾಗಿ ) ಸುಲಿಯಬೇಡಿ.

ತರಕಾರಿಗಳನ್ನು ಮೊದಲು ತೊಳೆದು ನಂತರ ಕತ್ತರಿಸಿ, ಹಣ್ಣುಗಳನ್ನು ಬೇಯಿಸುವುದಕ್ಕೆ ಅಥವಾ ಬಿಡಿಸುವುದಕ್ಕೆ ಸ್ವಲ್ಪ ಮೊದಲು ಮಾತ್ರ ಕತ್ತರಿಸಿ.

4. ಅನ್ನ ಮಾಡಲು ಅವಶ್ಯಕ ಪ್ರಮಾಣದಷ್ಟು (ಇಂಗುವಷ್ಟು) ನೀರನ್ನು ಮಾತ್ರ ಬಳಸಿ, ಮುಚ್ಚಿ ಬೇಯಿಸಿ. ಉಳಿದ ಗಂಜಿಯನ್ನು ಚೆಲ್ಲಬೇಡಿ. ಅದರಲ್ಲಿ ಹೆಚ್ಚು ಪೌಷ್ಟಿಕಾಂಶವಿರುತ್ತದೆ. ಬೇಳೆ ಮತ್ತು ತರಕಾರಿಗಳನ್ನು ಬೇಯಿಸಲು ಅದನ್ನು ಉಪಯೋಗಿಸಿ.

5. ಹಸಿರು ತರಕಾರಿಗಳನ್ನು ಬೇಯಿ[illegible]ಕವಾಗುವಷ್ಟು ನೀರನ್ನು ಮಾತ್ರ ಬಳಸಿ, ಬೇಯಿಸಿ ಉಳಿದ ನೀರು ಜೀವಸತ್ವದಿಂದ ಕೂಡಿರುತ್ತದೆ. ಅದನ್ನು ಚೆಲ್ಲಬೇಡಿ. ಬೇಳೆ ಬೇಯಿಸಲು ಅದನ್ನು ಉಪಯೋಗಿಸಿ.

6. ಅಡಿಗೆಗೆ ಅಡಿಗೆ ಸೋಡವನ್ನು ಬಳಸಬೇಡಿ. ಸೋಡವನ್ನು ಬಳಸಿ ಅಡಿಗೆ ಮಾಡುವುದರಿಂದ ಜೀವಸತ್ವಗಳು ನಷ್ಟವಾಗುತ್ತವೆ.

**ಜ್ಞಾಪಕದಲ್ಲಿಡಿ:**

ಸಸಾರಜನಕ, ಕೊಬ್ಬು ಶರ್ಕರಪಿಷ್ಠಾದಿಗಳಂತೆ ಜೀವಸತ್ವಗಳೂ ಸಹ ಆರೋಗ್ಯಕ್ಕೆ ಮುಖ್ಯ. ಹಾಲು, ಹಣ್ಣು ಮತ್ತು ಆಗ ತಾನೆ ಮಾಡಿದ ಅಡಿಗೆಯೊಡನೆ ತರಕಾರಿಗಳು (ಅದರಲ್ಲೂ ಹಸಿರೆಲೆಗಳು) ಧಾನ್ಯಗಳು ಮತ್ತು ಬೇಳೆಗಳಿಂದ ಕೂಡಿದ ಮಿಶ್ರಾಹಾರವು ದೇಹದ ದಿನನಿತ್ಯ ಚಟುವಟಿಕೆಗಳಿಗೆ ಬೇಕಾದಷ್ಟು ಪೌಷ್ಟಿಕಾಂಶಗಳನ್ನು ಒದಗಿಸುತ್ತವೆ.

* * * *

# ಬರಗಾಲ ಎಂಬ ದುಷ್ಕಾಲ ಬಂದಾಗ

ಮೊಗಲಿ1250 ಜನ ಸಂಖ್ಯೆಯ ಸಣ್ಣ ಹಳ್ಳಿ. ನಾವು ಅಲ್ಲಿಗೆ ತಲುಪಿದಾಗ ಮುಂಜಾನೆ 10-15. ಆಗಲೇ ಮೈ ತೋಯಿಸುವಷ್ಟು ಬೆವರು ಸುರಿಸುವ ಉರಿಬಿಸಿಲು. ಊರಿನ ಹೊರ ಮಗ್ಗುಲಲ್ಲಿ ಒಂದು ಹಳೆಯ ಮನೆ. ಅಲ್ಲಿ ಅನೇಕ ವೃದ್ಧರು ಮತ್ತು ಅಶಕ್ತರು ಸಾಲಾಗಿ ಕಾದು ಕುಳಿತಿದ್ದಾರೆ. ಬಗಲಲ್ಲಿ ಅಲ್ಯೂಮಿನಿಯಂ ತಟ್ಟೆ, ಲೋಟ, (ಕೆಲಸದವರ ಬಳಿ ಮಣ್ಣಿನ ಮಡಕೆ ಮಾತ್ರ) ಮೈ ಮೇಲಿನ ಕೊಳಕು ಬಟ್ಟೆಗೆ ನೂರಾರು ತೇಪೆಗಳು...... ಬಡಿಗೆ ಊರುತ್ತಲೋ ಮೊಮ್ಮಕ್ಕಳ ಕೈ ಅಧಾರ ಮಾಡಿಕೊಂಡೋ ಇನ್ನಷ್ಟು ಮಂದಿ ಬರುತ್ತಿದ್ದರು. ಅದು ಸ್ಥಳೀಯ ಯುವಕ ಸಂಘದ ಕರ್ಯಾಲಯ. ಪ್ರತಿನಿತ್ಯ (11ಗಂಟೆಗೆ) ಬಡ ವೃದ್ಧರಿಗೆ ಗಂಜಿ ನೀಡಲಾಗುವುದು' ಎನ್ನುವ ಫಲಕ. ಅತ್ತ ದೃಷ್ಟಿ ಹಾಯಿಸಿದಾಗ "ನಾವು ಅಕ್ರಾಕ್ಕೆ (11ಗಂಟೆಗೆ) ನೀಡತೀವಿ ಸಾಬರೆ, ಆದರೂ . ನಿನ್ನೆ ಮಜ್ಜಾಣದಾಗೆ ಅಂಬಲಿ ಕುಡಿದು ಹೋದರೆ ಮತ್ತೆ ಇವತ್ತಿನ ಅಂಬಲಿ ಬೀಳುವ ತನಕ ಬೇರೇನೂ ಇಲ್ಲ. ಈ ಗರೀಬ ಮಂದಿಯ ಹಾಲತ್ತ ಬಹಳ ಕಠಿನ ಅದೇರಿ. ಹಸಿದ ಹೊಟ್ಟೆಗೆ ಎಷ್ಟು ದೌಡ ಸಿಕ್ಕಿದರೆ ಅಷ್ಟೇ ಸರಿಯಂತ ಆಗಲೇ ಬಂದು ಕುಂತಾರ ನೋಡ್ರೀ. ಎಂದು ಗಂಜಿ ಕೇಂದ್ರದ ಮೇಲ್ವಿಚಾರಣೆಯ ಹೊಣೆ ಹೊತ್ತ ಮೊಗಲಯ್ಯಾ ವಿವರಣೆ ನೀಡಿದರು. ಒಪ್ಪೊತ್ತಿನ ಗಂಜಿಯನ್ನು ಆಧರಿಸುವವರ ಪರಿಸ್ಥಿತಿಯೇ ಹೀಗಿರುವಾಗ ಏನೇನೂ ಆಧಾರ ಇಲ್ಲದ ನಿರ್ಗತಿಕರ ಪಾಡೇನು? ಇಂತಹ ನಿರ್ಗತಿಕರ ಸಂಖ್ಯೆ ಈ ತಾಲೂಕಿನಲ್ಲಿ 2300. ಮಳೆ ಲೋಪವಾಗಿ ಬರಗಾಲದ ಪರಿಸ್ಥಿತಿ ತಲೆದೋರಿದಾಗ ನೀರಾವರಿ ಇಲ್ಲದ ತಾಲೂಕಿನ ಒಕ್ಕಲುತನ ಸಂಪೂರ್ಣ ಕುಸಿಯಿತು. ಹೊಲವನ್ನೇ ಆಧರಿಸಿ ಕೃಷಿಕರೂ, ಕೃಷಿಯನ್ನು ಅವಲಂಬಿಸಿದ್ದ ನಾನಾ ಕಸುಬಿನವರೂ ಲಕ್ಷಾಂತರಮಂದಿ ನಿರುದ್ಯೋಗಿಗಳಾದರು. ದೃಢ ಕಯರಾದ ಜನರು ಕೆಲಸ ಕೂಲಿಗಳನ್ನು ಅರಸುತ್ತ ಬೆಂಗಳೂರ, ಪೂನಾ, ರತ್ನಗಿರಿ ಮೊದಲಾದ ಕಡೆಗಳಿಗೆ ಗುಳೆ ಹೋದರು. ಮುದುಕರು, ಅಶಕ್ತರೂ ಮನೆ ಕಾಯಲು ಉಳಿದರು. ಅಲ್ಲಿ ತಾವು ಸಂಪಾದಿಸಿದ್ದು ತಮ್ಮ ಹಸಿದ ಒಡಲಿಗೆ ಹರಹರವಾಗಿರುವಾಗ ಊರಿಗೆ ಹಣ ಯಾರು ಕಳುಹಿಸಿಬೇಕು? ಮಕ್ಕಳಿಂದ ಪತ್ರ ಸಹ ಇಲ್ಲ ಎಂಬುದು ಎಲ್ಲರ ಗೋಳಾಟ......... ಇದ್ದು ಬದ್ದದ್ದನ್ನೆಲ್ಲ ಮಾರಿ ತಿಂದಾಯಿತು. ಈಗ ಉಪವಾಸ,

ವನವಾಸ. ಒಂದು ಕಲದಲ್ಲಿ ನೆಮ್ಮದಿಯಾಗಿ ಉಂಡುಟ್ಟು ಬಾಳಿ ಬದುಕಿದ್ದ ಹಿರೇ ಮನುಷ್ಯರು ಈಗ ಅನಾಥರೂ, ಅಶಕ್ತರೂ, ನಿರ್ಗತಿಕರೂ ಅಕ್ಷರಶ: ನಿರ್ಗತಿಕರು.

"ನಮ್ಮಂತೋರು ಬದುಕಿರಬಾರದು ಸಾಬರೇ ಬದುಕಿರಬಾರದು" ಮುಡಬಾಳ ಗ್ರಾಮದ 85 ವರ್ಷದ ವೃದ್ಧೆ ಜೈನಾಬಿ ಮುಖ ಮುಚ್ಚಿಕೊಂಡು ರೋದಿಸಿದಳು ....

ಆ ಊರಿನ ಗಂಜಿ ಕೇಂದ್ರವನ್ನು ಸಂಪರ್ಕಿಸಲು ಹೋಗಿದ್ದೆ- ಸಣ್ಣಪ್ಪ ಎಂಬ 8ವರ್ಷದ ಬಾಲಕ ಮಡಿಕೆಯಲ್ಲಿ ಗಂಜಿ ಒಯ್ಯುತ್ತಿದ್ದ. ಕಾಯಿಲೆಯಾಗಿ ಹಾಸಿಗೆ ಹಿಡಿದವರು ಮತ್ತು ಕುರುಡರು ಕುಂಟರು ಮೊದಲಾದ ಅಂಗವಿಕಲರ ವಿನ: ಉಳಿದವರು ಗಂಜಿ ಕೇಂದ್ರಕ್ಕೆ ಬಂದು ಉಣ್ಣಬೇಕೆಂಬ ನಿಯಮ. ಯಾಕೆ ಉಲ್ಲಂಘನೆಯಾಗಿದೆ ಎಂದು ವಿಚಾರಿಸಿದೆ. 'ಆಯಿ ಹೊರಕ್ಕ ಬರೋಹಂಗಿಲ್ಲ ಸರ್' ಎಂದಷ್ಟೇ ಹೇಳಿ ಹುಡುಗ ಅಳತೊಡಗಿದ. ಎಷ್ಟು ವಿಧವಾಗಿ ಪ್ರಯತ್ನಿಸಿದರೂ ಅದಕ್ಕಿಂತ ಹೆಚ್ಚು ಉತ್ತರ ದೊರಕಲಿಲ್ಲ.... ನಾನೇ ಹೋಗಿ ನೋಡಿದೆ-ನೋಡಿ ದಿಗ್ಭ್ರಮೆಗೊಂಡೆ......... ಮೇಮೇಲೆ ತುಣುಕು ಚಿಂದಿಯೂ ಇರದೇ ಹರಕು ಗೋಣಿ ತಟ್ಟನ್ನೇ ಮೈಮೇಲೆ ಎಳೆದುಕೊಂಡು ಹೊದ್ದಿದ್ದಳು ಜೈನಾಬಿ.(ಅಂತಲೇ ಆಯಿ ಹೊರಕ್ಕ ಬರೋ ಹಂಗಿಲ್ಲ ಸರ್ ಎಂದು ಹೇಳಿ ಬಾಯಿ ಸ್ಕೌಟ ಸಣ್ಣಪ್ಪ ಗಂಜಿ ಒಯ್ದು ಕೊಡಲು ಮುಂದೆ ಬಂದಿದ್ದ). ಊರ ಸಾಹುಕಾರರ ಮನೆಯಿಂದ ಹಳೆಯ ಸೀರೆ ಕುಪ್ಪಸ ತರಿಸಿ ನೀಡಿದಾಗ, ತಡೆಯದೇ ಗಳಗಳನೇ ಅತ್ತು ಬಿಟ್ಟಳು ಜೈನಾಬಿ. ಅವಳ ಇಬ್ಬರು ಮೊಮ್ಮಕ್ಕಳು ಸಲೀಮ ಮತ್ತು ಕರೀಮ ಕೆಲಸ ಹುಡುಕುತ್ತ ಕೃಷ್ಣಾ ಪ್ರಾಜೆಕ್ಟಿಗೆ (ಕೃಷ್ಣಕ್ಕೋ, ಕಾಳಿಂದಿಗೋ, ಕರಂಜಾಕ್ಕೋ ಸರಿಯಾಗಿ ಆಕೆಗೆ ತಿಳಿಯದು) ಹೋದವರು ಇದುವರೆಗೂ ಒಂದು ದುಡ್ಡು ಕಳುಹಿಸಿಲ್ಲ. ಮೊಮ್ಮಕ್ಕಳ ಹೆಂಡಿರು ಕೂಸುಗಳನ್ನು ಬಗಲಲ್ಲಿ ಕಟ್ಟಿಕೊಂಡು ತವರು ಮನೆ ಸೇರಿದ್ದರು. ಒಳ್ಳೆಯ ಕಾಲದಲ್ಲಿ ಕೂಲಿ ನಾಲಿ ಮಾಡುತ್ತ ತುಸು ಜೋಳ ಬಡ್ಡಿಗೆ ಹಾಕುತ್ತ ಚಂದವಾಗಿ ಬದುಕಿದವಳಿಗೆ ಈ ಪರಿ ಈ ವಯಸ್ಸಿನಲ್ಲಿ ಇಂತಹ ಮುರ್ದೆಸೆ. ಬದುಕುವ ಆಸೆ ಇಲ್ಲ ಜೈನಾಬಿಗೆ.......ಜೈನಾಬಿಯಂತಹ ಸಾವಿರಾರು ವೃದ್ಧರಿಗೆ.

* * * * *

ಸಾಂತನೂರು ಗಂಜಿ ಕೇಂದ್ರ ಪ್ರಾರಂಭ. ಅನಾಥ ವೃದ್ಧರನ್ನು ಒಬ್ಬೊಬ್ಬರನ್ನಾಗಿ ಗುರ್ತಿಸುತ್ತ ಕಾರ್ಡು ಹಂಚುತ್ತಿದ್ದಾಗ "ನನಗೂ ಒಂದು ಕಾರ್ರೋಟು ಕೊಡ್ರಪ್ಪೋ ತಂದಿ-ಕೈಜೋಡಿಸ್ತೀನಿ" ಎಂದು ಹೇಳುತ್ತ ಕಾಲಿಗೆ ಬಿದ್ದ 80ರ ವೃದ್ಧ ಶರಣಬಸಪ್ಪ ಊರಿನ ಹಿರಿಯರು ಸಮಾಲೋಚಿಸಿ ಸಿದ್ಧಗೊಳಿಸಿದ ಅನಾಥರ ಯಾದಿಯಲ್ಲಿ ಅವನ ಹೆಸರಿರಲಿಲ್ಲ.

"ಸಾವುಕಾರನ ಹೊಲದಾಗೆ ಗುಬ್ಬಿಗಿಣಿ ಓಡಿಸ್ಕೋತ ಬಿದ್ದಿರತ್ತಿದ್ದಿನ್ರಿ. ಮೊರೊಪ್ಪತ್ತು (60) ವರ್ಷ ಅವನತ್ಲೇ ಜೀತ ಇದ್ದಿನ್ರಿ..ಈಗ ದುಷ್ಕಾಲ ಬಂತು, ಸಾವುಕಾರನೇ ಸರಕಾರಿ ಒಡ್ಡು ಹಾಕಲಾಕ ಗುದ್ಲಿ ಹೊತ್ತುಕೊಂಡು ಸ್ವಂತ ಹೊಂಟಾನ–ಇನ್ನು ನನ್ನನ್ಯಾರು ಕೇಳಬೇಕ್ರೀ ಬಡನಾಯನ್ನು.......... ಬಿಕ್ಕಿಬೇಡಕೋತ ತಿರುಗುತ್ತಿದ್ದಿನ್ರಿ. ಮಂದಿ ಮನಿಮುಂದ. ಮದ್ಯಾಣದಾಗ ನುಚ್ಚ ಅಂಬಲಿ ನೀಡತಾರಂತ ಸುದ್ದಿ ಹತ್ತಿತ್ರಿ. ಶಾಬಾದ್ಯಾಗಿಂದ 'ಓಡಕೋತ ಓಡಕೋತ ಬಂದಿನ್ರಪ್ಪ ತಂದಿಗಳ್ರಾ........ಪುಣ್ಯಾ ಕಟ್ಕೋರಿ ನಂಗೊಂದು ಕಾರೋಟು ಇಸ್ಕೊಟ್ಟು' ಎಂದು ಹೇಳುತ್ತ ಕಾಲಿಗೆ ಬಿದ್ದ.

* * * * * *

ಭಂಕಲಗಿ ಹಾದಿಯಲ್ಲಿ ಧೂಳು ತುಂಬಿದ ರಸ್ತೆ, ಸಾಲು ಬಂಡಿಗಳಲ್ಲಿ ನೀರು ತುಂಬಿದ ಡ್ರಮ್ಮುಗಳ ಮೆರವಣಿಗೆ–"ಕುಡಿಯುವ ನೀರಿನ ಪರದಾಟದ ಪರಿಷೆ". ಹೊರಟ್ಟಿತ್ತು. ಹೆಂಗಸರು ತುಂಬಿದ ಗಡಿಗೆಗಳನ್ನು ಹೊರಲಾರದೇ ಹೊತ್ತು,ನಡೆಯಲಾರದೇ ನಡೆದು ಕಲೆಳೆಯುತ್ತ ಸಾಗುತ್ತಿದ್ದರು. ತಲೆಯಲ್ಲಿ ಹೊತ್ತಿದ್ದ ಕಬ್ಬಿಣದ ಕೊಡಕ್ಕೆ ನಾಲ್ಕಾರು ಕಡೆ ಪತ್ತಿ ಹಾಕಿದೆ–ಕೆಳಗಿರಿಸಿದ್ದ ಸಿಂಬಿ ತೊಯ್ದಿದೆ. ಕೂದಲಿನಿಂದ ನೀರು ಆಗಾ ತೊಟ್ಟಿಕ್ಕುತ್ತಿದೆ........ಆಯಾಸದಿಂದ ಸೋತು ಹೋಗಿ ಕೊಂಚ ವಿಶ್ರಮಿಸುತ್ತದ್ದ ತುಂಬು ಗರ್ಭಿಣಿ ಅಯ್ಯಮ್ಮ. ಅವಳ ಜೊತೆಗೆ ಹತ್ತು ವರ್ಷದ ಮಗಳು ಸಾಬವ್ವ. ಅವಳು ನೀರು ಒಯ್ಯುವವಳೇ. ಮಾತಾಡಿಸಿದಾಗ "ನನ್ನದೇನ್ರಿ ಸಾಬರೇ ಹೆಂಗೋ ನಡೀತದರಿ–ಈ ಪೋರಿದೇ ಯೋಚನೆ ಹತ್ತೇದ್ರಿ ತಂದಿ....ನೀರಿನ ಕೊಡ ಹೊತ್ತು ನೆತ್ತಿ ಕೂದಲು ಎಲ್ಲ ಸವೆದು ಹೋಗ್ಯಾವೆ ಅಂತ ಆಕೆ ಅತ್ತೆ ಮನೆಯವರು ಏನೇನು ಆಡುಕೋತಾರೋ ಅನಕೋತಾರೋ–ಏನೇನು ಹೇಳಬೇಕಾಕತ್ತೈತೋ, ಲಗ್ನ ಆಗಿರುವ ಪೋರಿ ಇಂದಲ್ಲ ನಾಳೆ ಅತ್ತ ಮನಿ ಸೇರುವಾಕಿ–ಇದೇ ಚಂತೆ ಹತ್ತೈದ್ರಿ ನನಗೆ" ಎಂದು ಹೇಳುತ್ತ ಆ ಗಂಭೀರ ಪರಿಸ್ಥಿತಿಯಲ್ಲೂ ನಾನೇ ನಕ್ಕು ನಮ್ಮನ್ನು ನಗಿಸಿದಳು. ಅವರದು ಅಳು ನುಂಗಿ ನಕ್ಕ ನಗು.

ತಾಲೂಕಿನ ಸುಮಾರು 35ಹಳ್ಳಿಗಳಲ್ಲಿ ಕುಡಿಯುವ ನೀರಿನ ತೀವ್ರ ಅಭಾವವಿದೆ. ಸರಕಾರ ಭಗೀರಥ ಪ್ರಯತ್ನ ನಡೆಸಿ ಹತ್ತು ಹನ್ನೆರಡು ಮೈಲು ದೂರದಿಂದ ಟ್ಯಾಂಕರುಗಳ ಮೂಲಕ ಸಾಗಿಸಿ ಕುಡಿಯುವ ನೀರು ಸರಬರಾಜು ಮಾಡುತ್ತಿದೆ. ತಲಾ 2ಲೀಟರ್‌ಗಳಷ್ಟು ನೀರು ಜನರಿಗೆ ಸಿಗುತ್ತದೆ. ಅದೂ ಟ್ಯಾಂಕರು ಮೋಟಾರು ನಡೆದರೆ ಮಾತ್ರ. ಈಚೆಗೆ ಡೀಸೆಲ್ ಅಭಾವದ ಝಳ ಇಲ್ಲಿಗೂ ತಾಗಿ ನಾಲ್ಕು ದಿನ ಲಾರಿಗಳೆಲ್ಲ ಸ್ತಬ್ಧವಾಗಿದ್ದವು. ಕೊಳವೆ ಬಾವಿ

ಕೊರೆಯುವುದು. ಹಳೆಯ ಬಾವಿಗಳ ದುರಸ್ತಿ, ಕೆರೆಗಳ ಹೊಂಡ ತೆಗೆಯುವುದು ಮೊದಲಾದ ಕಾರ್ಯ ಬಿರುಸಿನಿಂದ ನಡೆದಿದೆ. ಆದರೆ ಅವೆಲ್ಲ ರಾವಣನ ಹೊಟ್ಟೆಗೆ ಕಾಸಿನ ಮಜ್ಜಿಗೆ. ಈಚೆಗೆ ಈ ತರಾತುರಿ ಸೇವೆಗೂ ವಿಳಂಬ ವ್ಯಾಧಿ ವ್ಯಾಪಿಸಿದೆ. ಜಿಯೋಲಜಿಸ್ಟ್ ಬಂದು ನೋಡಿ ಶಿಫಾರಸು ಮಾಡಿದ ನಂತರವೇ ಈ ತುರ್ತು ಕಾಮಗಾರಿಗಳನ್ನು ಕೈಗೊಳ್ಳಬೇಕೆಂದು ಮುಖ್ಯಮಂತ್ರಿ ಅರಸರೇ ಸ್ವತ: ಆಜ್ಞೆ ನೀಡಿ ಬರಗಾಲ ಪೀಡಿತ ಜನರ ಮೇಲೆ ಅಪಾರ ಕೃಪೆ ತೋರಿಸಿದ್ದಾರೆ...... ನಾಳಿನ ನೀರಿಗೇನು ಗತಿ ಎಂದು ಇಂದೇ ನಾಲಗೆ ಒಣಗಿಸಿಕೊಂಡು ಕಾದಿರುವ ಪ್ರಕ್ಷುಬ್ಧ ಪರಿಸ್ಥಿತಿ ಇರುವ ದಿಗ್ಗಾಂವ, ಘೋಣಗಾಂವ, ರಾಜೋಳಾ, ಸಾತನೂರು, ಭಂಕಲಗಾ, ಸೂಲಹಳ್ಳಿ, ಕಮ್ಮರವಾಡಿ, ವಟವಟಿ, ವಜ್ಜಾ, ಕೋಲಾರವಾರ, ನಾಲರವಾರ, ಅರಣಕಲ್‌ಗಳಲ್ಲಿ ದುಡಿಯುವ ನೂರಾರು ಕೈಗಳ ಶಕ್ತಿಯೆಲ್ಲ ಕುಡಿಯುವ ನೀರು ಶೇಖರಿಸುವಲ್ಲೇ ಸೋತು ಹೋಗಿರುತ್ತದೆ.

ಚಿತ್ತಾಪೂರದಲ್ಲಿ ಬೋವಿಯವರ ಕೇರಿ ಸಂಜೆಯಾದರೂ ಬಿಸಿಲಿನ ಝಳ ಜೋರಾಗಿದೆ. ಒಂದು ಗುಡಿಸಲು ಮುಂದೆ ಜನ ಘೇರಾಯಿಸಿದ್ದಾರೆ. ಚೀರಾಟ, ಅಳು, ಬೊಬ್ಬೆ....ಗುಡಿಸಲಿನೊಳಕ್ಕೆ ಹಣಕಿ ಹಾಕಿದೆ' ಹನ್ನೆರಡು ದಿನಗಳ ಬಾಣಂತಿ ಅಂಬವ್ವ ಎಚ್ಚರ ತಪ್ಪಿ ಬಿದ್ದಿದ್ದಾಳೆ. "ಕಾಂಕ್ರೇಟ್ ಕೆಲಸ ಅಂತ (ಜಲ್ಲಿ ಒಡೆಯಲು)ಹೋದಳು ನೋಡಪ್ಪ ಹಟ್ಟೆ ತಿಪ್ಪಲಿಗೆ. ಬಾಣಂತಿಯ ಹಸಿಮೈಗೋ, ಬಿಸಿಲಿನ ಕಾವಿಗೋ ಜ್ವರ ಬಂದು ಬೇಉಶ್ ಆಗ್ಯಾಳ....ಪಾಪ ಗಂಡ ಕಾಯಿಲೆ ಮಕ್ಕೊಂಡಾನ..'ಏನ್ಗತಿ ಈಕೀದು, ಈ ನಾಲ್ಕು ಚುಕ್ಕೋಳ್ದು' ಎಂಥು ಮುದುಕಿ ಬಡಬಡಿಸುತ್ತಲೇ ಇದ್ದಳು.

ಹೊಲದಲ್ಲಿ ಕೆಲಸ ಮಾಡುವುದೊಂಥು ಬಿಟ್ಟು ಬೇರಾವ ಉದ್ಯೋಗವನ್ನು ಮಾಡಿ ತಿಳಿದಿರದ ರೈತರು ಹೊಟ್ಟೆ ಪಾಡಿಗಾಗಿ ಅಭಾವ ಕಾಮಗಾರಿಗಳಲ್ಲಿ ದುಡಿಯಲು ಹೋಗಿ ಇಂತಹ ಆಪತ್ತಿನಿಂದ ನರಳಿದ ಪ್ರಸಂಗಗಳು ಅಸಂಖ್ಯಾಥ. ಒಡ್ಡು ಹಾಕುವುದಕ್ಕೆ ತೊಡಗಿ ಬಿಸಿಲಿನ ಶಾಖದಲ್ಲಿ (ಇಲ್ಲಿನ ಉಷ್ಣತೆ 42ಡಿಗ್ರಿ ಸೆಂಟಿಗ್ರೇಡಿನಷ್ಟಿದೆ) ತಲೆ ತಿರುಗಿ ಬಿದ್ದವರು ಪಿತ್ತ ರಕ್ತ ಕಾರಿಕೊಂಡರು. ಕರಳು ರೋಗಕ್ಕೆ ತುತ್ತಾದವರು ಇನ್ನೆಷ್ಟು ಸಂಖ್ಯೆಯಲ್ಲಿದ್ದಾರೋ ಏನೋ> ಜಲ್ಲಿ ಗುದ್ದುವಾಗ ಅಭ್ಯಾಸವಿಲ್ಲದೇ ಎಷ್ಟು ಮಂದಿ ಕೈಕಾಲು ಗುದ್ದಿಸಿಕೊಂಡಿದ್ದಾರೋ ಏನೋ? ಸನ್‌ಸ್ಟ್ರೋಕ್ ಆಗಿ ನರಳಿದವರು ಸತ್ತವರು ಇಲ್ಲದಿಲ್ಲ.

ಬೆಣ್ಣೆ ತುರಾ ಪ್ರಾಜೆಕ್ಟ್, 65ಹಳ್ಳಿಗಳಿಗೆ ನೀರುಣಿಸಿ ತಾಲೂಕಿನ ಅರ್ಧಭಾಗವನ್ನು ಹಸಿರು ನಂದನವನ್ನಾಗಿ ಮಾರ್ಪಡಿಸಬಲ್ಲ 9ಕೋಟಿ ವೆಚ್ಚದ ಕಾಮಗಾರಿ. ಒಲ್ಲದ ಸರಕಾರವನ್ನು ಕಾಡಿ ಬೇಡಿ, ಒತ್ತಾಯಿಸಿ ಅಂತೂ ಮಾರ್ಚ್ ತಿಂಗಳ ಕೊನೆಯಲ್ಲಿ

ಕೆಲಸ ಪ್ರಾರಂಭವಾಯಿತು. ಏಪ್ರಿಲ್‌ನಲ್ಲಿ ನಿತ್ಯ 1500 ಜನ ನಿತ್ಯ ಅಲ್ಲಿ ದುಡಿಯುತ್ತಿದ್ದರೆ ಈಗ ಅವರ ಸಂಖ್ಯೆ 280ಕ್ಕೆ ಇಳಿದಿದೆ. ಎರೆ ಮಣ್ಣಿಣಿನಲ್ಲಿ ನೀಡಿದಂತೆ ಇಲ್ಲೂ ಘನ ಅಡಿ ಅಳತೆಯ ಲೆಕ್ಕದಲ್ಲಿ ಕೂ ನೀರಡುವ ಸರಕಾರದ ನಿಧಾರದಿಂದಾಗಿ ಗಟ್ಟಿ ಮಣ್ಣಿನಲ್ಲಿ ಹಗಲಿಡಿ ಬೆವರಿಳಿಸುವ ಜನರಿಗೆ ದಿನಗೂಲಿ ತಲಾ 75ಪೈಸೆ ಸಿಗುತ್ತಿದೆ. "ನಾವು ಹತ್ತು ಜನ ನಾಲ್ಕು ದಿನ ದುಡಿದರೆ 40ರೂಪಾಯಿ ಪಗಾರ ಮಾಡಿದರು- ಇದರಾಗೆ ನಾವೇನು ಉಣಬೇಕು. ಹೆಂಡರು ಮಕ್ಕಳಿಗೆ ಏನು ಹಾಕಬೇಕು...ಈ ಪ್ರಾಜೆಕ್ಟ್ ಕೆಲಸ ಪಡತಲೇ ಬೋಳೋಲ್ರಿ ಸಾಬರೇ-ಹಾಗಂತ ಬೇರೆ ಕೂಲಿನೂ ಎಲ್ಲೂ ಸಿಗವಲ್ಲದು.ಹಿಂಗೇ ಒಂದು ದಿವಸ ಬೆವರಿನಲ್ಲೇ ಕರಗಿ ಸತ್ತು ಹೋಗೋದು ನಮ್ಮ ಹಣೇ ಬರದಾಗೆ ಅದೇರಿ ಸಾಬರೇ" ಎನ್ನುವ ವಟವಟ ಬಸಪ್ಪನ ಹೇಳಿಕೆ ನೊಂದ ಜೀವಿಗಳ ಆರ್ತನಾದ.

ಸರಕಾರದ ಭೂ ಸಾರ ಸಂರಕ್ಷಣೆಯ ಕೆಲಸ ನಡೆದದ್ದು ಇಪ್ಪತ್ತು ಸಾವಿರ ಮಂದಿ ದುಡಿಯುತ್ತಿದ್ದಾರೆ. ಆದರೆ ಅಲ್ಲಿ ಮೇಲ್ವಿಚಾರಕರ ಅಸಾಮರ್ಥ್ಯ, ಛಾನಸ ನೀತಿ, ಅಳತೆ ತೆಗೆಯುವವರ ನಿರ್ಲಕ್ಷ್ಯ, ಮಾರ್ಕ ಕೊಡುವುದರಲ್ಲಿ ವಿಳಂಬ ಹೀಗಾಗಿ ವಾರದಲ್ಲಿ ಮೂರು ನಾಲ್ಕು ದಿನ ಮಾತ್ರ ಕೆಲಸ. ಅಳತೆ ತೆಗೆಯಲು ಒಂದು ದಿನ, ಪಗಾರ ಮಾಡಲು ಒಂದು ದಿನ, ಜೆ.ಇ.ಸಾಹೇಬರ ದೌರಾ (ಸಂಚಾರ) ಅಥವಾ ಆಚೆ ಒಂದು ದಿನ-ಹೀಗೆ ವಾರಕ್ಕೆ ನಾಲ್ಕೇ ದಿನ ಕೆಲಸ. ಅಂತೂ ಇಂತೂ ಬರಗಾಲದ ಕುಂತಿ ಮಕ್ಕಳಿಗೆ ಅರೆ ಹೊಟ್ಟೆ ಕೂಳೇ ಗತಿ.

ರೇಷನ್ ಹಂಚಿಕೆ- ಅದೇ ಒಂದು ಕರ್ಮಕಾಂಡ. ಅಗತ್ಯಕ್ಕಿಂತ ಪೂರೈಕೆ ತೀರಾ ಕಮ್ಮಿ. ಕಾರ್ಡಿಗೆ ತಿಂಗಳಿಗೆ ಎರಡೋ ನಾಲ್ಕೋ ಕಿಲೋ ಧಾನ್ಯ ಸಿಗುವುದು ಉಂಟು. ಮನೆಯಲ್ಲಿ ಎಷ್ಟೇ ಮಂದಿ ಇದ್ದರೂ ಸಹ ಮಾರುಕಟ್ಟೆಯಲ್ಲಿ ಗಗನಕ್ಕೇರಿದೆ. ಅಕ್ಕಿ ಜೋಳದ ಬೆಲೆ. ಗೋಧಿಯಂತೂ ಹೆಸರೇ ಇಲ್ಲ. ಬಡವರೇನೂ ಮಧ್ಯಮವರ್ಗದವರೂ ಸಹ ಹೊಟ್ಟೆಯ ಮೇಲೆ ಒದ್ದೆ ಬಟ್ಟೆ ಹಾಕಿಕೊಂಡು ಕಾಲ ಕಳೆಯುವಂತಾಗಿದೆ.

ಬರಗಾಲ ಪರಿಸ್ಥಿತಿ ಅನೇಕ ಭಾಗಗಳಲ್ಲಿ ರುದ್ರ ನಾಟ್ಯವಾಡುತ್ತಿದೆ. ಕೆಲವೆಡೆ ನೀರಿನ ಬರ. ಕೆಲವೆಡೆ ಅನ್ನದ ಬರ, ಕೆಲವೆಡೆ ಕೆಲಸದ ಬರ, ಆದರೆ- ಚಿತ್ತಾಪುರದಲ್ಲಿ ಎಲ್ಲ ಬಗೆಯ ಕ್ಷಾಮ ಸಂಗಮವಾಗಿದೆ. ಎಂದತಲೇ ಇದೊಂದು ಕ್ಷಾಮದ ಅಗ್ನಿಕುಂಡ.

ಬರಗಾಲ ಸೇವೆ: ವರದಿ :1973)

* * * * * *

# ಯುವಕರ ಅಳಿಲು ಸೇವೆ: ಗಂಜಿಕೇಂದ್ರಗಳು

"ಅನ್ನದಾನಕ್ಕಿಂತ ಇನ್ನು ದಾನಗಳಿಲ್ಲ" ಎನ್ನುವ ಮಾತು ಎಲ್ಲ ದೇಶಕ್ಕೂ ಅನ್ವಯಿಸುವ ಸಾರ್ವಕಾಲಿಕ ನುಡಿ ಮುತ್ತು. ಇಲ್ಲಂತೂ ಅಕ್ಷರಶ: ನಿಜ. ವಾರಕ್ಕೆ ಎರಡು ಅಥವಾ ಮೂರು ಬಾರಿ ಅರ್ಧವೋ, ಗಿರ್ಧವೋ ರೊಟ್ಟಿಯ ಮೋರೆ ನೋಡುತ್ತಿದ್ದ ಬಡ ವೃದ್ಧರ, ಅಂಗವಿಕಲರು, ರೋಗಿಷ್ಟರು ಮೊದಲಾದ ದುರ್ಬಲ ಜನರಿಗೆ ನಿತ್ಯ ಒಪ್ಪೊತ್ತಿನ ಗಂಜಿ ಸಿಗುತ್ತಿದೆ ಎನ್ನುವಾಗ ಅವರಿಗೆ ಆಗುವ ಸಂತಸ ವರ್ಣನಾತೀತ. ಬರಗಾಲ ಪೀಡಿತ ಪ್ರದೇಶದ ಸುಮಾರು 25ಹಳ್ಳಿಗಳಲ್ಲಿ ಗಂಜಿ ಕೇಂದ್ರಗಳನ್ನು ನಾನಾ ಸಂಘ ಸಂಸ್ಥೆಗಳು ತೆರೆದು ಚಿತ್ತಾಪೂರ ತಾಲೂಕಿನಲ್ಲಿ ಪ್ರತಿನಿತ್ಯ 35000ಕ್ಕೂ ಮಿಕ್ಕಿದ ಹಸಿದ ಹೊಟ್ಟೆಗಳಿಗೆ ತಂಪು ನೀಡುತ್ತಿದೆ. (ಸರಕಾರದ ನಿರಾಶ್ರಿತರ ಪಡೆ ಸುಮಾರು 3ಸಹಸ್ರ ಜನರಿಗೆ ದೊರಕುತ್ತಿದೆ)

ಮರಗೋಳ ಹಳ್ಳಿಯ ಕರಿಬಸಮ್ಮಾ ಎನ್ನುವ ವೃದ್ಧೆ. ಗಂಜಿ ಕೇಂದ್ರ ತೆರೆಯಲು ನಿಗದಿ ಮಾಡಿದ ತಾರೀಖಿನ ಹಿಂದಿನ ದಿನದಿಂದಲೂ ಆಕೆಗೆ ಉಸಿರು ಎಳೆಯುತ್ತಿತ್ತು-ಸಾವು ಬದುಕುಗಳ ನಡುವಿನ ಹೋರಾಟ. "ಸಖತ್ ಖಾಯಿಲೆ ಬಿದ್ದ ಆ ಮುದುಕಿಗೇನು ಕಾರ್ಡು ಕೊಡುತ್ತೀರಿ ಸರ್? ಗಂಜಿ ಕೇಂದ್ರ ಉದ್ಘಾಟನೆ ಆಗುವುದಕ್ಕೆ ಮುಂಚೆಯೇ ಅದು ಗೊಟಕ್ ಆಗಿ ಬಿಡುತ್ತೆ" ಎಂದು ಅನೇಕರು ಹೇಳಿದರೂ ಕಾರ್ಡು ಕೊಟ್ಟಿದ್ದಾಯಿತು. ಗಂಜಿ ನೀಡಿದ್ದೂ ಆಯಿತು. ಸಾಯುವ ಹೊತ್ತಿಗಾದರೂ ಮುದುಕಿಯ ಹೊಟ್ಟೆ ತಣ್ಣಗಿರಲಿ ಎಂಬ ಪರೋಪಕಾರ ಬುದ್ಧಿಯಿಂದ ಸ್ಥಳೀಯ ಶಾಲಾ ಮಾಸ್ತರರ ಹೆಂಡತಿ ಪ್ರತಿ ನಿತ್ಯ ಗಂಜಿ ಕೇಂದ್ರ ಹೇಗೆ ನಡೆಯುತ್ತಿದೆ ಎಂಧು ನೋಡಲು ಹೋದಾಗ ಅದೇ ಕರಿಬಸಮ್ಮಾ ಸಾಯಲು ಬಿದ್ದಿದ್ದ ಸಖತ್ ಕಾಯಿಲೆಯ ಮುದುಕಿ ಬಡಿಗೆ ಊರಿಕೊಂಡು ಬಂದು ಗಂಜೀಕೇಂದ್ರದಲ್ಲಿ ಸ್ವತ: ಊಟಮಾಡುತ್ತಿದ್ದಳು. ಪಾಪ-ಆಕೆಗೆ ಬಡಿದಿದ್ದ ಸಖತ್ ಕಾಯಿಲೆ ಹಸಿವು ಎಂದು ಯಾರಿಗೆ ಹೇಳಬೇಕು.

ಅರಣಕಲ್ ಗ್ರಾಮದಲ್ಲಿ ಕೇಂದ್ರ ಪ್ರಾರಂಭ. 9-5-73ರಂದು ಕಾರ್ಡು ನೀಡಲು ನಿರಾಕರಿಸಿದ್ದ ಪಟ್ಟಿಯಲ್ಲಿ ಕೃಷ್ಣಾ ಮುಕುಂದಾ ಮುಳುಗಿ ಎಂಬ ಹೆಸರಿನ ಕೆಳಗೆ ಕೆಂಪು ಗೆರೆ ಹಾಕಿದ್ದರು. ವಿಚಾರಿಸಿದಾಗ ದಾರುಣವಾದ ಕಾರುಣ್ಯದ

ಲಾವಣೆಯೊಂದು ಕಿವಿಗೆ ಕೇಳಿಸಿತು. 6ಮಂದಿ ಉಣ್ಣುವ ಬಾಯಿಗಳಿರುವ ಆ ಬಡ ಸಂಸಾರದಲ್ಲಿ ದುಡಿಯುವ ಮಗ ಜ್ವರ ಬಂದು ಹಾಸಿಗೆ ಹಿಡಿದಿದ್ದ. ನಾಲ್ಕೈದು ದಿನದಿಂದ ಮನೆಯಲ್ಲಿ ಒಲೆ ಹೊತ್ತಿಸಲಿಲ್ಲ-ಅಪರವಯಸ್ಸಿನ ಆ ನೊಂದ ಜೀವ ಹಸಿವೆಯನ್ನು ತಾಳದಾಯಿತು. ಪಕ್ಕದ ಓಣಿಯಲ್ಲಿ ರಾಮಕಿಶನರಾದ ಪಟವಾರಿಯುವರ ಹಳೆಯ ಮನೆಯಲ್ಲಿ ಗಂಜಿ ಕೇಂದ್ರದ ಅಂಬಲೀ ಬೇಯುತ್ತಿದ್ದಂತಯೇ ಕೃಷ್ಣಾ ಮುಕುಂದ ಮಳಗಿ ಕೊನೆಯುಸಿರೆಳೆದ.

ಇಟಗಿ ಗಂಜಿಕೇಂದ್ರ ಪೋಲೀಸ್ ಪಾಟೀಲ್ ಇಸ್ಮಾಯಲ್ ಸಾಹೇಬರ ಮನೆಯಲ್ಲಿ ಅವರು ಇಪ್ಪತ್ತು ನಡೆ ದನಕರುಗಳು ಎತ್ತುಗಳು ಇದ್ದ ಮಧ್ಯಮ ವರ್ಗದ ರೈತ. ಮೇವಿನ ಅಭಾವದಿಂದ 14ಜಾನುವಾರುಗಳು ಸತ್ತವು. ಉಳಿದವನ್ನು ಸಿಕ್ಕಿದ ಬೆಲೆಗೆ ಮಾರಿ ಕುಟುಂಬ ಸಹಿತ ಅವರು ಪಟ್ಟಣ ಸೇರಿದ್ದಾರೆ. ಮನೆ ಮುರಿದು, ಕೊಟ್ಟಿಗೆ ಬರಿದು, ಗೋಶಾಲೆ ಬರಿದು ಬರಿದೋ ಬರಿದು. ಆ ಊರಿನ ನೂರಾರು ಒಕ್ಕಲಿಗರ ಮನೆ ಮಠಗಳಂತೆ ಆ ಖಾಲಿ ಗೋಶಾಲೆ ಈಗ ಗಂಜಿ ಕೇಂದ್ರದ ಪಾಕಶಾಲೆ.ಮುತ್ತಿಗೆ ಮತ್ತು ಜೀವಣಗಿ-ಚಿತ್ತಾಪೂರ ತಾಲೂಕಿನ ಜೀವಣಗಿ ಕಾಗಿನಾ ಹೊಳೆಯ ಇಕ್ಕೆಲಗಳಲ್ಲಿ ಇರುವ ಊರುಗಳು. ನದಿಯಲ್ಲಿ ತಟಕು ನೀರಿಲ್ಲ. ಊರ ಹೊಲಗಳಲ್ಲಿ ಕಳೆದ 3ವರ್ಷಗಳಿಂದ ಒಂದು ಕಾಳು ಬೆಳೆ ಇಲ್ಲ. ಊರು ಸಂಪೂರ್ಣ ಮರಳುಗಾಡು. ಜನಸಂಖ್ಯೆಯಲ್ಲಿ ಮುಕ್ಕಾಲು ಪಾಲು ಊರು ಬಿಟ್ಟು ಹೋಗಿದ್ದಾರೆ. ..360ಗುಡಿಗಳ, 360 ಲಿಂಗಗಳ ಊರು ಶಿಗ್ಗಾಂವಿ (ದಿಗ್ಗಾಂವಿ). ಈಗ ಕುಡಿಯುವ ನೀರಿಗೆ ಪರದಾಟ ಪಡುತ್ತಾ ಪ್ರೇತ ಕಳೆ ಹೊತ್ತಿದೆ. ರಾಜಸ್ಥಾನ ಸಮಾಜದ ದೇಣಿಗೆಯಿಂದ ಅಲ್ಲೊಂದು ಗಂಜಿ ಕೇಂದ್ರ ನಡೆದಿದೆ.......ಲಂಬಾಣಿ ಜನರ ತಾಂಡಾಗಳಿಂದ ಸುತ್ತುವರಿದ ಲಾಡ್ಲಾಪೂರು, ಹಣಕೇರಾ ಗ್ರಾಮ-ನಾಲ್ಕಾರು ಜನ ಸ್ವಾತಂತ್ರ್ಯ ಹೋರಾಟಗಾರರಿಗೆ ಜನ್ಮ ಕೊಟ್ಟ ಹೆಮ್ಮೆಯ ಮುಡಬೋಳ ಗ್ರಾಮ(ಈಗ ಜಗಳಗಂಟರ ಊರೆಂದು ಕುಪ್ರಸಿದ್ಧ) ಬಡವರ ಪರಿಸ್ಥಿತಿ ಈಗ ಹೇಳಿಕೊಳ್ಳಲಾರದಷ್ಟು ಶೋಚನೀಯ.... ಹಲಕರ್ಟಿ ಗ್ರಾಮದ ವೀಭದ್ರೇಶ್ವರ ಗುಡಿಯ ಕೀರ್ತಿ ಮುಂಬೈ, ಗುಜರಾತದ ತನಕ ಹಬ್ಬಿದೆ. ಈ ವರ್ಷ ಈ ಗ್ರಾಮದ ಭಕ್ತಾದಿಗಳ ಸುಳಿವೇ ಇಲ್ಲದೆ ಸಪ್ಪೆಯಾಗಿ ಜಾತ್ರೆ ಕಳೆಯಿತು. ತೊನಸಹಳ್ಳಿ, ಮಲಕೂಡ, ತೆಂಗಳಿ, ಸೂಲಹಳ್ಳಿ, ಕಮ್ಮರಡಗಿ, ಕೊಲ್ಲೂರು, ಆಲಹಳ್ಳಿ, ಕರದಳ್ಳಿ-ಪ್ರತಿಯೊಂಧು ಹಳ್ಳಿಯಲ್ಲಿಯೂ ಬರಗಾಲದ ರುದ್ರ ನೃತ್ಯ ನಡೆದೇ ನಡೆದಿದೆ. ಜನ ಅತೀವ ಯಾತನೆ ಪಡುತ್ತಿದ್ದಾರೆ. ಹೆಚ್ಚಿನ ದನಕರುಗಳು ಮತ್ತು ಎತ್ತುಗಳು ನೀರು ಮೇವಿಲ್ಲದೇ ಸತ್ತು ಹೋಗಿವೆ. ಉಳಿದಿರುವ ಅಲ್ಪಂಶ ಜಾನುವಾರುಗಳು ಜನರಂತೆಯೇ ಎಲುಬು ಚರ್ಮದ ಹಂದರವಾಗಿದೆ.

ಧರ್ಮಸ್ಥಳದ ಹೆಗ್ಗಡೆಯವರು, ಪೇಜಾವರ ಮಠದ ಶ್ರೀಪಾದಂಗಳವರು, ಹುಬ್ಬಳ್ಳಿಯ ಮೂರು ಸಾವಿರ ಮಠದ ಜಗದ್ಗುರುಗಳು, ತಲಾ ಎರಡೆರಡು ಅನ್ನದಾನ ಶಿಬಿರಗಳನ್ನು ತೆರೆದಿದ್ದಾರೆ. ಬಟ್ಟೆ ಹಂಚಿದ್ದಾರೆ. ಒಂದೆರಡು ಹಳ್ಳಿಗಳಲ್ಲಿ ಸ್ಥಳೀಯರು ಗಂಜಿ ಕೇಂದ್ರಗಳನ್ನು ಪ್ರಾರಂಭಿಸಿದ್ದಾರೆ. ಚಿತ್ತಾಪೂರ ಯುವಕ ಸಂಘವು ಒಂದೇ (18) ಗಂಜಿ ಕೇಂದ್ರಗಳನ್ನು ತೆರೆದು ಪ್ರತಿನಿತ್ಯ 25ಸಹಸ್ರ ಬಡ ಅನಾಥ ವೃದ್ಧರಿಗೆ ಮಧ್ಯಾಹ್ನ ಉಣಬಡಿಸುತ್ತಿದೆ. ಬರಗಾಲ ಪೀಡೊಇತ ಪ್ರದೇಶದ ತಮ್ಮ ಅಳಿಲ ಸೇವೆ ಎಂದು ಯುವಕ ಸಂಘದ ಅಧ್ಯಕ್ಷರು ಹೇಳಿದರೂ ಫಂಜಾಬಿನ ರಾಜ್ಯಪಾಲರಾಗಿದ್ದ ಡಾ.ಡಿ.ಸಿ. ಪಾವಟೆಯವರೂ, ಹುಬ್ಬಳ್ಳಿಯ ಜಗದ್ಗುರುಗಳೂ, ರಾಜಸ್ಥಾನ ಸಮಾಜ, ಸಜ್ಜನ ಸಮಾಜ, ಕ್ರೈಸ್ತ ಸೇವಾ ಸಂಸ್ಥೆಗಳು ಹಾಗೂ ಸ್ಥಳೀಯ ದಾನಿಗಳ ದೇಣಿಗೆಯಿಂದ ಸುಮಾರು 1ಲಕ್ಷದ 20ಸಾವಿರ ರೂಪಾಯಿಗಳ ಅಂದಾಜು ವೆಚ್ಚದಲ್ಲಿ ನಡೆಸುತ್ತಿರುವ ಈ ಯುವಜನರ ಬರಗಾಲ ಸೇವೆ ಪ್ರಶಂಸನೀಯ. ಅನುಷ್ಠಾನ ಅತ್ಯಂತ ಅನ್ಯಾದರ್ಶ. ಈಗ ಸಹಸ್ರ ರೂಪಾಯಿ ಸಂಗ್ರಹವಾಗಿದ್ದು ಸರಕಾರದ ನೆರವೂ ಸೇರಿದಂತೆ ಇನ್ನುಳಿದ ಹಣಕ್ಕಾಗಿ ಕೊಡುಗೈಯ ದಾನಿಗಳಲ್ಲಿ ಯೋಚನೆ ನಡೆದಿದೆ. ಕಾಶ್ಮೀರದಿಂದ ಕನ್ಯಾಕುಮಾರಿಯ ತನಕ ಯುಕರು ಹಾದಿತಪ್ಪಿ ಬೀದಿಗೊಂದಲ, ಘೇರಾವೋ, ಸ್ಟ್ರೈಕುಗಳಲ್ಲಿ ನಿರತರಾಗಿದ್ದರೆ ಇಲ್ಲಿನ ಕಠಿಣ ಪರಿಸ್ಥಿತಿಯನ್ನು ಅನುಲಕ್ಷಿಸಿ ಯುವಕರು ಸೇವಾ ಕಾರ್ಯಗಳನ್ನು ಪರಿಕ್ಷಾರವಾಗಿ ನಡೆಸುತ್ತಿರುವುದನ್ನು ಕಾಣಲು ಹರ್ಷವಾಗುತ್ತಿದೆ ಎಂದು ಸೇಡಂನ ಅಸಿಸ್ಟೆಂಟ್ ಕಮೀಶನರ್ ಶ್ರೀ ಸುರೇಶ ಅವರು ಪ್ರಶಂಶಿಸುತ್ತಿರುವುದು ಅತಿಶಯೋಕ್ತಿಯಲ್ಲ.

* * * *

# ಮಾರಪ್ಪ ಮಾಷ್ಟ್ರ ವ್ಯಕ್ತಿತ್ವ

## ನೆನಪಿನ ಕೆಲವು ಬಿಂಬಗಳು

( ಡಾ॥ ಎಂ.ಬಿ ಮರಕ್ಕಿಣಿಯವರ ತೀರ್ಥರೂಪರಾದ ದಿ॥ಮರಕ್ಕಿಇಣಿ ಗುರಿಕ್ಕಾರ ನಾರಾಯಣಭ ಭಟ್ಟರ ಮನೆ, ಅಡಿಕೆ ತೋಟ ಮತ್ತು ದಿ॥ ನರ್ಕಳ ಮಾರಪ್ಪ ಶೆಟ್ಟರ ಮನೆ, ಅಡಿಕೆತೋಟಗಳ ನಡುವೆ , 'ಮುರೆ' ಗೋವಿಂದ ಭಟ್ಟರ ಅಡಿಕೆ ತೋಟವಿದ್ದರೂ ಬಹಳ ಆತ್ಮೀಯರಾಗಿದ್ದು ಆಗಾಗ ಪರಸ್ಪರರ ಮನೆಗೆ ಭೇಟಿ ಕೊಡುತ್ತಿದ್ದ ಸಂದರ್ಭಗಳು ಅನೇಕ. ದಿ॥ನರ್ಕಳ ಮಾರಪ್ಪಶೆಟ್ಟರ ಪತ್ನಿ ಹಾಗೂ ದಿ॥ ನಾರಾಯಣಭಟ್ಟರ ಪತ್ನಿ, ಬಂಧುಗಳೆನ್ನುವ ರೀತಿಯಲ್ಲಿ ಮನೆಗೆ ಬಂದು ಸಂಜೆ ಹೊತ್ತು ಮಾತನಾಡುತ್ತಿದ್ದುದನ್ನು ಮರೆಯುವಂತಿಲ್ಲ. ಶ್ರೀ ಮರಕ್ಕಿಣಿಯವರು ಹೊಸಗನ್ನಡದೊಂದಿಗೆ ಹವೀಕ ಭಾಷೆಯ ನುಡಿಗಟ್ಟು ಮಾತುಗಳನ್ನು ಪೋಣಿಸಿಕೊಂಡು ರಸಭರಿತವಾದ ಲಘು ಶೈಲಿಯಲ್ಲಿ ಲೇಖನಿಸಿದ್ದಾರೆ).

### ಬಿಂಬ1: ನಾನು ಅತ್ತರೆ–ಬಾಳಹಣ್ಣು ಸಕ್ಕರೆ

ಸುಮಾರು 70ವರ್ಷಗಳ ಹಿಂದಿನ ಸಂಗತಿ: ಆಗ ನನಗೆ ಪ್ರಾಥಮಿಕ ಶಾಲೆಗೆ ಸೇರುವ ವಯಸ್ಸು ಕೂಡಾ ಆಗಿರಲಿಲ್ಲ. ಮನೆಯಲ್ಲಿ ಚಿಕ್ಕತಂಗಿ 'ಅಚ್ಚುಮಿ' (ಲಕ್ಷ್ಮಿ)ಯನ್ನು ಆಗಾಗ ಅಳಿಸುತ್ತ, ಸ್ವಲ್ಪ ಸ್ವಲ್ಪ ನಗಿಸುತ್ತ 'ಲೂಟಿ' ಮಾಡುತ್ತ 'ಸೊಕ್ಕಿಗೊಂಡು' (ಆಡಿಕೊಂಡು) ಹೊತ್ತು ಕಳೆಯುತ್ತಿದ್ದ 'ಘಟಿಂಗಮಾಣಿ' ನಾನು. ದನಗಳ ಕೆದೆ (ಕೊಟ್ಟಿಗೆ)ಯ 'ಬೈಪ್ಪಾಣೆ' (ಗೋದಲಿ)ಯನ್ನು ಹತ್ತಿ–ಇಳಿದು ಸರ್ಕಸ್ ಮಾಡುತ್ತ, 'ಜೆಗಿಲಿ'ಯಲ್ಲಿ ಕಟ್ಟಿಹಾಕಿದ್ದ ಕಂಜಿ (ಕರು)ಗಳೊಡನೆ ಸ್ವಲ್ಪ ಆಟವಾಡುತ್ತ, 'ಮಣ್ಣಚಿಟ್ಟೆಯ' ಮೇಲೆ ಸದಾ ಸಂಕಲೆ ಬಿಗಿದುಕೊಂಡೇ ಬಿದ್ದುಕೊಂಡಿದ್ದು – ಅಲ್ಲಿಂದಲೇ 'ಗುರ್ರ್' ಎನ್ನುತ್ತಿದ್ದ 'ಕಾಜು' ನಾಯಿಯನ್ನು ಬೊಂದಿಷ್ಟು ಕೆಣಕುತ್ತ ಹೊತ್ತು ಕಳೆಯುತ್ತಿದ್ದೆ. ಒಮ್ಮೊಮ್ಮೆ ಕೆಲಸದ ಆಳುಗಳು 'ನೀರುತೋಕು'ತ್ತಿದ್ದ ಮನೆ ಎದುರಿನ ಮೇಗಾಣ ತಟ್ಟಿಗೆ (ತೋಟದ ಭಾಗ) ಹೋಗಿ ಬರುತ್ತಿದ್ದೆ.

ಒಂದು ದಿನ ಮಧ್ಯಾಹ್ನ ಊಟ ಮುಗಿಸಿ ಅಚ್ಚುಮಿಯನ್ನು ಅಜ್ಜಿಯ 'ಸುಪರ್ದಿ'ಗೆ ಹಾಕಿ, ನನಗೆ ಅಂಗಿ ಚಡ್ಡಿ ತೊಡಿಸಿ ಅಮ್ಮ 'ಮೆಲ್ಲಂಗೆ ಕೈ ಹಿಡ್ಕೊಂಡು ಬಾ' ಎಂಧು ನನ್ನನ್ನು ಹೊರಡಿಸಿಕೊಂಡು ತೋಟಕ್ಕೆ ಇಳಿದರು. ಕೊಂಬುತಟ್ಟು, ಗುಂಡಿತಟ್ಟು ಬರೆಕರೆ–ಹೀಗೆ ನಾಲ್ಕಾರು ತಟ್ಟುಗಳನ್ನು ದಾಟಿ–'ಆ ಚಿಕ್ಕಾಣ ಮನೆ'ಯನ್ನೂ ಹಾಯ್ದು ಇನ್ನೂ ಎರಡು ಅಡಿಕೆತೋಟದ ತಟ್ಟುಗಳನ್ನು 'ಅಡ್ಡದಾಂಟಿ', ಒಂದು 'ಸೋಗೆ ಮಾಡಿನ' ಮನೆಯ ಅಂಗಳಕ್ಕೆ ತಲುಪಿದೆವು. ಅಲ್ಲಿ ಆಡುತ್ತಿದ್ದ ಇಬ್ಬರು ಹುಡುಗಿಯರು "ಅಪ್ಪೇ ಏರೋ ಬತ್ತೆರ್" ಎಂದು ಅಲ್ಲಿಂದಲೇ ವರದಿ ಮಾಡಿದರು. ಮರುಗಳಿಗೆಯಲ್ಲಿ "ಬನ್ನಿ ಗೌರಮ್ಮ" ಎಂದು ಆ ಮನೆಯ ಯಜಮಾನ್ತಿ ನಮ್ಮನ್ನು ಸ್ವಾಗತಿಸಿದರು. ಅವರು ರಾಮಕ್ಕ ಶೆಡ್ತಿ–ಮಾರಪ್ಪ ಶೆಟ್ರ ಶ್ರೀಮತಿ. ಮರಕ್ಕಣಿ ಬ್ರಾಹ್ಮಣರ ಮನೆಗಳ ಸಾಲಿನಲ್ಲಿ ಅದೊಂದೇ ಬೇರೆ ಜಾತಿ ಮೆನ. ಮನೆಯ ಅಂಗಳ ಗುಡಿಸಿ ಚೊಕ್ಕಟವಾಗಿತ್ತು. ಅಲ್ಲೇ ಒಂದು ಮೂಲೆಯಲ್ಲಿ ಕಾಲು ತೊಳೆಯಲು ಸಣ್ಣ ಮಣ್ಣಿನ 'ಮಂಡಗೆ' ತುಂಬಿಟ್ಟ ನೀರು : ಉದ್ದ ಹಿಡಿಕೆಯ ತಂಗಿನ ಗೆರಟೆಯ 'ಒರಂಕ' (ನೀರುಮೊಗೆಯುವ ಸಾಧನ) ಸಿಮೆಂಟು ಕಟ್ಟೆಯ ಮೆಟ್ಲು, ದೊಡ್ಡಚಾವಡಿ–'ಕೆಂಪುದಾಜಿಯ 'ಮಿಂಚೊರೆ' ಹಾಕಿ ಕಲ್ಬುಡಿ ಗಾರೆ ಕಳ ಕಳ ಹೊಳೆವ ನೆಲ, ಸುಣ್ಣ ಹಚ್ಚಿದ ಗೋಡೆ; ಬಾಗಿಲಿಗೆ ಎದುರಾಗಿ ಒಂದು ಮೇಜು; ಎರಡು ಕುರ್ಚಿ ಗೋಡೆಗೆ ಒತ್ತಿ ಒಂದು ಬೆಂಚು. (ಇನ್ನೊಂದು 'ಹೊಡೆ'ಯಲ್ಲಿ ಮಕ್ಕಳಿಗೆ ಓದು –ಬರೆಯಲು ಅನುಕೂಲವಾದ ಒಂದು ಡೆಸ್ಕ್') ಒಟ್ಟಾರೆ ನೋಡಿದರೆ ನಮ್ಮ ಹವೀಕರ ಮನೆಗಳಿಗೂ ಈ ಮನೆಗಳಿಗೂ ಏನೂ ವ್ಯತ್ಯಾಸವಿಲ್ಲ. ಅದಕ್ಕೇ ಇರಬೇಕು–ಸುತ್ತು ಮುತ್ತಲಿನ ಪ್ರಭಾವದಿಂದ ಮನೆಯ ಎಲ್ಲರೂ ಹವ್ಯಕ ಭಾಷೆಯನ್ನು ಚೆನ್ನಾಗಿ ಮಾತಾಡಲು ಕಲಿತಿದ್ದರು.

ಅಮ್ಮ ಮತ್ತು ರಾಮಕ್ಕೆ ಬಳ್ಳೇ ಸ್ನೇಹಿತೆಯರಾಗಿದ್ದರು; ಎಂದಾರೊಮ್ಮೆ ಪರಸ್ಪರ ವಿರಾಮವಾಗಿ ಎಂಬಂತೆ ಭೇಟಿಯಾಗುತ್ತಿದ್ದರಿಂದಲೋ ಏನೋ ಅವರು ಅನ್ಯೋನ್ಯತೆಯಿಂದ ತುಂಬಾ ಹೊತ್ತು ಮಾತನಾಡುತ್ತಿದ್ದರು. ನನಗೆ ಮಾತ್ರ ಯಾಕೋ –'ಉದಾಸನ'. ಮಾತನಾಡಲು, ಆಡಲು ಜತೆಯಿಲ್ಲದೆ 'ಹೊತ್ತು ಹೋಗದ 'ಅಸಕ್ಕ'. ತಮ್ಮ ಆಸಕ್ತಿಯ ಮಾತುಕತಯಲ್ಲೇ ಮುಳುಗಿದ್ದ ದೊಡ್ಡವರಾಗಲಿ, ತಾವು ಆಡುತ್ತಿದ್ದ 'ಕಲ್ಲಾಟದಲ್ಲಿ' ತಲ್ಲೀನನಾಗಿದ್ದ ಆ ಇಬ್ಬರು ಹುಡುಗಿಯರಾಗಲಿ–ನನ್ನನ್ನು ಗಣನೆಗೇ ತಂದುಕೊಳ್ಳಲಿಲ್ಲ. ಹೇಗೋ ಇನ್ನೂ ಸ್ವಲ್ಪ ಹೊತ್ತು ಕಳೆದೆ. ಅನಂತರ 'ಗುಸುಂ ಗುಸುಂ....ಕುಸುಂ...ಕುಸುಂ' ಅಂತ 'ವಾರ್ನಿಂಗ್ ಸಿಗ್ನಲ್' ಹೊರಡಿಸಿದರೂ ಯಾರೂ ಅದಕ್ಕೆ ಗಮನವನ್ನೇ ಕೊಡಲಿಲ್ಲ. ಈ ತಬ್ಬಲಿತನ ನನಗೆ ಅಸಹನೀಯವಾಯಿತು.

'ಸುರ್ ಸುರ್' ಎಂದು ಮೊದಲು ಮೂಗಿನ ಶಬ್ದವೂ ಪರಿಣಾಮಕಾರಿಯಾಗದಿರಲು, ಮಧ್ಯಮ ದನಿಯಿಂದ 'ಅಳುರಾಗ' ಹಾಡಲು ಪ್ರಾರಂಭಿಸಿದೆ! ಏನಾಶ್ಚರ್ಯ! ಅಮ್ಮ ಅವರ ಗೆಳತಿ– ಇಬ್ಬರೂ 'ಎಂತಾತು ಮಗಾ' ಎಂದು ಹತ್ತಿರ ಬಂದು, ಮೈ ಕೈ ಸವರುತ್ತ ಸಂತೈಸತೊಡಗಿದರು. ನನ್ನ ಅಳು ಇನ್ನಷ್ಟು ಜೋರಾಯಿತು–'ಎಂತಾತು ಹೇಳು' ಎಂದು ಕೇಳುತ್ತಿದ್ದಂತೆಯೇ ಅಮ್ಮನ ಗೆಳತಿ ಒಳಗಿನ ಕೋಣೆಗೆ ಹೋಗಿ ಎರಡೇ ನಿಮಿಷದಲ್ಲಿ ಹೊರಗೆ ಬಂದರು; ಕೈಯಲ್ಲೊಂದು ತಟ್ಟೆ–ತಟ್ಟೆಯಲ್ಲಿ ಎರಡು ವಬಾಳೆಹಣ್ಣು, ಒಂದಿಷ್ಟು ಸಕ್ಕರೆ! ಸಕ್ಕರೆ–ಬಿಳಿ ಸಕ್ಕರೆ ಕಂಡಕೂಡಲೇ ನನ್ನ ಅಳು ನಿಂತೇ ಹೋಯಿತು! ಏಕೆಂದರೆ – ಬಾಳೆಹರ್ಣಣು ನಮ್ಮ ಮನೆಯಲ್ಲೂ ಸಿಕ್ಕುತ್ತಿತ್ತು; ಆದರೆ ಸಕ್ಕರೆ–ಆಹಾ! ಎಷ್ಟು ಸಿಹಿ, ಎಷ್ಟು ಸಿಹಿ!... ಸಂಜೆ ಶಾಲೆ ಬಿಟ್ಟು ಅಣ್ಣ ಮನೆಗೆ ಬರುವುದೇ ತಡ, " ಆನು ಇಂದು ಬಾಳೆಪಣ್ಣು 'ಶೆಕ್ಕರೆ' ತಿಂದಿದೆ–ಮಾರಪ್ಪ ಮಾಷ್ಟ್ರಮನೆಯಲ್ಲಿ ಹೋಗಿಪ್ಪಗೆ' ಎಂದು ಅಣಕಿಸುತ್ತ ಹೇಳಿದೆ...

'ಮಾರಪ್ಪ ಮಾಷ್ಟ್ರ ನೀನೆಲ್ಲಿ ನೋಡಿದ್ದೆ? –ಆಹಾಹ–ಮೂಡಂಬೈಲು ಶಾಲೆಲಿಯೋ? ಎಂದು ಪ್ರತ್ಯಸ್ತ್ರ ಬರಲು 'ಹೊಯ್ ಕೈ'ಗೆ ಸಿದ್ಧವಾದಾಗ, ಸುಮ್ಮನೆ ಕೂರಿ ಬಾಯಿ ಮುಚ್ಚಿಗೊಂಡು....ಲಡಾಯಿ ಮಾಡ್ತವು–ಬಿಕನಾಶಿಗೊ" ಎಂದು ಅಜ್ಜಿ ಘಟನೆಗೆ 'ಫುಲಿಶ್ಟಾಫ್' ಹಾಕಿದರು.

## ಬಿಂಬ2: ಎಲ್ಲಿ, ಮಾರಪ್ಪೇ ಇಲ್ಲವಲ್ಲಾ!

ಒಂದು ಬೆಳಗಿನ ಹೊತ್ತು–ಬಾವಲಿ ಕಚ್ಚಿ ಕೆಳಗೆ ಹಾಕಿದ್ದ ಹಣ್ಣಡಿಕೆಯನ್ನು ಅಡಕ್ಕೆ ಮರದ ಬುಡದಿಂದ ಹೆರ್ಕಿ ಸಂಗ್ರಹಿಸಲು, ಸಣ್ಣ 'ಕವಂಗ' (ಬಿದಿರುದಬ್ಬೆಯ ಕೈಚೀಲ) ಹಿಡಿದುಕೊಂಡು ಅಣ್ಣನೊಟ್ಟಿಗೆ ತೋಟಕ್ಕೆ ಹೋಗಿದ್ದೆ. ಅಂದು ಸ್ವಲ್ಪ ತಡವೇ ಆಗಿತ್ತು– ಗಂಜಿ ಊಟಕ್ಕೆ ಹೊತ್ತು ಮೀರಿತ್ತು ಎಂಬುದು ನಿಜ. ಆದರೇನಂತೆ ಆದಿತ್ಯವಾರವಾದ್ದರಿಂದ ಶಾಲೆಗೆ ಹೋಗುವ 'ರಗಳೆ'ಯಂತೂ ಇರಲಿಲ್ಲವಲ್ಲ! ಅಡಿಕೆ ತುಂಬಿದ ಕವಂಗವನ್ನು ಅಂಗಳದಲ್ಲಿ ಒಣಗಲು ಹಾಕಿದ ಅಡಿಕೆ ಹರಡಿದಲ್ಲಿಗೆ ಸೇರಿಸಿ, ಕೈಕಾಲು ತೊಳೆದುಕೊಂಡು ಸೀದಾ ಮನೆ ಒಳಗೆ ಹೋಗಬೇಕೆನ್ನುವಷ್ಟರಲ್ಲಿ ಚಾವಡಿಯಲ್ಲಿ ಹಾಸಿದ್ದ ಚಾಪೆಯ ಮೇಲೆ ಕುಳಿತು ಯಾರೋ ಮಾತನಾಡುತ್ತದ್ದವರು ಎದ್ದು "ಹಾಂಗಾದರೆ ಆನಿನ್ನು ಬತ್ತೆ ಗುರಿಕ್ಕಾರ್ರೆ. ನಿಂಗೊ ಹೇಳಿದ ಮಾತು ಅವಕ್ಕೆ ಮುಟ್ಟಿಸುತ್ತೆ. ಸುಮ್ಮನೆ ಬಡುದು ಬಿದ್ದುಗೊಂಬುದು ಎಂತದಕ್ಕೆ–ಅದೂ ಅಣ್ಣ ತಮ್ಮಂದ್ರು ಹೇಳಿ, ನಿಂಗಳ ಹತ್ತರೆ ಈ ಸಂಗತಿ ಹೇಳ್ದೆ ಬಂದದು–ಆತು– 'ಗುರುಕ್ಕಾರ್ರು ಹೀಂಗೆ ಹೇಳ್ತವು' ಹೇಳಿ, ಅವಕ್ಕೆ ಸ್ವಚ್ಛ ಹೇಳಿದರೆ ಎಲ್ಲ ಸರಿಯಕ್ಕು– " ಎಂದು ಹೇಳುತ್ತ ಹೊರಗೆ ಹೊರಟರು. 'ಅದು ಆರದು ಪುಟ್ಟಣ್ಣಾ' ಎಂದು

ಅಣ್ಣನನ್ನು ಪಿಸುಮಾತಿನಲ್ಲಿ ಕೇಳಿದೆ. 'ಓಹೋ, ಇಷ್ಟೆಯೋ ನಿನ್ನ ಜರ್ಬು? ಅಂದು ಮಾರಾಪು ಮಾಷ್ಟ್ರು-ಹೇಳಿ-ಎಂದು ಹೇಳಿ ಮುಗಿಸುವ ಮೊದಲೇ ಚಾವಡಿಗೆ ಹಾರಿದೆ; 'ದಳಿ'ಎಡೆಯಿಂದ ಇಣುಕಿದೆ. ಎತ್ತರದ ಜೀವ; ಬಿರ ಬಿರನೆ ನಡೆಯುವ ಬೆನ್ನು ಮಾತ್ರ ಕಂಡಿತು. "ಓಹೋ ಮಾರಾಪು ಮಾಷ್ಟ್ರು ಹೇಳಿದರೆ...." ಅರೆ! ಮಾರಾಪೆಲ್ಲಿ? ಬೆನ್ನಿಗೆ ಹಾಯಿಕ್ಕೊಂಡೂ ಕಾಣ್ತಿಲ್ಲೆ; ಹೆಗಲ್ಲಿಯೂ ಇಲ್ಲೆ; ಮತ್ತೆ ಹೇಂಗೆ ಮಾರಾಪು ಮಾಷ್ಟ್ರು?" ಎಂದು ಅಣ್ಣನನ್ನು ಪ್ರಶ್ನಿಸಿದೆ. ಅಣ್ಣ ಮತ್ತೊಮ್ಮೆ ಗಹಗಹಿಸಿ ನಕ್ಕು, "ಮಾರಾಪು ಮಾಷ್ಟ್ರು ಹೇಳಿದರೆ, ಮಾರಾಪು ಇಪ್ಪ ಜೆನ ಹೇಳಿ ಅಲ್ಲ; ಮಾರಪ್ಪ ಶೆಟ್ಟಿ ಹೇಳಿ ಹೆಸರು; ಮೂಡಂಬೈಲು ಶಾಲೆ ಇಲ್ಲೆಯೋ -ಅಲ್ಲಿ ಮಾಷ್ಟ್ರು-ಹೆಡ್ಮಾಷ್ಟ್ರು, ಎಲ್ಲೋರು ಪ್ರೀತಿಂದ 'ಮಾರಾಪು ಮಾಷ್ಟ್ರು' ಹೇಳಿ ಹೇಳ್ತವು ಅಷ್ಟೆ' ಎಂದರು.

## ಬಿಂಬ3: 'ಪರಡೆ ಕಳಿ-ಗಂಡಸರೊ'- ಒಂದು 'ಪರೇಡ್'

ನಮ್ಮ ಮನೆಯಲ್ಲೊಂದು 'ಜೆಂಬ್ರ' (ಹೆಚ್ಚುಕಟ್ಟಲೆ ಕಾರ್ಯಕ್ರಮ) ಇತ್ತು. ಅದಕ್ಕಾಗಿ ಬಂದಿದ್ದ ನೆಂಟರಿಷ್ಟರಲ್ಲಿ ಹೆಚ್ಚಿನವರು ಸಂಜೆಯೇ ಹೊರಟು ಹೋಗಿದ್ದರು. ತೀರ ಸಮೀಪದ ಬಂಧುಗಳು ಕೆಲವರು ಮಾತ್ರ ಇನ್ನೊಂದು ದಿನ ಇದ್ದು ಹೋದರಾಯಿತು ಎಂದ ಝುಂಡಾ ಊರಿದ್ದರು. ಅವರ ಮಕ್ಕಳನ್ನೆಲ್ಲ ಎರಡನೇ ದಿನ ಜಮಾಯಿಸಿ, ಬೆಳಗ್ಗಿನ ಗಂಜಿ ಊಟ ಮುಗಿಸಿ, ಹೊರಗೆ ತೋಟ-ಗದ್ದೆ ಎಲ್ಲ ಸ್ವಲ್ಪ ತಿರುಗಾಡಿಸಿಕೊಂಡು ಬಂದದ್ದಾಯಿತು; ಚಪ್ಪರ ಹಾಕಿದ ಅಂಗಳ-ಆಡಲು ಪ್ರಶಸ್ತವಾಗಿತ್ತು; ಹುಗ್ಗಾಟ, ಕಳ್ಳ ಪೋಲೀಸ್ ಆಟ ಅಂತ ನಾಲ್ಕಾರು ಮಕ್ಕಳ ಆಟಗಳನ್ನು ಆಡೊಇದೆವು. ಪಳ್ಳಿಯಲ್ಲಿ 'ಬಾಂಕ್ ಕೊಡುವುದು, ಪಂಜುರ್ಲಿಭೂತದ ಒಡ್ಡೋಲಗ, ಮಂಗನ ಕುಣಿತದ ಅಣಕವೂ ಆಯಿತು.-ಇವೆಲ್ಲ 'ಮಾಮೂಲಿ'; ಹೊಸತೇನನ್ನಾದರೂ ಆಡಬೇಕೆಂದು ತೋರಿದ್ದೇ ಸರಿ-ತಕ್ಷಣ ಒಂದು 'ಪೆರೇಡ್'ಗೆ ರೆಡಿ ಮಾಡಿಕೊಂಡೆವು

ಅಂಗಳದ ಮೂಲೆಯಲ್ಲಿ ' ಅಡಕ್ಕೆ ಸೊಪ್ಪಿ'ನ ರಾಶಿಯನ್ನೇ ಸೃಷ್ಟಿಸುತ್ತ 'ಗೋಯಿಂದಪ್ಪು' ಅಡಿಕೆ ಸುಲಿಯುವುದರಲ್ಲಿ ತಲ್ಲೀನನಾಗಿದ್ದು ನಮ್ಮ ಕಡೆಗೆ ದೃಷ್ಟಿ ಕೂಡ ಹಾಯ್ಸಲಿಲ್ಲ. ಗೋಯಿಂದಪ್ಪು ಅಡಕೆ ಸುಲಿಯುವುದರಲ್ಲಿ ಹಾಗೂ ಕತೆ ಹೇಳುವುದರಲ್ಲಿ ನಸ್ಸೀಮ. ಅಂತೆಯೇ ಹೆಂಡು ಕುಡಿಯುವುದರಲ್ಲಿ ಕೂಡ. ಈಗ ಹಳೆ ಹಳೆ 'ಚೋಕುಪರಬ್ಬ' (ಮುದುಕ)ನಾದ್ದರಿಂದ, ಅಡಕೆ ಸುಲಿದು ದಿವಸಕ್ಕೆ 'ನಾಲ್ಕು ಮುಕ್ಕಾಲು' ಗಳಿಸುತ್ತಿದ್ದ-ಸಂಜೆ ಕುದ್ದುಪದವಿನ ಹೆಂಡದಂಗಡಿಗೆ ಹಾಜರಿ ಕೊಟ್ಟು 2 'ಚಿಪ್ಪಿ' ಹುಳಿಹೆಂಡ 'ನೇಟ್' (ಕುಡಿದು) ತೂರಾಡುತ್ತಾ, ಆಡುತ್ತಾ ದೊಡ್ಡ ದನಿಯಲ್ಲಿ ಯಾವುದೋ ಪದವನ್ನು ಪೆದ್ದು ಪೆದ್ದಾಗಿ ಹಾಡುತ್ತ ನಡುರಾತ್ರಿ

ಮನೆ ತಲುಪುತ್ತಿದ್ದ. ಆಗ ಪಾನನಿರೋಧ ಚಳವಳಿ ನಡೆಯುತ್ತಿತ್ತು. ಶಾಲೆಯ ಏಳನೆಯ ಎಂಟನೇ ಕ್ಲಾಸಿನ ಮಕ್ಕಳು 'ತಿಂಗಳ ಹಬ್ಬದಲ್ಲಿ' ಅಂಥ ಒಂದು ಕಿರು ನಾಟಕವನ್ನಾಡಿದ್ದರು. ನಮ್ಮ ವಾನರಸೇನೆ ಎರಡು ಸಾಲಿನಲ್ಲಿ ನಿಂತರು-ಗೋಯಿಂದಪ್ಪು ಎದರು, ಒಂದನೇ ಸಾಲು 'ಅಮಲ್ ದೆಪ್ಪಡೆ' ಎಂದು ಹೇಳಿದರೆ ಎರಡನೇ ಸಾಲು 'ಪರಡೆ ಕಳಿ ಗಂಗಸರೊ' ಎಂದು ಪಲ್ಲವಿ ಹೇಳುತ್ತಿತ್ತು. ತಾರಕಸ್ವರದಲ್ಲಿ ಹಲವು ಮರಿ-ಕಿರಿ-ಕಿರಿಕಿರಿ ಕಂಠಗಳ ಕಿರುಚುವಿಕೆಯಿಂದ, ಗೋಯಿಂದಪ್ಪುವಿಗೆ ಎಷ್ಟು ಜ್ಞಾನೋದಯವಾಯಿತೋ ತಿಳಿಯದು. ಅಜ್ಜಿ ಮಾತ್ರ ಒಳಗಿನಿಂದ ಹುಣ್ಸೆ ಅಡರು (ಬೆತ್ತ) ಸಮೇತ ಬಂದು, 'ಮಂಗಂಗಳೇ, ಸುಮ್ಮನೆ ಕೂರ್ತಿರೋ ಇಲ್ಲೆಯೋ' ಎಂದದ್ದಲ್ಲದೆ 'ನಿನ್ನದೇ ಇದೆಲ್ಲ ಕಾರ್ಬಾರ-'ಮಲೆಮಂಗ' ಎಂದು ನನ್ನನ್ನು ಗದರಿಸಿ ಬೆತ್ತ ಬೀಸಿಯೂ ಆಯಿತು. ಅಜ್ಜಿಯ ಕೈಯಿಂದ ತಪ್ಪಿಸಿಕೊಳ್ಳಲು ನಮಗೆ ಹೇಳಿಕೊಡಬೇಕೆ? ಬೆತ್ತದ ರುಚಿ ಗೋಯಿಂದಪ್ಪುಗೆ ಸಿಕ್ಕದ್ದು ಪುಣ್ಯ! (1939ರ ಸುಮಾರಿಗೆ ಕಾಂಗ್ರೆಸ್ ಪಾರ್ಟಿಯ ಮಂತ್ರಿಮಂಡಲ ರಚನೆಯಾಗಿ ಆಗಿನ ಮದ್ರಾಸ್ ಪ್ರಾಂತದಲ್ಲಿ ಅನೇಕ ವಿಧಾಯಕ ಕಾರ್ಯಕ್ರಮಗಳಿಗೆ ಚಾಲನೆ ಸಿಕ್ಕಿತ್ತು; ಅವುಗಳ ಪೈಕಿ ಪಾನನಿಷೇಧವೂ ಒಂದು; ಪಾನ ನಿರೋಧ ಪ್ರಚಾರದಲ್ಲಿ ಮಾರಪ್ಪ ಶೆಟ್ಟರು ಸ್ವತಃ ಸಕ್ರಿಯವಾಗಿ ಭಾಗವಹಿಸಿ ಊರುಊರು ತಿರುಗಿ ಸಭೆ ನಡೆಸಿದರು. ಭಾಷಣ ಬಿಗಿದರು; ಪದ ಕಟ್ಟಿ ಹಾಡಿದರು., ಅದರಲ್ಲಿ ಅತ್ಯಂತ ಜನಪ್ರಿಯ ಪದ ತುಳುವಿನಲ್ಲಿ ಅವರು ರಚಿಸಿದ "ಅಮಲ್ ದೆಪ್ಪಡೆ ಹಾಡಿತ್ತು "ಪರಡೆ ಕಳಿ ಗಂಗಸರೊ" -: (ಮಾದಕ ವಸ್ತು ಸೇವಿಸಬೇಡಿ; ಹೆಂಡ ಸಾರಾಯಿ ಕುಡಿಯಬೇಡಿ).

## ಬಿಂಬ4: ಎದ್ದೇಳಿ (ವೃದ್ಧರೇ) ಕಲಿಯಲು ಬನ್ನಿ (ರಾತ್ರಿ ಸಾಲೆಗೆ)

ದೇಶಕ್ಕೆ ಸ್ವಾತಂತ್ರ್ಯ ದೊರಕುವ ಮುಂಬೆಳಗಿನಲ್ಲಿ (1946ರ ಸುಮಾರಿಗೆ) ಮತ್ತೊಮ್ಮೆ ಕಾಂಗ್ರೆಸ್ ಸರಕಾರ (ಕೇಂದ್ರದಲ್ಲಿ 'ನಡುಗಾಲ ಸರಕಾರ') ಮದ್ರಾಸ್ ಪ್ರಾಂತದಲ್ಲಿ ಬಂತು; ಗಾಂಧೀಜಿಯ ಅನೇಕ ವಿಧಾಯಕ ಕಾರ್ಯಕ್ರಮಗಳಿಗೆ ಪುನಶ್ಚೇತನ ದೊರಕಿತು. 'ವಯಸ್ಕರ ಶಿಕ್ಷಣಕ್ಕೆ' ಈಗ ಅಗ್ರವೀಶ್ಯ, ಹಗಲೆಲ್ಲ ಮೂಡಂಬೈಲು ಶಾಲೆಯಲ್ಲಿ (ಮುಖ್ಯೋಪಾಧ್ಯಾಯರಾಗಿ) ದುಡಿದು (ಪ್ರತಿದಿನ 5ಕಿ.ಮೀ ನಡೆದು ಹೋಗಿ ಹಿಂದಿರುಗಿ) ಸಂಜೆ ಮನೆಗೆ ಬಂದ ತರುವಾಯ ಒಂದು 'ಮೋಕ ಬಂತು ಮಾರಪ್ಪಶೆಟ್ರಿಗೆ. ಆರೋಗ್ಯ ಚೆನ್ನಾಗಿದ್ದರೂ ಆಗಲೇ ವಯಸ್ಸು ಅರ್ಧ ಶತಮಾನ ಮೀರಿತ್ತು; ಆದರೂ, ತರುಣರನ್ನು ನಾಚಿಸುವ ಹುರುಪಿನಿಂದ ಅಡ್ಯನಡ್ಕ ಶಾಲೆಯಲ್ಲಿ 'ರಾತ್ರಿಸಾಲೆ'ಯನ್ನು ಪ್ರಾರಂಭಿಸಿದರು. ಹತ್ತು ಹಲವು ಮನೆಗಳಿಗೆ ತಿರುಗಿ ಕೆಲವು ಶಿಕ್ಷಣಾರ್ಥಿಗಳನ್ನು ಜಮಾಯಿಸಿ ವಯಸ್ಕರ ಶಿಕ್ಷಣವನ್ನು ನಡೆಸತೊಡಗಿದರು.

ಈ ನಡುವೆ ಬೇಸಿಗೆ ರಜೆ. ಪುತ್ತೂರಿನಲ್ಲಿ ಹೈಸ್ಕೂಲ್ ಓದುತ್ತಿದ್ದ ನನಗೆ ಈಗ ಮನೆಯಲ್ಲಿ ಸುಮ್ಮನೆ ಕುಳಿತಿರಲು ಕಷ್ಟವಾಯಿತು. ಅಂತಹ ಗಳಿಗೆಯಲ್ಲಿ ಮರಕ್ಕಿಣಿ ಅಡ್ಕದ 'ಪಳ್ಳಿ' (ಮಸೀದಿಗೆ) ಹೊಸತಾಗಿ ನೇಮಕಗೊಂಡ 'ಮುಕ್ರಿಬ್ಯಾರಿ'ಗಳ (ಮೌಲ್ವಿ) ಮನೆಗೆ ಅವರ ಒಬ್ಬ ಯುವಕ ಬಂಧು ಬಂದ. 'ಇಬ್ರಾಹಿಂ ಕುಂಞ' ಅಂತ. ಸುಮಾರು ನನ್ನಷ್ಟೇ ವಯಸ್ಸು ಕೆಲವೇ ದಿನಗಳಲ್ಲಿ 'ಗಳಸ್ಯ ಕಂಠಸ್ಯ' ಎನ್ನುವಷ್ಟು ಮಿತ್ರರಾದೆವು–ಅದು ಇದು ಮಾತನಾಡುತ್ತ ರಜಾಕಾಲದ ಕಾರ್ಯಕ್ರಮವಾಗಿ 'ರಾತ್ರಿಶಾಲೆ' ಯಾಕೆ ನಡೆಸಬಾರದು ಅಂತ ಒಂದು ಆಲೋಚನೆ ಮೂಡಿದ್ದೇ ಸರಿ– "ಒಂದೇ ತಿಂಗಳಲ್ಲಿ ಅಕ್ಷರಾಭ್ಯಾಸ' ( ಒಂದೇ ತಿಂಗಳಲ್ಲಿ ಇಂಗ್ಲೀಷ್' ಎಂಬಂತೆ) ಎಂಬ ಹೊಸ ಘೋಷಣೆಯೊಂದಿಗೆ 'ಪಳ್ಳಿಯ' ಒಂದು ಬದಿಯಲ್ಲಿ (ತೆಂಗಿನ ಗರಿಯ) ಇಳಿಜಾರು ಚಪ್ಪರ ಎಬ್ಬಿಸಿ ಕ್ಲಾಸ್ ಶುರು ಮಾಡಿಯೇ ಬಿಟ್ಟೆವು! ಮಸೀದಿಯ ಗ್ಯಾಸ್ ಲೈಟಿಗೆ ನಾವು ಇಬ್ಬರೂ ಸರದಿ ಪ್ರಕಾರ ಚಿಮಿಣಿ ಎಣ್ಣೆ ತಂದು ಹಾಕುವುದಕ್ಕೆ ಕೂಡ ಒಪ್ಪಿಕೊಂಡಂತಾಯಿತು. ಮಸೀದಿಯ ಮುಖ್ಯ ಪ್ರೇಶಕರಾದ ಹಾಜಿ ಮೊಯ್ದು ಕುಂಞ ಸಾಹೇಬರಿಂದ ಉದ್ಘಾಟನೆ ಮಾಡಿಸಿದ್ದೂ ಆಯಿತು. ( ಅವರಿಗೆ 'ಗಡ್ಡದ ಅಜ್ಜ' ಎಂದು ಎಲ್ಲರೂ ಕರೆಯುತ್ತಿದ್ದರು) 'ಜನಾಬ್ ' ಬಡುವ ಕುಂಞ ಬ್ಯಾರಿ, ಅವರ ಜೊತೆ ಇನ್ನೊಬ್ಬರು, ದೇವಪ್ಪಾಚಾರಿಯ ಮಗ ನಾರಾಯಣ, ಅವನ ಜೊತೆ ಇನ್ನೊಬ್ಬರು, ಚನಿಯ ನಾಯ್ಕ, ಸುಬ್ಬನಾಯ್ಕ ಅಂತ 5–6 ಜನ ವಿದ್ಯಾರ್ಥಿಗಳು; ಜತೆಗೆ ನಮ್ಮಲ್ಲಿ ಕೆಲಸ ಮಾಡುತ್ತಿದ್ದ ಐತ, ಪಂಜು ಮತ್ತು ಕೊರಗರನ್ನೂ ಸೇರಿಸ ಒಟ್ಟು 10 ಮಂದಿ ಮೊದಲ ದಿವಸವೇ 'ಹಾಜಿರ್ ಸಾರ್' ಎಂದರು . ನಾವು ಉಬ್ಬಿ ಹೋದೆವು. (ವಾರಾಂತ್ಯಕ್ಕಾಗುವಾಗ ಸಂಖ್ಯೆ 20ಕ್ಕೆ ಏರಿತು.)

ರಾತ್ರಿ 8ಕ್ಕೆ ಸರಿಯಾಗಿ ಶಲೆ ಪ್ರಾರಂಭ. ಮುಕ್ರಿಬ್ಯಾರಿಗಳು 10 ನಿಮಿಷ ಊರ ಸುದ್ದಿ ಸಮಾಚಾರ ಮಾತಾಡುತ್ತಿದ್ದರು; ಅನಂತರ ನನ್ನ ಸ್ನೇಹಿತ' 5ನಿಮಿಷ 'ಹೆಡ್‌ಲೈನ್' ಓದಿ, ವಾರ್ತಾ ವಿಶೇಷವನ್ನು ತಿಳಿಸುತ್ತಿದ್ದ. ಮುಂದಿನ 45ನಿಮಿಷ ಪಾಠ ಮಾಡುವ ಸರದಿ ನನ್ನದು. 9ರಿಂದ 9.30ರವರೆಗೆ ಆಟಗಳು. ಇವರ ನೇತೃತ್ವ ನನ್ನ ಮುಸ್ಲಿಂ ಗೆಳೆಯ–ಸೀಟಿ ಊದಿ 'ಲೆಫ್ಟ್ ರೈಟ್' ಸಹ ಮಾಡಿಸುತ್ತಿದ್ದ. ವಿದ್ಯಾರ್ಥಿಗಳಿಗೆಲ್ಲ ಖುಷಿಯೋ ಖುಷಿ! (6ತಿಂಗಳ ಹಿಂದೆ, ಅಕ್ಟೋಬರ್ 2ರಂದು ಕುದ್ದುಪದವಿನ 'ಗಡಂಗ್'ನ್ನು ಕಡ್ಡಾಯವಾಗಿ ಮುಚ್ಚಲಾಗಿತ್ತು. ಹೀಗಾಗಿ ಅನೇಕ 'ಮಾಜೀಕುಡುಕರಿಗೆ ಹೊತ್ತು ಹೋಗದೆ ಇರುವ ಸಂದರ್ಭದಲ್ಲಿ ಒಳ್ಳೆ ಅವಕಾಸ ಮಾಡಿಕೊಟ್ಟಿತು. (ಈ ರಾತ್ರಿ ಶಾಲೆ)' ಎಂದು ಟಿಪ್ಪಣಿ ಮಾಡಿದವರೂ ಇದ್ದಾರೆ!) ಪುತ್ತೂರು ಹೈಸ್ಕೂಲಿನ ಒಬ್ಬಿಬ್ಬರು ಸ್ನೇಹಿತರು ತಮ್ಮ ಗೆಳೆಯರ ಸಮೇತ ಬಂದು ಶಾಲೆ 'ವಿಸಿಟ್' ಮಾಡಿ ಹೋದರು. ಒಟ್ಟಾರೆ ಭಾರೀ ಸುದ್ಧಿಯಾಯಿತು ನಮ್ಮ 'ಒಂದೇ ತಿಂಗಳಲ್ಲಿ ಅಕ್ಷರಾಭ್ಯಾಸ'ದ ಶಾಲೆ. ನಿಜ ಹೇಳಬೇಕೆಂದರೆ ಒಂದು

ತಿಂಗಳಲ್ಲಿ ಹೆಚ್ಚಿನವರು ತಮ್ಮ ಹೆಸರನ್ನು ಬರೆಯುವಷ್ಟರ ಮಟ್ಟಿಗೆ ಕಲಿತರು- ಅದರಲ್ಲೂ ಕೆಲವರು ಇಂಗ್ಲೀಷ್‌ನಲ್ಲೇ ಸಹಿ ಹಾಕಲು ಕಲಿತರು. ಎ.ಹೆ.ಗು. (ಎಡ ಹೆಬ್ಬೆಟ್ಟು ಗುರುತು)ಗೆ ವಿದಾಯ ಕೊಟ್ಟೇ ಬಿಟ್ಟರು!

ಜೂನ್ ತಿಂಗಳು ಕಾಲಿಟ್ಟಿತು. ಹಿಂದಿನ ದಿನವೇ ನನ್ನ ಗೆಳೆಯ ತನ್ನೂರಿಗೆ ಹೋಗಿಬಿಟ್ಟ. ಮರುದಿನ -2ನೇ ತಾರೀಕು ವಿಧಿಯಿಲ್ಲದೆ ಮುಂಜಾನೆ ಬಸ್ಸಿಗೆ ನಾನೂ ಪುತ್ತೂರಿಗೆ ಕಾಲು ಕಿತ್ತೆ! ಪಾಪ, ಮುಕ್ರಿಬ್ಯಾರಿಗಳ ಫಜೀತಿಯನ್ನು ಹೇಳುವುದೇ ಬೇಡ! ಶಾಲೆಯ ಬಗ್ಗೆ ಎಲ್ಲರೂ ಕೇಳುವುದು ಅವರನ್ನೇ!

ಈ ಎಲ್ಲ ಸಂಗತಿ ತಿಳಿದ ಮಾರಪ್ಪಶೆಟ್ಟರು ಆಗ ಆಪದ್ಬಾಂಧವರಾಗಿ ವಾರದಲ್ಲಿ 4ದಿನ ಅಡ್ಯನಡ್ಕ ಶಾಲೆಯಲ್ಲಿ 2ದಿನ ಮರಕ್ಕಿಣಿ ಪಳ್ಳಿಯಲ್ಲಿ 'ವಯಸ್ಕರ ಶಿಕ್ಷಣ ತರಗತಿ' ನಡೆಸಿದರು. (ಶ್ರೀ ಕೆ.ಬಿ.ಮರಕ್ಕಿಣಿ ಮೊದಲಾದ ಕೆಲವರು ಖಾಲಿ ಬಿದ್ದ ದಿವಸ ಪಾಠ ಮಾಡುತ್ತಿದ್ದರು.)

## ಬಿಂಬ5: ಆಮ್ಮೈ-ಈಮ್ಮೈ: ಉಳ್ಳಯ್ಯ-ಬೊಳ್ಳಯ್ಯ (ಸ್ಥಳನಾಮ ಚರಿತೆ)

ಅಡ್ಯನಡ್ಕ ಶಾಲೆ 1934ರವರೆಗೂ ಎಲಿಮೆಂಟರೀ ಶಾಲೆ (ಕಿರಿಯ ಪ್ರಾಥಮಿಕ ಶಾಲೆ) ಆಗಿದ್ದರೂ ಸಾಕಷ್ಟು ಹೆಸರುವಾಸಿಯಾಗಿತ್ತು. ಸರ್ವಶ್ರೀ ಎ. ತಿಮ್ಮಣ್ಣ ಭಟ್ಟರು, ಸಾರಡ್ಕ ನಾರಾಯಣಭಟ್ಟರು, ನರ್ಕಳ ಮಾರಪ್ಪಶೆಟ್ಟರು, ಮೊದಲಾದ ಹೆಸರಾಂತ ಶಿಕ್ಷಕರು-ಅವರಲ್ಲಿ ಕೆಲವರು ಮುಖ್ಯ ಶಿಕ್ಷಕರು-ಆಗಿದ್ದರು. ಸುಪ್ರಸಿದ್ಧ ಇತಿಹಾಸಕಾರರಾದ ದಿ॥ ಗಣಪತಿರಾವ್ ಐಗಳೂ ಇಲ್ಲಿ ಕೆಲಕಾಲ ಇದ್ದರಂತೆ. ಅವರೂ ನಮ್ಮ ನರ್ಕಳ ಮಾರಪ್ಪ ಶೆಟ್ಟರೂಟ ಕೀ.ಶೇ. ಪಂಜೆ ಮಂಗೇಶ ರಾಯರ ಶಿಷ್ಯರೇ ಆಗಿದ್ದ, ಇಲ್ಲೂ ಗುರುವಿನ ಗುಣ ವಿಶೇಷವನ್ನು ಅನುಷ್ಠಾನಕ್ಕೆ ತರುತ್ತಲೇ ಇದ್ದರಂತೆ; ಸ್ಥಳನಾಮ ಸಂಬಂಧವಾದ ಒಂದಿಷ್ಟು ಪ್ರಸಂಗಗಳನ್ನು ನೆನಪು ಮಾಡುತ್ತಿದ್ದ ಕೆಲವರ ಮಾತುಗಳ ಪೈಕಿ ನನಗೆ ನೆನಪಿರುವುದಿಷ್ಟು ಮರಕ್ಕಿಣ ಬೈಲು- ಮಿತ್ತಡ್ಕ ಗುಡ್ಡ ದಾಟಿ ಆಚೆಗಿನ ಬೈಲು 'ಅಮ್ಮೈ' (ಆಮೆಯಿ). ಅಡ್ಯನಡ್ಕ ಭೂತದ ಕಟ್ಟೆಯ ನೇರಕ್ಕೆ ಮೂಡುದಿಕ್ಕಿನಲ್ಲಿ ಹೋಗಿ ಹಳ್ಳ ದಾಟಿದರೆ ಸಿಕ್ಕುವುದೇ 'ಪಂಜಿಕಲ್ಲು'- ಪಂಜುರ್ಲಿ ಭೂತ ರಾತ್ರಿ ಸಂಚಾರ ಮಾಡಿ ಒಡ್ಡೋಲಗ ಕೊಡುವ ಸ್ಥಳ. ಇವುಗಳ ನಡುವೆಯೇ ಇರುವಂಥಾದ್ದು (ಹಣಕಾಸು) ಉರ್ಳಳವರ ಸ್ಥಳ- ಉಳಯ! ಮತ್ತೆ 'ಮರಕ್ಕಿಣಿ' ಹೇಗೆ? ಮಳೆನೀರು ಹರಿಯುವ ಕಣಿ ಮರಕಣಿ-ಮರಕಿಣಿ! ಹೀಗೆ ಎಷ್ಟೋ ವಿಚಾರಗಳನ್ನು ಸ್ವಾರಸ್ಯವಾಗಿ ಹೇಳುತ್ತಾ ಮಕ್ಕಳ ಮನರಂಜಿಸುತ್ತ ಪಾಠ ಮಾಡುತ್ತಿದ್ದ ಮಾರಪ್ಪ ಮಾಷ್ಟ್ರ ಪಾಠ ಅಂದರೆ ಬಹಳ ಸಂತೋಷವಾಗುತ್ತಿತ್ತು ಎಂದು ಹಳೆಯ ವಿದ್ಯಾರ್ಥಿಗಳು ಒಬ್ಬಿಬ್ಬರು ತಮ್ಮ ನೆನಪನ್ನು ಹೇಳುತ್ತಿದ್ದುದನ್ನು ನಾನು ಕೇಳಿಸಿಕೊಂಡಿದ್ದೇನೆ. (ಸಾರಾಂಶ ಇಷ್ಟು ಮಾರಪ್ಪ ಮಾಷ್ಟ್ರ ಪಾಠ

ಮಾಡುವ ಕ್ರಮ ಅತ್ಯಂತ ರೋಚಕವಾಗಿತ್ತು ವಿದ್ಯಾರ್ಥಿಗಳಲ್ಲಿ ಕುತೂಹಲ ಹುಟ್ಟಿಸಿ, ಆಸಕ್ತಿ ಕೆರಳಿಸಿ, ಉತ್ಸಾಹ ಹೆಚ್ಚಿಸಿ, ಮನಸ್ಸನ್ನು ಮುದಗೊಳಿಸುತ್ತಿತ್ತು.

## ಬಿಂಬ6: ಸಂಗಾತಿಯ 'ಸಂಗತ್ತೆ'

ಸ್ವಾತಂತ್ರ್ಯೋತ್ತರ ದಿನಗಳಲ್ಲಿ–1947ರಿಂದಲೇ ಅಧಿಕಾರ ಸ್ವೀಕರಿಸಿದ 'ಹಳೆ ಹುಲಿಗಳು' ಕೆಲವರು (ಸ್ವಾತಂತ್ರ್ಯಕ್ಕಾಗಿ ಸರ್ವಸ್ವವನ್ನೂ ತ್ಯಾಗ ಮಾಡಿದ್ದ ಅನೇಕ ಧುರೀಣರು) ಗಾಂಧಿವಾದ (ಹಿತವಾದ)ಕ್ಕೆ ತಿಲಾಂಜಲಿ ಬಿಟ್ಟು ಅಧಿಕಾರ–ದರ್ಪಗಳ ಎಳೆತಕ್ಕೂ ಹೊನ್ನು, ಹೆಂಡಗಳ ಸೆಳೆತಕ್ಕೂ ಸಿಕ್ಕಿ, ಜನಸೇವೆ–ಬಡವರ ಉದ್ಧಾರಗಳನ್ನು ಮರೆತಹಾಗೇ ಆಗುತ್ತಿದ್ದಾಗ, ಎಚ್ಚರಿಸುವ ಕೆಲಸವನ್ನು ಮಾಡತೊಡಗಿದವುಗಳಲ್ಲಿ ಪತ್ರಿಕೆಗಳು ಮುಂಚೂಣಿಯಲ್ಲಿದ್ದವು. ತರುಣ ಪತ್ರಿಕೋದ್ಯೋಗಿ ನವೀನ್ ಚಂದ್ರರ 'ಸಂಗಾತಿ' ಅಂತಹ ಒಂದು ಪತ್ರಿಕೆ. ಗ್ರಾಮೀಣ ಜನರಿಗಂತೂ ಅತ್ಯಂತ ಪ್ರಿಯವಾದದ್ದು. ರೂಢಿಯಲ್ಲಿದ್ದ ಸಂಪ್ರದಾಯದಂತೆ ವರ್ಷವಿಡೀ ಪತ್ರಿಕೆಯನ್ನು ಟಪ್ಪಾಲಿನಲ್ಲಿ ಕಳಿಸಿ, ಅನಂತರ ರಸೀದಿಪುಸ್ತಕ ಹಿಡಿದುಕೊಂಡು ಹಳ್ಳಿ ಹಳ್ಳಿಗೆ ಹೋಗಿ ಚಂದಾ ವಸೂಲಿ ಮಾಡಬೇಕಾಗಿತ್ತು. ತರುಣ ಸಂಪಾದಕ ನವೀನಚಂದ್ರ ನಮ್ಮೂರಿಗೂ ಬಂದಾಗ– ಅದು ಹೇಗೋ ಅದೇ ತಾನೇ ವೃದ್ಧಾಪ್ಯಕ್ಕೆ ಕಾಲಿಡತೊಡಗಿದ್ದ ಮಾರಪ್ಪ ಮಾಷ್ಟ್ರಗೂ ನವೀನಚಂದ್ರರಿಗೂ ಪರಿಚಯವಾಗಿ, ಊರೆಲ್ಲ ಸುತ್ತಾಡಿ (10–15 ಮನೆ ತಿರುಗಿ) ಚಂದ ವಸೂಲಿಗೆ ನೆರವಾದರು.

ರಾತ್ರಿ 10–10.30ರ ಸುಮಾರಿಗೆ ನಮ್ಮ ಮನೆಯ 'ಪಡಿಪ್ರೆ'ಯ ಆಚೆ ನಿಂತು "ಈಶ್ವರಣ್ಣಾ, ಈಶ್ವರಣ್ಣಾ–ಆನು ಮಾರಪ್ಪ ಮಾಷ್ಟ್ರ–ಸಂಗಾತಿ ನವೀನ ಚಂದ್ರ ಬೈಂದೆಯೋ"– ಎಂದು ದೊಡ್ಡ ದನಿಯಿಂದ 'ದಿನಿಗೇಳಿ'ದ್ದು ಕೇಳಿ, ಗೇಟಿನ ಬಾಗಿಲು ತೆಗೆದಾಗ ಒಳಗೆ ಬಂದರು. ಹೆಚ್ಚು ಮಾತಾಡಿ ಸಮಯ ಕಳೆಯದೇ, ನಮ್ಮ ಅಣ್ಣ ಒಂದಲ್ಲ-ಮೂರು ವರ್ಷದ ಚಂದಾ ಮುಂಗಡವಾಗಿ ಹಣವನ್ನು ಎಣಿಸಿಕೊಟ್ಟಾಗ, "ಅದೀಗ ಗುರಿಕ್ಕಾರ್ರ ಮನೆ ರಿವಾಜು(ಕ್ರಮ);ಎನಗೊಂತಿದ್ದು, ಹೀಂಗೇ ಮಡುಗು ಹೇಳಿ" ಎಂದು ಶಹಭಾಸ್‌ಗಿರಿ ಕೊಟ್ಟರು. (ಸ್ವಲ್ಪ ಸಮಯಕ್ಕೆ ಮೊದಲಷ್ಟೇ ನಮ್ಮ ಅಣ್ಣ ಮನೆಯ ಆರ್ಥಿಕ ಜವಾಬ್ದಾರಿ ಹೊತ್ತುಕೊಂಡಿದ್ದರು) (ಎತ್ತಣ ಮಾಮರ–ಎತ್ತಣ ಕೋಗಿಲೆ!' ಒಳ್ಳೆಯ ಕೆಲಸ ಯಾರೇ ಮಾಡಲಿ–ಎಲ್ಲೇ ಆಗಲಿ, ಕೈಲಾದ ಸಹಾಯ ಮಾಡುವುದೇ ಮಾರಪ್ಪ ಮಾಷ್ಟ್ರ 'ಸಾಜ' (ಸಹಜಾಭ್ಯಾಸ)

## ಬಿಂಬ7: ಮೆಟ್ರಿಕ್ ಪರೀಕ್ಷೆ ಕಟ್ಟಿದ ಮಗಳು ಪಾಸು –ಅಪ್ಪ ಫೇಲ್ ಆದ ಕತೆ

ಶ್ರೀಯುತ ಮಾರಪ್ಪ ಶೆಟ್ಟರಿಗೆ ವೃದಾಪ್ಯ ಹತ್ತಿರವಾಗುತ್ತಿದ್ದರಂತೆ ಮೆಟ್ರಿಕ್ ಪರೀಕ್ಷೆಗೆ ಕಟ್ಟು 'ಶೋಕಿ' (ಉಮೇದು) ಬಂತು (1950?) ಮಗಳು ಕು.ಸತ್ಯರತಿ

ಮತ್ತು ಅವಳ ತಂಗಿ ಕು.ಶಾರದಾ ಪೆರ್ಲದ ಸತ್ಯನಾರಾಯಣ ಹೈಸ್ಕೂಲಿನಲ್ಲಿ ಓದುತ್ತಿದ್ದರು. (ದಿನಾಲೂ ಮರಕ್ಕಿಣಿಯಿಂದ ನಡೆದೇ ಹೋಗಿ ಬರುತ್ತಿದ್ದರಂತೆ) ಪರೀಕ್ಷೆ ಹತ್ತಿರ ಬರುತ್ತಿದ್ದಂತೆ, ಓದಲು ಹೆಚ್ಚು ಅನುಕೂಲವಾಗಲಿ ಎಂದು, (ಪೆರ್ಲದಲ್ಲಿ ಆಗ ಹಾಸ್ಟೆಲ್ ಇಲ್ಲದ ಕಾರಣ) ಒಂದು 'ಅಜ್ಜಿ ಬಿಡಾರ'ದಲ್ಲಿ ತಾತ್ಕಾಲಿಕವಾಗಿ ವಸತಿ ಮಾಡಿದರು. ತಂದೆ ಕೂಡಾ 'ಜೋಯಿಂಟ್ ಸ್ಟಡಿ' ಮಾಡಲು ಅದು ಅನುಕೂಲವೆಂದುಕೊಂಡರು. ಒಂದು ದಿನ ಕರ್ಯನಿಮಿತ್ತ ಮಂಗಳೂರಿಗೆ ಹೋಗಿದ್ದ ನಾನು ಮತ್ತು ಏತಡ್ಕದ ದಿ॥ಸೀತಾರಾಮ ಭಟ್ಟರು ಪೆರ್ಲದಲ್ಲಿ ರಾತ್ರಿ ಕಳೆಯಬೇಕಾಯಿತು. (ನಾನು ಆಗ ಏತಡ್ಕದ ಸಹಕಾರಿ ಸಂಘದ ಲೆಕ್ಕಪತ್ರ ಬರೆಯುವ 'ಅನಧಿಕೃತ' ಕಾರ್ಯದರ್ಶಿಯಾಗಿದ್ದೆ) ರಾತ್ರಿ –ಊಟಕ್ಕೆ ಹಾಗೂ ವಸತಿಗೆ ಅದೇ ಅಜ್ಜಿ ಬಿಡಾರ! ಅಲ್ಲಿ ಊಟ ಮುಗಿಸುತ್ತಿದ್ದ ಹಾಗೇ ಪರೀಕ್ಷಾರ್ಥಿ ಮಾರಪ್ಪಶೆಟ್ಟರು ಕಾಣಸಿಕ್ಕಿದರು..... ಈಚೆಗೆ ಒಂದು –ಒಂದೂವರೆ ವರ್ಷದ ಅವಧಿಯಲ್ಲಿ ನಮ್ಮ ಭೇಟಿ ಆಗಿರಲಿಲ್ಲ–(ಅಷ್ಟೇ ಅಲ್ಲದೆ, ಈ ನಡುವೆ, ಪುತ್ತೂರು ಬೋರ್ಡ್ ಹೈಸ್ಕೂಲಿನ ಇತಿಹಾಸದಲ್ಲೇ ಮೊದಲ 'ಸ್ಟ್ರೈಕ್' ಉದ್ಘಾಟಿಸಿದ್ದಕ್ಕಾಗಿಯೋ ಏನೋ( ಅದರ ಪರಿಣಾಮವೋ ಎಂಬಂತೆ) ನನ್ನನ್ನು ಹಾಸ್ಟೆಲ್‌ನಿಂದ ಹೊರಗೆ ಹಾಕಿದ್ದರು. ಆ ವರ್ಷ ಪರೀಕ್ಷೆಯಲ್ಲಿ ಫೇಲಾಗಿದ್ದೆ ಮುಂದೆ ಮೈಸೂರಿಗೆ ಸರ್ಕೀಟು ಬಿಟ್ಟು (6–7ತಿಂಗಳ ನಂತರ) ಹಿಂದಿರುಗಿದ್ದೆ–ಈ ಎಲ್ಲ ಘಟನೆಗಳ ಬಗ್ಗೆ ವಿಸ್ತಾರವಾದ ವಿಮರ್ಶೆ, ವಿಶ್ಲೇಷಣೆ ನಡೆಸುತ್ತ ರಾತ್ರಿ 11 ಗಂಟೆಯವರೆಗೂ ಮಾತುಕತೆ ನಡೆಯಿತು. ಅಪ್ಪನಿಗೆ ಒಂದೆರಡು ಬಾರಿ ಸಣ್ಣ ಮಗಳು ಬಂದು ಜ್ಞಾಪಿಸಿಕೊಂಡರೂ ಪ್ರಯೋಜನವಾಗಲಿಲ್ಲ. ಈ ಮಾಷ್ಟ್ರ ಹಿಂಗೇ ಆರಾದರೂ ಮಾತಾಡ್ಲೆ ಸಿಕ್ಕಿದರೆ ಇಡೀ ಇರುಳು ಮಾತಾಡಿಕೊಂಡೇ ಕಳೆವದು' ಎಂದು ಅಜ್ಜಿ ಬೇರೆ ಒಗ್ಗರಣೆ ಸೇರಿಸಿದರು. ಹೆಚ್ಚು ಕಮ್ಮಿ ಪ್ರತಿ ದಿನ ಯಾರಾದರೂ 'ಅತಿಥಿ'ಒಬ್ಬಿಬ್ಬರು ಸಿಕ್ಕುತ್ತಿದ್ದರು! ಪರಿಣಾಮವೇನಾಗುತ್ತದೆ? ಚುರುಕುಬುದ್ಧಿಯ ಮಗಳು ಸತ್ಯರತಿ ಪರೀಕ್ಷೆಯಲ್ಲಿ ಪಾಸಾದಳು; ವಿದ್ವಾಂಸ ಮಹಾಪಂಡಿತ ಅಪ್ಪ– ಮಾರಪ್ಪ ಮಾಷ್ಟ್ರು ನಪಾಸು!

## ಬಿಂಬ8: 'ಅಣ್ಣಾ–ಕಿಸೆಲಿ ರಜಾ ಪೈಸೆ ಏನಾದರೂ ಇಕ್ಕೋ?

ಕಷ್ಟದಲ್ಲಿರುವವರಿಗೆ ಕೈಲಾದ ಸಹಾಯ ಮಾಡುವ ಗುಣ ಅನೇಕರದ್ದು. ಕೈಲಾಗದಿದ್ದರೂ ಸಹಾಯ ಮಾಡುವ ದೊಡ್ಡ ಗುಣ ಮಾರಪ್ಪ ಮಾಷ್ಟ್ರದ್ದು. ಆ ಘಟನೆ ಹೀಗಿದೆ: 1952ರ ಅನಂತರ ಮಂಗಳೂರು ಸೇರಿಕೊಂಡ ಮಾರಪ್ಪ ಶೆಟ್ಟರು ಬಿಜೈಯಲ್ಲಿ ಮನೆ ಮಾಡಿಕೊಂಡಿದ್ದರು. ಮೊದಲೇ ನಗರವಾಸ–ಖರ್ಚು ಹೆಚ್ಚು. ಅಷ್ಟು ಮಾತ್ರವಲ್ಲದೆ ಹೈಸ್ಕೂಲ್–ಕಾಲೇಜುಗಳಲ್ಲಿ ಓದುತ್ತಿರುವ 4–5 ಮಕ್ಕಳು. ಹೀಗಾಗಿ ಆರ್ಥಿಕವಾಗಿ ಕೈ ಕಟ್ಟಿದಂಥಾ ಪರಿಸ್ಥಿತಿಯಲ್ಲಿ ಒಂದು ದಿವಸ ಮನೆಗೆ ಪರಿಚಯಸ್ತರೊಬ್ಬರ ಪತ್ನಿ ಬಂದು, ತನ್ನ ಮಗಳಿಗೆ ಮೆಟ್ರಿಕ್ ಪರೀಕ್ಷೆ 'ಫೀಸ್'

ಕಟ್ಟಲು ಅಂದೇ ಕೊನೇ ದಿನವೆಂದೂ– ಬೇರೆ ಊರಿಗೆ ಹೋಗಿದ್ದ ಪತಿ ಮಧ್ಯಾಹ್ನದೊಳಗೆ ಬಾರದಿದ್ದರೆ–ಮಗಳ ಭವಿಷ್ಯಕ್ಕೆ ಮಂಕು ಕವಿಯುತ್ತದೆ; ಸಹಾಯ ಮಾಡಿ ಎಂದಾಗ ಎರಡು 'ಫೀಸ್' (ಹಣ) ಕಟ್ಟುವುದಕ್ಕೆ 'ಇಲ್ಲ' ಎಂಬ ಶಬ್ದ ಮಾಷ್ಟ್ರ ಬಾಯಿಂದ ಬರುವುದುಂಟೇ? ಕಿಸೆಯಲ್ಲಿ ತರಕಾರಿ ಖರ್ಚಿಗೆಂದು ತೆಗೆದಿರಿಸಿಕೊಂಡಿದ್ದ ರೂಪಾಯಿ ಇತ್ತು–'ಸರಿ' ನಿಮ್ಮ ಮಗಳು ಶಾಲೆಯ ಹತ್ತಿರ ಇರಲಿ; ನಾನು ಏನಾದರೂ ವ್ಯವಸ್ಥೆ ಮಾಡುತ್ತೇನೆ' ಎಂದು ಹೇಳಿದರು. ಯಾರನ್ನೋ ಯಾಚಿಸಿದರು; ಅಲ್ಲಿ ಇಲ್ಲಿ ಪ್ರಯತ್ನಿಸಿದರು–ಜಮೆಯಾದ ಹಣ– ಫೀಸ್ ಕಟ್ಟಲಿಕ್ಕೆ ಇನ್ನು 6ರೂಪಾಯಿ ಕಮ್ಮಿಯಾಗಿತ್ತು. ಹಾಗೇ ಹಂಪನ್‌ಕಟ್ಟೆ ಬಸ್‌ಸ್ಟ್ಯಾಂಡ್‌ನಲ್ಲಿ ಹಳೆ ಪರಿಚಿತರು ಯಾರಾದರೂ ಕಾಣಸಿಗುತ್ತಾರೋ ಎಂದು ನೋಡುತ್ತಿದ್ದಾಗೆ ಇಬ್ಬರು ಮೂವರು ಕೈಮೊಗಚಿ (ಇಲ್ಲ ಎಂದು ಸೂಚಿಸಿ)ದ ತರುವಾಯವೂ ಪ್ರಯತ್ನ ಬಿಡದೆ, ನಾಲ್ಕನೆಯವರ ಹತ್ರ ಅಂಗಲಾಚಿದಾಗ– ಪುಣ್ಯಾತ್ಮ ಜೇಬು ತಡಕಿ "ಎಂಟು ರೂಪಾಯಿ ಇದ್ದು ಮಾಷ್ಟ್ರೇ"– ಎಂದು ಹೇಳಿದಾಗ– "ಊರಿಂಗೆ ಹೋಪಲೆ ಟಿಕೆಟ್?" "ಅಗಳೇ ತೆಗೆದಾಯಿದು, ತೊಂದರೆ ಇಲ್ಲೆ' ಎಂದು ಹೇಳಿದ ತಕ್ಷಣ ಹಣ ಇಸ್ಕೊಂಡು–ದಾಪುಗಾಲು ಹಾಕಿದರು 'ಆ' ಶಾಲೆಯ ಕಡೆಗೆ ಫೀಸ್ ತುಂಬುವ ಕಡೇ ಗಳಿಗೆ ಅದು. 15ನಿಮಿಷ ತಡವಾದರೆ ಛೇ ಪಾಪ, ಒಂದು ಹೆಣ್ಣು ಮಗುವಿನ ಭವಿಷ್ಯ ಹಾಳಾಗುತ್ತದೆ' ಎಂದು ಕೊಂಡು, "ಉಪಕಾರ ಆತು ನಿಂಗಳದ್ದು–ಅಣ್ಣಾ" ಎಂದು ಹೇಳಲೂ ಮರೆತು, 'ಬೀಸ' ನಡೆದೇಬಿಟ್ಟರು..... (ಈ ಘಟನೆಯ ಪ್ರತ್ಯಕ್ಷದರ್ಶಿ ಶ್ರೀ ಐ.ಬಿ ಮರಕ್ಕಿಣಿ) ಮುಂದೆ ಆ ಹುಡುಗಿ ಓದಿ ಎಮ್.ಎ ಮಾಡಿ ಹೈಸ್ಕೂಲ್ ಒಂದರ ಮುಖ್ಯೋಪಾಧ್ಯಾಯಿನಿಯಾಗಿ ಉತ್ತಮ ಸೇವೆ ಸಲ್ಲಿಸಿದರೆಂದೂ, ಅಧ್ಯಾಪನದಲ್ಲಿ ಪ್ರಶಸ್ತಿಯನ್ನೂ ಪಡೆದಳೆಂದೂ ತಿಳಿದು ಬಂದಿದೆ. ಈ ಸಿಹಿ ಸುದ್ದಿಯನ್ನು ಕೇಳುವ ಭಾಗ್ಯ ಅವರಿಗಿರಲಿಲ್ಲವಾದರೂ ನಾವು ಸಂತೋಷಿಸುವುದಷ್ಟೇ ಸಾಕಲ್ಲವೇ!)

## ಬಿಂಬ 9: ನಾಟಕದಲ್ಲೊಂದು ನಾಟಕ–(ಲೀಲಾಜಾಲ)

ಅಡ್ಯನಡ್ಕ ಶಾಲೆ ಎಷ್ಟು ಪ್ರಸಿದ್ಧವೋ–ಅಲ್ಲಿಯ ಹಳೆ ವಿದ್ಯಾರ್ಥಿ ಸಂಘವೂ ಅಷ್ಟೇ ಪ್ರಸಿದ್ಧ. ಅದು ಅನೇಕ ರೀತಿಗಳಿಂದ ಶಾಲೆಗೆ ಸಹಾಯ ಮಾಡಿ ತನ್ನ ಪಾಲಿನ ಸೇವೆ ಸಲ್ಲಿಸುತ್ತಿತ್ತು. 1953–54ರ ಸುಮಾರಿಗೆ ಹಳೆ ವಿದ್ಯಾರ್ಥಿ ಸಂಘದಲ್ಲಿ ಒಳಗುಂಪುಗಳು–'ಹಳೆ ಹಳೆ ವಿದ್ಯಾರ್ಥಿಗಳು,' 'ಹೊಸ ಹೊಸ ವಿದ್ಯಾರ್ಥಿಗಳು ಎಂದು ತಲೆ ಎತ್ತ, ಮುಸುಕಿನಲ್ಲೇ ಗುದ್ದಾಡುತ್ತಿದ್ದ ದಿನಗಳವು(ಶಾಲೆಗೆ ಏನೂ ಹಾನಿಯಿರಲಿಲ್ಲ) ಇಂಥ ಹೊತ್ತಿನಲ್ಲಿ 'ಹೊಸ ಹಳೆ ವಿದ್ಯಾರ್ಥಿ'ಗಳು ಒಂದು ನಾಟಕ ಆಡಲು ತಯಾರಾದರು . ('ಹಳೆ ಹಳೆ ವಿದ್ಯಾರ್ಥಿಗಳು' ಈಗ ಬಣ್ಣ ಬಳಿದುಕೊಳ್ಳುವ ವಯಸ್ಸನ್ನು ದಾಟಿದ್ದರು). ಸರಿ–ನಾಟಕದ ರಿಹರ್ಸಲ್ಸ್ ಎಲ್ಲ

ಆಯಿತು.... ಇನ್ನೇನು ಪ್ರದರ್ಶನಕ್ಕೆ ನಾಲ್ಕೇ ದಿನಗಳು ಉಳಿಯಿತು ಎನ್ನುವಾಗ ಪ್ರಮುಖ ಪಾತ್ರಧಾರಿ (ಹೀರೋಯಿನ್) 'ಅಗತ್ಯ ಕೆಲಸದ ನಿಮಿತ್ತ ದೂರದ ಊರಿಗೆ ಹೊಟುಬಿಟ್ಟಿದ್ದ! (ಇದರ ಅರ್ಥ: 'ಬರಲು ಸಾಧ್ಯವೇ ಇಲ್ಲ'-ಅಂತ!) ಈ 'ಮಹತ್ಕಾರ್ಯದ ಹಿನ್ನೆಲೆ 'ಹಳೆ ಹಳೆ ವಿದ್ಯಾರ್ಥಿಗಳ ಗುಂಪು' ಎನ್ನುವುದು ಸ್ಪಷ್ಟ.... ಮುಖ್ಯ ಪಾತ್ರಧಾರಿ (ಹೀರೋ) ಸಾಂತಪದವು ಕೃಷ್ಣಭಟ್ಟರೂ ಇತರರೂ ಕಂಗಾಲಾದರು ! (ನಾಟಕದ ಹೆಸರು 'ಪಾಣಿಗ್ರಹ

ನ' ಎಂಬುದಾಗಿ ಇದ್ದ ಕೈ ಬರಹದ ಪೋಸ್ಟರ್‌ಗಳನ್ನು ಕಿಡಿಗೇಡಿಗಳು ಕೆಂಪುಶಾಯಿಯಿಂದ ತಿದ್ದಿ 'ಪಾಣಿಗ್ರಹಣ' ಎಂದು ಕಾಣಿಸಿದ್ದರು. ನಾಟಕದ ವ್ಯವಸ್ಥಾಪಕರು ಬರೆಸಿದ 'ಮಿತ್ರಮಂಡಳಿ' ಎಂಬುದನ್ನು 'ಮಿತ್ರ ಮಂಡಲಿ' ಎಂದು ತಿದ್ದಿದ್ದರು! ಒಟ್ಟಿನಲ್ಲಿ 'ನಾಟಕದ ಸಂಗತಿ' ಊರಲ್ಲಿ ಭಾರೀ ಸುದ್ದಿ ಮಾಡಿತ್ತು)

ನಾಟಕ ಪ್ರದರ್ಶನಕ್ಕೆ ಇನ್ನು 24ತಾಸು ಮಾತ್ರ ಉಳಿದಿದೆ ಎಲ್ಲರ ಎದೆಯೂ ತಿದಿಯಂತೆ 'ಡವಡವ' ಹೊಡೆದುಕೊಳ್ಳುತ್ತಿದ್ದಾಗ, ಎಲ್ಲಿಂದಲೋ ಪ್ರತ್ಯಕ್ಷರಾದ ಮಾರಪ್ಪ ನನ್ನನ್ನು ಮಾತಾಡುತ್ತ ಸ್ವಲ್ಪ ದೂರಕ್ಕೆ ಕರೆದುಕೊಂಡು ಹೋಗಿ ಗುಟ್ಟಾಗಿ ಒಂದು 'ಉಪಾಯ ಹೇಳಿದರು! 'ರಿಹರ್ಸಲ್'ನಲ್ಲಿ ಹೀರೋಯಿನ್‌ನ ಮಾತುಗಳನ್ನು ಹೇಳಿಕೊಡುತ್ತಿದ್ದವನ ಮೀಸೆ ಬೋಳಿಸಿ, ಸೀರೆ ಸುತ್ತಿಸಿ, ರವಿಕೆ ಹಾಕಿಸಿ, ಕೈಗೆರಡು ಬಳೆ ತೊಡಿಸಿದರೆ ಸೈ....! ನಾಟಕದ ಎರಡನೇ ದೃಶ್ಯ ಪ್ರಾರಂಭದಲ್ಲಿ ಸಭೆಯ ಮಧ್ಯದಿಂದಲೇ ನಿಧಾನವಾಗಿ ಎದ್ದು 'ಸೇಲೆ' ಮಾಡುತ್ತಾ, ರಂಗಸ್ಥಳವನ್ನೇರಿ ಸಂಭಾಷಣೆಯ ಮೊದಲ ವಾಕ್ಯವನ್ನು ಹೇಳುತ್ತಿದ್ದಂತೆಯೇ ಕೈ ಚಪ್ಪಾಳೆಯ ಸುರಿಮಳೆ! ಶ್ರೀ ಮಾರಪ್ಪ ಶೆಟ್ಟರ ಪ್ರಸಂಗಾವಧಾನತೆಯನ್ನು ಎಷ್ಟು ಮೆಚ್ಚಿದರೂ ಸಾಲದು! (ತನ್ನ ಚಿಗುರು ಮೀಸೆ ಬೋಳಿಸಿಕೊಂಡು ಸೀರೆ ಉಟ್ಟು ರವಕೆ ತೊಟ್ಟು ಬಳೆ ಹಾಕಿಕೊಂಡು ಸೇಲೆ/ಮಾಡುತ್ತ ರಂಗಭೂಮಿಗೆ ಕಾಲಿಟ್ಟ 'ಹೀರೋಯಿನ್' ಪಾತ್ರಧಾರಿ ಎಂಬಿ.ಬಿ. ಮರಕಿಣಿ!)

## ಬಿಂಬ 10: ಕೊನೇ ಗುಟುಕು

1961ನೇ ಡಿಸೆಂಬರ್, ನಾನು ಜರ್ಮನಿಯ ಹ್ಯಾಂಬರ್ಗ್‌ನಲ್ಲಿ 'ಟ್ರಾಪಿಕಲ್' ಮೆಡಿಸಿನ್ ಬಗ್ಗೆ ಸ್ನಾತಕೋತ್ತರ ಅಭ್ಯಾಸಕ್ಕೆ ಹೊರಡುವ ತರಾತುರಿಯಲ್ಲಿದ್ದೆ. ಬಟ್ಟೆಬರೆಯಿಂದ ತೊಡಗಿ 'ಫಾರಿನ್ ಎಕ್ಸ್‌ಚೇಂಜ್' ಇತ್ಯಾದಿಗಳನ್ನು ಹೊಂದಿಕೊಳ್ಳುವುದಕ್ಕೆ 'ಅಸಬಡಿ'ಯುತ್ತಿದ್ದೆ. ಪ್ರಯಾಣ ಹೊರಡುವುದಕ್ಕೆ ಇನ್ನುಳಿದದ್ದು 5ದಿನಗಳು ಮಾತ್ರ. ಮುಂಬೈವರೆಗೆ 'ಏರ್ ಟಿಕೆಟ್' ಮುಂಗಡ ಕಾದಿರಿಸಲು ಮಂಗಳೂರಿಗೆ ಹೋಗಿದ್ದೆ. 'ಮಾರಪ್ಪ ಮಾಷ್ಟ್ರು' ಒಂದರಿ ನೋಡೆಕ್ಕು ಹೇಳಿ ಆಶೆ ಇದ್ದು' ಎಂದು ಯಾರ ಮೂಲಕವೋ ಹೇಳಿಕಳಿಸಿದ ವಿಚಾರ

ತಿಳಿಯಿತು. ಸಮಯದ ಅಭಾವದಿಂದ ಅದು ಸಾಧ್ಯವಾಗುತ್ತದೋ ಇಲ್ಲವೋ ಅಂತ ಇದ್ದೆ..... ಮಂಗಳೂರಿನ ಕಾರ್ನಾಡು ಸದಾಶಿವರಾವ್ ರೋಡಿನಲ್ಲಿ 'ಶ್ರೀರಾಮ ಫಾರ್ಮಸಿ'ಯಲ್ಲಿ ಒಂದು ನಿಮಿಷ ನಿಂತು ಅವರ ವಿದಾಯ ಸ್ವೀಕರಿಸಿ (ಅವರಿಂದ ಕಳೆದ 5ವರ್ಷ ಅನೇಕ ಬಾರಿ ಔಷಧ ತರಿಸಿಕೊಂಡಿದ್ದೆ!)

ತಿರುಗಿದಾಗ ರಸ್ತೆಯ ಆಚೆ ಬದಿಯಲ್ಲಿ ಉರಿಬಿಸಿಲಿನಲ್ಲಿ ಸರಸರನೆ ಬೀಸುಗಾಲು ಹಾಕಿ ನಡೆಯುವ ವ್ಯಕ್ತಿ ಕಣ್ಣಿಗೆ ಬಿದ್ದದ್ದೇ ತಡ,– 'ಮಾರಪ್ಪ ಮಾಷ್ಟ್ರೇ, ಓ ಮಾರಪ್ಪ ಮಾಷ್ಟ್ರೇ' ಎಂದು ಎತ್ತರದ ಧ್ವನಿಯಿಂದ ಕರೆದೆ. ಗಕ್ಕನೆ ನಿಂತ ಅವರು ನನ್ನ ಬಳಿಗೆ ಬಂದು ಹೋ! ಕಲಿವಲೆ ಹೊರದೇಶಕ್ಕೆ ಹೋವುತ್ತೀರಡೋ– ದಣೀಯ ಕುಶಿ ಆತು ಹೋಗಿ ಬನ್ನಿ ಡಾಕ್ಟ್ರೇ, ಹೆಚ್ಚು ಓದಿ ಮನಃಪೂರ್ವಕ ಕಲ್ತು ಬನ್ನಿ ' ಎಂದು ಆಶೀರ್ವದಿಸುವಂತೆ ಕೈ ಎತ್ತಿದರು. ಒಂದು ಕೈಯಲ್ಲಿ ಬಿಡಿಸಿ ಹಿಡಿದ ಕೊಡೆ; ಇನ್ನೊಂದು ಕೈಯಲ್ಲಿ ಚೀಲ ತುಂಬಿದ ಮನೆ ಸಾಮಾನು ಇತ್ತು. ಕುಟುಂಬಿಕನಲ್ಲದ, ಜಾತಿ ಬಾಂಧವನಲ್ಲದ, ವಿದ್ಯಾರ್ಥಿಯೂ ಆಗಿದ್ದಿರದ ನನ್ನ ಮೇಲೆ ಅವರಿಗಿದ್ದ ಪ್ರೀತಿ ವಿಶ್ವಾಸಕ್ಕೆ ಒಂದು ಕ್ಷಣ ಗಂಟಲು ಕಟ್ಟಿತು ನನಗೆ. ಬಾಯಿಯಿಂದ ಶಬ್ದವೇ ಹೊರಡಲಿಲ್ಲ ಅವರೇ ಹೇಳಿದರು; 'ಶುಭಾಂಸ್ತೇಸ್ತು ಪಂಥಾನು ಪಂಥಾ', ( ಈ ವರ್ಷ ಡಾ॥ ಮರಕಿಣಿಯವರಿಗೆ 'ಸಮಾಜ ಸೇವೆ'ಗಾಗಿ ರಾಜ್ಯ ಸರ್ಕಾರದ ಪ್ರಶಸ್ತಿ ದೊರಕಿದ ಸಂಗತಿಯನ್ನು ಕೇಳುವುದಕ್ಕೆ ಮಾರಪ್ಪ ಮಾಷ್ಟ್ರು ಇಲ್ಲವಾದರೂ ಅವರ 'ಸದಾಶಯ' ಪೂರ್ಣವಾಗಿದ್ದಕ್ಕೆ ಹರ್ಷಿಸೋಣ)

ಕೃಪೆ: ನರ್ಕಳ ಮಾರಪ್ಪಶೆಟ್ಟಿ: ವ್ಯಕ್ತಿ–ಕೃತಿ:2004

* * * * *

# ನಲವತ್ತು ವರ್ಷಗಳ ಬಾಂಧವ್ಯದ ನೀರ್ಪಾಜೆ

## ನೆನಪಿನ ನಾಲ್ಕು ಘಟನೆಗಳು

(ನೀರ್ಪಾಜೆ ಭೀಮ ಭಟ್ಟರು )

1942ನೇ ಇಸವಿಯ ಸುಮಾತಿಗೆ ಅಕ್ಕನ ಮನೆಯಲ್ಲಿ ಇದ್ದುಕೊಂಡು ಒಂದು ವರ್ಷ ನಾನು ಕನ್ಯಾನದ ಬೋರ್ಡ್ ಹೈಯರ್ ಎಲಿಮೆಂಟರಿ ಶಾಲೆಗೆ ಹೋಗುತ್ತಿದ್ದೆ. ನನ್ನ ಭಾವ ದಿ॥ ಬನಾರಿ ವೆಂಕಣ್ಣ ಭಟ್ಟರು ನೀಪಾಂಜೆ ಮನೆತನದ ಆಪ್ತರಾಗಿದ್ದು ಅವರ ಜೊತೆಯಲ್ಲಿ ಒಂದೆರಡು ಬಾರಿ ನೀರ್ಪಾಜೆಗೂ ಹೋಗಿ ಬಂದಿದ್ದೆ; ಬಾಲಕ ಭೀಮಭಟ್ಟರನ್ನು ನೋಡಿದ್ದೆ –ಅಷ್ಟೇ, ಮುಂದೆ 1952ರಲ್ಲಿ ನಾನು ಮೈಸೂರಿನಲ್ಲಿ ವೈದ್ಯ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಪುತ್ತೂರಿನಲ್ಲಿ ಕೆಲವು ಸ್ನೇಹಿತರ ನೆರವಿನಿಂದ 'ಜನಪ್ರಿಯ ಸಾಹಿತ್ಯ' ಪ್ರಕಾಶನವನ್ನು ಪ್ರಾರಂಭಿಸಿ 'ಮುಂಗಾರು ಮುಗಿಲು' ಎಂಬ ಕಥಾಸಂಕಲನವನ್ನು ಪ್ರಕಟಿಸಿದೆ. ಪುತ್ತೂರು–ಕಾಸರಗೋಡು ಸೀಮೆಗಳ ತರುಣ ಬರಹಗಾರರ ಆ ಕಥಾಸಂಕಲನದಲ್ಲಿ ನೀರ್ಪಾಜೆ ಭೀಮಭಟ್ಟರ ಒಂದು ಸಣ್ಣ ಕಥೆಯನ್ನು ಸೇರಿಸುವ ಅಪೇಕ್ಷೆ ಇದ್ದರೂ ಅದು ಕೈಗೂಡಲಿಲ್ಲ ಆದರೆ ನಾವು ಗೆಳೆಯರಾದೆವು.

ನಾಲ್ಕಾರು ವರ್ಷಗಳ ತರುವಾಯ ನಾನು ಅಡ್ಯನಡ್ಕದಲ್ಲಿ ವೈದ್ಯವೃತ್ತಿಯನ್ನು ಪ್ರಾರಂಭಿಸಿದೆ; ಒಂದೆರಡು ವರುಷಗಳ ಕಾಲ ಶ್ರದ್ಧೆಯಿಂದ ದುಡಿದೆ; ಹಣ–ಹೆಸರು ಎರಡೂ ತಕ್ಕುದಷ್ಟು ದೊರಕಲು ತೊಡಗಿದಾಗ ಹಿಂದಿನ 'ಚಾಳಿ' ಮರುಕಳಿಸಿತು. ಸಾಹಿತ್ಯ , ಪತ್ರಿಕೋದ್ಯಮ–ಜತೆಗೆ ರಾಜಕೀಯ ಕ್ಷೇತ್ರದಲ್ಲೂ ತಲೆತೂರಿಸತೊಡಗಿದೆ. ದೇಶ ಸ್ವತಂತ್ರವಾಗಿ ಒಂದು ದಶಕ ಕಳೆಯುವಷ್ಟರಲ್ಲೇ 'ಸ್ವರಾಜ್ಯ'– ಸುರಾಜ್ಯ:ದ ಕನಸು ಕರಗಿ ತರುಣರು ಸಮಾಜವಾದದತ್ತ ವಾಲತೊಡಗಿದ ದಿನಗಳವು. ಸಮಾನ ಮನಸ್ಕರಾದ ಕೆಲವು ಯುವಕರು ಗ್ರಾಮಾಭಿವೃದ್ಧಿಯ ಗೀಳು ಹಿಡಿಸಿಕೊಂಡಿದ್ದು ಸ್ಥಳೀಯ ಸಂಸ್ಥೆ (ಪಂಚಾಯತ್ ವ್ಯವಸ್ಥೆ)ಯನ್ನು ಪುನರುಜ್ಜೀವನಗೊಳಿಸಿ, ಆಡಳಿತಾಂಗವನ್ನು ಚುರುಕಾಗಿಸುವತ್ತ ಗಮನಹರಿಸಲು ನಿರ್ಧರಿಸಿದೆವು. ಸರಿ ಸುಮಾರು ಅದೇ ಸಮಯದಲ್ಲಿ ಬಂಟ್ವಾಳ ತಾಲ್ಲೂಕು

ಅಭಿವೃದ್ಧಿ ಮಂಡಳಿಯ ಚುನಾವಣೆ ಘೋಷಣೆಯಾಯಿತು. ತಾಲ್ಲೂಕು ಮಟ್ಟದಲ್ಲಾದರೂ ಕಾಂಗ್ರೆಸ್ಸನ್ನು ಅಧಿಕಾರದಿಂದ ಕೆಳಗಿಳಿಸಬೇಕೆಂದು, ಗ್ರಾಮಾಭಿವೃದ್ಧಿ ಪರ ಚಿಂತಿಸುವ ಪಕ್ಷಾತೀತ ಸ್ವತಂತ್ ಅಭ್ಯರ್ಥಿಗಳನ್ನು ತಾಲೂಕಿನ ಎಲ್ಲಾ ಕ್ಷೇತ್ರಗಳಿಂದಲೂ ಸ್ಪರ್ಧಿಸುವಂತೆ ಪ್ರಚೋದಿಸಲು ಮುಂದಾದೆವು. ತಾತ್ವಿ ತಳಹದಿಯಲ್ಲಿ ಅನೌಪಚಾರಿಕವಾಗಿ ಕಾಂಗ್ರೆಸ್ ವಿರೋಧೀ ಐಕ್ಯರಂಗವನ್ನು ರಚಿಸಿ ಎಲ್ಲ ಕ್ಷೇತ್ರಗಳಲ್ಲಿಯೂ ಹೋರಾಡಲು ಸಜ್ಜಾದೆವು.

ಚುನಾವಣೆಗೆ ನಾಮಪತ್ರ ಸಲ್ಲಿಸುವ ಅವಧಿ ಎರಡು ದಿನಗಳು ಉಳಿದಾಗ ನೀರ್ಪಾಜೆ ಭೀಮ ಭಟ್ಟರು ಕನ್ಯಾನ ಕ್ಷೇತ್ರದಿಂದ ಸ್ಪರ್ಧಿಸುತ್ತಾರೆಂದೂ , ಕಾಂಗ್ರೆಸ್ ಸದಸ್ಯರಾಗಿದ್ದರೂ ಪಕ್ಷದ ಟಿಕೆಟ್ ದೊರಕದ ಪ್ರಯುಕ್ತ ಸ್ವತಂತ್ರವಾಗಿ ಚುನಾವಣೆಗೆ ನಿಲ್ಲುವರೆಂದೂ ಸುದ್ದಿ ತಿಳಿದುಬಂತು. ನಮ್ಮ ಐಕ್ಯರಂಗದ ಅಭ್ಯರ್ಥಿ ಈಗಾಗಲೇ ನಾಮಪತ್ರ ಸಲ್ಲಿಸಿಯಾಗಿತ್ತು. ಕಾಂಗ್ರೆಸ್ ಅಭ್ಯರ್ಥಿ ಹಣ ಬಲ ಮತ್ತು ಬಾಹುಬಲದ ವ್ಯಕ್ತಿಯಾಗಿದ್ದು ಯಜಮಾನಿಕ ಪ್ರವೃತ್ತಿಯ ಸಾಕಾರ ರೂಪ; ದೀನ ದಲಿತರನ್ನು ದಮನ ಮಾಡುವ 'ಹಿಂಡಾಳು' ಎಂಬುದರಿಂದ ಅವರನ್ನು ಸೋಲಿಸಲು ಐಕ್ಯರಂಗ ಬದ್ಧಕಂಕಣವಾಗಿತ್ತು. ಈಗ ನೀರ್ಪಾಜೆಯವರು ಚುನಾವಣಾ ಕಣಕ್ಕಿಳಿದರೆ ಅಲ್ಲಿ ತ್ರಿಕೋನ ಸ್ಪರ್ಧೆ ನಡೆದು, ಕಾಂಗ್ರೆಸ್ ಉಮೇದ್ವಾರಿಯೇ ಗೆಲ್ಲುವ ಸಂಭವ ಹೆಚ್ಚಾಗಿತ್ತು ಎಂಬುದರಿಂದ ನಾನು ಈ ವಿಷಯ 'ಮಾತಾಡಲು' ಭೀಮ ಭಟ್ಟರನ್ನು ಸಂಧಿಸಿದೆ. ಗ್ರಾಮಾಭಿವೃದ್ಧಿಯ ಹಾಗೂ ಜನಹಿತಪರವಾದ ಅವರ ಕಳಕಳಿ ಪ್ರಶಂಸನೀಯವಾಗಿದ್ದರೂ, ಏಕಾಂಗಿಯಾಗಿ ಯುವ ಸಾಧನೆಯನ್ನು ಮಾಡುವುದೂ ದುಸ್ತರವೆಂದು ಅವರಿಗೆ ವಿವರಿಸಿದೆ. ಸದ್ಯದಲ್ಲೇ ಗ್ರಾಮಪಂಚಾಯತ್ ಚುನಾವಣೆ ಕೂಡ ನಡೆಯಲಿರುವುದರಿಂದ 'ಸಹಮತವಿರುವ ಸೂಕ್ತ ಅಭ್ಯರ್ಥಿಗಳನ್ನು ಈಗಿನಿಂದಲೇ ಸಂಘಟಿಸಲು ಪ್ರಾರಂಭಿಸಿದರೆ ಉತ್ತಮ ಪರಿಣಾಮ ದೊರಕಬಹುದೆಂದೂ ಹೇಳಿದೆ. ಒಟ್ಟಿನಲ್ಲಿ ನೀರ್ಪಾಜೆಯುವರು ಈ ಚುನಾವಣೆಯಲ್ಲೀಗ ಸ್ಪರ್ಧಿಸದಿರಲು ವಿನಂತಿಸಿದೆ. ನನ್ನ 'ಶಂಖವಾದ್ಯ' ಎಷ್ಟ ರ ಮಟ್ಟಿಗೆ ಪಥ್ಯವಾಯಿತೋ ತಿಳಿಯದು . ಆದರೆ ನೀರ್ಪಾಜೆಯವರ ಆ ತಾಲೂಕು ಬೋರ್ಡ್ ಚುನಾವಣೆಯಲ್ಲಿ ಸ್ಪರ್ಧಿಸಲಿಲ್ಲ. (ವ್ಯಸನದ ಅಂಶವೆಂದರೆ ಕನ್ಯಾನ ಕ್ಷೇತ್ರದಿಂದ ಮಾತ್ರವಲ್ಲದೆ ಇತರ ಬಹುಕ್ಷೇತ್ರಗಳಿಂದ ಕಾಂಗ್ರೆಸ್ ವಿಜಯದುಂದುಬಿ ಬಾರಿಸಿತ್ತು. 'ಐಕ್ಯರಂಗ ನೆಲಕಚ್ಚಿತ್ತು)

ಈ ಪ್ರಸಂಗದ ಮುಂದಿನ ಅಧ್ಯಾಯ ಹೀಗಿದೆ: ಕೆಲವೇ ವರ್ಷಗಳ ಅಂತರದಲ್ಲಿ ಕನ್ಯಾನ ಗ್ರಾಮಪಂಚಾಯಿತಿಯ ಅಧ್ಯಕ್ಷರಾಗಿ , ಆಯ್ಕೆಯಾದ ನೀರ್ಪಾಜೆಯವರು ದುಡಿದು ಗ್ರಾಮಾಭಿವೃದ್ಧಿಯ ವಿಫುಲ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಿರ್ವಹಿಸಿದರು. ಆ ಊರಿನಲ್ಲಿ ಹೈಸ್ಕೂಲ್ ಸ್ಥಾಪನೆಯಾಯಿತು,. (ಮುಂದೆ

ಕಾಲೇಜ್ ಆಗಿಯೂ ಬೆಳೆಯಿತು) ಗ್ರಾಮಾಭಿವೃದ್ಧಿಯ ನಾನಾ ಕ್ರಿಯಾ ಯೋಜನೆಗಳನ್ನು ಸಮರ್ಥವಾಗಿ ಬಳಸಿಕೊಂಡು ನೀರ್ಪಾಜೆಯವರು ಕನ್ಯಾನ ಗ್ರಾಮವನ್ನು ಉತ್ತಮ ರೀತಿಯಲ್ಲಿ ಪುನರ್‌ನಿರ್ಮಿಸುವುದರಲ್ಲಿ ಯಶಸ್ವಿಯಾದರು. ಗ್ರಾಮಾಭಿವೃದ್ಧಿಯಲ್ಲಿ ತಮ್ಮನ್ನು ಕೊನೆಯತನಕವೂ ಅವರು ತೊಡಗಿಸಿಕೊಂಡಿದ್ದರು.

ಶ್ರೀಮಾನ್ ಶಿವರಾಮ ಕಾರಂತರು ಪುತ್ತೂರಿನಲ್ಲಿ ಸ್ಥಾಪಿಸಿ ಪ್ರಕಟಿಸುತ್ತಿದ್ದ 'ವಿಚಾರವಾಣಿ' ವಾರಪತ್ರಿಕೆ, ಸ್ವಲ್ಪಕಾಲದ ನಂತರ ನಿಂತುಹೋಗಿತ್ತು. ಅದನ್ನು ಮತ್ತೆ ಪುತ್ತೂರಿನಿಂದ ಹೊರಡಿಸಲು ನಮ್ಮ ಗೆಳೆಯರ ಬಳಗ ನಿರ್ಧರಿತಲ್ಲದೆ, ನಮ್ಮದೇ ಆದ ಒಂದು ಪ್ರಿಂಟಿಂಗ್ ಪ್ರೆಸ್ ಕೂಡಾ ಪ್ರಾರಂಭಿಸುವ ಸಾಹಸಕ್ಕಿಳಿಯಿತು. ಈ ವಿಚಾರದಲ್ಲಿ ಭೀಮಣ್ಣನವರೊಂದಿಗೆ ಚರ್ಚಿಸಿದಾಗ ಪತ್ರಿಕೆಗೆ ಎಲ್ಲ ರೀತಿಯ ಸಹಕಾರ ನೀಡುವುದಾಗಿ ಹೇಳಿದರು. ಆದರೆ ಪುತ್ತೂರಿನಲ್ಲಿ ನಾವು ಹೊಸ ಪ್ರೆಸ್ ಸ್ಥಾಪಿಸುವುದು ಹಾಗೂ ಅದನ್ನು ಸಮರ್ಪಕವಾಗಿ ನಡೆಸಿಕೊಂಡು ಹೋಗುವುದು ಕಾರ್ಯಸಾಧ್ಯವೇ ಎಂಬುದನ್ನು ಪುನರ್ವಿಚಾರ ಮಾಡಲು ಸೂಚಿಸಿ, ತಮ್ಮ ಸಂದೇಹವನ್ನು ಸ್ಪಷ್ಟವಾಗಿ ತಿಳಿಸಿದರು. ಪ್ರೆಸ್ಸಿಗಾಗಿ ಹಣ ಹಾಕಿದ ನಾಲ್ಕಾರು ಮಂದಿಯ ಪೈಕಿ ಯಾರೂ ಪುತ್ತೂರಲ್ಲಿ ವಾಸಿಸುತ್ತಿಲ್ಲ. ಪರಾಭಾರೆ ಆಡಳಿತ ಯಶಸ್ವಿಯಾಗಲಿಕ್ಕಿಲ್ಲ ಎಂದು ಸಂದೇಹಿಸಿದ ಭೀಮಣ್ಣ 'ಮರಕಿಣಿ, ನೀನು ಅಡ್ಯನಡ್ಕದಲ್ಲೇ ಪ್ರೆಸ್ ಹಾಕು, ಅದು ಸರಿಯಾಗಿ ನಡೆದೀತು' ಎಂದು ಸಲಹೆ ಕೂಡ ನೀಡಿದರು. ನಾವು ಹೆಜ್ಜೆ ಮುಂದಿಟ್ಟಾಗಿತ್ತು. ಅಪರಿಮಿತವಾದ ಆತ್ಮವಿಶ್ವಾಸದಿಂದ ಪ್ರೆಸ್ ಪ್ರಾರಂಭಿಸಿಯೇ ಬಿಟ್ಟೆವು. ಈ ದುಡುಕಿನ ಅಂತ್ಯ ಎರಡೇ ವರ್ಷಗಳಲ್ಲಿ ಆಯಿತು. ಪ್ರೆಸ್ ನಮ್ಮ ಬೆರಳುಗಳನ್ನು ಮಾತ್ರವಲ್ಲ ಕೈಯನ್ನೇ ಸುಡಲು ಪ್ರಾರಂಭಿಸಿದಾಗ 'ವಾಣಿ ಅಚ್ಚುಕೂಟವನ್ನು' ಮಾರಬೇಕಾಯಿತು.

ಇಪ್ಪತ್ತು-ಇಪ್ಪತ್ತೈದು ವರ್ಷಗಳ ತರುವಾಯ ಕನ್ಯಾನಕ್ಕೆ ಹೋದಾಗ ನೀರ್ಪಾಜೆಯವರು ಕನ್ಯಾನದಂತ ಹಳ್ಳಿಯ ಸಣ್ಣ ಪೇಟೆಯ ಅಂಚಿನಲ್ಲಿ 'ಅಭ್ಯುದಯ ' ಮುದ್ರಣಾಲಯವನ್ನು ಸ್ಥಾಪಿಸಿ, ಯಶಸ್ವಿಯಾಗಿ ನಡೆಸುತ್ತಿದ್ದರು; ಅನೇಕ ಮೌಲಿಕ ಸಾಹಿತ್ಯ ಗ್ರಂಥಳನ್ನು ಮುದ್ರಿಸಿ ಪ್ರಕಟಿಸುತ್ತಿದ್ದರು. ಈಚೆಗೆ ಆ ಮುದ್ರಣಾಲಯವನ್ನು ಡಿ.ಟಿ.ಪಿ. ಸಹಿತವಾದ ಆಧುನಿಕ ಘಟಕವಾಗಿ ಮಾರ್ಪಡಿಸಿದ್ದರು ಭೀಮಣ್ಣ.

ನಾನು ದಕ್ಷಿಣ ಕನ್ನಡ ಜಿಲ್ಲೆಯ ಗಡಿಯಾಚೆ ನಿರ್ಗಮಿಸಿ ನಾಲ್ಕು ದಶಕಗಳೇ ಸಂದಿದ್ದವು. ಜೊತೆಗೇ ಬರವಣಿಗೆ ಕೂಡ 'ಗಟ್ಟ ಹತ್ತಿತ್ತು'. ತೆಲಂಗಾಣದ ನಲ್ಗೊಂಡ ಜಿಲ್ಲೆಯಲ್ಲೊಂದು ಆರೋಗ್ಯ ಕಾರ್ಯಕ್ರಮದ ಅಧ್ಯಯನ-ಪರಿಶೀಲನೆ ನಡೆಸಿ, ವಿಸ್ತೃತ ವರದಿಯನ್ನು ತಯಾರಿಸಲು ಬೆಂಗಳೂರಿಗೆ ಬಂದಿದ್ದೆ. (ಒಂದು ವಾರ ಬೆಂಗಳೂರಲ್ಲಿ ತಂಗುವುದಿತ್ತು) ಅದೇ ವೇಳೆಗೆ ಬಂಟ್ವಾಳ ತಾಲ್ಲೂಕು ಸಾಹಿತ್ಯ

ಸಮ್ಮೇಳನದಲ್ಲಿ ಭಾಗವಹಿಸಲು ಭೀಮಣ್ಣ ಆಹ್ವಾನ ನೀಡಿದರು. ಸಂತೋಷದಿಂದ ಪಾಲ್ಗೊಂಡೆ. ಹಿರಿಯ ಸಾಹಿತಿ ಚಂಪಾ (ಚಂದ್ರಶೇಖರ ಪಾಟೀಲರು) ಉದ್ಘಾಟಕರು, ವಿ.ಬಿ.ಹೊಸಮನೆ ಸಮ್ಮೇಳನಾಧ್ಯಕ್ಷರು. 'ಉಳಿ' ದೇವಸ್ಥಾನದ ಪ್ರಾಂಗಣದಲ್ಲಿ ಸಮ್ಮೇಳನ ವೈಭವಪೂರ್ಣವಾಗಿಯೂ ಅರ್ಥಪೂರ್ಣವಾಗಿಯೂ ನಡೆಯಿತು. ಮುಕ್ತಾಯದ ಹಂತದಲ್ಲಿ ಸಮಾರೋಪ ಭಾಷಣಕ್ಕೆ ನನ್ನನ್ನು ಆಹ್ವಾನಿಸಿದರು. ಹೆಚ್ಚು 'ತಲೆಕೆಡಿಸಿಕೊಳ್ಳದೆ' ನೀರಸವಾದ ನಾಲ್ಕು ಮಾತು ಹೇಳಿ ಕೈ ತೊಳೆದುಕೊಂಡೆ. ಆದರೆ–ಸಭಾಗೃಹವನ್ನಲಂಕರಿಸಿದ್ದ 'ಜನರು' ನನ್ನನ್ನು ಸುಮ್ಮನೆ ಬಿಡಲಿಲ್ಲ. ತರಾಟೆಗೆ ತೆಗೆದುಕೊಂಡು ಬಿಟ್ಟರು. ಪ್ರಶ್ನಾವಳಿಗಳಿಂದ ಚುಚ್ಚಿದರು; ಚಚ್ಚಿದರು. 'ಬರೆಯುವುದನ್ನು ಯಾಕೆ ನಿಲ್ಲಿಸಿಬಿಟ್ಟಿರಿ? ಪುಸ್ತಕ ಪ್ರಕಟಿಸಲಿಲ್ಲವೇಕೆ...?ಆತ್ಮೀಯರೂ, ಅಭಿಮಾನಿಗಳೂ, ಹಿತೈಷಿಗಳೂ ಆದವರ ಈ ವಿದ್ವಜನಾದೇಶವನ್ನಮನ್ನಿಸದೇ ಬೇರೆ ದಾರಿಯೇ ಇರಲಿಲ್ಲ. 'ಕನಿಷ್ಟ ಪಕ್ಷ ಎರಡು ವರ್ಷಕ್ಕೊಂದು ಪುಸ್ತಕವನ್ನಾದರೂ ಕೊಡುತ್ತೇನೆ' ಎಂದು ಪ್ರಾಮಾಣಿಕವಾಗಿ ನುಡಿದೆ. ಹಿರಿಯ ಗೆಳೆಯರೂ ಪ್ರಸಿದ್ಧ (ಕನ್ನಡ ಪ್ರಪಂಚ) ಪ್ರಕಾಶಕರೂ ಆದ ಬೋಳಂತಕೋಡಿ ಈಶ್ವರಭಟ್ಟರು ಕಳೆದ ನಾಲ್ಕು ವರ್ಷಗಳಲ್ಲಿ ನನ್ನ ಎರಡು ವಿಡಂಬನಾತ್ಮಕ ಕೃತಿಗಳನ್ನು (ಗಾಜಿನ ಮನೆಯಲ್ಲಿ ಧನ್ವಂತರಿ, ಮೊಗಲಾಯರ ಮಧ್ಯೆ ಧನ್ವಂತರಿ) ಪ್ರಕಟಿಸಿದ್ದಾರೆ. ಇದೀಗ ಮೂರನೇ ಪುಸ್ತಕ 'ಬರಗಾಲ ಸೇವೆಯಲ್ಲಿ ಧನ್ವಂತರಿ' ಅಚ್ಚಿನ ಮನೆಗೆ ತಲುಪುತ್ತಿದ್ದಂತೆಯೇ ಬೋಳಂತಕೋಡಿಯವರು ದೈವಾಧೀನರಾದದ್ದು ದು:ಖದ ಘಟನೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಸಾಹಿತ್ಯ ಕ್ಷೇತ್ರದಿಂದ ದೂರ, ಬಹುದೂರ ಸರಿದ ನನ್ನನ್ನು ಮತ್ತೆ ಬರವಣಿಗೆಗೆ ಎಳೆದು ತಂದವರು ನೀರ್ಪಾಜೆ ಭೀಮಣ್ಣ ಎಂಬುದನ್ನು ನಾನು ಒಪ್ಪಿಕೊಳ್ಳುತ್ತೇನೆ.

ದಿ॥ ಪ.ಗೋ. (ಪದ್ಯಾಣ ಗೋಪಾಲಕೃಷ್ಣ) ಹಿರಿಯ ಪತ್ರಕರ್ತರಾಗಿದ್ದರು. ಮಂಗಳೂರು ಪತ್ರಿಕಾ ವಲಯದ ಮಟ್ಟಿಗೆ 'ಅಂಕಣ ಬ್ರಹ್ಮ' ಅವರ ಸಂಸ್ಮರಣೆಯ ಪುಸ್ತಕವನ್ನು ಸಂಪಾದಿಸಿ ಪ್ರಕಟಿಸಲು ರಾಮಚಂದ್ರ ಉಚ್ಚಿಲರ ಜತೆಗೆ ನೀರ್ಪಾಜೆಯವರೂ ನನಗೆ ನೆರವಾದರು. ಸ್ಮಾರಕ ಸಮಿತಿಯ ಟ್ರಸ್ಟ್ ಆಗಿ, ಪ.ಗೋ. ಸ್ಮಾರಕ' ಗ್ರಾಮೀಣ ವರದಿಗಾರಿಕೆಯ ವಾರ್ಷಿಕ ಪ್ರಶಸ್ತಿ' ನೀಡತೊಡಗಿದಾಗ ಭೀಮಣ್ಣ ಸಕ್ರಿಯವಾಗಿ ಪಾಲ್ಗೊಂಡರು. (ದಿ॥ಪ.ಗೋ.ಹಾಗೂ ನೀರ್ಪಾಜೆಯವರು ಆತ್ಮೀಯರಾಗಿದ್ದರು.) ಕಳೆದ ವರ್ಷ ಪಗೋ ಅಂಕಣ ಸಾಹಿತ್ಯದ ಒಂದು ಜನಪ್ರಿಯ ಪುಸ್ತಕ 'ನೋಛೇಂಜ್ ಕಥೆಗಳು' ಇದನ್ನು ಭೀಮಣ್ಣ ಸಂಕಲನ ಮಾಡಿ, ತಮ್ಮ ಸ್ವಂತ ಕನ್ಯಾನದ ಅಭ್ಯುದಯ ಮುದ್ರಣಾಲಯದಲ್ಲಿ ಮುದ್ರಿಸಿ ಸಹಕರಿಸಿರು. ಟ್ರಸ್ಟ್‌ನ ಅಭಿವೃದ್ಧಿಗಾಗಿಯೂ ಹಲವು ಸಲಹೆ ಸೂಚನೆಗಳನ್ನು ನೀಡಿದ್ದರು, ಕ್ರಿಯಾಯೋಜನೆ ಸಿದ್ಧಪಡಿಸಿದ್ದರು.

ಈಗ್ಗೆ ಒಂದು -ಒಂದೂವರೆ ವರ್ಷದ ಕೆಳಗೆ ಒಂದು ದಿನ ಮಂಗಳೂರಿನಲ್ಲಿ ಸ್ವಲ್ಪ ಹೊತ್ತು ವಿರಾಮವಾಗಿ ಮಾತನಾಡುತ್ತಾ ಕುಳಿತತ್ತಿದ್ದೆವು. ಕನ್ನಡ ಸಾಹಿತ್ಯ ಪರಿಷತ್ತು ಪ.ಗೋ.ಟ್ರಸ್ಟ್, ಹಾಗೂ ಪುಸ್ತಕ ಪ್ರಕಟಣೆಯ ಸಂಬಂಧವಾಗಿ ಅನೇಕ ವಿಛಾರಗಳನ್ನು ಚರ್ಚಿಸಿದೆವು. ಹಳ್ಳಿಯ ಹಿರಿಯ ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳ ಮಟ್ಟದಲ್ಲಿ ಸಾಹಿತ್ಯದ ಅಭಿರುಚಿ ಹೆಚ್ಚಿಸುವ ಕಿರುಪುಸ್ತಕಗಳನ್ನು ಒಂದಾಣೆ ಮಾಲೆಯ ರೀತಿಯಲ್ಲಿ ಮಕ್ಕಳ ಕೈಗೆಟಕುವಂತೆ ಒದಗಿಸುವ ಯೋಜನೆಯನ್ನು ರೂಪಿಸಲು ನಿರ್ಧರಿಸಿ ಚದುರಿದೆವು. ಕ್ರಿಯಾ ಯೋಜನೆ ಸಿದ್ಧವಾಗುವ ಮುನ್ನವೇ ಆ ಬಗ್ಗೆ ಹೆಚ್ಚು ಚಿಂತನ ನಡೆಸೋಣ ಎಂದು ಹೇಳಿದ್ದ ಭೀಮಣ್ಣ ಇಲ್ಲವಾದರು! ನಲವತ್ತು ವರ್ಷಗಳ ಅನೌಪಚಾರಿಕ ಬಾಂಧವ್ಯ ಇನ್ನೀಗ ನೆನಪಿನಲ್ಲೇ ಉಳಿಯುವಂತಾಯಿತು.

**ಕೃಪೆ: 'ಶಿರೋಮಣಿ' ಸಂಸ್ಮರಣೆ' 2003.**

# ಕಾಲೇಜ್ ದಿನಗಳ ಒಡನಾಡಿ ಪಿ.ಆರ್. ತಿಪ್ಪೇಸ್ವಾಮಿ

ಇಸವಿ 1950. ಅದೇ ತಾನೇ ವೈದ್ಯ ವಿದ್ಯಾರ್ಥಿಯಾಗಿ ನಾನು ಮೈಸೂರು ನಗರಕ್ಕೆ ಬಂದು ಸೇರಿದ್ದೆ. ಕಾದಂಬರಿಕಾರ ತ.ರಾ.ಸು. ಅವರನ್ನು ಭೇಟಿ ಮಾಡುವ ಆಸೆಯಿಂದ ಮೂರು ನಾಲ್ಕು ಜನ ಗೆಳೆಯರೊಂದಿಗೆ ಕೃಷ್ಣಮೂರ್ತಿ ಪುರಂಗೆ ಹೋಗಿದ್ದ ಒಂದು ಸಂದರ್ಭದಲ್ಲಿ ಕಾರ್ಯ ನಿಮಿತ್ತ ಅಲ್ಲಿಗೆ ಬಂದಿದ್ದ ಪಿ.ಆರ್ ತಿಪ್ಪೇಸ್ವಾಮಿಯವರ ಮುಖ ಪರಿಚಯವಾಯಿತು. ತ.ರಾ.ಸು ಮನೆಯಲ್ಲಿರಲಿಲ್ಲ; ಹಿಂದಿರುಗುವುದು ವಿಳಂಬವಾಗಬಹುದೆಂದು ತಿಳಿದು, 'ಬಂದದಾರಿಗೆ ಸುಂಕವಿಲ್ಲ' ಎಂದುಕೊಳ್ಳುತ್ತ ನಾವು ಅಲ್ಲಿಂದ ಹೊರಬಿದ್ದೆವು. ತಿಪ್ಪೇಸ್ವಾಮಿ ಕೂಡ ನಮ್ಮ ಜತೆಗೆ ಹೆಜ್ಜೆ ಹಾಕಿದರು. ಅದು ಇದು ಮಾತನಾಡುತ್ತ, ಪರಸ್ಪರ ಪರಿಚಯ ಹೇಳಿಕೊಂಡು ಶಿವರಾಮ ಪೇಟೆ ತಲುಪಿದೆವು. ಅಲ್ಲಿ ನಮ್ಮ ದಾರಿ ಕವಲೊಡೆಯಿತು. ತಿಪ್ಪೇ ಸ್ವಾಮಿ ಕುಂಚಿಟಿಗರ ಸಂಘ ಹಾಸ್ಟೆಲ್‌ನತ್ತ, ನಾವು ನಂಜರಾಜ್ ಛತ್ರದ ಕಡೆಗೆ ತಿರುಗಿದೆವು. ತಿಪ್ಪೇಸ್ವಾಮಿಯವರೊಂದಿಗೆ ಇದು ನನ್ನ ಮೊದಲ ಭೇಟಿಯೂ ಹೌದು; ಕಾಲೇಜ್ ದಿನಗಳ ಐದಾರು ವರ್ಷಗಳ ಒಡನಾಟದ ನಾಂದಿಯೂ ಹೌದು. ಅವರು ಆಗ ಮಹಾರಾಜ ಕಾಲೇಜ್‌ನಲ್ಲಿ ಬಿ.ಎ.ಗೆ ಸೇರಿದ್ದರು; ಜತೆಗೆ ಚಿತ್ರಕಲೆಯನ್ನೂ ಅಭ್ಯಸಿಸುತ್ತಿದ್ದರು. ನಮ್ಮ ಪರಿಚಯ ಸ್ನೇಹಕ್ಕೆ ತಿರುಗಿ, ಸ್ನೇಹ ಹಲವಾರು ಚಟುವಟಿಕೆಗಳಲ್ಲಿ ಸಹಭಾಗಿತ್ವದ ನೆಲೆಯನ್ನು ಮುಟ್ಟಿತು.

## ಹಸ್ತಪತ್ರಿಕೆಗಳಿಗೆ ಪುಕ್ಕಟೆ ಮುಖಚಿತ್ರ

'ದಕ್ಷಿಣಕನ್ನಡ'ದಲ್ಲಿ ಅದು ಹಸ್ತಪತ್ರಿಕೆಗಳ ಸ್ವರ್ಣಯುಗ, ಗ್ರಾಮಾಂತರ ಪ್ರದೇಶಗಳ ವಿದ್ಯಾವಂತ ತರುಣರ ಬಳಗಗಳಲ್ಲಿ , ಉದಯೋನ್ಮುಖ ಬರಹಗಾರರ ಗುಂಪುಗಳಲ್ಲಿ ಸಾಹಿತ್ಯಾಸಕ್ತರ ವೃಂದಗಳಲ್ಲಿ 'ಹಸ್ತಪತ್ರಿಕೆ' ಪ್ರಕಟಿಸುವುದು ಉತ್ಸಾಹದ ಹವ್ಯಾಸವಾಗಿತ್ತು; ಮಹತ್ವದ ಕಾರ್ಯಕ್ರಮವಾಗಿತ್ತು. ಕಥೆ, ಕವನ, ಹಾಸ್ಯಚಟಾಕಿ, ಪ್ರವಾಸ ಕಥನಗಳಿಂದ ತೊಡಗಿ , ರಾಜಕೀಯ, ಸಾಮಾಜಿಕ ಸಮಸ್ಯೆಗಳನ್ನು ಅವಲೋಕಿಸುವ ಬರಹಗಳನ್ನು ಕೂಡ ಸಂಪಾದಿಸಿ, ಮುದ್ದಾದ ಕೈಬರಹದಲ್ಲಿ, ಅಚ್ಚುಕಟ್ಟಾಗಿ ತಿಂಗಳು ತಿಂಗಳು ಹೊರ ತರುತ್ತಿದ್ದರು. ಆದರೆ, ವರ್ಣರಂಜಿತವಾಗಿ

ಮುಖಪುಟಗಳಲ್ಲಿ ಚಿತ್ರಿಸಕೊಡುವ 'ಕಲಾವಿದರ' ಕೊರತೆ ಇತ್ತು. 'ಕಲಾವಿದ ' (ಇನ್ನೂ ಕಲಾಶಾಲೆಯಲ್ಲಿ ಅಭ್ಯಾಸ ಮಾಡುತ್ತಿದ್ದರು ಎಂಬುದು ಗೌಣ) ತಿಪ್ಪೇಸ್ವಾಮಿಯವರ ಪರಿಚಯವಾದ ಸಂಗತಿಯನ್ನು ನಮ್ಮೂರ (ದ.ಕ.ಜಿಲ್ಲೆಯ- ಮುಯಖ್ಯವಾಗಿ ಪುತ್ತೂರು ಭಾಗದ) ಮಿತ್ರರಿಗೆ ಬರೆದದ್ದೇ ತಡ- ನಾಲ್ಕಾರು ಹಸ್ತಪತ್ರಿಕೆಗಳ ಸಂಪಾದಕರಿಂದ. 'ವರ್ಣರಂಜಿತ ಮುಖಚಿತ್ರ' ರಚಿಸಿಕೊಡುವಂತೆ ಅವರನ್ನು ಪ್ರಾರ್ಥಿಸುವ ವಿನಂತಿ ಪತ್ರಗಳು ನನಗೆ ಬರಲಾರಂಭಿಸಿದವು. ಕೊನೆಗೊಮ್ಮೆ, ಒಂದೆರಡು ಹಸ್ತಪತ್ರಿಕೆಗಳಿಗೆ ಮುಖಚಿತ್ರ ಬರೆದು ಕೊಡುವಂತೆ ತಿಪ್ಪೇಸ್ವಾಮಿಯವರನ್ನು ದುಂಬಾಲು ಬಿದ್ದು ಬರೆಸಿ, ಕಳುಹಿಸಿದೆ. ಹೀಗೆ ವ್ಯಕ್ತಿಯ ಮುಖಪರಿಚಯವಾಗುವುದಕ್ಕೆ ಎಷ್ಟೋ ಸಮಯದ ಮೊದಲೇ 'ಕುಂಚದ' ಮೂಲಕ ಪುತ್ತೂರು ಸುತ್ತಮುತ್ತಲ ಗೆಳೆಯರ ಗುಂಪುಗಳ ಕಣ್ಮಣಿಯಾಗಿ ಬಿಟ್ಟರು. ಪ.ರು.ತಿ.(ಪಿ.ಆರ್.ತಿಪ್ಪೇಸ್ವಾಮಿ)

ತಮ್ಮ ಹಸ್ತಪ್ರತಿಗೆ ರಚಿಸಿಕೊಟ್ಟ ತ್ರಿವರ್ಣ ಮುಖಚಿತ್ರವನ್ನು ನೋಡಿ ಸಂತೋಷಪಟ್ಟು ಪಾಣಾಜೆಯ ಶಂಪಾ ದೈತೋಟ (ಮುಂದೆ 'ಪಶ್ಚಿಮ ಘಟ್ಟ ಉಳಿಸಿ' ಮೊದಲಾದ ಅನೇಕ ಹೋರಾಟಗಳ ಖ್ಯಾತನಾವರು) ಹಣ ಎಂ.ಓ ಮಾಡಿ ಕಳುಹಿಸಿಕೊಟ್ಟರು. (ತಿಪ್ಪೇಸ್ವಾಮಿಯವರ ವಿಳಾಸ ತಿಳಿಯದ ಕಾರಣ ಎಂ.ಓ ನನ್ನ ಹೆಸರಿಗೆ ಬಂದಿತ್ತು. 'ಅವರಿಗೆ ತಲುಪಿಸುವ ಸೂಚನೆಯೊಂದಿಗೆ') ಹಣ ಪಡೆದುಕೊಂಡು ತಿಪ್ಪೇಸ್ವಾಮಿಯವರ ರೂಮಿನತ್ತ (ಆಗ ಅವರು ವಾಣಿವಿಲಾಸ ರಸ್ತೆಯ ಒಂದು ಕೋಣೆಯಲ್ಲಿ ವಾಸವಿದ್ದರು) ಧಾವಿಸಿದೆ. ಅಲ್ಲಿ ಅವರಿರಲಿಲ್ಲ. ನನ್ನ ಅವರಸರವನ್ನು ಕಂಡ ಸ್ನೇಹಿತರೊಬ್ಬರು ತಾನು , ಹಣವನ್ನು ತಿಪ್ಪೇಸ್ವಾಮಿಯವರಿಗೆ ಮುಟ್ಟಿಸುತ್ತೇನೆಂದಾಗ ಹಣವನ್ನು ಅವರ ಕೈಗೆ ಕೊಟ್ಟು ಹಿಂದಿರುಗಿದೆ.... ಕೆಲವು ದಿನಗಳ ನಂತರ ಇನ್ನೊಂದು ಮುಖಪುಟಕ್ಕಾಗಿ ವಿನಂತಿ ಬಂದಾಗ ತಿಪ್ಪೇಸ್ವಾಮಿಯವರನ್ನು ಭೇಟಿಯಾದೆ. ಮಾತಿನ ಮಧ್ಯೆ ಶಂಪಾ ಅವರು ಕಳುಹಿಸಿದ್ದ 15ರೂಪಾಯಿ ತಲುಪಿದ್ದಕ್ಕೆ 'ಎರಡು ಸಾಲು ಉತ್ತರ ಬರೆದು ಹಾಕಿ" ಎಂದು ಹೇಳಿದೆ. ಕ್ಷಣಹೊತ್ತು ತಿಪ್ಪೇಸ್ವಾಮಿ ಗಲಿಬಿಲಿಗೊಂಡರು; ಮತ್ತೆ ಕೂಲಂಕಶ ವಿವರಗಳೆಲ್ಲವೂ ತಿಳಿದಾಗ, ಅವರ ಕೈಗೆ ಹಣವನ್ನು "ಆತ " ಮುಟ್ಟಿಸಲಿಲ್ಲ- ಅಷ್ಟೇ ಅಲ್ಲ, ಆ ವಿಚಾರ ತಿಳಿಸಲೂ ಇಲ್ಲ ಎಂಬುದು ಸ್ಪಷ್ಟವಾಯಿತು. ನನಗೆ ವ್ಯಾಕುಲವಾಯಿತು; ಸಿಟ್ಟು ಉಕ್ಕಿಬಂತು. ಈಗಲೇ ಹೋಗಿ ಆ 'ಲೋಫರ್"ನ್ನು ವಿಚಾರಿಸಿಕೊಂಡು ಬರುತ್ತೇನೆ ಅಂತ ಮೇಲೆದ್ದೆ. ನನ್ನನ್ನು ಕೈ ಹಿಡಿದು ಕುಳ್ಳಿರಿಸಿ "15ರೂಪಾಯಿಗಾಗಿ ಅವನ'ಲ್ಲಿ ವೈಮನಸ್ಸು ಮಾಡಿಕೊಳ್ಳುವುದು ಬೇಡ. ಬಹುಶ: ನನಗಿಂತಲೂ ಅವನಿಗೆ ಹಣದ ಅವಶ್ಯಕತೆ ಹೆಚ್ಚಿದ್ದಿರಬೇಕು....ಇಷ್ಟಕ್ಕೆಲ್ಲಾ ಯಾಕೆ ತಲೆಕೆಡಿಸಿಕೊಳ್ಳಬೇಕು" ಎಂದು ಸಾಂತ್ವನ ಹೇಳಿ "ವನ್ ಬೈ ಟೂ ಕಾಫಿ

ಕುಡಿಯೋಣ–ಬನ್ನಿ " ಎಂದು ಪಕ್ಕದ ಹೋಟೆಲಿಗೆ ಕರೆದೊಯ್ದರು ತಿಪ್ಪೇಸ್ವಾಮಿ.... ತಿಪ್ಪೇಸ್ವಾಮಿಯವರ ಈ "ನಿರ್ಮೋಹ" ಕೊನೇವರೆಗೂ ಅವರ "ಸಂಗಾತಿ"ಯಾಗೇ ಉಳಿದಿತ್ತು. (ನಮ್ಮ ಪುತ್ತೂರು ಗೆಳೆಯರ ಗುಂಪುಗಳಲ್ಲಿ ಅವರು ತುಂಬ ಜನಪ್ರಿಯರಾದರು.

## ಊಹ್ಞೂಂ–ಒಂದು ರೂಪಾಯಿ ಕೂಡ ಬಡ್ತಿಯಿಲ್ಲ!

ಆದಿನಗಳಲ್ಲಿ ವ್ಯಂಗ್ಯ ಚಿತ್ರಗಳನ್ನು ಸಲೀಸಾಗಿ ತಿಪ್ಪೇಸ್ವಾಮಿ ರಚಿಸುತ್ತಿದ್ದರು. "ವಿಕಟ ವಿನೋದಿನಿ"ಯಿಂದ ಹಿಡಿದು "ವಿನೋದ"ವರೆಗೆ ಅವುಗಳ ಪ್ರಕಟಣಾ ವ್ಯಾಪ್ತಿಯಿತ್ತು. ಆದರೆ ನಿಯಮಿತವಾಗಿ ಪ್ರಕಟಿಸಿ, ಸಂಬಾವನೆ ಕೊಡುತ್ತಿದ್ದ ಪತ್ರಿಕೆಗಳಲ್ಲಿ "ಕೊರವಂಜಿ" ಮುಖ್ಯವಾಗಿತ್ತು. ಪ್ರತಿತಿಂಗಳು ಎರಡು ವ್ಯಂಗ್ಯ ಚಿತ್ರಗಳನ್ನು ಕೊರವಂಜಿಗೆ ಇವರು ರವಾನಿಸುತ್ತಿದ್ದರು–ಅವರು ಪ್ರಕಟಿಸುತ್ತಿದ್ದರು. ಪ್ರಕಟವಾದ 8–10ದಿನಗಳಲ್ಲಿ 4ರೂಪಾಯಿ ಎಂ.ಓ ಬರುತ್ತಿತ್ತು. (ಚಿತ್ರಕ್ಕೆ 2ರೂ ಸಂಭಾವನೆ) ಒಂದು ತಿಂಗಳು ಇದ್ದಕ್ಕಿದ್ದ ಹಾಗೆ 6ರೂಪಾಯಿ ಮನಿಯಾರ್ಡರ್ ಬಂತು. ಅದನ್ನು ಸ್ವೀಕರಿಸಿ, ಚಿತ್ರಕ್ಕೆ 1ರೂಪಾಯಿ ಬಡ್ತಿ (ಸಂಭಾವನೆ) ಕಳುಹಿಸಿದ್ದಕ್ಕಾಗಿ ಧನ್ಯವಾದಗಳು" ಎಂಬುದಾಗ ತಿಪ್ಪೇಸ್ವಾಮಿ ಒಂದು ಕಾರ್ಡ್ ಗೀಚಿದರು.... ಮರುಟಪ್ಪಾಲಿಗೆ ಸಂಪಾದಕ 'ರಾಶಿ' ಯವರ ರುಜುವಿನೊಂದಿಗೆ ಬಂದ ಉತ್ತರದ ಸಾರಾಂಶ ಇಷ್ಟು "ಕಣ್ಣುತಪ್ಪಿ 2ರೂ ಹೆಚ್ಚು ಸಂದಿದೆ. (ಅದನ್ನು ನಮ್ಮ ಗಮನಕ್ಕೆ ತಂದ ನಿಮ್ಮ ಪ್ರಾಮಾಣಿಕತೆಗೆ ಧನ್ಯವಾದಗಳು.... ಮುಂದಿನ ತಿಂಗಳು 3ಚಿತ್ರ ಕಳುಹಿಸಿದರೆ ಲೆಕ್ಕಾಚಾರ ಸರಿಯಾಗುತ್ತದೆ.".

'ಇಷ್ಟು ಸಮಯದಿಂದ ವ್ಯಂಗ್ಯ ಚಿತ್ರ ಕಳಿಸ್ತಿದ್ದೇನೆ–ಒಂದು ರೂಪಾಯಿ ಕೂಡ ಬಡ್ತಿ ಕೊಡಲಿಲ್ಲ" ಅಂತ ಗೊಣಗಿಕೊಂಡರೂ, ವ್ಯಂಗ್ಯಚಿತ್ರ ಕಳುಹಿಸುವುದನ್ನು ನಿಲ್ಲಿಸಲಿಲ್ಲ.... ಎಷ್ಟೋ ವರ್ಷಗಳ ನಂತರ (1960ರ ಸುಮಾರಿಗೆ) ಪುತ್ತೂರಿನಿಂದ "ವಿಚಾರವಾಣಿ" (ಇದು ಶ್ರೀ ಶಿವರಾಮ ಕಾರಂತರು ಸ್ಥಾಪಿಸಿದ್ದ ವಾರಪತ್ರಿಕೆ)ಯನ್ನು ಪುನರ್‌ಪ್ರಕಟಿಸಲು ತೊಡಗಿದಾಗ "ಕೊರವಂಜಿ'ಯಲ್ಲಿ ಹಿಂದೆ ಪ್ರಕಟವಾಗಿದ್ದ ಕೆಲವು ಕಾರ್ಟೂನ್'ಗಳನ್ನು ಮರುಪ್ರಕಟಿಸಲು ಅನುಮತಿ ಕೋರಿ ಪತ್ರ ಬರೆದರೆ, 'ಸರಿ' ಪ್ರಕಟಿಸಿರಿ' ಎಂದು ತಿಪ್ಪೇಸ್ವಾಮಿಯುವರಿಂದ ಒಪ್ಪಿಗೆ ಸಿಕ್ಕಿತು.... ವಿಚಾರವಾಣಿಯಲ್ಲಿ ಪ್ರಕಟವಾದ ಪ್ರತಿ ವ್ಯಂಗ್ಯ ಚಿತ್ರಕ್ಕೆ 5ರೂ ಸಂಭಾವನೆ ಎಂದು ನಾವು ನಿಗದಿಗೊಳಿಸಿಕೊಂಡಿದ್ದೆವು. ಮೊದಲ ಎಂ.ಓ ತಲುಪಿದ ಕೂಡಲೇ "ಈಗ ನಿಜವಾದ ಬಡ್ತಿ ಸಿಕ್ಕಿತು" ಎಂದು ಸಂತೋಷಪಟ್ಟು ಹೃದಯ ತುಂಬಿ ಉತ್ತರಿಸಿದರು ಪಿ.ಆರ್ ತಿಪ್ಪೇಸ್ವಾಮಿ.

## 'ಕೊಠಡಿ' ಎಂಬ 'ಛತ್ರ'

ಮೈಸೂರು ವಾಸದ ಮೊದಲ ದಿನಗಳಲ್ಲಿ ನನು ನಂಜರಾಜ ಛತ್ರದ ದೊಡ್ಡ ಕೋಣೆಯಲ್ಲಿ ಇರುತ್ತಿದ್ದೆ. ಆಗ ತಿಪ್ಪೇಸ್ವಾಮಿ ವಾಸ-ರಮಾವಿಲಾಸ ರಸ್ತೆಯ ಸಂದಿಯ ಒಂದು ಕಿರು ಕೊಠಡಿಯಲ್ಲಿ ಬಾಡಿಗೆ ಕೊಡುವ ಮಟ್ಟಿಗೆ ಅದು ತಿಪ್ಪೇಸ್ವಾಮಿಯವರಿಗೆ ಸೇರಿದ ರೂಮು; ವಾಸಿಸುವುದಕ್ಕೆ ನಾಲ್ಕಾರು ಜನ ವಿದ್ಯಾರ್ಥಿಗಳು-ಅವರೆಲ್ಲ ಪುಕ್ಕಟೆ ವಾಸಿಗಳು', "ತಿಪ್ಪೇಸ್ವಾಮಿ ಧರ್ಮಛತ್ರ" ಎಂದು, ಗೆಳೆಯ ಹಿರಿಯೂರು ಕೃಷ್ಣಮೂರ್ತಿಯವರ ಜೊತೆ ಸೇರಿಕೊಂಡು ನಾನೂ 'ಚುಡಾಯಿಸುತ್ತಿದ್ದೆ.

"ಪಾಪ -ಓದಲು ಹಳ್ಳಿಯಿಂ ಬಂದ ಹುಡುಗರು; ಬಾಡಿಗೆ ರೂಮು ಮಾಡಿಕೊಳ್ಳುವುದಕ್ಕೆ ಅನುಕೂಲವಿಲ್ಲ; ಬಡವರು ಹಾಸ್ಟೆಲ್‌ನಲ್ಲಿ ಸೀಟು ಸಿಕ್ಕಿಲ್ಲ... ನನಗೊಬ್ಬನಿಗೆ ಎಷ್ಟು ಜಾಗ ಬೇಕು ಈ ರೂಮಿನಲ್ಲಿ? ... ಇರುತ್ತಾರೆ, ಇದ್ದು ಓದಿಕೊಳ್ತಾರೆ" ಇದು ತಿಪ್ಪೇಸ್ವಾಮಿ ಕೊಡುತ್ತಿದ್ದ "ಸ್ಟಾಕ್‌ರಿಪ್ಲೈ".

ತಿಪ್ಪೇಸ್ವಾಮಿ ವಾಸಿಸುತ್ತಿದ್ದ ಕೋಣೆ ಚಿಕ್ಕದು. ಆದರೆ, ಅವರ ಸಹೃದಯತೆ ದೊಡ್ಡದು: ಬಹುದೊಡ್ಡದು.

ಮುಂದೆ, ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾದಾಗ ಬೆಂಗಳೂರಿನ ಸರಕಾರೀ ಜನರಲ್ ಹಾಸ್ಟೆಲ್‌ನಲ್ಲಿ ಅವರು ವಾಸಿಸುತ್ತಿದ್ದರು. ಸಾಕಷ್ಟು ಅನುಕೂಲತೆಗಳಿರುವ ದೊಡ್ಡ ಕೊಠಡಿ. ಒಮ್ಮೆ ಯಾವುದೋ ಒಂದು ಸರಕಾರೀ "ಕಮ್ಮಟ"ದಲ್ಲಿ ಭಾಗವಹಿಸಲು ಬಂದಿದ್ದ ನನ್ನನ್ನು 'ಜನರಲ್ ಹಾಸ್ಟೆಲ್'ನಲ್ಲಿ 'ಇಳಿಸಿ'ದ್ದರು, ಸಭೆ ಮುಗಿಸಿಕೊಂಡು, ಸಂಜೆಗೆ ತಿಪ್ಪೇಸ್ವಾಮಿಯವರನ್ನು ಮಾತಾಡಿಸೋಣವೆಂದುಕೊಂಡು ಅವರ ಕೋಣೆಗೆ ಹೋಗಿ ಬಾಗಿಲು ತಟ್ಟಿದೆ. ಒಳಗೆ 'ಸರಕಾರೀ ಕೆಲಸ'ದ ನಿಮಿತ್ತ-ಎಂದರೆ ಯಾವುದೋ ಕಛೇರಿಯಲ್ಲಿ, ಅಧಿಕಾರಿಗಳನ್ನು ಕಂಡು 'ಮಾತಾಡಿ ತಮ್ಮ ತೊಂದರೆಯನ್ನು ನಿವೇದಿಸಿ ಪರಿಹಾರ ಕೇಳಿಕೊಳ್ಳಲು ಬಂದಿದ್ದ ನಾಲ್ಕಾರು ಜನ ಹಳ್ಳಿ ಜನಗಳು ಆರಾಮವಾಗಿ ಕುಳಿತು ವಿಶ್ರಾಂತಿ ಪಡೆಯುತ್ತಿದ್ದರು. "ತಾತ ಮೈಸೂರಿಗೆ ಹೋಗಿದ್ದಾರೆ; ಎಷ್ಟೇ ಹೊತ್ತಾದರೂ ವಾಪಸ್ಸು ಬರುತ್ತೇನೆ ಅಂತ ತಿಳಿಸಿದ್ದಾರೆ" ಎಂದು ತಿಪ್ಪೇಸ್ವಾಮಿಯವರ "ಬರುಹೋಗು" ಬಗ್ಗೆ ಸೂಚನೆ ನೀಡಿದ ಒಬ್ಬ ಕಿರಿಯ.... ಬೆಂಗಳೂರಿನಲ್ಲಿ ವಸತಿ ಸೌಕರ್ಯದ ಕಷ್ಟವೇನೆಂಬುದು ನನಗೆ ತಿಳಿಯದ ವಿಚಾರವಲ್ಲ ಅಲ್ಲದೆ, ಅದು ಎಷ್ಟು ದುಬಾರಿ ಖರ್ಚಿನ ಬಾಬತ್ತು ಎಂಬುದೂ ತಿಳಿದಿತ್ತು..... ಹಳ್ಳಿಯಿಂದ ಬಂಧ ಈ ಬಡ 'ಬಂಧು'ಗಳು ಇಲ್ಲಿ ತಾತ್ಕಾಲಿಕ ಬಿಡಾರ ಹೂಡಿದ್ದು ಆಶ್ಚರ್ಯವೆನ್ನಿಸಲಿಲ್ಲ. 40-45ವರ್ಷಗಳ ಹಿಂದೆ

ಮೈಸೂರಿನ ಆರ್.ವಿ.ರಸ್ತೆಯ ಕಿರುಕೋಣೆಯಲ್ಲಿ ಹೇಗೋ-ಈಗ, ಈ ಬೆಂಗಳೂರು ಸರಕಾರೀ ಹಾಸ್ಟೆಲಿನ ದೊಡ್ಡ ಕೊಠಡಿಯಲ್ಲೂ ತಿಪ್ಪೇಸ್ವಾಮಿ ಹಾಗೇ ಇದ್ದಿವಿ! ಅದೇ ಅನುಕಂಪ; ಅದೇ ಸಹೃದಯತೆ, ಹಣಕಾಸಿನ ಲೆಕ್ಕದಿಂದ ಇವರು ಶ್ರೀಮಂತ ಅಲ್ಲದಿರಬಹುದು. ಆದರೆ-ಹೃದಯ ಶ್ರೀಮಂತಿಕೆಯಲ್ಲಿ ಯಾರಿಗೂ ಕಮ್ಮಿ ಇಲ್ಲದ ಸಜ್ಜನ ನಮ್ಮ ಒಡನಾಡಿ ಈ ಪಿ.ಆರ್ ತಿಪ್ಪೇಸ್ವಾಮಿ.

## ಬೆಂಕಿ ಬಿದ್ದ ಮನೆಯಿಂದ

ತಿಪ್ಪೇಸ್ವಾಮಿ ವಾಸವಾಗಿದ್ದ ಕೊಠಡಿಯನ್ನೊಳಗೊಂಡು ಆ ಹಳೆಯ ಇಡೀ ಮನೆಗೊಮ್ಮೆ ಬೆಂಕಿ ಬಿತ್ತು. ಆ ಹೊತ್ತಿನಲ್ಲಿ ತಿಪ್ಪೇಸ್ವಾಮಿ ಒಬ್ಬರೇ ರೂಮಿನಲ್ಲಿದ್ದರು. ಬೆಂಕಿ ಆರಿಸಲು ಪ್ರಯತ್ನಿಸಿ, ಅದು ಪ್ರಯೋಜನಕಾರಿಯಾಗದೇ ಹೋದ ಕಾರಣ, ಕೊಠಡಿಯಲ್ಲಿ ವಾಸಕ್ಕಿದ್ದ 'ಆ' ಐದಾರು ಮಂದಿ ಬಡವಿದ್ಯಾರ್ಥಿಗಳ ಬಟ್ಟೆಬರೆ, ಪುಸ್ತಕಗಳನ್ನು ಮೊದಲು ಹೊರಕ್ಕೆ ಸಾಗಿಸಿದರು. ತರುವಾಯ ತಮ್ಮ ವಸ್ತುಗಳನ್ನು ಈಚೆಗೆ ತರಲು ತೊಡಗಿದರೆ ಸಮಯ ಮಿಂಚಿತ್ತು. ಬೆಂಕಿ ಅಪಾಯಕಾರೀ ರೀತಿಯಲ್ಲಿ ವ್ಯಾಪಿಸಿತ್ತು. ವಿಧಿಯಿಲ್ಲದೆ ತಿಪ್ಪೇಸ್ವಾಮಿ ಈಚೆಗೆ ಧುಮಿಕಿದರು-ಹೆಚ್ಚುಕಮ್ಮಿ ಬರಿಗೈಯಿಂದಲೇ (ತನ್ನ ಬಣ್ಣದ ಕುಂಚ, ಪೈಂಟ್ ಟ್ಯೂಬ್‌ಗಳ ಡಬ್ಬಿ ಹಾಗೂ ಅರ್ಧ ಪೂರೈಸಬೇಕಾಗಿದ್ದ ಒಂದು ಭಾವಚಿತ್ರ ಇಷ್ಟನ್ನು ಮಾತ್ರ ಹಪರಕ್ಕೆ ತರಲು ಸಾಧ್ಯವಾಯಿತು.... ಒಂದು ನಾಲ್ಕು ದಿನ ಗೆಳೆಯರ ರೂಮಿನಲ್ಲಿ ತಂಗಿದ್ದು, ಮುಂದೆ ಯಥಾವಕಾಶ ಎಲ್ಲವನ್ನೂ ಹೊಂದಿಸಿಕೊಳ್ಳಲು ಪ್ರಯತ್ನಿಸಿದರು.... "ನನ್ನ ಬಟ್ಟೆ ಬರೆ ಹೋಧದ್ದನ್ನು ಹೇಗೋ ಸರಿ ಹೊಂದಿಸಿಕೊಂಡೆ. ಆದರೆ-ಆ ಬಡ ಹುಡುಗರ ಬಟ್ಟೆ ಬರೆ ಏನಾದರೂ ಸುಟ್ಟು ಹೋಗಿದ್ದರೆ, ಅವರ ಅವಸ್ಥೆ ಏನಾಗುತ್ತಿತ್ತು? ಎಷ್ಟು ಕಷ್ಟ ಪಡಬೇಕಾಗುತ್ತಿತ್ತು " ನಾಲ್ಕು ನಾಲ್ಕು ಬಾರಿ ಉದ್ಗರಿಸಿದರು ತಿಪ್ಪೇಸ್ವಾಮಿ.

## ಚಟುವಟಿಕೆಗಳ ಚಟವಾದಿ

"ವೈದ್ಯಕೀಯ ವ್ಯಾಸಂಗ ಮಾಡುತ್ತಿದ್ದ ಮರಕಿಣಿ ಬಳಿಗೆ ಚಿಕಿತ್ಸೆಗಾಗಿ ನಾನು ಹೋದವನಲ್ಲ; ಅಥವಾ ಕಲೆಯನ್ನು ಅಭ್ಯಾಸ ಮಾಡಲು ಅವರು ನನ್ನ ಬಳಿ ಬಂದವರಲ್ಲ; ನಮ್ಮಿಬ್ಬರ ನಡುವೆ ಇದ್ದ ಸಾಮಾನ್ಯ ಅಭಿರುಚಿಯೆಂದರೆ ಸಾಹಿತ್ಯ" ಎಂಬುದಾಗಿ, "ಕಲಾವಿದನ ನೆನಪುಗಳು" ಪುಸ್ತಕದಲ್ಲಿ ತಿಪ್ಪೇಸ್ವಾಮ ಉಲ್ಲೇಖಿಸಿದ್ದಾರೆ. ಈ ಸಾಹಿತ್ಯಾಭಿರುಚಿಯೇ ಚಟುವಟಿಕೆಗಳಾಗಿ, ಚಟುವಟಿಕೆಯೇ ಚಟವಾಗಿ ದೀರ್ಘಕಾಲ ಒಡನಾಡಿಯಾಗಿದ್ದು, ಅವುಗಳನ್ನು ವಿಸ್ತಾರವಾಗಿ ಹೇಳಲು ಪ್ರಯತ್ನಿಸದೇ ಚುಟುಕಿನಲ್ಲಿ ಬರೆಯುತ್ತೇನೆ(ಪುಟ ವಿಸ್ತಾರದ ಭಯದಿಂದ ಅಷ್ಟೆ.

## ತಾವರೆಕೆರೆಯ ಸುಂದರ ಪುಷ್ಪಗಳು

ಜೀಶಂಪ, ರಾಮದಾಸ್, (ಹೇಮದಳ) ಮತ್ತು ತಿಪ್ಪೇಸ್ವಾಮಿ 'ತಾವರೆ' ಎಂಬ ಒಂದು ಹಸ್ತಪತ್ರಿಕೆ ಹೊರಡಿಸುತ್ತಿದ್ದರು. "ತಾವರೆ ಹೂವನ್ನು ಮತ್ತೆ ನಿರೀಕ್ಷಿಸಬೇಕಾದರೆ ಕೆರೆ ಬೇಡವೇ?" ಎಂದು ನಾನು ತರ್ಕಿಸಿದಾಗ 'ತಾವರೆ ಸಂಸ್ಥೆ' ಜನ್ಮ ತಳೆಯಿತು. "ಸಂಸ್ಥೆ ಅಂದ ಮೇಲೆ ಒಂದೇ ಚಟುವಟಿಕೆಯೇ?" ಎಂದು ಗೆಳೆಯ ಹಿರಿಯೂರು ಕೃಷ್ಣಮೂರ್ತಿ ಹೇಳಿದಾಗ, "ಅಖಿಲ ಕರ್ನಾಟಕ ಕಾಲೇಜು ವಿದ್ಯಾರ್ಥಿಗಳ ಕವಿತಾ ಸ್ಪರ್ಧೆ" ನಡೆಸಬಹುದೆಂದು ತೀರ್ಮಾನ ಮಾಡಿ, ಆ ಜವಾಬ್ದಾರಿಯನ್ನು ತಿಪ್ಪೇಸ್ವಾಮಿ ನನಗೆ ಒಪ್ಪಿಸಿದರು. ತಾವರೆಕೆರೆಯ ಸ್ಪರ್ಧೆ ಯಶಸ್ವಿಯಾಯಿತು: "ಎಚ್.ಎಂ. ಮರುಳಸಿದ್ಧಯ್ಯ ಮತ್ತು ವೃಷಭೇಂದ್ರಸ್ವಾಮಿ" ಎಂಬ ಇಬ್ಬರು ಉದಯೋನ್ಮುಖ ನವ್ಯ ಕವಿಗಳನ್ನು (1951ರಲ್ಲಿ) ಕನ್ನಡ ನಾಡಿಗೆ ಮೊದಲ ಬಾರಿಗೆ ಪರಿಚಯಿಸುವ ಅವಕಾಶ ನನ್ನ ಪಾಲಿಗೆ ಸಿಕ್ಕಿತು. (ಕರ್ಯನಿರ್ವಹಣೆಯ ಖರ್ಚು ವೆಚ್ಚವೆಲ್ಲ ತಿಪ್ಪೇಸ್ವಾಮಿಯವರದು; ಯಶಸ್ವಿಯಾಗಿ ನಿರ್ವಹಿಸಿದ ಕೀರ್ತಿ ನನ್ನ ಬಗಲಿಗೆ!)

## ತಾವರೆಕೆರೆಯಿಂದ ಮೂಡಿಬಂದ ಕಲಾಕ್ಷೇತ್ರ

ಮುಂದೆ ತಾವರೆಗುಂಪು "ಕಲಾಕ್ಷೇತ್ರ'ದ ಬಳಗವಾಗಿ ರೂಪುಗೊಂಡಿತು; ಹೊಸ ಸ್ಥರವನ್ನು ಪಡೆಯಿತು; ಪ್ರಕಟಣಾ ಪ್ರಪಂಚಕ್ಕೂ ಕಾಲಿಟ್ಟಿತು.... ಕಲಾಕ್ಷೇತ್ರ ಪುಸ್ತಕ ಪ್ರಕಟಿಸುವ ನಿರ್ಧಾರ ಮಾಡಿದಾಗ ಮೊದಲ ಪುಷ್ಪವಾಗಿ ಜೀ.ಶಂ.ಪ. ಅವರ 'ಜನಪದ' ಕವನ ಸಂಕಲವನ್ನು ಹೊರತರಲು ನಿರ್ಧರಿಸಿದರೆ, ಅದರ ಮುದ್ರಣವ್ಯವಸ್ಥೆಗೆ ಮುಂದಾದರು ತಿಪ್ಪೇಸ್ವಾಮಿ ಅಷ್ಟೇ ಅಲ್ಲದೆ ಅವರ ಕುಂಚದಿಂದಲೇ ಮುಖಪುಟ ಸಿದ್ಧವಾಯಿತು.

ಪುತ್ತೂರಿನ ಗೆಳೆಯರು, ಜನಪ್ರಿಯ ಸಾಹಿತ್ಯವೆಂಬ ಪ್ರಕಟಣಾ ವ್ಯವಸ್ಥೆಯನ್ನು ಪ್ರಾರಂಭಿಸಿದಾಗ, ನಾನು (ಶ್ರೀ ಶಂಪಾದ್ಯೆ ತೋಟ ಅವರ ಜೊತೆ ಸೇರಿ) ಅಲ್ಲಿನ ಉದಯೋನ್ಮುಖ ತರುಣ 'ಸಾಹಿತಿಗಳ' ಕಥಾಸಂಕಲನವನ್ನು ಸಂಪಾದಿಸಿ, ಪ್ರಕಟಿಸಿದೆವು. '(ಮುಂಗಾರು ಮುಗಿಲು)' ಆ ಪುಸ್ತಕದ ಮುಖಪುಟದ ಶೀರ್ಷಿಕೆಯನ್ನೂ, ಒಳಪುಟವನ್ನೂ, ಚಿತ್ರವನ್ನೂ ಸೃಷ್ಟಿಸಿಕೊಟ್ಟವರು ತಿಪ್ಪೇಸ್ವಾಮಿ. ಅಷ್ಟೇ ಅಲ್ಲದೆ , ಪುಸ್ತಕದ ಮುದ್ರಣ ವೆಚ್ಚದ ಹಣ ಸಂಗ್ರಹಿಸಲು ಕೈ ಸಾಗದಾಗ ಮೈಸೂರಿನ ಪ್ರಸಿದ್ಧ ವ್ಯಾಪಾರೋದ್ಯಮಿಗಳು (ಜ್ಯೋತಿ ಲಾಂಡ್ರಿ, ಕೀರ್ತಿ ಸಿಲ್ಕ್ ಹೌಸ್, ಗಣೇಶ್ ಬೀಡಿ ವ್ಯಾಕ್ಟರಿ) ಮೊದಲಾದವನ್ನು ಸ್ವತ: ಭೇಟಿಯಾಗಿ ಜಾಹಿರಾತು ತಂದು, (ಹತ್ತಾರು ಬಾರಿ ಅವರ ಕಛೇರಿಗೆ ಅಲೆದು) ಹಣ ಒದಗಿಸಿಕೊಟ್ಟವರು ತಿಪ್ಪೇಸ್ವಾಮಿ. ನಮ್ಮ ಕಾಲೇಜಿನ ವಾರ್ಷಿಕ ಸಂಚಿಕೆಗೆ ಕೂಡ ಅವರೇ ಮುಖಪುಟ

ಬರೆದುಕೊಟ್ಟರು.... ಕುಮಟಾ ಸಾಹಿತ್ಯ ಸಮ್ಮೇಳನದ ಹೊತ್ತಿಗೆ ಸಮ್ಮೇಳನಾಧ್ಯಕ್ಷ ಶ್ರೀ ವೀ.ಸಿ.ಯವರ ಬಗೆಗೆ ಪರಿಚಯಾತ್ಮಕ ಕೃತಿಯನ್ನು (ಶಿವರಾಮ ಕಾರಂತರಂತಹ ಹಿರಿಯ ಲೇಖಕರ ಬರಹಗಳಿದ್ದ ಕೃತಿ ಅದು) ಕಲಾಕ್ಷೇತ್ರದ ಮೂಲಕ ತಿಪ್ಪೇಸ್ವಾಮಿ ಮೈಸೂರಿನಲ್ಲಿ ಅಚ್ಚಿಸಿದರೆ, ಕುಮಟಾದಲ್ಲಿ ಸಾಹಿತ್ಯ ಸಮ್ಮೇಳನದ ಶುಭ ಸಂದರ್ಭದಲ್ಲಿ "ಬಿಡುಗಡೆ" ಮಾಡಿ, ಮೊದಲ ಪ್ರತಿಯನ್ನು ಶ್ರೀ ವಿ.ಸೀ.ಯವರಿಗೆ ಸಮರ್ಪಿಸುವ ಸದವಕಾಶವನ್ನು ನನಗೆ ಒದಗಿಸಿ ಕೊಟ್ಟರು ತಿಪ್ಪೇಸ್ವಾಮಿ... ನನ್ನ ಕಿರು ಹರಟೆಗಳ ಸಂಕಲನ "ರೂಪರಾಶಿಗಳ ಸಂತೆ" ಮುದ್ರಣಗೊಂಡಿದ್ದು, ಮುಖಪುಟದಲ್ಲಿ ಚಿತ್ರವಿಲ್ಲದೆ "ಸಾದಾ" ಆಗಿ ಪ್ರಕಟಣೆಗೆ ಸಿದ್ಧವಾದುದನ್ನು ಅರಿತ ತಿಪ್ಪೇಸ್ವಾಮಿ, ನೇರವಾಗಿ ಪ್ರೆಸ್ಸಿಗೆ ಹೋಗಿ, ಅಲ್ಲೇ ಕುಳಿತು ಮುಖಚಿತ್ರ ಬರೆದು ಕೊಟ್ಟು ಬಂದರು!

**........ಒಡನಾಡಿ ನಾನೆಂಬ ಹೆಮ್ಮೆ**

ಹಿರಿಯ ಕಲಾವಿದರಾಗಿ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿ ಮೈಸೂರು ವಿಶ್ವವಿದ್ಯಾಲಯದ ಜಾನಪದ ವಸ್ತು ಸಂಗ್ರಹಾಲಯದ ನಿರ್ಮಾಪಕರಾಗಿ, ಧರ್ಮಸ್ಥಳ ಶ್ರೀ ಕ್ಷೇತ್ರದ "ಮಂಜೂಷಾ"ವನ್ನು ಸೃಷ್ಟಿಸಿದ ಶಿಲ್ಪಿಯಾಗಿ, ಕಲಾ –ಸಾಹಿತ್ಯ ಪ್ರಪಂಚದ ಪ್ರಸಿದ್ಧ ವ್ಯಕ್ತಿಯಾಗಿ ಜನಮನ್ನಣೆ ಗಳಿಸಿರುವ ಶ್ರೀ ಪಿ.ಆರ್ ತಿಪ್ಪೇಸ್ವಾಮಿಯವರ ಕಾಲೇಜ್ ದಿನಗಳ ಒಡನಾಡಿಯಾಗಿದ್ದೆ ಎಂಬುದೇ ನನಗೊಂದು ಹೆಮ್ಮೆ.

**ಕೃಪೆ: ಶ್ರೀ ತಿಪ್ಪೇಸ್ವಾಮಿ ಅಭಿನಂದನೆ–1998**

# ಅಡ್ಯನಡ್ಕ ಶಾಲೆಯ ತಿಮ್ಮಣ್ಣ ಮಾಷ್ಟ್ರು

ಇಂದಿರಾ ಗಾಂಧಿ ಪರಿಯಾವರಣ ಪ್ರಶಸ್ತಿ ನೀಡಿ ಭಾರತ ಸರಕಾರ ಡಾ. ಶಿವರಾಮಕಾರಂತರನ್ನು ಸನ್ಮಾನಿಸಿದ ಸಂದರ್ಭ ಬೆಂಗಳೂರಿನಲ್ಲಿ ಕಾರಂತರನ್ನು ಅಭಿನಂದಿಸುವ ಒಂದು ಆತ್ಮೀಯ ಕರ್ಯಕ್ರಮವನ್ನು ನಡೆಸಲು ರಾಮಸುಧ ಟ್ರಸ್ಟ್ ನಿರ್ಧರಿಸ, ಅವರನ್ನು ಆಮಂತ್ರಿಸಲು ನಾನು ಸಾಲಿಗ್ರಾಮಕ್ಕೆ ಹೋದೆ. ಸಂಕ್ಷಿಪ್ತವಾಗಿ ನಾಲ್ಕು ಮಾತುಗಳಲ್ಲಿ ಅವರಿಗೆ ವಿಚಾರವನ್ನು ತಿಳಿಸಿ ಟ್ರಸ್ಟ್ ಅಧ್ಯಕ್ಷ ಎ.ಎಚ್ ರಾಮರಾಯರ ಪತ್ರವನ್ನು ಒಪ್ಪಿಸಿದೆ. ಓದಿ, 'ಆಗಲಿ; ಎಂಬಂತೆ ತಲೆ ಅಲ್ಲಾಡಿಸಿದರು. 'ತಾರೀಕು ತಮಗೆ ಅನುಕೂಲ ತಾನೆ?' ಎಂಬುದಾಗಿ ಅಧಿಕ ಪ್ರಸಂಗಿಯಂತೆ ಕೇಳಿದೆ. ಒಂದು ಕ್ಷಣ ಮೀಸೆಯ ಮೇಲೆ ಕಾಣಿಸುವಂತೆ ಮಂದಹಾಸ ಮಿನುಗಿಸಿ, ' ಯಮ-ಯಮ-ಎರಡು ಯಮಗಳು ಎಂದು ಹೇಳಿದ ಮೇಲೆ- 'ಮರೆಯಲಿಕ್ಕೆ ಸಾಧ್ಯವಾ?' ಎಂದು ಚಿಕ್ಕದೊಂದು ಜೋಕ್‌ಕಟ್ ಮಾಡಿದರು. (ಎಂ.ಎಂ.ಭಟ್ ಎಂಬ ನನ್ನ ಹೆಸರಿನ ಮೇಲೆ) ಡೈರಿಯನ್ನು ತರಿಸಿಕೊಂಡು ಅದರಲ್ಲಿ ತಾರೀಕು-ಸಮಯಗಳನ್ನು ಗುರುತು ಹಾಕಿಕೊಂಡು 'ಸರಿ' ಎಂದು ಮತ್ತೊಮ್ಮೆ ತಲೆ ಅಲ್ಲಾಡಿಸಿದರು.

ಅದು ಅವರ ಕಿರು ವಿರಾಮದ ಸಮಯವಾಗಿರಬೇಕು. ಒಳಗಿನ ಕೋಣೆಯತ್ತ ಹೆಜ್ಜೆ ಹಾಕುತ್ತಿದ್ದಂತೆಯೆ ನಾನು ಕೇಳಿದೆ. 'ಗಣಪತಿರಾವ್ ಐಗಳ್ ಮಾಷ್ಟ್ರು ಅಡ್ಯನಡ್ಕ ಶಾಲೆಯಲ್ಲಿ (ಶಿಕ್ಷಕರಾಗಿ) ಇದ್ದರಂತೆ-ಗೊತ್ತೇ ಎಂದು ಕೇಳಿದೆ.

'ನನಗೆ ಅಡ್ಯನಡ್ಕ ಶಾಲೆಯಲ್ಲಿ ತಿಮ್ಮಣ್ಣ ಮಾಷ್ಟ್ರು ಒಬ್ಬರು ಗೊತ್ತು' ಎಂದು ಹೇಳಿ ನೇರವಾಗಿ ಕೋಣೆಯೊಳಕ್ಕೆ ಹೋದರು.

* * * * *

1930ರ ದಶಕದಲ್ಲಿ ಶಿವರಾಮಕಾರಂತರು 'ಪ್ರಾಥಮಿಕ ಶಾಲಾ ಶಿಕ್ಷಣ'ದಲ್ಲಿ ಹಲವು ಸುಧಾರಣೆಗಳನ್ನು ತರುವ ಪ್ರಯತ್ನ ನಡೆಸಿದ್ದರು. ಪ್ರಯೋಗಗಳನ್ನು ಮಾಡುತ್ತಿದ್ದರು. ಶಾಲಾ ಕೊಠಡಿಗಿಂತ, ಪ್ರಕೃತಿಯ ಮಡಿಲಲ್ಲಿ ಕಲಿಸುವುದು ಹೆಚ್ಚು ಉಪಯುಕ್ತ. ಪಾಠ ಆಟದಂತಿದ್ದರೆ ಚೆನ್ನ. ಮಕ್ಕಳ ಆಸಕ್ತಿ ಕೆರಳಿಸುವ

ಚಟುವಟಿಕೆಗಳು, ಅಗತ್ಯ ಇತ್ಯಾದಿ. ಇದನ್ನು ಬೇಸಿಗೆ ಶಿಬಿರ 'ಮನಕ್ಕಳ ಶಿಬಿರ' 'ಮಕ್ಕಳ ಕೂಟ'ದಲ್ಲಿ ಪ್ರತ್ಯಕ್ಷ ನಿರ್ವಹಿಸುತ್ತಿದ್ದರು. ತಿಮ್ಮಣ್ಣಭಟ್ರು–ಅಡ್ಯನಡ್ಕದ ತಿಮ್ಮಣ್ಣ ಮಾಷ್ಟ್ರು –ಅವುಗಳಲ್ಲಿ ತುಂಬ ಆಸಕ್ತಿಯಿಂದ ಕೆಲವನ್ನು ಅಡ್ಯನಡ್ಕದ ತಮ್ಮ ಎಯಿಡೆಡ್ ಹಾಯರ್ ಎಲಿಮೆಂಟರಿ ಶಾಲೆಯಲ್ಲಿ ಅನುಷ್ಠಾನಕ್ಕೆ ತಂದರು. ತಿಂಗಳ ಹಬ್ಬ, ಮಕ್ಕಳ ಹಸ್ತ ಪತ್ರಿಕೆ,ಟದ ಬಯಲಲ್ಲಿ ಪಾಠ, ವೃತ್ತಿಶಿಕ್ಷಣ..... ಹೀಗೆ ಹಲವಾರು ಕರ್ಯಕ್ರಮಗಳನ್ನು ರೂಢಿಗೆ ತಂದರು. ಎಲ್ಲಕ್ಕಿಂತಲೂ ವಿಶೇಷವಾಗಿ, ಹರಿಜನ ಮಕ್ಕಳಿಗೆ ಪ್ರತ್ಯೇಕವಾದ ಒಂದು ಮೂಲೆಯಲ್ಲಿ (ಶಾಲಾ ಆವರಣಕ್ಕೆ ಹೊಂದಿಕೊಂಡು ಇದ್ದರೂ) ದೂರವಿಟ್ಟು ಪಾಠ ಮಾಡುವ ಕ್ರಮವನ್ನು ರದ್ದು ಮಾಡಿ ತರಗತಿಯಲ್ಲಿ ಎಲ್ಲ ಮಕ್ಕಳ ಜತೆಗೆ ಅವರನ್ನೂ ಸೇರಿ ಪಾಠ ಪ್ರವಚನ ನಡೆಸುವುದನ್ನು ಬಳಕೆಗೆ ತಂದರು. ಗೀಗೆ ;ಹರಿಜನ ಮಕ್ಕಳ ಶಾಲಾ ಪ್ರವೇಶ' ಗುಂಪಿನಲ್ಲಿ ಸಾಯದ ಕಾಳ ಭೈರನ ಮಗಂದಿರಷ್ಟೇ ಅಲ್ಲದೇ ಒಬ್ಬಳು ಮಗಳೂ ಇದ್ದಳು ಎಂಬುದು ನನಗೆ ನೆನಪಿದೆ.

* * * * *

ಶಿಸ್ತು, ಅಚ್ಚುಕಟ್ಟುತನ ಮತ್ತು ಸಮಯ ನಿಷ್ಠೆ ಇವುಗಳನ್ನು ತಿಮ್ಮಣ್ಣ ಭಟ್ಟರು ಸದಾ ಕಾಯುತ್ತಿದ್ದರು. ಶಾಲಾ ಜೀವನದ ಬಗ್ಗೆ ಇದು ಇನ್ನೂ ಒಂದು ತೂಕ ಹೆಚ್ಚು. ಅವರ ಮನೆ (ಅದನ್ನು ಅವರು 'ಬಿಡಾರ' ಎಂದೇ ಹೇಳುತ್ತಿದ್ದರು) ಶಾಲೆಯ ಪಕ್ಕದಲ್ಲೇ ಶಾಲೆ ಆರಂಭವಾಗುವುದರ ಸೂಚಕವಾದ ಗಂಟೆ ಬಾರಿಸಿದ ಎರಡು ನಿಮಿಷಗಳೊಳಗಾಗಿ ಅಧ್ಯಾಪಕರ ಕೊಠಡಿಯಲ್ಲಿದ್ದ ಹಾಜರಿ ಪುಸ್ತಕದಲ್ಲಿ ಅವರ 'ಸಹಿ' ಬಿದ್ದಿರುತ್ತಿತ್ತು. ಅನೇಕ ವರ್ಷಗಳಿಂದ ಅದೇ ತರಗತಿಗೆ ಅದೇ ಪಾಠ (ಅದರಲ್ಲೂ ಲೆಕ್ಕ) ಹೇಳುತ್ತಿದ್ದರೂ –ಪ್ರತಿನಿತ್ಯ ಟೀಚಿಂಗ್ ನೋಟ್ಸ್ ಬರೆಯುತ್ತಿದ್ದರು. (ಅದನ್ನೆಲ್ಲಾ ಶೇಖರಿಸಿ ಇಡುತ್ತಿದ್ದರೆ ಒಂದು ಅಸಾಮಾನ್ಯ ದಾಖಲೆಯಾಗಿರುತ್ತಿತ್ತು!) ರಜಾ ದಿನಗಳಲ್ಲಿ ಶಾಲೆಯ ಕಿಟಕಿ ಬಾಗಿಲು ಕೊನೆಗೆ ಸರಿಯಾಗಿ ಮುಚ್ಚಿರುತ್ತಿದೆಯೇ ಇಲ್ಲವೇ ಎಂಬುದನ್ನು ಎರಡೆರಡು ಬಾರಿ ನೋಡಿಕೊಂಡು ಹೋಗುತ್ತಿದ್ದರು. ಆಗ –ಆ ದಿನಗಳಲ್ಲಿ 'ಶಾಲೆಗೆ' ಜವಾನ (ಪ್ಯೂನ್) ಇರುತ್ತಿರಲಿಲ್ಲ. ಮಕ್ಕಳೇ ಸರದಿ ಪ್ರಕಾದ ತಮ್ಮ ತಮ್ಮ ಕ್ಲಾಸನ್ನು ಗುಡಿಸಬೇಕಾಗುತ್ತಿತ್ತು. ಎಷ್ಟೀ ಶಾಲೆಗಳಲ್ಲಿ 'ಬಡವರ ಮಕ್ಕಳು' ಮಾತ್ರ ಇದನ್ನು ನಿರ್ವಹಿಸಬೇಕಾಗುತ್ತಿತ್ತು. ತಿಮ್ಮಣ್ಣ ಮಾಷ್ಟ್ರ ಮಕ್ಕಳು ಇತರ ವಿದ್ಯಾರ್ಥಿಗಳಂತೆ ತಮ್ಮ ಸರದಿಯಲ್ಲಿ ತಾವೇ ಕಸ ಗುಡಿಸಬೇಕಾಗುತ್ತಿತ್ತು.

* * * * *

ತಿಮ್ಮಣ್ಣ ಮಾಷ್ಟ್ರ ಸಿಷ್ಯ ವಾತ್ಸಲ್ಯದ ಬಗ್ಗೆ ಹಲವು ದಂತ ಕಥೆಗಳೇ ಇವೆ.

'ನಾರಾಯಣ' ಎಂಬ ವಿದ್ಯಾರ್ಥಿ ಪ್ರತಿದಿನ ಮುಂಜಾನೆ ಫಸ್ಟ್ ಪಿರಿಯಡಿಗೆ ವಿಳಂಬವಾಗಿ ಬರುತ್ತಿದ್ದ. ಈ ವಿಚಾರ ಟೀಚರ್ಸ್ ಮೀಟಿಂಗ್‌ನಲ್ಲಿ ತಿಳಿಯಿತು. ಒಂದು ಕಾಲದಲ್ಲಿ ಶ್ರೀಮಂತಿಕೆಯಿಂದ ಮೆರೆದ ಕುಟುಂಬ. ಕಾರಣಾಂತರದಿಂದ ಎಲ್ಲವನ್ನು ಕಳೆದುಕೊಂದು ಈಗ ಇಬ್ಬರು ಮಕ್ಕಳಿಗೆ ವಿದ್ಯೆಯಾದರೂ ದಕ್ಕಲಿ ಎಂಬ ಆಶೆ ಇಟ್ಟುಕೊಂಡು ಕಾಲಯಾಪನೆ ಮಾಡುತ್ತಿದ್ದ ತಂದೆ-ಇತ್ತೀಚೆಗೆ ಹೆಂಡತಿ ತೀರಿ ಹೋದದ್ದರಿಂದ ಮನೆ ಕೆಲಸಕ್ಕೆ ಯಾರನ್ನೂ ನೇಮಿಸಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲವಾಗಿ ದೊಡ್ಡ ಮಗನೇ ಎಲ್ಲಾ ಕೆಲಸಗಳನ್ನು ಮಾಡಿ, ಮಧ್ಯಾಹ್ನದ ಅನ್ನ ಸಾರು ತಯಾರಿಸಿಟ್ಟು ಶಾಲೆಗೆ ತಲುಪುವಾಗ ತಡವಾಗುತ್ತಿತ್ತು. ಆತನ ಕಲಿಯುವ ಆಸಕ್ತಿಯನ್ನು ಮನೆಯ ಪರಿಸ್ಥಿತಿ ಎರಡೂ ತಿಳಿದಿದ್ದ ತಿಮ್ಮಣ್ಣ ಮಾಷ್ಟ್ರ 'ಅಸಾಧಾರಣ' ಕ್ರಮವೊಂದನ್ನು ಸೂಚಿಸಿ ಸಹ ಶಿಕ್ಷಕರ ಹಾಗೂ ಮಖ್ಯೋಪಾಧ್ಯಾಯದ ಒಪ್ಪಿಗೆ ಪಡೆದುಕೊಂಡರು. ಮುಂಜಾನೆ ಮೊದಲ ಪೀರಿಯಡ್ (7ನೇ ತರಗತಿಗೆ) ಇಂಗ್ಲೀಷ್ ಅಥವಾ ಲೆಕ್ಕ. ಇದನ್ನು ಮಧ್ಯಾಹ್ನಕ್ಕೆ ಮುಂದೂಡಿ ಇತಿಹಾಸ/ಭೂಗೋಳವನ್ನು ಮೊದಲನೆಯ ಪೀರಿಯಡಿನಲ್ಲಿ ಕಲಿಸುವ ವ್ಯವಸ್ಥೆ ಆ ವರ್ಷದ ಮಟ್ಟಿಗೆ ಆ ತರಗತಿಗೆ ವ್ಯವಸ್ಥೆ ಮಾಡಿ ಸಮಸ್ಯೆಯನ್ನು ನಿವಾರಿಸಿದರು.

* * * * *

'ದೇಲಂತಬೆಟ್ಟು' ಅಡ್ಯನಡ್ಕದಿಂದ 10-12ಮೀಟರು ದೂರ ಅಲ್ಲಿನ ಶ್ರೀಮಂತರೊಬ್ಬರ ಇಬ್ಬರು ಮಕ್ಕಳಿಗೆ 6ನೇ ತರಗತಿಯಿಂದ 8ನೇ ತರಗತಿಯವರೆಗೆ ಅಡ್ಯನಡ್ಕ ಶಾಲೆಯಲ್ಲೇ ಓದಿಸಬೇಕೆಂಬ ಹಂಬಲ ಆ ಶ್ರೀಮಂತರದ್ದು. ಆದರೆ ದಿನ ನಿತ್ಯ ಹೋಗಿ ಬರುವುದು ಸಾಧ್ಯವಿಲ್ಲದ ಮಾತು. ಅಡ್ಯನಡ್ಕ ಶಾಲೆಯಲ್ಲಿ ಬೋರ್ಡಿಂಗ್ ವ್ಯವಸ್ಥೆ ಇಲ್ಲ. ತಿಮ್ಮಣ್ಣ ಭಟ್ಟರು ತಮ್ಮ ಮನೆಯಲ್ಲಿ ಆ ಇಬ್ಬರು ಸೋದರರು ತಮ್ಮ ಮಕ್ಕಳ ಜೊತೆಗೆ ಓದಿಕೊಳ್ಳಲು ಹಾಗೂ ಉಳಿದಿಕೊಳ್ಳಲು ಅನುವು ಮಾಡಿಕೊಟ್ಟರು. ಸಮೀಪವೇ ಇದ್ದ ಬಡಕುಟುಂಬ ಒಂದರ ಯಜಮಾನಿಯನ್ನು ಒಪ್ಪಿಸಿ 'ಊಟದ ವ್ಯವಸ್ಥೆ' ಮಾಡಿಸಿದರು. ಅಕ್ಕಿ-ತೆಂಗಿನಕಾಯಿ ಇತಯಾದಿ ತಪ್ಪದೇ ತೊಂದು ಒದಗಿಸಿದ್ದುದರಿಂದ ಆ ಬಡಕುಟುಂಬಕ್ಕೆ ಸಹಾಯವಾಯಿತು. ಹಾಗೆ ಓದಿದ ದೇಲಂತ ಭಟ್ಟು ಕೃಷ್ಣಭಟ್ಟರು ಅತಿ ಕಿರಿಯ ವಯಸ್ಸಿನಲ್ಲೇ ಗ್ರಾಮ ಪಂಚಾಯತ್ ಅಧ್ಯಕ್ಷರಾಗಿ ಆಯ್ಕೆಗೊಂಡು ಗ್ರಾಮ ಸುಧಾರಣೆಯನ್ನು ಪ್ರಜ್ಞಾಪೂರ್ವಕವಾಗಿ ನಿರ್ವಹಿಸಿ-ಆದರ್ಶ ಗ್ರಾಮ ಪಂಚಾಯಿತಿ ಎನ್ನಿಸಿಕೊಂಡರು.

* * * * *

ಗೋಪಾಲಕೃಷ್ಣ ಅಡ್ಯನಡ್ಕ ಶಾಲೆಯಲ್ಲಿ ಓದನ್ನು ಪೂರೈಸಿದಾಗ ಮುಂದಕ್ಕೆ ಕಾಲೇಜು ಶಿಕ್ಷಣದ ಕನಸು ಕಾಣುವುದಕ್ಕೂ ಸಾಧ್ಯವಾಗದ ದುಸ್ಥಿತಿಯಲ್ಲಿದ್ದಾಗ, ಮೈಸೂರಿನ ಜಯಚಾಮರಾಜೇಂದ್ರ ಟೆಕ್ನಿಕಲ್ ಇನ್ಸ್ಟಿಟ್ಯೂಟ್‌ನಲ್ಲಿ ಕುಶಲ ಕಲೆಯ ತರಬೇತಿಗೆ . ಸೇರುವ ಅಪೇಕ್ಷೆಯನ್ನು ವ್ಯಕ್ತಪಡಿಸಿದರೂ ಅಧಿಕವಾಗಿ ಯಾವುದೇ ಅನುಕೂಲತೆ ಇಲ್ಲದೆ ಕೈಚಾಚಿ ಕುಳಿತಿದ್ದು ತಿಮ್ಮಣ್ಣಭಟ್ಟರಿಗೆ ತಿಳಿಯಿತು. ಅದೇ ಸಂಸ್ಥೆಯಲ್ಲಿ ಇನ್ನೊಂದು ವಿಭಾಗದಲ್ಲಿ ತರಬೇತಿ ಸೇರುವುದಕ್ಕೆ ಮೈಸೂರಿಗೆ ತೆರಳುತ್ತಿದ್ದವರೊಬ್ಬರ ತಂದೆಯನ್ನು ಪ್ರೇರೇಪಿಸಿ ಗೋಪಲಕೃಷ್ಣರಿಗೆ ಮೈಸೂರು ಪ್ರಯಾಣದ ಬಸ್ ಟಿಕೆಟ್ ದೊರಕಿಸಿದರು. ಆದರೆ ತಿಂಗಳ ಫೀಸು 2ರೂಪಾಯಿಗೂ ಯಾವುದೇ ದಾರಿಕಾಣದಾದಾಗ ತಾನೇ ಸ್ವತ: ಎರಡು ರೂಪಯಿಗಳನ್ನಿತ್ತು (ಮೊದಲ ತಿಂಗಳ ಫೀಸ್) ಕಳುಹಿಸಿದರು. (ಮುಂದೆ ಪ.ಗೋ ಪ್ರಸಿದ್ಧ ಪತ್ರಿಕೋದ್ಯೋಗಿಯಾಗಿ ಟೈಮ್ಸ್ ಆಫ್ ಇಂಡಿಯಾ ಆಂಗ್ಲ ದೈನಿಕದ ವಿಭಾಗೀಯ ಪ್ರತಿನಿಧಿಯಾಗಿ ದೀರ್ಘಕಾಲ ದುಡಿದು ಕೀರ್ತಿಶೇಷರಾದರು.

* * * * *

ಅಡಿಕೆ ವ್ಯಾಪಾರದಲ್ಲಿ ಸಂಪೂರ್ಣ ಸೋತುಹೋದ ಮಹನೀಯರೊಬ್ಬರು ಕುಟುಂಬದವರನ್ನೆಲ್ಲಾ ಹೆಂಡತಿಯ ತವರಿಗೆ ಕಳುಹಿಸಿ, 7ನೇ ತರಗತಿಯಲ್ಲಿ ಓದುತ್ತಿದ್ದ ಮಗನ ಶಿಕ್ಷಣ ಕಡಿಯ ಹೋಗಬಾರದೆಂದು ತಂದೆ ಮಗ ಇಬ್ಬರೇ ಊರಿಂದ ದೂರವಾಗಿ ಒಂದು ಗುಡಿಸಲು ಕಟ್ಟಿಕೊಂಡು ಕಾಲಯಾಪನೆ ಮಾಡುತ್ತಿದ್ದರು. ಪರೀಕ್ಷೆಗೆ ಇನ್ನೇನು 8–10ದಿನಗಳಿವೆ ಎನ್ನುವಾಗ ಬಂಕಿಗಾಹುತಿಯಾಗಿ ತಂದೆ ಮಗ ಇಬ್ಬರೂ ಪೂರ್ಣ ಭಸ್ಮವಾದರು. ಮುಂಜಾನೆ ಈ ಸುದ್ದಿ ತಲುಪುತ್ತಲೇ ತಿಮ್ಮಣ್ಣ ಮಾಷ್ಟ್ರು ಅಲ್ಲಿಗೆ ಹೋಗಿ ಮುಂದಿನ ವಯ್ವಸ್ಥೆಗೆ ಬೇಕಾದ ವಿಚಾರಗಳನ್ನು ಅವರ ಬಂಧು ಬಾಂಧವರಲ್ಲಿ ಚರ್ಚಿಸಿ ನಡೆಯುವಂತೆ ಮಾಡಿ ಬಂದರು. ಶಾಲೆಗೆ ಅವರು ತಲುಪಿದಾಗ ಮಧ್ಯಾಹ್ನ (ಶನಿವಾರದ ದಿನ) ಕೊನೇ ಪರಿಯಡ್ ನಡೆದಿತ್ತು. ಶಾಲೆಯ ಕೊನೆಯ ಗಂಟೆ ಬಾರಿಸುತ್ತಿದ್ದಂತೆಯೇ ಮಕ್ಕಳು ಮತ್ತು ಶಿಕ್ಕರನೆಲ್ಲ ಆಟದ ಮೈದಾನದಲ್ಲಿ ಸಾಲಾಗಿ ನಿಲ್ಲಿಸಿ, ದುರಂತದಲ್ಲಿ ಗತಿಸಿದ ಶಾಲಾ ವಿದ್ಯಾರ್ಥಿ ಹಾಗೂ ಅವರ ತಂದೆಯ ಆತ್ಮಕ್ಕೆ ಶಾಂತಿ ಕೋರಿ ಎರಡು ನಿಮಿಷ ಮೌನ ಆಚರಿಸುವುದನ್ನು ನಿರ್ವಹಿಸಿದರು. ತಿಮ್ಮಣ್ಣ ಭಟ್ಟರ ಕಣ್ಣಿಂದ ಎರಡು ಹನಿ ಕಣ್ಣೀರು ನೆಲಕ್ಕುರುಳಿದ್ದನ್ನು ನಾನು ಅಂದೇ ನೋಡಿದ್ದ ಅಂತೆಯೇ ಶ್ರದ್ಧಾಂಜಲಿ ಎಂಬುದರಲ್ಲಿ ಅದೇ ಮೊದಲ ಸಾರಿ ನಾನು ಭಾಗಿಯಾದೆ.

* * * * *

ಅಡ್ಯನಡ್ಕ ಶಾಲೆಯಲ್ಲಿ ದೀರ್ಘಕಾಲ ಶಿಕ್ಷಕರಾಗಿದ್ದ ತಿಮ್ಮಣ್ಣ ಮಾಷ್ಟ್ರು ಕೆಲವು ವರ್ಷ ಮೆನೇಜರ್ ಕೂಡ ಆಗಿದ್ದರು. ಶಾಲೆಗೆ ಶಿಕ್ಷಕರಾಗಿ ಸ್ಥಳೀಯ ಪ್ರತಿಭೆಗಳ ಜತೆಗೆ ದೂರ ದೂರದಿಂದ ಕೂಡ 'ಸರಿಯಾದವರನ್ನು' ಆಯ್ಕೆ ಮಾಡಿ ಕರೆ ತರುತ್ತಿದ್ದರು. ಈ ವಿಧಾನದಿಂದ ಶಾಲೆಯ ಸಂಪರ್ಕಕ್ಕೆ ಉತ್ತಮರೇ ಬಂದರು. ಗಣಪಯ್ಯ ಮಾಸ್ತರರ ತಂದೆ ಅನಂತಯ್ಯ ಐಗಳು. ಪುತ್ತೂರಿನಿಂದ ಅರಕೆರೆ ಸುಬ್ರಾಯರು (ಅಜ್ಜಯ್ಯ ಮಾಷ್ಟ್ರು) ಸೂರ್ಯಂಬೈಲು ಈಶ್ವರಭಟ್ರು, ಮಾರಪ್ಪಶೆಟ್ಟಿ ಮಾಷ್ಟ್ರು, ಉಜಿರೆಯ ಗುರುಕುಲದಲ್ಲಿದ್ದ ಸಣ್ಣ ಬಾಬು ಮಾಷ್ಟು (ಪೈಂಟರ್ ಬಾಬು) ಎಲ್ಲಕ್ಕೂ ಮಿಗಿಲಾಗಿ ಕೊಡಗು ಪ್ರದೇಶದಲ್ಲಿದ್ದ ಕೃಷ್ಣಯ್ಯನವರೇ ಮೊದಲಾದವರನ್ನೆಲ್ಲ ಆಹ್ವಾನಿಸೊಇ ಸೇವಾಫಲವನ್ನು ಶಾಲೆಗೆ ಲಭಿಸುವಂತೆ ಮಾಡಿದ್ದರು. (ಕೃಷ್ಣಯ್ಯನವರು ಮುಖ್ಯೋಪಾಧ್ಯಾಯರಾಗಿ ಅನೇಕ ವರ್ಷ ಅಡ್ಯನಡ್ಕದಲ್ಲಿದ್ದರು) ಕೆಲ ಕಲ ಹಿರಿಯ ಸಾಹಿತಿ, ಸಂಶೋಧಕ ಗಣಪತಿ ರಾವ್ ಐಗಳು ಕೂಡ ಅಡ್ಯನಡ್ಕ ಶಾಲೆಯಲ್ಲಿ ಶಿಕ್ಷಕರಾಗಿದ್ದರಂತೆ. ಸ್ಥಳೀಯ ರಾಧ ಮುಳಿಯಾಲ ಕೃಷ್ಣಭಟ್ಟರು, ಸುಬ್ರಾಯದ್ವಯರು, ಸಾರಡ್ಕ ವಿಷ್ಣುಭಟ್ಟರು (ಇವರು ಸಹ ಹಲವು ವರ್ಷ ಮುಖ್ಯೋಪಾಧ್ಯಾಯರಾಗಿ ಸೇವೆ ಸಲ್ಲಿಸಿದರು) ಹೀಗೆ ಬಹುಮುಖಿ ವ್ಯಕ್ತಿತ್ವದ ಶಕ್ತಿ ಸಾಮರ್ಥ್ಯದ ಹಾಗೂ ಪ್ರತಿಭೆಗಳ ಸೇವೆ ಅಡ್ಯನಡ್ಕ ಶಾಲೆಗೆ ಭದ್ರ ಬುನಾಡಿ ಹಾಕುವುದರಲ್ಲಿ ಸಹಕಾರಿಯಾಲು ತಿಮ್ಮಣ್ಣ ಮಾಷ್ಟ್ರ ಕಾರಣರೆಂಬುದರಲ್ಲಿ ಎರಡು ಮಾತೇ ಇಲ್ಲ.

* * * * *

ತಿಮ್ಮಣ್ಣ ಭಟ್ಟರೆಂದಕೂಡಲೇ ನಮಗೆ ಕಣ್ಣೆದುರಿಗೆ ನಿಲ್ಲುವ ಚಿತ್ರ ಅಪ್ಪಟ ಬಿಳಿ-ಖಾದಿ ವಸ್ತ್ರಧಾರಿ. ತುಸು ಉದ್ದ ಮೂಗಿನ ಹಾಗೂ ಗಂಭೀರ ಪ್ರಕೃತಿಯ ಸರಳ ವ್ಯಕ್ತಿತ್ವ, ತನ್ನ ಶಿಕ್ಷಕ ವೃತ್ತಿಯ ಮೂಲಕ ದೊರಕುತ್ತಿದ್ದ ಮಿತ ಆದಾಯದಿಂದಲೇ ಸಂಸಾರ ಸಾಗಿಸುತ್ತಿದ್ದುದು ದೊಡ್ಡ ಪವಾಡವೇ ಸರಿ. ಮನೆಯಲ್ಲಿ ಸರಳ ಊಟ ತಿಂಡಿ-ಅಪ್ಪಟ ಶಾಖಾಹಾರ, ಉಪನಯನ, ಮದುವೆಗಳು ಕೂಡ ತೀರ ಸರಳ ಕೌಟುಂಬಿಕ ಕಾರ್ಯಕ್ರಮಗಳು. ಹಲವು ವರ್ಷಗಳ ಕಾಲ ದುರ್ಗಾ ಲಾರಿ ಸರ್ವೀಸಿನ ಏಜೆನ್ಸಿ ವಹಿಸಿದ್ದರು. ಅದಕ್ಕೂ ಮೊದಲು ಪಿಐ ಮೋಟಾರ್ಸ್ ನವರ ಲೆಕ್ಕ ಪಕ್ಕಗಳನ್ನೆಲ್ಲಾ ಸ್ನೇಹ ಭಾವದಿಂದಲೇ ನಿರ್ವಹಿಸುತ್ತಿದ್ದರಂತೆ. ಸೀಸನ್‌ನಲ್ಲಿ ಮಿತ್ರರು ಕೆಲವರು ಹಲಸಿನ ಹಣ್ಣು, ಮಾವಿನಕಾಯಿ ಮೊದಲಾದವನ್ನು ಕಳುಹಿಸಿಕೊಟ್ಟರೆ ಸಂತೋಷದಿಂದ ಸ್ವೀಕರಿಸುತ್ತಿದ್ದರೇ ವಿನಾ ಯಾವುದೇ ರೀತಿಯ ಅನ್ಯ ನೆರವಿಗೆ ಭಟ್ಟು ಕೈ ಚಾಚಿದ್ದು ಇಲ್ಲವೇ ಇಲ್ಲ.

ಅಡ್ಯನಡ್ಕ ಶಾಲೆಯ ಎರಡು ಕೊಠಡಿಗಳಲ್ಲಿ ಒಂದು ಮಳೆ ಗಾಳಿಗೆ ಬಿದ್ದು ಹೋಯಿತು. ಶಾಲೆ ಶುರುವಾಗಲು (ಬೇಸಿಗೆ ರಜೆ ಕಳೆದು) ಇನ್ನು 8-10

ದಿನಗಳಷ್ಟೇ ಬಾಕಿ ಇತ್ತು. ತಕ್ಷಣ ಶಾಲೆಯ ಮುಖ್ಯ ಕಟ್ಟಡದ ತೆಂಕು ಭಾಗಕ್ಕೆ ಒಂದು ಇಳಿಜಾರು ಛಾವಣಿ ಹಾಕಿಸಿ ಒಣ ಹುಲ್ಲು ಹೊದಿಸಿ ಶಾಲೆ ನಡೆಸಲು ಸಡ್ಡಿಯಾಗದಂತೆ ಮಾಡಿದರು. ಮುಂದೆ ಊರವರ ನೆರವಿನಿಂದ ಪಕ್ಕಾ ಕಟ್ಟಡ ನಿರ್ಮಾಣವಾಗಿ ಶಾಲೆಯ ವಿಸ್ತರಣೆ ಕೂಡ ಆಯಿತು.

ಇದೇ ಸಂದರ್ಭದಲ್ಲಿ ಶಾಲೆಯ ಪೂರ್ವ ಅಂಚಿಗೆ ಒಂದು ಮಹಡಿಯ ಕೋಣೆ ಕಟ್ಟಿಸುವಂತೆ ಸಾಯ ಕೃಷ್ಣಭಟ್ಟರ ಆಶ್ವಾಸನೆ ಪಡೆದು 6ತಿಂಗಳಲ್ಲಿ ಅದನ್ನು ನಿರ್ಮಿಸ ಉದ್ಘಾಟಿಸಿದರು. ಆಗ ಕಾಸರಗೋಡಿನಲ್ಲಿ ಹಿರಿಯ ಅಧಿಕಾರಿಗಳಾಗಿದ್ದ ಶಿಕ್ಷಣತಜ್ಞ ಪರಶುರಾಮ ನಾಯಕರು ಅದನ್ನು ಉದ್ಘಾಟಿಸಿದ್ದು ನನಗೆ ಈಗಲೂ ನೆನಪಿದೆ. ಇದೇ ಕಟ್ಟಡದ ಮಹಡಿ ಕೊಠಡಿಯಲ್ಲಿಇ ಅದೇ ತಾನೆ ಮಂಜೂರಾದ ಅಂಚೆ ಕಛೇರಿಯನ್ನು ಪ್ರಾರಂಭಿಸಲು ವಿಶೇಷ ಅನುಮತಿಯನ್ನು ನೀಡಿ ಇಲ್ಲಿಗೆ ದಿನ ದಿನದ ಟಪಾಲು ಬರುವಂತೆ ಮಾಡುವುದನ್ನು ವ್ಯವಸ್ಥೆ ಗೊಳಿಸಿದವರು ತಿಮ್ಮಣ್ಣಭಟ್ಟರು. ಮದರಾಸಿನಲ್ಲಿ ಎಲ್.ಐ.ಎಂ ಮಾಡುವ ಯತ್ನ ಕೂಡಾ ಮಾಡಿದ್ದರು.

ತಿಮ್ಮಣ್ಣ ಭಟ್ಟರ ಮಕ್ಕಳೆಲ್ಲರು ಈಗ ಉತ್ತಮ ಸ್ಥಿತಿಯಲ್ಲಿದ್ದಾರೆ. ಸಾಹಿತ್ಯ–ಸಂಸ್ಕೃತಿ ಹಾಗೂ ವೈಜ್ಞಾನಿಕ ಕ್ಷೇತ್ರಗಳಲ್ಲಿ–ವೈದ್ಯಕೀಯ ಹಾಗೂ ವೈಜ್ಞಾನಿಕ ರಂಗಗಳಲ್ಲೂ ಹೆಸರು ಗಳಿಸಿದ್ದಾರೆ. ಒಬ್ಬರು ಡಿ.ವಿ.ಜಿಯವರ ಮಂಕುತಿಮ್ಮನ ಕಗ್ಗವನ್ನು ಇಂಗ್ಲೀಷಿಗೆ ಕವನ ರೂಪದಲ್ಲಿ ಅನುವಾದಿಸಿದ್ದಾರೆ. ಇನ್ನೊಬ್ಬರು ವಿಜ್ಞಾನವನ್ನು ಸರಳ ಶೈಲಿಯಲ್ಲಿ ಪ್ರಸಾರ ಮಾಡುವ ವಿಚಾರದಲ್ಲಿ ಭಾರತ ಸರ್ಕಾರದ ಪ್ರಶಸ್ತಿ ಸನ್ಮಾನಿತರು. ಕುಟುಂಬದ ಕೆಲವು ಸದಸ್ಯರು ಸಾಗರದಾಚೆ ಇದ್ದಾರೆ. 'ಗಲ್ಫ್ ಕನ್ನಡಿಗ' ನೆಟ್‌ವರ್ಕ್‌ನ ಮೂಲಕ (ವಿದೇಶೀ ಕನ್ನಡಿಗ) ಕನ್ನಡದ ಕೈಂಕರ್ಯ ನಿರತರಾಗಿದ್ದಾರೆ. ವೃತ್ತಿಯಿಂದ ವೈದ್ಯರು.

ತಿಮ್ಮಣ್ಣ ಭಟ್ಟರಿಗೆ ತಮ್ಮ ಪರಿವಾರದ ಸದಸ್ಯರೊಬ್ಬರು ಅಡ್ಯನಡ್ಕದ ಶಾಲಯಲ್ಲಿ ಶಿಕ್ಷಕರಾದರೆ ತಾವು ಕೊನೆ ದಿನಗಳನ್ನು ಈ ನೆಲದಲ್ಲೇ ಕಳೆಯುವೆನೆಂಬ ಕನಸೊಂದು ಮಾತ್ರವೇ ನನಸಾಗಲಿಲ್ಲ. ಅದೊಂದು ಅಂಶ ಬಿಟ್ಟರೆ–ತಿಮ್ಮಣ್ಣ ಭಟ್ಟರು/ತಿಮ್ಮಣ್ಣ ಮಾಷ್ಟ್ರು ತೃಪ್ತರಾಗಿ ಜೀವನದ ಕೊನೆ ದಿನಗಳನ್ನು ಕಳೆದರೆಂದೇ ಹೇಳಬಹುದು. ಬಾಲ್ಯದಲ್ಲಿ ಅವರ ಶಿಷ್ಯನಾಗಿ, ನಂತರ ನಾನು ವೈದ್ಯನಾಗಿ ಅಡ್ಯನಡ್ಕದಲ್ಲಿ ಇದ್ದಾಗ ಬಂಧುವಿನಂತೆ ನನ್ನನ್ನು ಕಾಣುತ್ತಿದ್ದ ಮಧುರ ನೆನಪಿನೊಂದಿಗೆ ಈ ಲೇಖನ ಮುಕ್ತಾಯ.

**ಕೃಪೆ: ಅ.ಕೃ.ಭ**

**ಅಡ್ಯನಡ್ಕ ಕೃಷ್ಣ ಭಟ್ಟರ ಸಂಗ್ರಹ.**

# ಕಾಸರಗೋಡಿನ ಕನ್ನಡ ಹೋರಾಟಗಾರ ವಿಚಿತ್ರ ಏತಡ್ಕ

ಏತಡ್ಕ ಎಂಬ ಹಳ್ಳಿಯನ್ನು ಪಶ್ಚಿಮ ಕರಾವಳಿಯ ಯಾವ ಭೂಪಟದಲ್ಲೂ ಗುರುತಿಸಲು ಸಾಧ್ಯವಾಗದು. ಏಕೆಂದರೆ ಅದು ಕಾಸರಗೋಡಿನ ಒಳನಾಡಿನ ಒಂದು ಸಣ್ಣ ಊರು. ಆ ಊರಿನ ಹೆಸರನ್ನು ಕೂಡ ನೀವು ಕೇಳಿರದಿದ್ದರೆ ಆಶ್ಚರ್ಯವಿಲ್ಲ. ಆದರೆ ಕನ್ನಡ ಸಾಹಿತ್ಯಾಸಕ್ತರಿಗೆ, ಪತ್ರಿಕೆಗಳ ವಾಚಕರಿಗೆ "ವಿಚಿತ್ರ ಏತಡ್ಕ" ಎಂಬ ಹೆಸರು (ಸಾಕಷ್ಟು) ಪರಿಚಿತ. ಕಳೆದ 6ದಶಕಗಳಿಂದ ಕನ್ನಡ ಸಾಹಿತ್ಯ-ಪತ್ರಿಕಾಲೋದಲ್ಲಿ ಅವರು ಕಾಣಿಸಿಕೊಳ್ಳುತ್ತಲೇ ಇದ್ದಾರೆ; ಬರೆಯುತ್ತಲೇ ಇದ್ದಾರೆ. ಅವರೊಬ್ಬ ನಿಷ್ಠಾವಂತ ಕನ್ನಡಿಗ, ಕನ್ನಡ ಕರ್ಯಕರ್ತ, ಸಾಹಿತಿ, ಪತ್ರಿಕೋದ್ಯಮಿ. ಊರಲ್ಲಿ ಬಂಧು ಬಳಗದವರಲ್ಲಿ "ರಂಗಣ್ಣ" ಎಂದೇ ಪರಿಚಿತರಾಗಿರುವ ವೈ.ಎಸ್. ಹರಿಹರಭಟ್ಟರ ಕಾವ್ಯನಮ "ವಿಚಿತ್ರ ಏತಡ್ಕ"

ರಂಗಣ್ಣ ವೃತ್ತಿಯಿಂದ ಕೃಷಿಕ. ಪ್ರವೃತ್ತಿಯಿಂದ ಸಾಹಿತಿ, ಹವ್ಯಾಸದಿಂದ ಪತ್ರಿಕೋದ್ಯಮಿ. ಕಾಸರಗೋಡು ಮತ್ತು ಸುತ್ತಮುತ್ತಲಿನ ಸಾರ್ವಜನಿಕ, ಸಾಹಿತ್ಯ-ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತನ್ನನ್ನು ತೊಡಗಿಸಿಕೊಂಡ ಕನ್ನಡಿಗ. "ಕಾಸರಗೋಡಿನ ಕೊಂಪೆ" ಎಂಬ 'ಕುಖ್ಯಾತಿ'ಯ ಕಿರುಹಳ್ಳಿಯಲ್ಲಿ ತೆಂಗು ಕಂಗು ಬಾಳೆ ತೋಟಗಳ-ಗದ್ದೆಗಳ ಹಸಿರು ವನಸಿರಿಯ ನಡುವೆ ಹೆಂಡತಿ, ಮಕ್ಕಳು, ಮೊಮ್ಮಕ್ಕಳಿಂದ ಕೂಡಿದ ನೆಮ್ಮದಿಯ ಸದ್‌ಗೃಹಸ್ಥರಾಗಿ ಬಾಳ್ವೆ ಸಾಗಿಸುತ್ತಿರುವ, ಸದಾ ಲವಲವಿಕೆಯಿಂದ, ಉತ್ಸಾಹಗಳಿಂದ ನಗುನಗುತ ವ್ಯವಹರಿಸುತ್ತಿರುವ 'ವಿಚಿತ್ರರಿಗೆ ಈಗ ವಯಸ್ಸು ಸುಮಾರು 80 ದಾಟಿದೆ ಎಂದರೆ ನಂಬಲಿಕ್ಕೇ ಸಾಧ್ಯವಾಗುತ್ತಿಲ್ಲ - ಆದರೂ ನಿಜ" ಎನ್ನುತ್ತಾರೆ ವಿ.ಬಿ. ಅರ್ತಿಕಜೆ. 50-55ವರ್ಷಗಳ ಹಿಂದೆ ಲೇಖನಿ ಎತ್ತಿದ ವಿಚಿತ್ರ ಎಂದಿಗೂ ಬರೆಯುತ್ತಲೇ ಇದ್ದಾರೆ ಎಂಬುದು ಗಮನಾರ್ಹ ಸಂಗತಿ.

## ಕಲಿತು ಓದಿದ್ದಲ್ಲ, ಓದಿ ಕಲಿತದ್ದು:

ಲೇಖನಿ ಹಿಡಿದ ತಮ್ಮ 6ದಶಕಗಳ ಬಗ್ಗೆ ವಿಚಿತ್ರರೇ ಹೀಗೆ ಹೇಳಿಕೊಂಡಿದ್ದಾರೆ. " ಕುಗ್ರಾಮದ ದೊಡ್ (ಬ್ರಾಹ್ಮಣ) ಕುಟುಂಬದಲ್ಲಿ ಸಣ್ಣ ಮಗುವಾಗಿ ಹುಟ್ಟಿ

ಬೆಳೆದೆ; ಊರಲ್ಲೇ ಶಾಲೆಗೆ ಹೋದೆ; ಓದು ಬರೆಹ ಕಲಿತೆ–ಪ್ರಾಥಮಿಕಕ್ಕೇ ವಿದ್ಯಾಭ್ಯಾಸ ನಿಲ್ಲಿಸಿದೆ. ..... ಆಗ ಗಂಟು ಬಿತ್ತು ಕುಲಕಸುಬು ಕೃಷಿ. ಕೂಲಿಕಾರರೊಂದಿಗೆ ನಾನೂ ಗದ್ದೆ ತೋಟಗಳಲ್ಲಿ ದುಡಿದೆ; ದನಕರುಗಳನ್ನು ಮೇಯಿಸಿದೆ; ಹುಲ್ಲು ಹೊತ್ತು ತಂದೆ, ಅಡಿಕೆ ಹೆಕ್ಕುವುದರಿಂದ ತೊಡಗಿ ಆ ವ್ಯವಸಾಯಕ್ಕೆ ಸಂಬಂಧಿಸಿದ ಎಲ್ಲ ಕೆಲಸಗಳನ್ನೂ ಮಾಡಿದೆ.

ಮೀಸೆ ಮೂಡುವ ಪ್ರಾಯವಾದಾಗ, ಆಗತಾನೇ ಹೊರಜಗತ್ತಿನ ಕಡೆಗೆ ದೃಷ್ಟಿ ಹರಿಸಿದೆ. ನಮ್ಮೂರ ಶಾಲೆಯಲ್ಲಿ ನಡೆಯುತ್ತಿದ್ದ ಭಜನೆ, ಯಕ್ಷಗಾನ, (ತಾಳಮದ್ದಳೆಗಳಲ್ಲಿ ಆಸಕ್ತಿ ವಹಿಸಿದೆ. ಮದ್ದಳೆ ಬಾರಿಸುವುದನ್ನೂ ಕಲಿತೆ.... ಕ್ರಮೇಣ ನಾಲ್ಕು ಜನರೊಂದಿಗೆ ಓಡಾಡಲು ಪ್ರಾರಂಭಿಸಿದೆ. ಸುತ್ತುಮುತ್ತಲಲ್ಲಿ ಎಲ್ಲಾದರೂ ಸಭೆ ಸಮ್ಮೇಳನಗಳಾಗುತ್ತಿದ್ದರೆ, ಪ್ರೇಕ್ಷಕನಾಗುತ್ತಿದ್ದೆ, ಪತ್ರಿಕೆ ಓದಲು ಪ್ರಾರಂಭಿಸಿದೆ.

"ಭಜನೆ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದುದರ ಪರಿಣಾಮವೋ ಏನೋ–ತಾಯಿ ಶರದೆಗೆ ನನ್ನ ನೆನಪಾಗಿರಬೇಕು. 'ಬರೆ ಮಗನೇ ಬರೆ' ಎಂದಳೇನೋ.... ಮೊದಲಿಗೆ ಕೆಲವು ಭಕ್ತಿ ಗೀತೆಗಳನ್ನು ಬರೆದೆ; ಹಾಡಿದೆ–ಹೀಗೆ ಸುರುವಾಯಿತು ಸಾಹಿತ್ಯ ಸೇವೆ. ಮೊದಲಕತೆ 1943ರಲ್ಲಿ ವಿಕಟವಿನೋದಿನಿಯಲ್ಲಿ ಪ್ರಕಟವಾಯಿತು. ಕ್ರಮೇಣ ಬೇರೆ ಬೇರೆ ಪತ್ರಿಕೆಗಳಲ್ಲಿಯೂ ಲೇಖನಗಳು ಅಚ್ಚಾಗತೊಡಗಿದವು. ಮುಂದೆ ಒಂದೆರಡು ವರ್ಷಗಳಲ್ಲೇ ನಾನು ಪ್ರಾರಂಭಿಸಿದ 'ಸ್ಫೂರ್ತಿ' ಎಂಬ ಕೈಬರೆಹದ ಮಾಸ ಪತ್ರಿಕೆ ಬೇರೆ ಹೇಗಲೇರಿ ಕುಳಿತ್ತಿತ್ತು; ಅದು ನೀಡಿದ ಕಾವ್ಯನಾಮ ಈ "ವಿಚಿತ್ರ ಏತಡ್ಕ".... ಎಲ್ಲೋ ಗದ್ದೆ ತೋಟದಲ್ಲಿ ದುಡಿದುಕೊಂಡಿದ್ದ ಒಬ್ಬ ಸಾಮಾನ್ಯವ್ಯಕ್ತಿ ಬರೆಯಲಾರಂಬಿಸಿದ್ದು, ಅವು ಪ್ರಕಟವಾಗುತ್ತಿದ್ದುದು ವಿಚಿತ್ರ ತಾನೇ?.... ಹಾಗೇ ನಾನು 'ವಿಚಿತ್ರ' ಆದೆ.

"ಸಾಹಿತ್ಯ ಲೋಕದಲ್ಲಿ ಅನೇಕ ವಿಚಿತ್ರಗಳಿರಬಹುದು. ಆದರೆ 'ವಿಚಿತ್ರ' ಅಂಕಿತದ ಸಾಹಿತಿ ಇವರೊಬ್ಬರೇ. 6ದಶಕಗಳಿಗೂ ಹೆಚ್ಚುಕಾಲ ನಿರಂತರವಾಗಿ ಸಾಹಿತ್ಯ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು, ಬರೆಯುತ್ತಲೇ ಬೆಳೆದ, ಬೆಳೆಯುತ್ತಲೇ ಬರೆಯುವ ಈ ವಿಚಿತ್ರರು ಗ್ರಾಮೀಣ ಪ್ರದೇಶದಲ್ಲಿ ಪಸರಿಸಿದ ಒಂದು ಅಪೂರ್ವ ಸಾಹಿತ್ಯ ಸೌರಭ' ಎನ್ನುತತ್ತಾರೆ ಇವರನ್ನು ತೀರ ನಿಕಟದಿಂದ ಬಲ್ಲ ಡಾ॥ ರಮಾನಂದ ಬನಾರಿ.

**ವಾಚನಾಲಯದಿಂದ ಓನಾಮ:**

ಸ್ವಾತಂತ್ರ್ಯ ಪೂರ್ವದ ದಿನಗಳಲ್ಲಿ ಸಾರಿಗೆ ಸಂಪರ್ಕದಂತಹ ಪ್ರಾಥಮಿಕ ಸೌಲಭ್ಯದ ಹೆಸರೇ ಇಲ್ಲದ ಒಂದು ಹಳ್ಳಿ ಏತಡ್ಕ. ಅಲ್ಲೊಂದು ವಾಚನಾಲಯವನ್ನು

(ಖಾಸಗಿಯಾಗಿ, ಉಚಿತವಾಗಿ) ಪ್ರಾರಂಭಿಸಿದ ವಿಚಿತ್ರರು, ವಾಚನಾಲಯಕ್ಕಾಗಿ ತಾವೇ ಚಂದಾಕಟ್ಟಿ , ಪತ್ರಿಕೆ ತರಿಸಿದರು; ನಾಲ್ಕಾರು ಜನ ಸ್ನೇಹಿತರನ್ನು ಪ್ರೇರೇಪಿಸಿದರು. ಜನರಿಗೆ ಓದಿನ ರುಚಿ ಹಿಡಿಸಿದರು.

ಬಯಲುಸೀಮೆಯ ಅಗ್ರಹಾರದಂತೆ ಕರಾವಳಿ ಪ್ರಾಂತ್ಯದ ಹಳ್ಳಿಗಳಲ್ಲಿ ಮನೆಗಳು ಒತ್ತಟ್ಟಿಗಿರದೆ, ಗದ್ದೆ ತೋಟ ಗುಡ್ಡ ಬನ, ಬಯಲುಗಳ ನಡುವೆ ಚದುರಿ ಅಲ್ಲೊಂದು ಇಲ್ಲೊಂದು ಇರುವುದರಿಂದ ವಾಚನಾಲಯಕ್ಕೆ ಇತ್ಯ ಬಂದು ಹೋಗುವುದುಓದುಗರಿಗೆ ಅಷ್ಟೇನೂ ಸುಲಭವಾಗಿರಲಿಲ್ಲ. ಮಳೆಗಾಲದಲ್ಲಿ ಹಾಗೂ ನೇಜಿ ನೆಡುವ (ನಾಟಿ) ಕೊಯ್ಲು (ಕಟಾವು) ಇತ್ಯಾದಿ ವ್ಯವಸಾಯದ ಬಿರುಸಿನ ದಿನಗಳಲ್ಲಿ ಇನ್ನಷ್ಟು ತೊಂದರೆಯೇ; ಒಮ್ಮೊಮ್ಮೆ ವಾಚನಾಲಯದ ಹಾಜರಿ ಸೊನ್ನೆ ಮತ್ತೊಂದು ಎನ್ನಿಸುತ್ತಿತ್ತು. ವಿಚಿತ್ರ ಇದನ್ನು ನೋಡಿದರು; ನೋಡುತ್ತಲೇ ಇದ್ದರು. ಅದು ದ್ವಿತೀಯ ಮಹಾಯುದ್ಧದ ಕೊನೆಯ ದಿನಗಳು–ವಾರವಾರವೂ ಸಂಭವಿಸುತ್ತಿದ್ದ ಯುದ್ಧದ ಮಹತ್ವದ ಘಟನೆಗಳನ್ನು ಕಆಂಗ್ರೆಸ್ ಚುಳುವಳಿ ಮೊದಲಾದ ವಾರ್ತಾ ವಿಶೇಷಗಳನ್ನು, ಸಭೆ ಸಮಾರಂಭದ ಸಂಗತಿಗಳನ್ನು ಒಂದು 'ನೋಟ್‌ಬುಕ್'ನಲ್ಲಿ ಗುರುತು ಹಾಕಿಟ್ಟು ಕೊಳ್ಳಲಾರಂಭಿಸಿದರು. ವಾಚನಾಲಯಕ್ಕೆ ಗೈರುಹಾಜರಿಯಾಗುತ್ತಿದ್ದ ವಾಚಕರು ಒಬ್ಬಿಬ್ಬರು ಅದನ್ನು ಮನೆಗೆ ಕೊಂಡೊಯ್ದು ವಿರಾಮವಾಗಿ ಓದಿಕೊಳ್ಳುತ್ತಿದ್ದರು. (ಪತ್ರಿಕಗಳನ್ನು ಮನೆಗೆ ಕೊಂಡೊಯ್ಯಬಾರದೆಂಬ ನಿಯಮವಿತ್ತು) ಅಲ್ಲಿಂದ ನೆರೆಮನೆಯ ಇನ್ನೊಬ್ಬರಿಗೆ, ಮತ್ತೊಬ್ಬರಿಗೆ, ಮಗದೊಬ್ಬರಿಗೆ 'ನೋಟ್‌ಬುಕ್ ಹಸ್ತಾಂತರಗೊಳ್ಳತೊಡಗಿತು. ಕ್ರಮೇಣ ಹೀಗೊಂದು ಸರ್ಕ್ಯುಲೇಟಿಂಘ್ ವಾರ್ತಾಪತ್ರ ಸೃಷ್ಟಿಯಾಯಿತು. ಇದೇ ಕೈಬರೆಹದ ಮಾಸಪತ್ರಿಕೆ "ಸ್ಫೂರ್ತಿ" ಯಾಗಿ ರೂಪುಗೊಂಡಿದ್ದು ಈ ಹಿನ್ನೆಲೆಯಲ್ಲೇ.

**ಸ್ಫೂರ್ತಿಯ ಸೆಲೆ:**

ಭಾರತವು ಸ್ವತಂತ್ರವಾದ ದಿನ ಎಂದರೆ 1947ನೇ ಆಗಸ್ಟ್ 15ರಂದು, ಸ್ಫೂರ್ತಿ ವಿಶೇಷ ಸಂಚಿಕೆ ಪ್ರಕಟವಾಯಿತು. ವಿಚಿತ್ರರೇ ಅದರ ಸಂಪಾದಕರು, ಪ್ರಕಾಶಕರು, ವ್ಯವಸ್ಥಾಪಕರು– (ಹಾಗೂ ವಾಚಕರು ಎಂದು ಕೆಲವರು ಲೇವಡಿ ಮಾಡಿದರೂ ಹಸ್ತಪತ್ರಿಕೆಯನ್ನು ಸಿದ್ಧಪಡಿಸುವುದು, ಲೇಖನಗಳನ್ನು ಅಚ್ಚುಕಟ್ಟಾಗಿ ಕೈ ಬರೆಹದಲ್ಲಿ ಮೂಡಿಸುವುದು, ಬಹುಪಾಲು ಪುಟಗಳನ್ನು ತುಂಬಿಸುವುದು.......ದು......ದು ಮೊದಲಾದ ವಿವಿಧ ಜವಾಬ್ದಾರಿ ಅವರ ಹೆಗಲೇರಿತು. ಸತತ 5ವರ್ಷಗಳ ಕಾಲ ಸ್ಫೂರ್ತಿ ಪ್ರಕಟವಾಯಿತು. ಸುತ್ತಣ ಹತ್ತು ಹದಿನೈದು ಹಳ್ಳಿಗಳಲ್ಲಿ ಅದು ಪ್ರವಾಸ ಮಾಡುತ್ತಿತ್ತು; ಓದುಗರ ಮೆಚ್ಚುಗೆ ಗಳಿಸಿತ್ತು. ಕೊನೆಗೊಮ್ಮೆ ಮುದ್ರಣದ ರೂಪದಲ್ಲಿ ಹೊರತರುವ ಪ್ರಯತ್ನವೂ

ನಡೆಯಿತು. ದುರ್ದೈವದಿಂದ 'ಸಪೂರ್ತಿ' ಮುದ್ರಣದ ಮುಖ ನೋಡಲಿಲ್ಲ- ಅಷ್ಟೇ ಅಲ್ಲ, ಹಸ್ತ ಪತ್ರಿಕೆಯಾಗಿ ಮುಂದುವರಿಯಲೂ ಇಲ್ಲ; ಆದರೆ ಇದ್ದಷ್ಟು ಕಾಲ, ಅನೇಕ ಕಿರಿಯರ, ಉದಯೋನ್ಮುಖ ಲೇಖಕರಬರೆಹಗಳನ್ನು ಪ್ರಕಟಿಸಿ ಪ್ರೋತ್ಸಾಹ ನೀಡಿತು. ಶಿವರಾಮ ಕಾರಂತ, ಮಂಜೇಶ್ವರ ಗೋವಿಂದ ಪೈಗಳಂತಹ ಹಿರಿಯರ ಲೇಖನಗಳನ್ನು ಪ್ರಕಟಿಸಿ ಪ್ರಬುದ್ಧ ಹಸ್ತ ಪತ್ರಿಕೆ ಎನ್ನಿಸಿತ್ತು ಸ್ಫೂರ್ತಿ.

**ಜನಪ್ರಿಯ ಅಂಕಣಕಾರ:**

ವಿಚಿತ್ರರ ಸಮಕಾಲೀನ ಲೇಖಕ ಗಣಪತಿ ದಿವಾಣರು ಹೇಳುವಂತೆ 'ಕಾಸರಗೋಡು ಪ್ರದೇಶದ ಮೊದಲ ಅಂಕಣಕಾರರ ಸಾಲಿನಲ್ಲಿ ವಿಚಿತ್ರರ ಹೆಸರು ಸ್ಥಿರವಾಗಿ ನಿಲ್ಲುತ್ತದೆ: ಹೊನ್ನಾವರದ 'ಸಾಧನಾ', ಮಂಗಳೂರಿನ 'ರಾಷ್ಟ್ರಮತ', 'ಸಂಗಾತಿ', 'ಹೊಸ ಸಂಜೆ' ಮೊದಲಾದ ಪತ್ರಿಕೆಗಳಲ್ಲಿ ವಿಚಿತ್ರರು ಬರೆಯುತ್ತಿದ್ದ ವಿಚಿತ್ರ 'ರಸಾಯನ', 'ವಿಚಿತ್ರವಾಣಿ' 'ವಿಚಿತ್ರಚಿತ್ರ ಅಂಕಿತದ 'ಅಂಕಣಬರಹ'ಗಳುಜನಪ್ರಿಯವಾಗಿದ್ದವು. ವಿಶ್ವದ ಆಗುಹೋಗುಗಳಿಂದ ತೊಡಗಿ, ದೇಶವಿದೇಶದ ರಾಜಕೀಯ-ಸಾಮಾಜಿಕ ಘಟನೆಗಳು, ಹಳ್ಳಿಯ ಗ್ರಾಮ ಪಂಚಾಯಿತಿ ಸಭೆಯಲ್ಲಿ ನಡೆದ (ಹ್ಯೊಕ್ಯೆ) ವಾತಿನ ಮಾರಾಮಾರಿವರೆಗಿನ ಪ್ರಚಲಿತ ವಿಷಯಗಳಿಂದ ಆರಿಸಿ ತೆಗೆದ ಅಂಶಗಳು ವಿಚಿತ್ರರ ಲೇಖನಿಯ ಸಾಣೆಗೆ ಸಿಕ್ಕಿ ಚೊಕ್ಕ ಆಣಿಮುತ್ತಿನಂತಾಗುತ್ತಿತ್ತು. ಘಟನೆಗಳನ್ನು ತಿರುಚದಿದ್ದರೂ ಎಂತಹ ಕರಾಳ ಘಟನೆಯಾಗಿದ್ದರೂ ಅದಕ್ಕೆ ನವಿರಾದ ಹಾಸ್ಯದ ಲೇಪಹಾಕಿ, ಸಂದರ್ಭೋಚಿತ ಉಪಮೆ, ಸೂಕ್ತ ಉದಾಹರಣೆ ಸಹಿತ ಕಿರುವಾಕ್ಯ ಸರಣಿಯಲ್ಲಿ ಮಿಂಚುತ್ತಿದ್ದ ಈ ಕಾಲಂಗಳು (ಅಂಕಣಗಳು) ವ್ಯಂಗ್ಯ, ವಿಮರ್ಶೆ, ಟೀಕೆ, ಟಿಪ್ಪಣಿಗಳ ಸಮಪಾಕದಿಂದ ರಸಾಯನವಾಗಿ ರೂಪುಗೊಳ್ಳುತ್ತಿತ್ತು.

**ಶಿಶು ಸಾಹಿತ್ಯ ಸೃಷ್ಟಿ:**

ನಿಜಜೀವನದಲ್ಲಿ ಮೊಮ್ಮಕ್ಕಳನ್ನು ಪಡೆದು ಅಜ್ಜನಾಗುವುದಕ್ಕೆ ಎಷ್ಟೋ ವರ್ಷಗಳ ಮೊದಲಿನಿಂದಲೇ ಮಕ್ಕಳ ಸಾಹಿತ್ಯ ರಚನೆಯನ್ನು ಮಾಡುತ್ತಾ ಬಂದಿದ್ದಾರೆ ವಿಚಿತ್ರರು. ಶಿಶುಗೀತೆಗಳನ್ನು ಬರೆದರು; ಮಕ್ಕಳ ಕತೆಗಳನ್ನು ರಚಿಸಿದರು. ನಾಟಕವನ್ನು ನಿರ್ಮಿಸಿದರು. ಕಿರುಗಾತ್ರದ ಚರಣಗಳ, ಸುಲಭ ಪದ ಜೋಡಣೆಯ ಉಲ್ಲಾಸದ ಅಂತ್ಯ ಪ್ರಾಸದ ವಿಚಿತ್ರರ ಶಿಶುಗೀತೆಗಳು ಮಕ್ಕಳ ಪಾಲಿನ ಕಲ್ಲುಸಕ್ಕರೆ. ಮಕ್ಕಳ ಮನಸ್ಸಿಗೆ ಸಂತೋಷಕೊಟ್ಟು ಅವರ ಭಾಷಾಜ್ಞಾನವನ್ನೂ, ಲೋಕಾನುಭವವನ್ನೂ ತುಸು ಹೆಚ್ಚಿಸುವ ನವಿರು ಗುಣದ ಮಕ್ಕಳ ಪದ್ಯಗಳನ್ನು ಮಕ್ಕಳು ಸೊಗಸಾಗಿ ಹಾಡುವಂತೆ; ಆನಂದದಿಂದ ಹಾಡಿ ಕುಣಿಯುವಂತೆ ಮಾಡುವ ಮಾರ್ದವದಿಂದ ಕೂಡಿವೆ. ಕತೆಗಳೂ ಅಷ್ಟೇ; ಬಲಾತ್ಕಾರದಿಂದ ತುರುಕಿದ ನೀತಿ ಬೋಧೆ ಇಲ್ಲದೆ,

ಮಕ್ಕಳು ಕೇಳಿ ಆನಂದಿಸುವ ಚಿಕ್ಕ ಚಿಕ್ಕ ಕತೆಗಳು, ಅವರ ಕನಸಿನ ಪ್ರಪಂಚವನ್ನು ವಿಸ್ತರಿಸುವುದರಲ್ಲಿ ವಿಶೇಷ ನೆರವನ್ನು ನೀಡುವ ಪರಂಪರೆಯಲ್ಲಿವೆ.

'ಮೊಮ್ಮಗನಿಗೆ ಅಜ್ಜ ಬರೆದ ಪತ್ರಗಳು' ಎಂಬ ಪತ್ರ ಗುಚ್ಛವನ್ನು ತಮ್ಮ ಶಿಶುಸಾಹಿತ್ಯ ಸರಣಿಯಲ್ಲಿ ವಿಚಿತ್ರರು ಬರೆದಿದ್ದಾರೆ. ಇದೊಂದು ಅಪೂರ್ವವಾದ ಅನುಪಮ ಶಿಶುಸಾಹಿತ್ಯ ಕೃತಿ ಮಕ್ಕಳಲ್ಲಿ ದೇಶಾಭಿಮಾನವನ್ನು ಮೂಡಿಸುವ, ಪ್ರಕೃತಿ ಸೌಂದರ್ಯದ ಪ್ರಜ್ಞೆಯನ್ನು ಪ್ರಜ್ವಲಿಸುವ ಪ್ರಗತಿಗಿತ ವಿಚಾರಗಳನ್ನು ಸರಳವಾದ ಮಾತುಗಳಲ್ಲಿ ಬರೆದ, ಮಕ್ಕಳ ಮನೋವಿಕಾಸಕ್ಕೆ ಪ್ರೇರಕವಾಗುವ ಕೃತಿಯಿದು.

(ಅಮೇರಿಕಾದಲ್ಲಿ ಹುಟ್ಟಿ ಬೆಳೆಯುತ್ತಿದ್ದ ತನ್ನ ಮೊಮ್ಮಗನಿಗೆ ಅಜ್ಜ ಬರೆಯುತ್ತಿದ್ದ ನಿಜಪತ್ರಗಳಿವು)

## ಚುಟುಕುಗಳ ಸರದಾರ:

ಕನ್ನಡದ ಚುಟುಕು ಬ್ರಹ್ಮ ಗೌರವದ ಕವಿ ದಿನಕರ ದೇಸಾಯಿಯವರಿಗೆ ಮೀಸಲು. ಅದೇ ಜಾಡಿನಲ್ಲಿ ಈಗಲೂ ಹಲವರು ಬರೆಯುತ್ತಾರೆ. ತಾವು ಬರೆಯುತ್ತಿದ್ದ 'ವಿಚಿತ್ರ ರಸಾಯನ' ಅಂಕಣಗಳಲ್ಲಿ ಹಾಸು ಹೊಕ್ಕಾಗಿ ಸೇರಿ ಹೋಗುವಂತೆ ಚುಟುಕುಗಳನ್ನು ಕೊರೆಯ ತೊಡಗಿದರು., ವಿಚಿತ್ರರು ನೂರಾರು ಚುಟುಕುಗಳನ್ನು ಸೃಷ್ಟಿ ಮಾಡಿದ್ದಾರೆ. ತಮ್ಮ ಚುಟುಕುಗಳಲ್ಲಿ ಗುಟಕಕಗಳ ತೆಳು ಛಾಯೆ ಇದ್ದರೂ ವ್ಯಂಗ್ಯ-ವಿಡಂಬನೆಯ ನಿರ್ದುಷ್ಟ ತಿಳಿ ಹಾಸ್ಯ ಲೇಪಿತವಾಗಿವೆ. ಅವುಗಳು ಧ್ವನಿ ಪೂರ್ಣವಾದ ಕಿವಿಮಾತಿನಂತೆ, ರೋಚಕವಾಗಿವೆ "ವಿಚಿತ್ರರು ಚುಟುಕುಗಳ ಸರದಾರ" ಎಂದು ಹೇಳಿದ್ದಾರೆ ಮಥುರೆಯ ಪ್ರೊ॥ ಡಾ|\ಹರಿಕೃಷ್ಣ ಭರಣ್ಯ.

## ವ್ಯಕ್ತಿ ಚಿತ್ರದಿಂದ ಪುಸ್ತಕ ವಿಮರ್ಶೆವರೆಗೆ:

ದೀರ್ಘಾವಧಿಯ ಸಾಹಿತ್ಯ ಜೀವನದಲ್ಲಿ ವಿಚಿತ್ರರು ಅನೇಕ ಸಣ್ಣ ಕತೆಗಳನ್ನು ಬರೆದಿದ್ದಾರೆ; ಕವಿತೆಗಳನ್ನು ರಚಿಸಿದ್ದಾರೆ. ನಾಟಕ, ಏಕಾಂಕ ನಾಟಕ, ಕಿರುಕಾದಂಬರಿ ಮೊದಲಾದ ವಿವಿಧ ಸಾಹಿತ್ಯ ಕ್ಷೇತ್ರಗಳಲ್ಲಿ ಕೈಯಾಡಿಸಿದ್ದಾರೆ. ಈ ಎಲ್ಲ ಸಂದರ್ಭಗಳಲ್ಲಿಯೂ ಎದ್ದು ಕಾಣುವ ಅಂಶವೆಂದರೆ ವಿಚಿತ್ರರ ಸಹೃದಯತೆ; ಪ್ರಾಮಾಣಿಕತೆ; ವಸ್ತುನಿಷ್ಠ ವಿವೇಚನಾಪರತೆ. ತಮ್ಮ ಅನುಭವದ ಎಲ್ಲೆಯಲ್ಲೇ ಅವರು ಲೇಖನಿಯನ್ನು ಬಳಸುತ್ತಾರೆ. ಅ.ನ.ಕೃ ಜೀವನ ಸಾಹಿತ್ಯ ದರ್ಶನ ರಸಚೇತನ (ಸಂ: ಶಾ.ಮುಂ.ಕೃಷ್ಣರಾಯರು)ದಲ್ಲಿ ಬರೆದ 'ಗಂಡುಗಲಿ' ಎಂಬ ಲೇಖನ ಇದಕ್ಕೊಂದು ಉತ್ತಮ ಉದಾಹರಣೆ. "..... ಮೂವತ್ತು ವರ್ಷಗಳ

ಹಿಂದಿನ ಮಾತು: ಮಂಗಳೂರಿನ ಕಂಠೀರವ ಪತ್ರಿಕೆಯ ದಸರಾ ಸಂಚಿಕೆಯಲ್ಲಿ ಆ.ನ.ಕೃ.ಕತೆಯೊಂದು ಅವರ ಭಾವಚಿತ್ರದೊಂದಿಗೆ ಮುದ್ರಿತವಾಗಿತ್ತು. ಅ.ನ.ಕೃರ ಹೆಸರನ್ನು ನಾನು ಮೊದಲು ಕಂಡದ್ದು ಹೀಗೆ. (ಮುಂದೆ ಅನೇಕ ಘಟನೆಗಳನ್ನು ನಿರೂಪಿಸಿದ ತರುವಾಯ) ..... ಇಷ್ಟೆಲ್ಲಾ ಬರೆದ ಮೇಲೆ ಆ.ನ.ಕೃ ಅವರಿಗೂ ನನಗೂ ತೀರ ಪರಿಚಯ ಎಂದು ಭಾವಿಸಬೇಡಿ. ಇಂದಿಗೂ ಅವರಿಗೆ ನನ್ನ (ಮುಖ) ಪ್ರಿಚಯವಿಲ್ಲ. ಹೆಸರೂ ನೆನಪಿನಲ್ಲಿದೆ ಎನ್ನಲಾರೆ. ಅದರಿಂದಾಗಿ ನನಗೇನೂ ಬೇಸರವಿಲ್ಲ. ಅವರು ನನ್ನನ್ನು ತಿಳಿದು ಕೊಳ್ಳದಿದ್ದರೆ ಯಾರಿಗೂ ಏನೂ ನಷ್ಟವಾಗಲಾರದು-ಆದರೆ ನಾನು ಅವರನ್ನು ತಿಳಿದುಕೊಳ್ಳದಿದ್ದರೆ ನನಗೇ ನಷ್ಟ..... ಕನ್ನಡದ ಸವ್ಯಸಾಚಿ ಆನಕೃ...... ವಿಚಿತ್ರರು ಬರೆದ ಹತ್ತಾರು ವ್ಯಕ್ತಿ ಚಿತ್ರಗಳಲ್ಲಿ, ತೀರ ನಿಕಟವಾಗಿ ಬಲ್ಲ ಕಯ್ಯಾರ ಕಿಂಞಣ್ಣ ರೈಗಳದ್ದಿರಲಿ; ನೆರೆಕೆರೆಯಲ್ಲಿದ್ದ ಯಕ್ಷಗಾನ ಪಟು 'ಕೀರಿಕ್ಕಾಡು ವಿಷ್ಣುಮಾಸ್ಟರ'ದ್ದಿರಲಿ; ಮದರಾಸು ಸೇರಿದ (ಅಲ್ಲೇ ಅಸು ನೀಗಿದ) 'ವೆಂಕಟರಾಜ ಪಾನಸೆ', ಮುಂಬೈಯಲ್ಲಿದ್ದ ಕಾಸಗೋಡಿನ ಪತ್ರಿಕೋದ್ಯೋಗಿ 'ವಿಷ್ಣುಭಟ್ಟ'ರದ್ದಿರಲಿ- ಈ ಎಲ್ಲ ಲೇಖನಗಳಲ್ಲಿ ಕಾಣುವುದು ಒಳ್ಳೆತನವನ್ನು, ಸತ್ವವನ್ನು ಗುರುತಿಸಿ ಪರಿಚಯಿಸುವ ಸಹೃದಯತೆಯನ್ನು, ಸ್ವಪ್ರತಿಷ್ಠೆರಹಿತವಾದ ಸತ್ಯ ನಿಷ್ಠೆಯನ್ನು, ಇರಲಿ.

ಮೇಲೆ ಉದಾಹರಿಸಿದ ಅ.ನ.ಕೃ ಸಂಬಂಧವಾದ ಇನ್ನೂ ಒಂದು ಘಟನೆಯನ್ನು ಇಲ್ಲಿ ಮೆಲುಕು ಹಾಕಬಹುದು: ವಿಚಿತ್ರರು ಬರೆಯುತ್ತಾರೆ: ".....ನಮ್ಮೂರಲ್ಲಿ ಸ್ಫೂರ್ತಿ ಎಂಬ ಕೈ ಬರೆಹದ ಮಾಸ ಪತ್ರಿಕೆಯೊಂದರ ಸಂಪಾದಕನಾಗಿದ್ದೆ- ಅದರ ವಾರ್ಷಿಕ ಸಂಚಿಕೆಗೆ ಒಂದು ಸಂದೇಶ ಕೇಳಿ ಅ.ನ.ಕೃ ಅವರಿಗೆ ಪತ್ರ ಬರೆದೆ. ಅದು ಅವರಿಗೆ ತಲುಪಿತೋ ಇಲ್ಲವೋ ತಿಳಿಯೆ. ಅವರಿಂದ ಸಂದೇಶ ಬರಲಿಲ್ಲ. ನಾನೂ ಮತ್ತೆ ಅವರಿಗೆ ಬರೆಯಲಿಲ್ಲ. ಇದಾಗಿ ನಾಲ್ಕಾರು ವರ್ಷಗಳಾದವು. ಗೆಳೆಯ ಎಂ.ಬಿ. ಮರಕಿಣಿ ಮತ್ತು ಶಂಪಾದೈತೋಟ ಅವರು ತಮ್ಮ ಜನಪ್ರಿಯ ಸಾಹಿತ್ಯ ಪ್ರಕಾಶನದಿಂದ 'ಮುಂಗಾರು ಮುಗಿಲು' ಎಂಬ ಕಥಾಸಂಕಲನವನ್ನು ಪ್ರಕಟಿಸಿದರು. ಇದಕ್ಕೆ ಮುನ್ನುಡಿ ಬರೆದವರು ಅ.ನ.ಕೃ. ಅದರಲ್ಲಿ ನನ್ನ (ವಿಚಿತ್ರರ) 'ಕಾಣದ ಕೈ' ಎಂಬ ಕತೆಯನ್ನು ವಿಮರ್ಶಿಸುತ್ತಾ ನನ್ನ ಕತೆಯ ಹಿಂದಿನ ಸಿದ್ಧಾಂತದ ಬಗ್ಗೆ ಸಂಶಯವನ್ನು ವಯಕ್ತ ಪಡಿಸಿದ್ದರು. ಇದರಿಂದಾಗಿ ನನಗೆ ಅಸಮಾಧಾನವಾಗಲಿಲ್ಲ. ಅ.ನ.ಕೃರವರಂಥ ಸಾಹಿತ್ಯ ಸವ್ಯ ಸಾಚಿಗಳು ನನ್ನ ಕಥೆಯನ್ನು ಓದಿದ್ದಾರಲ್ಲ ಎಂದು ಸಂತೋಷವಾಯಿತು. (ಅ.ನ.ಕೃ ಅವರ ಆಕ್ಷೇಪಣೆ ಕೃತಿಯಲ್ಲಿ ತುಸು ಹಿಂದೇಟು ಹಾಕಿದ್ದ ಕಥನ ವಿಧಾನವನ್ನು

ಕುರಿತು ವಿನಾ ಕಥಾನಕವನ್ನು ಕುರಿತಾಗಿರಲಿಲ್ಲ–ಎಂ.ಬಿ. ಮರಕಿಣಿ)– ಈ ನಮ್ರತೆ, ವಿವೇಚನೆ, ಲೋಕಾನುಭವ ಜನ್ಯವಾದ ಸಮದರ್ಶಿ ದೃಷ್ಟಿ ಇರುವುದರಿಂದಲೇ ಏತಡ್ಕದ ರಮೇಶ ಅವರು ಹೇಳುವ "ವಿಚಿತ್ರರು ಗ್ರಾಮೀಣ ಪ್ರದೇಶದ 'ಸವ್ಯ ಸಾಚಿಯಾಗಿದ್ದಾರೆ ಎಂಬ ಮಾತು ಉತ್ಪ್ರೇಕ್ಷೆಯಲ್ಲ.

## ಕನ್ನಡ ಪರ ಹೋರಾಟದಲ್ಲಿ ಸಹಯೋಗ:

ಅನೇಕ ವರ್ಷಗಳಿಂದಲೂ ವಿಚಿತ್ರರು ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯರು. ಕನ್ನಡ ಪರವಾದ ವಿವಿಧ ಚಟುವಟಿಕೆಗಳಲ್ಲಿ ಸಹಭಾಗಿಯಾದವರು. ಕಾಸರಗೋಡು ಕರ್ನಾಟಕ (ಪ್ರಾಂತೀಕರಣ ಪರ) ಸಮಿತಿಯ ಕಾರ್ಯಕರ್ತರು. ಭಾಷಾವಾರು ಪ್ರಾಂತ್ಯ ರಚನೆಯಾದಾಗ (1956) ಕಾಸರಗೋಡನ್ನು ಬಲಿಪಶುವನ್ನಾಗಿ ಮಾಡಿ, ರಾಜಕಾರಣಿಗಳು, ಕುತಂತ್ರದಿಂದ ಕೇರಳಕ್ಕೆ ಹಸ್ತಾಂತರಿಸಿದ ಕರಾಳಕೃತ್ಯ ಸಮಸ್ತ ಕನ್ನಡಿಗರನ್ನು ಮೂಕ ದು:ಖಿತರನ್ನಾಗಿ ಮಾಡಿತು. ನಿಜ "ಆದರೇನಂತ, ಅದೇನು ಪಾಕಿಸ್ತಾನಕ್ಕೆ ಸೇರಿಲ್ಲವಷ್ಟೇ? ಕೇರಳವೂ ಭಾರತದ ಭಾಗವೇ" ಎಂದು ಉಪಾಯ ವೇದಾಂತದ ಮಂತ್ರವನ್ನು ಉಗುಳಿದರು ಕೆಲವರು. ನೆಲಕೆ ಬಿದ್ದ ಹಾಲಿಗಾಗಿ ಇನ್ನು ಅತ್ತು ಪ್ರಯೋಜನವೇನು" ಎಂದು ಸ್ಮಶಾನ ವೈರಾಗ್ಯ ಹಿಡಿದರು ಇನ್ನು ಕೆಲವರು. " ಯಾವುದಕ್ಕೂ ಕಲ ಕೂಡಿ ಬರಬೇಕು; ಎಲ್ಲ ಅವರವರ ಹಣೆ ಬರೆಹ" ಎಂದು ಮೊಸಳೆ ಕಣ್ಣೀರು ಸುರುಸಿದರು ಇನ್ನು ಕೆಲವರು. ಇವರೆಲ್ಲ "ಕಾಸರಗೋಡು ಕನ್ನಡದ ಪವಿತ್ರ ನೆಲ, ಚಂದ್ರಗಿರಿ ನದಿಯಿಂದ ಈಚೆಗಿನ ಒಂದಂಗುಲ ನೆಲವನ್ನೂ ಹೊರಗುಳಿಯಲು ಬಿಡಲಾರೆವು" ಎಂದು ಗುಡುಗಿದ ಉತ್ತರಕುಮಾರ ರೂಪಿ ಕನ್ನಡಧುರೀಣರೇ! ಆಗ ಉದಯಿಸಿತು ಕಾಸರಗೋಡು ಕರ್ನಾಟಕ ಏಕೀಕರಣ ಸಮಿತಿ; ಕಾಸರಗೋಡು ಪ್ರದೇಶವನ್ನು ಕನ್ನಡದಿಂದ ಬೇರ್ಪಡಿಸದಂತೆ ತಡೆಯಲು, ಬೇರ್ಪಡಿಸಿದ ಅನ್ಯಾಯವನ್ನು ಪ್ರತಿಭಟಿಸಿ ಪುನರ್ ಪ್ರಾಂತೀಕರಣವಾಗಿಸಲು ಹೋರಾಟ ನಡೆಸಲು ಜನ ಸಾಮಾನ್ಯರ ಸಮಿತಿ ಇದರ ಬೆನ್ನೆಲುಬಾಗಿ ವಿಚಿತ್ರರೂ, ವಿಚಿತ್ರ ಏತಡ್ಕರಂತಹ ಸಾವಿರಾರು ಕಾರ್ಯಕರ್ತರೂ ಐತಿಹಾಸಿಕ ಹೋರಾಟ ನಡೆಸಿದರು, ಚಳುವಳಿ ಅಹಿಂಸಾತ್ಮಕವಾಗೇ ಇದ್ದುದರಿಂದಲೋ ಏನೋ, ಅಧಿಕಾರರೂಢರ ಕಿವಿಗದು ಸೇರಲೇ ಇಲ್ಲ; ಸೇರಿದರೂ ಯಾವ ಪರಿಣಾಮವನ್ನೂ ಬೀರಲಿಲ್ಲ. ಕಾಸರಗೋಡು ಶಾಶ್ವತವಾಗಿ ಕನ್ನಡದ ಕರುಳಿನಿಂದ ಕಿತ್ತು ಕೇರಳಕ್ಕೆ ಕಸಿ ಮಾಡಲ್ಪಟ್ಟಿತು. ಈ ಹೋರಾಟದಲ್ಲಿ ವಿಚಿತ್ರರು 'ನೇತಾ' ಆಗಿರಲಿಲ್ಲ ನಿಜ, ಸಾಥೀ' ಆಗಿದ್ದರು. ತನುಮನಧನವನ್ನು ಧಾರೆಯೆರೆದು ದುಡಿದರು.

## ಭರತವಾಕ್ಯ:

ಕೆಲವು ವರ್ಷಗಳ ಹಿಂದೆ ಕಾಸರಗೋಡಿನ ಬಳಿಯ ಒಂದು ಹಳ್ಳಿಯಲ್ಲಿ ವಿಚಿತ್ರರನ್ನು ಡಾ॥ ಯು.ಆರ್ ಅನಂತಮೂರ್ತಿಯವರ ಅಧ್ಯಕ್ಷತೆಯಲ್ಲಿ ಸನ್ಮಾನಿಸಿರುವುದು ಔಚಿತ್ಯಪೂರ್ಣವಾಗಿದೆ. ಕರ್ನಾಟಕವು ಕಾಸರಗೋಡನ್ನು ಕಳೆದು ಕೊಂಡರೂ, ವಿಚಿತ್ರ ಏತಡ್ಕರಂತಹ ಕನ್ನಡ ಸುಪುತ್ರರು ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಸಂರಕ್ಷಣೆಗಾಗಿ ಮುಡಿಪಿಟ್ಟುಕೊಂಡು ತಮ್ಮನ್ನೇ ಶ್ರೀಗಂಧದ ಕೊರಡಿನಂತೆ ತೇಯ್ದು ಪರಿಮಳ ಬೀರುತ್ತಿರುವುದು ನಿರಾಸೆಯ ಕಾರ್ಮೋಡ ಕವಿದ ಕಾಸರಗೋಡಿನ ಕನ್ನಡ ಜನರ ಜೀವನಾಕಾಶದಲ್ಲಿ ಒಂದು ಬೆಳ್ಳಿಯ ಸೆರಗಿನಂತಿದೆ.

ಕೃಪೆ: ನದ ಸ್ಫೂರ್ತಿ' ಹಸ್ತಪತ್ರಿಕೆ
ಏತಡ್ಕ (ಕಾಸರಗೋಡು ಜಿಲ್ಲೆ) ಕೇರಳ.

# ಪತ್ರಿಕಾ ಪ್ರಪಂಚಕ್ಕೆ ಕಾಲಿರಿಸಿದ ಪ.ಗೋಪಾಲಕೃಷ್ಣ

"1998ರ ಆಗಸ್ಟ್ 11ರಂದು ದಕ್ಷಿಣ ಕನ್ನಡ ಜಿಲ್ಲೆಯ ಹಿರಿಯ ಪತ್ರಿಕೋದ್ಯಮಿ ಪ.ಗೋ. ಮಂಗಳೂರಿನಲ್ಲಿ ನಿಧನರಾದರು. ಅವರು 69ವರ್ಷ ವಯಸ್ಸಾಗಿತ್ತು. ಕನ್ನಡ ಹಾಗೂ ಇಂಗ್ಲೀಷ್ ಎರಡೂ ಭಾಷೆಗಳಲ್ಲಿ ವಸ್ತುನಿಷ್ಠ ವರದಿಗಾರರೆಂಬ ಹೆಸರು ಗಳಿಸಿದ್ದ ಪ.ಗೋ. ನಾಲ್ಕು ದಶಕಗಳಿಗೂ ಮಿಕ್ಕಿ ವೃತ್ತಿ ನಿರತ ಪತ್ರಿಕೋದ್ಯೋಗಿಯಾಗಿದ್ದರು" ಎಂಬುದಾಗ ಪತ್ರಿಕಗಳು, ಬಾನುಲಿ, ದೂರದರ್ಶನಗಳಲ್ಲಿ ಬಂದ ಸುದ್ದಿಯನ್ನು ಆನೇಕಲ್ ತಾಲೂಕಿನ ಹಳ್ಳಿಯೊಂದರಲ್ಲಿದ್ದಾಗ ಕೇಳಿದೆ. ದಕ್ಷಿಣ ಕನ್ನಡದ ಪತ್ರಿಕಾ ಪ್ರಪಂಚದಲ್ಲಿ ಪ.ಗೋ ಸಲ್ಲಿಸಿದ ಸೇವೆ ಚಿರಪರಿಚಿತ. ಆದರೆ ಪತ್ರಿಕೋದ್ಯಮಕ್ಕೆ ಅಂಟಿಕೊಳ್ಳುವ ಮೊದಲು ಪ.ಗೋ. ನಡೆದುಬಂದ ದಾರಿಯನ್ನು ಹತ್ತಿರದಿಂಧ ನೋಡುವ ಅವಕಾಶ ನನಗೆ ದೊರಕಿತ್ತು. ಅದರ ಜತೆಗೆ ಅವರ ದೀರ್ಘಕಾಲದ ಪತ್ರಿಕೋದ್ಯಮದ ದಿನಗಳ ಬಗ್ಗೆ ಕೂಡ ಒಂದಿಷ್ಟು ವಿಚಿತ್ರವಾದ-ಆದರೂ ಸತ್ಯವಾದ ಘಟನೆಗಳನ್ನು ನೆನಪಿನಾಳದಿಂಧ ಹೊರತಂದು ಕೊಳ್ಳುವ ಪ್ರಯತ್ನವನ್ನಿಲ್ಲಿ ಮಾಡಿದ್ದೇನೆ.

## ಕಾರ್ಬಾರಿ ಅಪ್ಪನ ಸುಪುತ್ರ

ದಕ್ಷಿಣ ಕನ್ನಡ ಜಿಲ್ಲೆಯ ಬಂಟವಾಳ ತಾಲೂಕಿನ ಅಂಚಿನಲ್ಲಿ ಈಗಿನ ಕೇರಳದ ಕಾಸರಗೋಡು ಭಾಗಕ್ಕೆ ಅಂಟಿಕೊಂಡಿರುವ ಒಂದು ಸಣ್ಣ ಹಳ್ಳಿ-ಅಲ್ಲ, ಪೇಟೆ ಅಡ್ಯನಡ್ಕದ ಬಳಿ ಪ.ಗೋಪಾಲಕೃಷ್ಣ 1928ರಲ್ಲಿ ಜನಿಸಿದರು. ತಂದೆ ಪದ್ಯಾಣ ಈಚಣ್ಣ ಭಟ್ಟ (ಈಶ್ವರ ಭಟ್ಟರು) ಊರಿನ ಗಣ್ಯವ್ಯಕ್ತಿ; ಕಾರ್ಬಾರಿ. ಆ ಕಾಲದಲ್ಲಿ "ಪಿ.ಐ. ಮೋಟಾರ್ಸ್ ಸರ್ವೀಸ್"ನ್ನು ಪ್ರಾರಂಭಿಸಿದ ಸಾಹಸಿ. ವಿದ್ಯಾಪಕ್ಷಪಾತಿ; ಯಕ್ಷಗಾನ ಪ್ರೇಮಿ, ಕೊಡುಗೈ ದೊರೆ, ಬಯಲಾಟದ ರಸಿಕ ಪೋಷಕ, ಊರಿನ ಸಾರ್ವಜನಿಕ ಚಟುವಟಿಕೆಗಳ ಮುಂದಾಳು.... ಈ ಎಲ್ಲ ಸದ್ಗುಣಗಳ ಜತೆಗೆ ಹಲವು "ಶ್ರೀಮಂತ ಹವ್ಯಾಸ"ವನ್ನು ಅಂಟಿಸಿಕೊಂಡಿದ್ದ ಈಚಣ್ಣ ಭಟ್ಟರು "ದರ್ಬಾರಿ"ನ ಜೀವನ ಸಾಗಿಸಿದರೂ, ಕ್ರಮೇಣ ಶ್ರೀಮಂತಿಕೆ ಕರಗುತ್ತ ಬಂದು, ತಾವು ಕಟ್ಟಿಸಿದ್ದ ದೊಡ್ಡ ಬಂಗಲೆಯೊಂದನ್ನು ಮೂವರು ಚಿಕ್ಕ ಮಕ್ಕಳ ತಾಯಿಯಾದ ಹೆಂಡತಿಗೆ ಬಿಟ್ಟು ಕಾಯಿಲೆಯಿಂದ ನರಳಿ ಸ್ವರ್ಗಸ್ಥರಾದರು. ಮಕ್ಕಳ ತಾಯಿಯ

ಆರೋಗ್ಯವೂ ಚೆನ್ನಾಗಿರಲಿಲ್ಲ..... ಹೀಗೆ "ಬೆಳ್ಳಿಯ ಚಮಚೆ"ಯನ್ನು ಬಾಯಲ್ಲಿರಿಸಿಕೊಂಡು ಶ್ರೀಮಂತ ಮನೆತನದಲ್ಲಿ ಜನ್ಮತಳೆದರೂ ಗೋಪಾಲಕೃಷ್ಣ ಕಷ್ಟ ಕಾರ್ಪಣ್ಯಗಳ ಜೊತೆಗೇ ಬಾಲ್ಯವನ್ನು ಕಳೆದರು. ಅಡ್ಯನಡ್ಕದ ಹಿರಿಯ ಪ್ರಾಥಮಿಕ ಶಾಲೆಯಲ್ಲಿ 8ನೇ ಕ್ಲಾಸ್‌ವರೆಗೆ ಓದಿದರು.

## ಚಿತ್ರಕಲೆಯಿಂದ ಮಿಲಿಟರಿ ಕ್ಯಾಂಪ್‌ಗೆ....

ಮೈಸೂರಿನ 'ಚಾಮರಾಜೇಂದ್ರ ಸಂಸ್ಥೆಯಲ್ಲಿ ಚಿತ್ರಕಲೆಯನ್ನು ಅಭ್ಯಾಸ ಮಾಡಲು ಊರುಬಿಟ್ಟ ಗೋಪಾಲಕೃಷ್ಣ–ಅಲ್ಲಿ ಎಷ್ಟು ದಿನ ಕಲಿತರೋ–ತಿಳಿಯದು. ಮಾಸಿಕ ಶಿಕ್ಷಣ ಶುಲಕ್ ಎರಡು ರೂಪಾಯಿಗಳನ್ನು ಕೊಡಲು ಕೂಡ ಸಾಧ್ಯವಾಗದಾಗ, ಪುಣೆ ಸೇರಿ, ಮಿಲಿಟರಿಗೆ ಭರ್ತಿಯಾದರು. ಅಲ್ಲಿ ಕೂಡ ದೀರ್ಘಕಾಲ ಉಳಿಯಲಿಲ್ಲ. 1942ರ "ಚಲೇಜಾವ್" ಚಳುವಳಿಯ ಬಿರುಗಾಳಿ ಬೀಸುತ್ತಿದ್ದ ದಿನಗಳವು. ಮಿಲಿಟರಿ ಕ್ಯಾಂಪ್‌ನಲ್ಲಿ ನಾಲ್ಕು ಜನರ (ದೇಶಾಭಿಮಾನಿಗಳ) ಸಣ್ಣ ಗುಂಪೊಂದು ಗುಟ್ಟಾಗಿ ರೂಪುಗೊಂಡಿತು. ಬ್ರಿಟಿಷ್ ಅಧಿಕಾರಿಯೊಬ್ಬನ ವಿರುದ್ಧ ಸಿಡಿದು ನಿಂತ ಘಟನೆಯೊಂದರ ಪರಿಣಾಮವಾಗಿ ಪ.ಗೋ. ಪುಣೆಯ ಮಿಲಿಟರೀ ಕ್ಯಾಂಪನ್ನು ತ್ಯಜಿಸಿ ಮುಂಬೈನತ್ತ ದಾಪುಗಾಲು ಹಾಕಿದರು. ಈ ವಿಚಾರವಾಗಿ ನೆನಪಿಗೆ ಬರುವ ಒಂದು ಘಟನೆ ಹೀಗೆ: "ಮಿಲಿಟರಿ" ಸಮವಸ್ತ್ರ ಧರಿಸಿ ತೆಗೆಸಿದ್ದ ನಾಲ್ಕಾರು ಜನ ಗೆಳೆಯರ ಒಂದು ಗುಂಪು ಚಿತ್ರ (ಗ್ರೂಪ್ ಫೋಟೋ)ವನ್ನು ಗೋಪಾಲಕೃಷ್ಣ ತಮ್ಮ ತಾಯಿಗೆ ಕಳುಹಿಸಿಕೊಟ್ಟಿದ್ದರು. ಅದರಲ್ಲಿ ಪ.ಗೋ. ನಿಂತಿದ್ದ ರೀತಿಯಲ್ಲಿ ಎಡಭುಜ ಮಾತ್ರ ಕಾಣಿಸುತ್ತಿದ್ದುದರಿಂದ, ಎಡಗೈ ತುಂಡಾಗಿದೆ ಎಂಬುದಾಗಿ ಆ ಚಿತ್ರವನ್ನು ನೋಡಿದವರೊಬ್ಬರು ವ್ಯಾಖ್ಯಾನಿಸಿ ಬಿಟ್ಟಿದ್ದು! ಕೌಟುಂಬಿಕ ತೊಂದರೆಗಳಿಂದಲೂ ನಾನಾ ಬಗೆಯ ಮನೋವೇದನೆಗಳಿಂದಲೂ ಈಗಾಗಲೇ ಬಳಲುತ್ತಿದ್ದ ಸುಬ್ಬಕ್ಕನ ಮನಸ್ಸು ಇನ್ನಷ್ಟು ತಲ್ಲಣಗೊಂಡಿತು. ಈ "ಶಾಕ್'ನಿಂದ ಚೇತರಿಸಿಕೊಳ್ಳಲು ಅವರಿ ಬಹಳ ದಿನಗಳು ಬೇಕಾದವು.

## ಮುಂಬೈನಲ್ಲಿ ಕಾಂರೇಡ್ ಪಿ.ಜಿ.

ಮುಂಬೈಸೇರಿದ ಗೋಪಾಲಕೃಷ್ಣ ನಾಲ್ಕೈದು ವರ್ಷಗಳ ಕಾಲ ಅಲ್ಲಿದ್ದರೆಂಬುದರ ವಿನಾ– ಇತರ ವಿವರಗಳು ಅಷ್ಟಾಗಿ ತಿಳಿಯದು. ನಮಗೆ ತಿಳಿದಿರುವುದಿಷ್ಟು: 1945ರ ಹೊತ್ತಿಗೆ ಕೆಂಪುಕಾರ್ಡ್ ಪಡೆದ ಕಮ್ಯೂನಿಸ್ಟ್ ಪಾರ್ಟಿಯ ಸಕ್ರಿಯ ಕಾರ್ಯಕರ್ತರಾಗಿದ್ದ ಕಾಂರೇಡ್ ಪಿ.ಜಿ.–ಜೀವನ ನಿರ್ವಹಣೆಗೆ ಏನು ಮಾಡುತ್ತಿದ್ದರು ಎಂಬುದೂ ಅಸ್ಪಷ್ಟವೇ. ಆದರೆ ಓದುವುದು, ಬರೆಯುವುದು ಮಾತ್ರ ದೊಡ್ಡ ಪ್ರಮಾಣದಲ್ಲಿ ಆಯಿತು ಎಂಬುದಾಗಿ ನನ್ನೊಂದಿಗೆ ಒಮ್ಮೆ ಹೇಳಿದ್ದರು.

ಆಗ ಮುಂಬೈ ಚಟುವಟಿಕೆಗಳ ಚಿಲುಮೆ, ಸಾಹಿತ್ಯ, ರಾಜಕೀಯ, ಸಾಮಾಜಿಕ ಸಾಂಸ್ಕೃತಿಕ ಕಾರ್ಯಕ್ರಮಗಳ ಭರಾಟೆಯ (ಐ.ಪಿ.ಟಿ.ಎ) ಅಲ್ಲಿತ್ತು. (ಇಂಡಿಯನ್ ಪೀಪಲ್ಸ್ ಥಿಯೇಟರ್ ಅಸೋಬಯೇಶನ್), ಎಡಪಂಥೀಯ ವಿಚಾರಧಾರೆಯನ್ನು ಪ್ರಚಾರ ಮಾಡುವ ಮಾಧ್ಯಮಗಳ ಮುಂಚೂಣಿಯಲ್ಲಿತ್ತು. ಕಾಂರೇಡ್ ಪಿ.ಜಿ. ಆ ನಾಟಕ ಪ್ರಕ್ರಿಯೆಯಲ್ಲಿ ದುಡಿದರು. ಕಾರ್ಮಿಕ ಸಂಘಗಳ ವಿವಿಧ ಚಟುವಟಿಕೆಗಳು, ಸಂಪು, ಸಂಘಟನೆಗಳಲ್ಲಿ ಉತ್ಸಾಹದಿಂದ ಪಾಲ್ಗೊಂಡರು..... ಇಂತಹ ಸಂದರ್ಭಗಳಿಗಾಗಿ ವಿಶಿಷ್ಟ ಕರಪತ್ರ, ಭಿತ್ತಿಪತ್ರ, ಕಿರುಪುಸ್ತಕ, ಘೋಷಣೆ, ಭಾಷಣ– ಎಲ್ಲವನ್ನೂ ಸಿದ್ಧಪಡಿಸುತ್ತಿದ್ದರು. ಅನಿವಾರ್ಯ ಸಂದರ್ಭಗಳಲ್ಲಿ ಭೂಗತ ವಾರ್ತಾವಾಹಕರಾಗಿಯೂ ಕೆಲಸ ಮಾಡುತ್ತಿದ್ದರು. ಈಗ ಅವರು "ಕಾಂರೇಡ್ ಪಿ.ಜಿ.

## ಒಂದೇ ಒಂದು ಕತೆ ಬರೆದ ಪಿ.ಜಿ. ಕೃಷ್ಣನ್

1946ರಲ್ಲಿ ಮುಂಬೈ ಮಹಾನಗರವನ್ನೇ ತಲ್ಲಣಗೊಳಿಸಿದ , ಭಯಂಕರ ಜಾತೀಯ ದಂಘೆಯನ್ನು ಪಿ.ಜಿ. ಕಣ್ಣಾರೆ ಕಂಡಿದ್ದರು. ಆ ದಾರುಣ ಪ್ರಸಂಗದ ಹಿನ್ನೆಲೆಯಲ್ಲಿದ್ದ ಜಾತಿ ಕೋಮು ತಿಕ್ಕಾಟ, ವರ್ಗ ಕಲಹ, ಶೋಷಣೆ, ಅನ್ಯಾಯ, ಬಡತನ ಹಾಗೂ ಶ್ರೀಮಂತಿಕೆಯ ಅಟ್ಟಹಾಸದ ನಿಜ ಚಿತ್ರಿಸಿದ ಒಂದು 'ಸಣ್ಣ ಕತೆ' ಬರೆದರು. ಬೆಂಗಳೂರಿನ ಪ್ರಸಿದ್ಧ ಮಾಸಪತ್ರಿಕೆಯ ವಿಶೇಷಾಂಕದಲ್ಲಿ ಅದು ಪ್ರಕಟವಾಯಿತು. "ಈ ಕತೆ ಬರೆದವರು, ನಿಮಗೆಷ್ಟೋ ನಮಗೂ ಅಷ್ಟೇ ಅಪರಿಚಿತರು. ಆದರೆ, ಈ ಮೊದಲ ಕತೆಯಲ್ಲೇ ಓದುಗರ ಮನ:ಸ್ಪರ್ಶಿಯಾಗುವಂತಹ ಚಿತ್ರಣ ನೀಡಿದ ಇವರ ಲೇಖನಿಯಿಂದ ಇನ್ನಷ್ಟು ಕೃತಿಗಳನ್ನು ನಿರೀಕ್ಷಿಸಬಹುದು" ಎಂಬ ಅರ್ಥದಲ್ಲಿ ಸಂಪಾದಕರು ಟಿಪ್ಪಣಿಸಿದ್ದರು. ಆ ಕತೆಗಾರನ ಹೆಸರು ಪಿ.ಜಿ. ಕೃಷ್ಣನ್, ಆದರೆ ಇಷ್ಟೊಂದು ಆಸೆ ಹುಟ್ಟಿಸಿದ ಈ ಕತೆಗಾರ ಮುಂದೆ ಕತೆಯನ್ನೇ ಬರೆಯದಿದ್ದುದು ಸೋಜಿಗವೇ ಸರಿ! (ಈಚೆಗೆ ಗೋಪ ಅಂಕಿತದಲ್ಲಿ ಕೆಲವು ಕತೆಗಳು ದೊರಕಿವೆ)

## ಹುಟ್ಟೂರಿಗೆ ಹಿಂದಿರುಗಿದಾಗ

1947ರ ಕಾಂರೇಡ್ (ಕಾಮ್ರೇಡ್)ಪಿ.ಜಿ. ಕೃಷ್ಣನ್ ಹುಟ್ಟೂರಿಗೆ ಹಿಂತಿರುಗಿ ಬಂದರು. ಪ್ಯಾಂಟ್, ಶರ್ಟ್ ಮೇಲೊಂದು ಹೊಸ ಮಾದರಿಯ ಆಕರ್ಷಕ (ಶೃಂಗಾರದ) ಜಿಪ್ ಸಹಿತದ ಜೆರ್ಕಿನ್; ಮೈಕೈ ತುಂಬಿಕೊಂಡ ಆಜಾನುಬಾಹು; ತೀಡಿ ಬಾಚಿದ ಮುಂಗುರುಳ ಕ್ರಾಪ್; ನುಣುಪಾದ ಗುಂಡು ಕೆನ್ನೆಗಳು; ಆಳದೃಷ್ಟಿಯ ದೊಡ್ಡ ದೊಡ್ಡ ಕಣ್ಣುಗಳು, ತೆಳುವಾಗಿ ಕತ್ತರಿಸಿದ 'ತಳವಾರ್ ಕಟ್' ಮೀಸೆ (ಈದೆಸೆಯಿಂದಾಗಿ "ಸ್ವೋರ್ಡ್ ಕಟ್" ಎಂಬ ಅಡ್ಡ ಹೆಸರು ಬೀಳಲು

ತಡವಾಗಲಿಲ್ಲ!) ತಲೆ ತುಂಬ ಪ್ರಗತಿ ಪರ ವಿಚಾರಧಾರೆ; ಬಾಯಿ ತುಂಬ ವಾಮಪಂಥೀಯ ಮಾತುಗಳು ; ಟ್ರಂಕ್‌ನಲ್ಲಿಷ್ಟು ಕಮ್ಯೂನಿಷ್ಟ್ ಸಾಹಿತ್ಯ ಗ್ರಂಥಗಳು ಹಾಗೂ ಬರಿದಾದ ಜೇಬು! ಹೀಗೆ, ಮನೆಗೆ ಮರಳಿ ಬಂದ 'ಹಿರಿಯ ಮಗ'.... ಆತ ಇಲ್ಲಿ ಕಂಡದ್ದು ಬಡತನದ ಕಪ್ಪು ನೆರಳಿನಲ್ಲಿರುವ ಮನೆಯನ್ನು! ವರ್ಷಕ್ಕೆ 300 ರೂಪಾಯಿ ಬಾಡಿಗೆ ಹಣ (ನಗದು) ಕೈಗೆ ಬರುತ್ತದೆ ಎಂಬುದರಿಂದ 'ಬಂಗಲೆ'ಯನ್ನು ಬಾಡಿಗೆಗೆ ಕೊಟ್ಟು ಕಿರಿಯ ಒಂದು ಹಳೆಯ ಕೊಟ್ಟಿಗೆಯಲ್ಲಿ ಬಿಡಾರ ಹೂಡಿದ್ದರು ತಾಯಿ ಸುಬ್ಬಕ್ಕ. ತಮ್ಮಂದಿರು ಇಬ್ಬರೂ ಇನ್ನೂ ಕಿರಿಯ ವಯಸ್ಸಿನವರೇ ಆಗಿದ್ದರೂ, 'ಶಾಲೆ ಕಲಿಯುವುದನ್ನು ಅರ್ಧಕ್ಕೆ ಕೈ ಬಿಟ್ಟು 'ಹೊಲಿಗೆ ಮಿಶಿನ್' ಇರಿಸಿಕೊಂಡು ಅಷ್ಟಿಷ್ಟು ದುಡಿಯುತ್ತಿದ್ದರು! ಆ ಸಂಪಾದನೆಯಿಂದಲೇ ಮನೆಯಲ್ಲಿ ಒಲೆ ಉರಿಯುತ್ತಿತ್ತು!

ಊರಿಗೆ ಬಂದದ್ದಾಗಿದೆ; ಮನೆ ಸೇರಿಕೊಂಡದ್ದೂ ಆಗಿದೆ. ಇಲ್ಲಿ ನೋಡಿದರೆ ಪರಿಸ್ಥಿತಿ ತೀರ ಕಾರ್ಪಣ್ಯಮಯ! ತಾನೇನಾದರೂ ಸಹಾಯ ಮಾಡಬೇಕೆಂದರೆ, ಕೈಯಲ್ಲಿ ಹಣವಿಲ್ಲ. (ನಿತ್ಯ 2ಕಟ್ಟು ಬೀಡಿ, ಬೆಂಕಿಪೆಟ್ಟಿಗೆ ಕೊಂಡುಕೊಳ್ಳಲು ನಾಲ್ಕಾಣೆಗೂ ಅಡಚಣೆ ಕಾಣಿಸುವ ಗಳಿಗೆಗಿನ್ನು ದೂರವಿಲ್ಲ! ಬೀಡಿ ಸೇದುವ ಚಟ ಆಗಲೇ ಅಂಟಿಕೊಂಡೊತ್ತು/ ಪ್ರಾಯಶ: ಕೊನೆವರೆಗೂ ಉಳಿಯಿತು ಅಂತ ಕಾಣುವತ್ತದೆ!)... ಈ ಪ್ಯಾಂಟ್‌ಧಾರಿ ಮುಂಬೈ ರಿಟರ್ನ್ಡ್, ಅರಳು ಹುರಿದಂತೆ ಇಂಗ್ಲೀಷ್ ಮಾತನಾಡುವ ಸುಸಂಸ್ಕೃತ ಯುವಕನಿಗೆ ಯಾವ ಕೆಲಸ ತಕ್ಷಣ ಕಾದಿದೆ ಇಲ್ಲಿ?.... ಕೈಯಲ್ಲಿದ್ದ ಕೊನೆಯ ಹತ್ತು ರೂಪಾಯಿ ನೋಟು ಖರ್ಚಾಗುವ ಮೊದಲು, ಒಂದಿಷ್ಟು 'ರಬ್ಬರ್ ಬೆಲೂನ್' (ಪುಗ್ಗೆ) ಖರೀದಿಸಿ, ಊರ ಜಾತ್ರಗಳಲ್ಲಿ (ಸಂತೆ, ಅಯನ-ಆಟಗಳಲ್ಲಿ) ಪುಗ್ಗೆ ಮಾರಾಟ ಮಾಡುವುದಕ್ಕೆ ಪ್ರಾರಂಭವಾಯಿತು. ಎರಡು ವಾರಗಳಲ್ಲಿ ಪುಗ್ಗೆ "ಸ್ಟಾಕ್" ಮುಗಿಯಿತು ಮತ್ತ ಖರೀದಿಸಲು 10 ರೂಪಾಯಿ ಮಾತ್ರ ಜಮಾ ಆಗಲಿಲ್ಲ.

## ಮದರಾಸಿನಲ್ಲಿ ರಕ್ತದಾನ ಮಾಡುತ್ತ ಕಾಲಯಾಪನೆ

ಈ ಹೊತ್ತಿನಲ್ಲಿ ಶ್ರೀಮಂತ ಸಂಬಂಧಿಯೊಬ್ಬರು 100 ರೂಪಾಯಿ (ಸಾಲ) ಕೊಟ್ಟು 'ಮದರಾಸಿಗೆ ಹೋಗಿ ಕೆಲಸ ಹುಡುಕುವಂತೆ ಸೂಚಿಸಿದರು. ಮರು ಮಾತಿಲ್ಲದೆ ಗೋಪಾಲಕೃಷ್ಣ ಮದರಾಸ್ ರೈಲು ಬಂಡಿ ಏರಿದರು.... ಮದರಾಸಿನಲ್ಲಿ ಒಂದು ತಿಂಗಳ ಕಾಲ ಅಲೆದರೂ ಕೆಲಸ ಸಿಕ್ಕಲಿಲ್ಲ. ಕೈಯಲ್ಲಿದ್ದ ಕಾಸು ಕರಗುತ್ತ ಬಂತು. ಅಷ್ಟೇ ಸಾಲದು ಎಂಬಂತೆ ಹಿಂದಿನ ಮುಂಬೈ ದೋಸ್ತ್ ಒಬ್ಬಾತ (ಜೆ.ಜೆ ರಾಜ್ ಎಂಬುವನು) ಸ್ವಯಂ ಉದ್ಯೋಗ ಮಾಡುವ ಕೆಲಸ ಕೊಡಿಸುವ ಆಸೆ ತೋರಿಸಿ, ಉಳಿದ ನಾಲ್ಕು ಕಾಸನ್ನೂ ಕಿತ್ತುಕೊಂಡು ಪರಾರಿಯಾದ!....

ಇಂತಹ ದುಸ್ಥಿತಿಯಲ್ಲಿ ಒಮ್ಮೆ "ರಕ್ತದಾನ" ಮಾಡಲು 'ಬ್ಲಡ್ ಬ್ಯಾಂಕ್'ಗೆ ಹೋಗಿ, ಹದಿನೈದು ದಿನಗಳಿಗೆ ಒಮ್ಮೆ "ರಕ್ತದಾನ ಮಾಡಲು ತೊಡಗಿದರು. ಪ್ರತಿಸರ್ತಿ ರಕ್ತ ನೀಡಿದಾಗಲೂ 5ರೂಪಾಯಿ ಸಂಭಾವನೆ , ಒಂದು ಕಪ್ ಚಹಾ-ದೊರಕುತ್ತದೆ. ಮುಂದಿನ ರಕ್ತದಾನದ ದಿನದವರೆಗೆ ಇದರಲ್ಲೇ ಉದರ ನಿರ್ವಹಣೆ' ಎಂದು ನನಗೆ ಬರೆದ ಪತ್ರದಲ್ಲಿ ತಿಳಿಸಿದ್ದರು. ನಾವು ಕೆಲವು ಸ್ನೇಹಿತರು ವಾರಕ್ಕೆ ಒಂದೋ-ಎರಡೋ ಬಾರಿ ಒಂದು ರೂಪಾಯಿ ನೋಟನ್ನು ಕವರಿನಲ್ಲಿಟ್ಟು ಟಪಾಲಿಸುತ್ತಿದ್ದೆವು-ನಮ್ಮ ಕೈಯ್ಯಲ್ಲೂ ಅದಕ್ಕಿಂತ 'ಹೆಚ್ಚ' ಇರುತ್ತಿರಲಿಲ್ಲ! (ಈ ಹಣ ತೊಂದರೆ ಇಲ್ಲದೆ ಕೈ ಸೇರಲಿ ಅಂತ ಕವರಿಗೆ 6ಪೈ ಕಮ್ಮಿ ಮೌಲ್ಯದ ಸ್ಟ್ಯಾಂಪ್ ಅಂಟಿಸಿ ರವಾನಿಸುತ್ತಿದ್ದೆವು. ಆಗಿನ ಕಾಲದಲ್ಲಿದು ಒಂದಾಣೆ "ಬೇರಿಂಗ್' ಮುದ್ರೆ ಒತ್ತಿಸಿಕೊಂಡರೂ ನೇರವಾಗಿ ಮದರಾಸ್ ಸೇರಿ ಗೋಪಾಲಕೃಷ್ಣರ ಕೈಗೆ ತಲುಪುತ್ತಿತ್ತು. (ಆ ದಿನಗಳಲ್ಲಿ 1950ರ ಸುಮಾರಿಗೆ) ಪೋಸ್ಟಲ್ ಕವರಿನ ಮುಖಬೆಲೆ ಒಂದೂವರೆಣೆ).... ಕೊನೆಗೊಮ್ಮೆ ಈ 'ಅಲೆಮಾರಿ' ಬದುಕಿಗೆ ನಮಸ್ಕಾರ ಹೇಳಿ, ಮದರಾಸಿನಲ್ಲಿ ಕೆಲಸ ಹುಡುಕುವ ಹಾಗೂ ಸ್ವಯಂ ಉದ್ಯಮ ನಡೆಸುವ ಆಸೆಯನ್ನು ಕೈ ಬಿಟ್ಟು ಗೋಪಾಲಕೃಷ್ಣಭಟ್ಟರು ಊರಿಗೆ ಹಿಂತಿರುಗಿದರು.

## ಶಾರ್ಟ್‌ಹ್ಯಾಂಡ್ ಕಲಿಸಿದ್ದು; ಕೈಕೆಮರಾ ಮಾರಿದ್ದು

ಪರಿಚಿತ ಉತ್ಸಾಹೀ ಯುವಕರೊಬ್ಬರು ಅಡ್ಯನಡ್ಕದಿಂದ 8-10 ಕಿಲೋಮೀಟರ್ ದೂರದಲ್ಲಿರುವ ಪೆರ್ಲದಲ್ಲಿ ಅದೇ ತಾನೇ "ಟೈಪ್‌ರೈಟಿಂಗ್" ಕಲಿಸುವ ಶಾಲೆಯೊಂದನ್ನು ತೆರೆದಿದ್ದರು. ಗೋಪಾಲಕೃಷ್ಣಭಟ್ಟರು, ಅಲ್ಲಿ ವಾರಕ್ಕೆ 3ದಿವಸ "ಶಾರ್ಟ್‌ಹ್ಯಾಂಡ್ ಕಲಿಸುವ ಶಿಕ್ಷಣ ಕಾರ್ಯವನ್ನು ಪ್ರಾರಂಭಿಸಿದರು. ತಿಂಗಳಿಗೆ 2ರೂಪಾಯಿ ಫೀಸ್ ತಿಂಗಳ ಕೊನೆಗೆ ಕೊಟ್ಟರೂ ಸಾಕು" ಎಂಬ ಸೂಚನೆಯಿದ್ದ ಕಾರಣ 15-20 ಮಂದಿ ವಿದ್ಯಾರ್ಥಿಗಳು ಸೇರಿಕೊಂಡರು. ತಿಂಗಳು ಕೊನೆಗೊಂಡಾಗ ಫೀಸಿನ ಹಣವೇನೂ ವಸೂಲಿಯಾಗದ ಕಾರಣ, ಶಾರ್ಟ್‌ಹ್ಯಾಂಡ್ ಕಲಿಸು ಸಾಹಸ ಅಲ್ಲಿಗೇ ಕೊನೆಗೊಂಡಿತು; ಗೋಪಾಲಕೃಷ್ಣಭಟ್ಟರು ಬರಿಗೈಯಲ್ಲೇ ಉಳಿದರು!.

ಮದರಾಸಿನಿಂದ ಬರುವಾಗ ಹಣ ಕಸಿದುಕೊಂಡು ಕೈಕೊಟ್ಟು ಓಡಿಹೋಗಿದ್ದ ಮುಂಬೈವಾಲ ಜೆ.ಜೆ.ರಾಜ್ ಬಂದು ಕೈಕೆಮರಾವನ್ನು ಇವರ ಬಳಿ ಬಿಟ್ಟು ಬಿಟ್ಟಿದ್ದ. ಅದನ್ನು ಹಿಡಿದುಕೊಂಡು ಗೋಪಾಲಕೃಷ್ಣಭಟ್ಟರು ಹಳ್ಳಯ ಕೆಲವು ಮದುವೆ ಮಂಟಪಗಳಿಗೆ ನುಗ್ಗಿ ವಧೂವರರ ಭಾವಚಿತ್ರಗಳನ್ನು ಸೆರೆಹಿಡಿದರು. ಫಿಲಂರೋಲ್ ಕಂಪ್ಲೀಟ್ ಆದ ಮೇಲೆ ಡೆವಲಪ್ ಮಾಡಿ ನೋಡಿದಾಗ-ಎದೆ ಧಸಕ್ ಎಂದಿತು: ಒಂದು ಭಾವಚಿತ್ರವೂ ಮೂಡಿರಲಿಲ್ಲ!.... ಎಲ್ಲೋ, ಏನೋ ಎಡವಟ್ಟಾಗಿತ್ತು!....

ಅಲ್ಲಿ ಇಲ್ಲಿ ಪಡೆದ ಅಡ್ವಾನ್ಸ್ ಹಣವನ್ನು ಹಿಂದಿರುಗಿಸಲು, ಮಲೆನಾಡು ಸುತ್ತಿ, ಎಂಜಿರ, ಶಿಶಿಲ ಕಡಬಗಳಲ್ಲಿ ಕೆಲವು ಶ್ರೀಮಂತರ ಮನೆಗಳಿಗೆ ಹೋಗಿ, "ಕುಟುಂಬದ ಗುಂಪು ಚಿತ್ರ" ತೆಗೆಯುವ ಕಾರ್ಯ ನಡೆಸಿದರು. ಅದು ಕೂಡ ವಿಫಲವಾಗಲು, ಕೆಮರಾವನ್ನೇ ಮಾರಿ ಕೈತೊಳೆದುಕೊಂಡರು! (ಅದು ಆಗ್ಫಾ-ಫೋಲ್ಡಿಂಗ್‌ಕೆಮರಾ; ಪರಭಾರೆಯಿಂದ ನಾನೇ ಖರೀದಿಸಿದ್ದು, ಅನೇಕ ವರ್ಷಗಳ ಕಾಲ 'ಪುರಾತನ ವಸ್ತುಗಳ ಸಾಲಿ'ನಲ್ಲಿ ಪ್ರದರ್ಶನಕ್ಕೆ ಇಡುವ ಸ್ಥಿತಿಯನ್ನು ತಲುಪಿತ್ತು)

## ವಿಫಲ ನಾಟಕ: ದೇಶಭಕ್ತರು

ಇಷ್ಟರಲ್ಲಿ ರಜಾ ಬಂತು. ಬೇರೆ ಬೇರೆ ಪಟ್ಟಣಗಳಲ್ಲಿ ಹೈಸ್ಕೂಲ್ ವಿದ್ಯಾಭ್ಯಾಸ ಮಾಡುತ್ತಿದ್ದ ನಾಲ್ಕಾರು ಜನ 'ನಾವು' ಊರಿಗೆ ಬಂದೆವು. ಈ 'ಮಾಜೀ' ಮಿಲಿಟರೀವಾಲ, 'ಹಾಜೀ ಕಾಮ್ರೇಡ್ ನಮ್ಮೂರ ಶಾಲೆಯ ಹಳೆ ವಿದ್ಯಾರ್ಥಿ ಬೀಡಿ ಹಚ್ಚಿಕೊಂಡು ಅತ್ಯಾಧುನಿಕ ರಾಜಕಾರಣ, ಸಾಮಾಜಿಕ ಸಮಸ್ಯೆ, ಆರ್ಥಿಕ ಪರಿಸ್ಥಿತಿ, ಸಾಹಿತ್ಯ ಸಂಘರ್ಷಣೆ, ರಾಷ್ಟ್ರೀಯ –ಅಂತರಾಷ್ಟ್ರೀಯ ಸಂಗತಿಗಳನ್ನೆಲ್ಲ ಪಟಪಟನೆ ವಿಶ್ಲೇಷಿಸುತ್ತ, ಟೀಕೆ ಟಿಪ್ಪಣಿ ಸಹಿತ ಅರಳು ಹುರಿದಂತೆ ರಸವತ್ತಾಗಿ ಮಾತನಾಡುವುದನ್ನು ಕೇಳುವುದೆಂದರೆ ನಮಗೆ ತುಂಬಾ ಆಸಕ್ತಿ.... ಈ ವೇಳೆಗಾಗಲೇ ಸೋಶಲಿಸಂ; ಕಮ್ಯುನಿಸಂ; 'ಪ್ರೊಲೆಟೇರಿಯೆಟ್ ಬೂರ್ಶ್ವಾ– ಹೀಗೆ ನಾಲ್ಕಾರು ಶಬ್ದಗಳನಷ್ಟು ನುಂಗಿ ಗಂಟಲು ಕಟ್ಟಿಕೊಂಡಿದ್ದ ನಮಗೆ ದೊಡ್ಡ ನಿಧಿಯೇ ಸಿಕ್ಕದ ಸಂತೋಷವಾಯಿತು!.... ಬಹುಬೇಗನೆ ನಾವೆಲ್ಲ (ಬರಿಗೈ) ಬಂದುಗಳಾಗಿ ಹೊಂದಿಕೊಂಡೆವು! ಪ್ರತಿನಿತ್ಯ ಸಂಜೆ 'ಬೈಠಕ್' ನಡೆಯುವುದು ರೂಢಿಯಾಯಿತು. ಆಕಾಶದ ಕೆಳಗೆ, ಭೂಮಿಯ ಮೇಲಿರುವ ಯಾವುದೇ ವಿಷಯವಾದರೂ ಸರಿಯೇ ಮುಸ್ಸಂಜೆಯ ಚರ್ಚೆಗಳಿಗೆ ಗ್ರಾಸ!

"ಹೇಗಿದ್ದರೂ ಬೇಸಿಗೆಯ ಕಾಲ; ರಜಾದಿನಗಳು. ಒಂದು ನಾಟಕ ಆಡಿದರೆ ಹೇಗೆ?" ಎಂಬ (ದುರ್) ಬುದ್ಧಿ ಯಾರೋ ಒಬ್ಬರ ತಲೆಯಲ್ಲಿ ಮಿಂಚಿದ್ದೇ ಸರಿ "ಎಸ್" ಎಂದು ಎಲ್ಲರೂ ತಲೆ ಅಲ್ಲಾಡಿಸಿ ಒಪ್ಪಿಗೆ ನೀಡಿದೆವು..... ಇದಕ್ಕೆಂದು ವಿಶೇಷ ಹಿನ್ನೆಲೆಯಿತ್ತು–ನಮ್ಮ ಶಾಲೆಯಲ್ಲಿ ತಾತ್ಕಾಲಿಕ ಅಧ್ಯಾಪಕರಾಗಿ ಸ್ವಲ್ಪಕಾಲ ಕೆಲಸ ಮಾಡುತ್ತಿದ್ದ ವಿಟ್ಲದ ಬಾಬು (ಪೈಂಟರ್ ಬಾಬು) ಹಿಂದಿನ ದಸರಾ ರಜೆಯಲ್ಲಿ ನಮ್ಮೆಲ್ಲರನ್ನು ಕಲೆ ಹಾಕಿ ಒಂದು ಪೌರಾಣಿಕ ನಾಟಕ (ಜ್ವಾಲಾ) ಆಡಿಸಲು ಮುಂದಾಗಿದ್ದರು ; ತಕ್ಕಮಟ್ಟಿನ ತರಬೇತಿ ಸಿದ್ಧತೆಗಳೂ ಆಗಿದ್ದವು. "ಡರೆಸ್ ರಿಹರ್ಸಲ್" ಹೊತ್ತಿಗೆ ಊರಿನ ಪ್ರಮುಖರು, ಶಾಲೆಯ ಆಡಳಿತದಾರರು ಒಟ್ಟಾಗಿ "ವಿಟೋ" ಪ್ರಯೋಗಿಸಿ, ನಾಟಕವಾಡದಂತೆ ಮಾಡಿದ್ದರಿಂದ ನಮಗೆಲ್ಲ ಆಶಾಭಂಗವಾಗಿತ್ತು. ಆದರೆ, ವಿಧಿಯಿಲ್ಲದೆ ಬಾಯಿ ಮುಚ್ಚಿಕೊಂಡು ತೆಪ್ಪಗೆ

ಇದ್ದೆವು.... ಈಗ ಪರಿಸ್ಥಿ ಬದಲಾಗಿದೆ. ಹಿಂಥೆ ಶಾಲೆಯ ಕರೆಸ್ಪಾಂಡೆಂಟ್ ಆಗಿದ್ದ , ಪದ್ಯಾಣ ಈಚಣ್ಣಭಟ್ಟರ ಮಗ ಗೋಪಾಲಕೃಷ್ಣ ನಾಟಕದ ಸೂತ್ರಧಾರರಾಗಿರುವುದರಿಂದ ನಾಟಕಕ್ಕೆ ಅಡ್ಡಿ ಮಾಡುವ ಮಾತೇ ಇಲ್ಲ.... ನಮಗೆಲ್ಲ ಸಂತೋಷವೋ ಸಂತೋಷ!.... ಭರದಿಂದ ನಾಟಕದ ತಯಾರಿ ಪ್ರಾರಂಭವಾಯಿತು.

ನಾಲ್ಕೇ ದಿನಗಳಲ್ಲಿ "ದೇಶಭಕ್ತರು" ಎಂಭ ಸಾಮಾಜಿಕ, ಹಾಸ್ಯಭರಿತ, ರಾಜಕೀಯ ಹಿನ್ನೆಲೆಯ ನಾಟಕವನ್ನು ಗೋಪಾಲಕೃಷ್ಣ ಬರೆದುಕೊಟ್ಟರು! ಹತ್ತಾರು ಪಾತ್ರಗಳ. ಒಂದೂವರೆ ಎರಡು ಗಂಟೆ ವ್ಯಾಪ್ತಿಯ ಮೂರಂಕದ ನಾಟಕ ಅದು. ಗೋಮುಖವ್ಯಾಘ್ರ ರಾಜಕಾರಣಿಗಳನ್ನು, ಲಾಭಬಡುಕ ವ್ಯಾಪಾರಿಗಳನ್ನು, ಲಂಚಗುಳಿ ಅಧಿಕಾರಿಗಳನ್ನು, ಮೋಜಿನ ಚೆಲ್ಲಾಟವಾಡುವ ನವಸಿರಿವಂತೆಯರನ್ನು....ನ್ನು....ನ್ನು.... ನಗೆ ಮಾತಿನಲ್ಲಿ ಟೀಕಿಸುತ್ತಾ, ಛೇಡಿಸಿ, ಮನರಂಜನೆ ಮಾಡುವ ನಾಟಕ, "ದೇಶಭಕ್ತರು" ಕಥೆಯಲ್ಲಿ ಘಟನಾವಳಿಗಳ ಅನಿರೀಕ್ಷಿತ ತಿರುವು, ಚುರುಕು ಸಂಭಾಷಣೆ, ನಗೆ ಹೊಗೆಯಾಡುತ್ತಿತ್ತು. ತುಂಬಿದ ಕಾವು ಇತ್ತು. ಸುಭಾಷ್‌ಚಂದ್ರ ಬೋಸ್‌ರ ಐ.ಎನ್.ಎ ಸೇರಿ ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡಿ, ಸೆರೆಸಿಕ್ಕಿ ತಪ್ಪಿಸಿಕೊಂಡು ಬಂದು ಅಜ್ಞಾತವಾಗಿ ಉಳಿದ ತ್ಯಾಗಜೀವಿಯ ಕಥೆಯದು. ಪ್ರತಿದಿನ ಸಂಜೆ ನಾಟಕದ ಪ್ರಕ್ಟೀಸ್ ನಡೆಯತೊಡಗಿತು. 'ಪಾತ್ರಧಾರಿ ತನ್ನ ಡ್ರೆಸ್ಸನ್ನು ತಾನೇ ತರಬೇಕು. ಮೇಕಪ್‌ಗೆ ಒಂದಿಷ್ಟು ವ್ಯಾಸಲೀನ್-ಸಫೇತು ಮಾತ್ರ ಖರೀದಿಸಿ ಬಿಟ್ಟರೆ ಸರಿ ಹೋಗುತ್ತದೆ. ಸ್ಟೇಜ್-ಶಾಲೆಯ ಹೊಸ ಕಟ್ಟಡದ 'ಹಾಲ್'ನ ತುದಿ; ಇತ್ಯಾದಿ ಇತ್ಯಾದಿ....ಪರದೆ-ನಾಲ್ಕು ಬೆಡ್‌ಶೀಟ್‌ಗಳನ್ನು ಪಿನ್ ಹಾಕಿ ಸೇರಿಸಿದರೆ ಆಯಿತು. ಅಂಕಪರದೆ-ಗೋಡೆಯೇ ಮನೆ ಸೀನರಿ; ರಸ್ತೆಯ ಸೀನ್‌ಗಾಗಿ ಒಂದು ಪರದೆ ಬೇಕು-ಬಿದಿರು ತಟ್ಟಿಗೆ ಪೇಪರ್ ಹಚ್ಚಿ ಗೋಡೆಸುಣ್ಣ ಕಾವಿರಂಗು, ಇದ್ದಿಲ ಬಣ್ಣಗಳನ್ನು ಬಳಸಿ, ತಯಾರಿಸಬಹುದು..... " ಹೀಗೆ ಎಲ್ಲ ಅವಶ್ಯಕತೆಗಳನ್ನು ಚಿಟಿಕಿ ಹಾಕುವಷ್ಟರಲ್ಲಿ ಪೂರೈಸುವ ಬಗೆಯನ್ನು ಕಂಡುಕೊಳ್ಳಲಾಯಿತು.

ಈ ಕಾರ್ಯವನ್ನು ದಿ॥ಗಣಪ್ಪಯ್ಯ ಮಾಷ್ಟ್ರು ಕೃಷ್ಣನಾಯ್ಕ ಹಾಗೂ ಸೇಸಪ್ಪಾಚಾರಿಯವರು ನಿರ್ವಹಿಸಿದರು. ಕೊನೆಗೊಂದು ದಿನ ಪುತ್ತೂರಿಗೆ ಹೋಗಿ ಶಿವರಾಮಕಾರಂತರ ಬಾಲವನದ ಹರ್ಷ ಪ್ರಿಂಟರಿಯಲ್ಲಿ (ಪುಕ್ಕಟೆಯಾಗಿ) "ಹ್ಯಾಂಡ್‌ಬಿಲ್" ಛಾಪಿಸಿಕೊಂಡು ಬಂದದ್ದೂ ಆಯಿತು. ಮುಂದಿನ ನಾಲ್ಕಾರು ದಿನ ಚಂದಾಪಟ್ಟಿಯನ್ನು ಕೈಯಲ್ಲಿ ಹಿಡಿದುಕೊಂಡು, ಸಹಾಯಧನ ಕಲೆಕ್ಷನ್‌ಗೆ ನಮ್ಮ ವಾನರಪಡೆ ಮುಂದಾಯಿತು. (ಈಗ ಮಂಗಳೂರಿನಲ್ಲಿ ನ್ಯಾಯವಾದಿಯಾಗಿರುವ ಮರಕ್ಕಿಣ ಶಂಕರ ನಾರಾಯಣಭಟ್ಟರು, ಕಾಸರಗೋಡಿನಲ್ಲಿ ವಿಶ್ರಾಂತ ಜೀವನ ನಡೆಸುತ್ತಿರುವ 'ಹೆಡ್‌ಮಾಸ್ಟರ' ಎ.ನರಸಿಂಹಭಟ್ಟರು, ಪ್ರೊ॥ಶ್ಯಾಮಭಟ್ಟರು, ಸಾರಡ್ಕ ಕೃಷ್ಣಭಟ್ಟರು, ಸರ್ದಾರ್ ಅಂಕಿತದ ಸದಾಶಿವ ಮತ್ತು

ನಾನು ಹೀಗೆ ನಮ್ಮ ನಾಟಕ ಮಂಡಳಿ ಉತ್ಸಾಹದಿಂದ ಹಾರಾಡುತ್ತಿತ್ತು. ಎಲ್ಲದಕ್ಕೂ ಮುಂದಾಳು ಪ.ಗೋಪಾಲಕೃಷ್ಣ (ನಾಟಕದಲ್ಲಿ ಮುಖ್ಯ ಪಾತ್ರವೂ ಅವರದ್ದೇ).

ನಾಟಕ–ಪುಕ್ಕಟೆ ಪ್ರದರ್ಶನ; ಜನ ಬಂದೇ ಬರುತ್ತಾರೆ ಎಂಬ ಮೊಂಡು ಧೈರ್ಯ ನಮ್ಮದು. ನೂಕು ನುಗ್ಗಲು ಇಲ್ಲದಿದ್ದರೂ ಸಾಕಷ್ಟು ಜನ ಸೇರಿದ್ದರು. ಕೆಲಸವಿಲ್ಲದ ಈ 'ಬಚಾಲಿಗಳು' ಎಷ್ಟೇ ಎತ್ತರಕ್ಕೆ ಹಾರಿ ಕೆಳಗೆ ಬಿದ್ದು ಕಾಲು ಮುರಿದುಕೊಳ್ಳುತ್ತಾರೆ ಎಂಬುದನ್ನು ಪ್ರತ್ಯಕ್ಷ ನೋಡುವ ಘನ ಉದ್ದೇಶದಿಂದ ನೋಡಲು ಬಂದವರ ಸಂಖ್ಯೆ ಕಮ್ಮಿಯೇನಲ್ಲ. ಅವರ ನಿರೀಕ್ಷೆ ಸುಳ್ಳಾಗಲಿಲ್ಲ– ನಾಟಕ ಪೂರ್ಣ ವಿಫಲವಾಯಿತು. "ಗ್ರಾಂಡ್ ಫ್ಲಾಪ್" ನಾಟಕದ ಮರುದಿನ ಸಂಜೆ ಕುಳಿತು, ಲೆಕ್ಕಾಚಾರ ತಾಳೆ ನೋಡಿದಾಗ 2–4–0ಉಳಿದಿತ್ತು. (ಗೋಪಾಲಕೃಷ್ಣ ಮುಂದಿನ ಸಾಹಸ ಪ್ರಸಂಗಕ್ಕೆ ಇದೇ ಬಂಡವಾಳ).

## ಮತ್ತೆ ಮುಂಬೈಗೆ ಹಾಜರಿ

ನಾಟಕ ಮುಗಿದು ಕೆಲವೇ ದಿನಗಳಲ್ಲಿ ಮೈಸೂರಿನ ಹಾದಿ ಹಿಡಿದೆವು, ನಾವಿಬ್ಬರೂ. ನಾನು ನಾಲ್ಕೆಂಟು ದಿನ ಮುಂಚಿತವಾಗಿ; ಗೋಪಾಲಕೃಷ್ಣ ಹಿಂದಿನಿಂದ. ವಿಷಯವಿಷ್ಟು–ಇಬ್ಬರ ಕೈಯಲ್ಲೂ ಹಣವಿರಲಿಲ್ಲ; ಊರುಬಿಡುವ ವಿಚಾರ ಊರಲ್ಲಿಯೂ ಹೇಳಿರಲಿಲ್ಲ..... ಮೈಸೂರಿನಲ್ಲಿ ಕೆಲವು ತಿಂಗಳಕಾಲ ಒಂದೆರಡು ಕಡೆ ಸಣ್ಣ ಪುಟ್ಟ ಉದ್ಯೋಗ ಹಿಡಿದು ಕಾಲಹರಣ ಮಾಡಿ, ನಾನು ಮನೆಗೆ ಹಿಂದಿರುಗಿದೆ. ಗೋಪಾಲಕೃಷ್ಣ ಒಂದಿಷ್ಟು ಹಣ ಜೋಡಿಸಿಕೊಂಡು ಬೆಳಗಾಂ ಮಾರ್ಗವಾಗಿ ಮುಂಬೈಗೆ ಹೊರಟರು. ಬೆಳಗಾಂನಿಂದ ನನಗೆ ಬರೆದ ಒಂದು ಪತ್ರದಲ್ಲಿ "ನನಗೆ ಇಲ್ಲಿ ತಿಂಗಳ ಕೊನೆಗೆ ಕೈಗೆ ಬರುವ ಸಂಬಳ ಎಷ್ಟು ಗೊತ್ತೆ?– 300ರೂಪಾಯಿ, ಒಂದು ಸೊನ್ನೆ ಮಾತ್ರ ಕಮ್ಮಿ; ಅಷ್ಟೇ" ಎಂದು ಒಕ್ಕಣೆಸಿದ್ದರು. ( ಆ ಮೂವತ್ತು ರೂಪಾಯಿ ಕೈಗೆ ಬಂದೊಡನೆಯೇ ಬೆಳಗಾವಿ ಬಿಟ್ಟರು. ಮುಂದಿನ ಮಜಲು ಮುಂಬೈ.

ಈ ಬಾರಿ ಮುಂಬೈವಾಸ ಅಷ್ಟೇನೂ ಅಹಿತಕರವಾಗಿರಲಿಲ್ಲವೆಂದು ಕಾಣುತ್ತದೆ. ಅಲ್ಲಿ ಸೇರಿದ್ದು ಥಳಕು ಬೆಳಕಿನ ಸಿನೆಮಾ ಜಗತ್ತನ್ನು. ಆಗತಾನೇ ಪ್ರಸಿದ್ಧಿಗೆ ಬರುತ್ತಿದ್ದ ನಟ–ನಿರ್ದೇಶಕ ನಾಸಿರ್ ಖಾನ್(ನಟಸಾರ್ವಭೌಮ ದಿಲೀಪ್ ಕುಮಾರ್ ಸೋದರ) ಇವರ ಸಹಾಯಕ ವರ್ಗದಲ್ಲಿ ಸೇರಿಕೊಂಡು ಚಲನಚಿತ್ರ ತಯಾರಿಕಾ ಪ್ರಕ್ರಿಯೆಯಲ್ಲಿ ನಿರತರಾದರು. ವಾಸಕ್ಕೆ "ಸೂರ್ಯೋದಯ ಕಾಂಪೌಂಡ್" ಎಂಬ ಬಂಗಲೆಯ ಆವರಣ, ಸಿನೆಮಾ ಸ್ಟಾರ್ ಆಗುವ ಹುಚ್ಚಿನಿಂದ ನಿರ್ದೇಶಕರನ್ನು

ಭೇಟಿಯಾಗಲು ಬಂದು, ಸಹಾಯಕರನ್ನು ಕಾಣುತ್ತಿದ್ದ 'ಬಕ್ರಾಗಳು' ಒದಗಿಸುತ್ತಿದ್ದ ನಾನಾ ಅನುಕೂಲತೆಗಳಿಂದ ದಿನ ಉರುಳುತ್ತಿತ್ತು....ಒಂದೋ–ಎರಡೋ ಸಿನೆಮಾಗಳು "ಸಹಾಯಕ: ಪಿ.ಗೋಪಾಲಕೃಷ್ಣ" ಎಂಬ ಸಾಲಿನಿಂದ ಕೂಡಿದ್ದವು.

ಮುಂದೇನಾಯಿತೋ ತಿಳಿಯದು; ಸ್ವಲ್ಪ ಕಾಲದಲ್ಲೇ ಸಿನಿಮಾಜಗತ್ತಿಗೆ ವಿದಾಯ ಹೇಳಿ, ಮಹಾಶಯ ಗೋಪಾಲಕೃಷ್ಣ ಮರಳಿ ಅಡ್ಯನಡ್ಕಕ್ಕೆ ಹಾಜರಾದರು. ಊರಿಗೆ ಬರುವ ದಾರಿಯಲ್ಲಿ (ರೈಲಿನಲ್ಲಿ) ಬ್ಯಾಗ್ ಬೆಡ್ಡಿಂಗ್ ಸಹಿತ 'ಎಲ್ಲವೂ' ಕಳುವಾಯಿತಂತೆ!, ಯಥಾಪ್ರಕಾರ ಕಿಸೆ ಖಾಲಿಯಾಗೇ ಇತ್ತು.... ಅಡ್ಯನಡ್ಕದಲ್ಲಿ ಈ ಬಾರಿ ರಾಯರು ಅಕ್ಷರ ಶ: ಏಕಾಂಗಿಯಾಗಿಬಿಟ್ಟರು. ಸದಾ ಸುತ್ತ ಮುತ್ತ ಸುಳಿದಾಡುತ್ತಿದ್ದ ಹುಚ್ಚು ಹುಡುಗ ಬಳಗದ ಸದಸ್ಯರೆಲ್ಲ ತಮ್ಮ ತಮ್ಮ ಓದಿಗಾಗಿ ಬೇರೆ ಬೇರೆ ಪಟ್ಟಣಗಳಲ್ಲಿದ್ದರು. (ನಾನು ಮೈಸೂರಿನಲ್ಲಿ ವೈದ್ಯ ವಿದ್ಯಾರ್ಥಿಯಾಗಿದ್ದೆ) ಊರಲ್ಲಿ, ಇತರರು ಯಾರೂ ಅಷ್ಟಾಗಿ ಇವರನ್ನು ಹಚ್ಚಿಕೊಳ್ಳಲಿಲ್ಲ.... ಸ್ವಲ್ಪ ದಿನಗಳಲ್ಲಿ, ಹಿರಿಯರೆಂಬ ಹಿತೈಷಿಗಳು ಕೆಲವರು "ಗೋಪಾಲಕೃಷ್ಣ, ನಿನ್ನ ಓಡಾಟ ಹಾರಾಟಗಳನ್ನೆಲ್ಲಾ ಕೈಬಿಟ್ಟು ಇಲ್ಲೇ ನಿಲ್ಲುವ ಆಲೋಚನೆ ಮಾಡು ..... ಮದುವೆ ಮಾಡಿಕೊಂಡು ಸಂಸಾರಸ್ಥನಾಗು " ಎಂದು ಹೇಳಿದಾಗ, "ಹಾಗೇ ಆಗಲಿ" ಎಂದು ಒಪ್ಪಿಕೊಂಡರು ಗೋಪಾಲಕೃಷ್ಣಭಟ್ಟರು.

## ಕೈ ಹಿಡಿದಳು ಜಾನಕಿ

ಈ ಹೊತ್ತಿಗೆ ಮನೆಯ ಪರಿಸ್ಥಿತಿ ಸ್ವಲ್ಪ ಸುಧಾರಿಸಿತ್ತು. ತಮ್ಮ ರಾಧಾಕೃಷ್ಣ ನಡೆಸುತ್ತಿದ್ದ ಬಟ್ಟೆ ಅಂಗಡಿಯಿಂದ ಸಾಕಷ್ಟು ಸಂಪಾದನೆಯಾಗುತ್ತಿತ್ತು. ಕಿರಿಯ ಸೋದರ ಸರ್ದಾರ್ (ಸದಾಶಿವ) ಬಾಡಿಗೆ ಕಾರು ಓದಿಸುವ ದಂಧೆ ಪ್ರಾರಂಭಿಸಿದ್ದ. ವಾಸಕ್ಕೆ ಮತ್ತ ಬಂಗಲೆ ಮನೆಗೇ ಹಿಂದಿರುಗಿದ್ದರು.....

ಕೆಲವೇ ದಿನಗಳಲ್ಲಿ ಪಂಜಸೀಮೆಯ ಹುಡುಗಿ ಜಾನಕಿಯೊಂದಿಗೆ ವಿವಾಹ ನಡೆದು ಶ್ರೀಮಾನ್ ಗೋಪಾಲಕೃಷ್ಣ

ಭಟ್ಟರು ಗೃಹಸ್ಥಾಶ್ರಮಕ್ಕೆ ಕಾಲಿಟ್ಟರು. ಜಾನಕಿ ಹೆಚ್ಚು ಓದಿದವಳಲ್ಲ, ಆದರೆ ಸಂಸ್ಕಾರವಂತೆ. ಸಂಸಾರ ನಿರ್ವಹಣೆಯಲ್ಲಿ ಜಾಣೆ. ಗಂಡನ ಮನೆ ಸೇರಿದ ಕೆಲವೇ ದಿನಗಳಲ್ಲಿ ಅಚ್ಚುಕಟ್ಟಾಗಿ, ಇರುವ ಸಂಪನ್ಮೂಲದ ಇತಿಮಿತಿಯಲ್ಲಿ ಮಿತವ್ಯಯದಿಂದ ಮನೆವಾರ್ತೆ ನಡೆಸಿ ಎಲ್ಲರ ಪ್ರೀತಿ ವಿಶ್ವಾಸ ಗಳಿಸಿದಳು. ಮೂರಾ ಬಟ್ಟೆಯಾಗಿದ್ದ ಮನೆತನದ ವ್ಯವಸ್ಥೆ ಸುಗಮವಾಗಿ ರೂಪುಗೊಂಡು ಕುಟುಂಬದ ಸದಸ್ಯರೆಲ್ಲ ಸಹಕರಿಸುವಂತೆ ಮಾಡುವುದರಲ್ಲಿ ಜಾನಕಿ ಯಶಸ್ವಿಯಾದಳು.

ಹೊತ್ತು ಹೊತ್ತಿಗೆ ರುಚಿಕರವಾದ ಊಟೋಪಚಾರ; ಮಿತವಾದ ಮಾತುಕತೆ, ಹಿತವಾದ ಒಡನಾಟ–ಹೀಗೆ ಅನುಕೂಲ ದಾಂಪತ್ಯದ ಹೊಂಬಿಸಿಲಲ್ಲಿ ಗೋಪಾಲಕೃಷ ಭಟ್ಟರ ಆರೋಗ್ಯವೂ ಸುಧಾರಿಸಿತು; ಜೀವವೂ ನೆಮ್ಮದಿ ಕಾಣತೊಡಗಿತು..... ಇದುವರೆಗೆ ರೂಢಿಸಿಕೊಂಡಿದ್ದ ಕೊನೆ ಮೊದಲಿಲ್ಲದ ತಿರುಗಾಟ, ಪ್ರಯೋಜನವಿಲ್ಲದ ಹವ್ಯಾಸಗಳು, ಹಸಿಬಿಸಿ ಕಾರ್ಯಕ್ರಮಗಳು, ಅಂತ್ಯವಿಲ್ಲದ ಸೋಲುಗಳು, ಅಸಂಖ್ಯಾತ ಚಿಂತೆಗಳು.....ಳು...ಳು.... ಒಂದೊಂದಾಗಿ ದೂರ ಸರಿಯ ತೊಡಗಿ , ಗೋಪಾಲಕೃಷ ಹೊಸ ಮನುಷ್ಯ ಎಂಬಂತೆ ರೂಪುಗೊಳ್ಳತೊಡಗಿದರು. "ಗ್ರಹಣ ಬಿಟ್ಟ ಚಂದ್ರನ ಹಾಗೆ ಈಗ ಗೋಪಾಲಣ್ಣ ಕಾಣ್ತಾರೆ" ಎಂಬುದಾಗಿ , ಬಾಲ್ಯ ಸ್ನೇಹಿತ ಸೇಸಪ್ಪಾಚಾರಿ ಎಲ್ಲರೆದುರು ಹೇಳುವಷ್ಟು ಮಟ್ಟಿಗೆ ಸುಧಾರಿಸಿದರು ಗೋಪಾಲಕೃಷ. ಇಷ್ಟರಲ್ಲೇ ಅಡ್ಯನಡ್ಕ ಶಾಲೆಯಲ್ಲಿ ಸಹಾಯಕ ಶಿಕ್ಷಕ ಹುದ್ದೆಯೊಂದು ತೆರವಾಗಲು ಶಾಲಾ ಸಂಸ್ಥೆಯ ಮುಖ್ಯಸ್ಥರಾದ ಸಾಯಕೃಷ್ಣಭಟ್ಟರೂ ವಾರಣಾಶಿ ಸುಬ್ರಾಯಭಟ್ಟರೂ ದೊಡ್ಡ ಮನಸ್ಸು ಮಾಡಿ ಗೋಪಾಲಕೃಷಭಟ್ಟರನ್ನು ತಾತ್ಕಾಲಿಕವಾಗಿ ನೇಮಕ ಮಾಡಿದರು. "ಈಗ ಶಿಕ್ಷಕನಾದೆ ನಾನೀಗ ಗೋಪಾಲಕೃಷ ಮಾಷ್ಟ್ರು! ತಿಂಗಳಿಗೆ 25ರೂಪಾಯಿ ಸಂಬಳ" ಎಂದು ಮೈಸೂರಿನಲ್ಲಿದ್ದ ನನಗೆ ಬರೆದ ಪತ್ರದಲ್ಲಿ ತಿಳಿಸಿದ್ದರು.

## ಬೆಳ್ಳಿಯ ಸೆರಗು ಎಂಬ ರಮ್ಯಕೃತಿ

ದಿನಚರಿಯುಲು ಶಾಲೆ–ಮನೆ, ಇಷ್ಟರಮಟ್ಟಿಗೇ ಸೀಮಿತವಾಗಿದ್ದರೂ, ಮನಸ್ಸು ಗರಿಗೆದರಿ ಸೋಮೋಲಂಘನೆ ಮಾಡುತ್ತಿತ್ತು ಮೌನವಾಗಿ, ಶಾಲೆಯ ಪಾಠ ಪ್ರವಚನ ಎಂಥರೆ ವೃತ್ತಿ ಶಿಕ್ಷಣ ಅವರ ಖಾತೆಯಾಗಿದ್ದರೂ ಎಲ್ಲಾ ವಿಧವಾದ ಶಾಲಾ ಚಟುವಟಿಕೆಗಳಲ್ಲಿ ಸೇರಿಕೊಂಡು ವಿದ್ಯಾರ್ಥಿಗಳ ಅಭಿಮಾನದ ಮಾಷ್ಟ್ರಾಗಿದ್ದರೆಂದು ಅಂದು ಅವರ ಶಿಷ್ಯ ಎಸ್.ಬಿ. ಮರಕಿಣಿ ಹೇಳುತ್ತಾರೆ. 'ಶಾಲೆ' ಮುಗಿಸಿ ಸಂಜೆ ಒಂದಿಷ್ಟು 'ವಾಲಿಬಾಲ್' ಆಟವಾಡಿ ಮನೆಗೆ ಬಂದು ಸೇರಿಕೊಂಡರೆ ದಿನಚರಿ ಮುಗಿದಂತೆಯೇ, ಆದರೆ ನಿಜವಾದ ದಿನಚರ್ಯೆ ಪ್ರಾರಂಭವಾಗುತ್ತಿದ್ದುದು ಕತ್ತಲು ಕವಿದ ಮೇಲೆಯೇ. "ಲಾಟೀನು ದೀಪದ ಮುಂದೆ ಕೂತುಕೊಂಡು ಪುಟಗಟ್ಟಲೆ ಕಾಗದ ಕಪ್ಪು ಮಾಡುತ್ತಾನೆ ಅದೇನು ಬರವಣಿಗೆಯೋ ದೇವರಿಗೇ ಗೊತ್ತು" ಎಂಬುದಾಗಿ ರಜೆಯಲ್ಲಿ ಊರಿಗೆ ಬಂದಿದ್ದಾಗ ನನ್ನೊಂದೊಇಗೆ ಕಂಪ್ಲೇಂಟ್ ಮಾಡಿದ್ದರು ಗೋಪಾಲಕೃಷಮಾಷ್ಟ್ರು ತಾಯಿ ಸುಬ್ಬಕ್ಕ. ನಿಜ, ಪ.ಗೋ. ಅದೇನು ಬರೆಯುತ್ತಿದ್ದಾರೆಂಬುದು ಯಾರಿಗೂ ಗೊತ್ತಿರಲಿಲ್ಲ ಮುಗ್ಧೆ ಮಡದಿ ಜಾನಕಿಯನ್ನು ಪ್ರೀತಿಯಿಂದ ಬಗಲಲ್ಲಿ ಕುಳ್ಳಿರಿಸಿಕೊಂಡು ಮಾಷ್ಟ್ರು ಪದ್ಯ ಬರೆದರು; ಹರಟೆ ಗೀಚಿದರು; ಕವಿತೆ ರಚಿಸಿದರು....ರು.... ಕೊನೆಗೊಂಡು ಕಾದಂಬರಿಯನ್ನೂ ಸೃಷ್ಟಿಸಿದರು; "ಬೆಳ್ಳಿ ಸೆರಗು", ಮಲೆನಾಡು, ಕೊಡಗಿನ ಕಾಫಿತೋಟ, ಮೈಸೂರಿನ ವೃಂದಾವನ, ಗಳಸುತ್ತು ಮುತ್ತಲಲ್ಲಿ ನಡೆದ ಕೂಲಿಕಾರ– ಮಾಲಿಕರ ಸಂಘರ್ಷವೇ

ತಿರುಳು. ಸ್ಟ್ರೈಕು, ರೋಮಾನ್ಸ್, ವಿವಾಹ ವಿಚ್ಛೇದನಗಳನ್ನೂ ಅಂತರ್ಗತ ಮಾಡಿಕೊಂಡ ರಮ್ಯ ಕಾದಂಬರಿ ಬೆಳ್ಳಿಯ ಸೆರಗು. ಮಡದಿ ಜಾನಕಿಯ ಸೆರಗು ಹಿಡಿದು ಸ್ವಚ್ಛ ಜೀವನದ ಬಯಲಲ್ಲಿ ಅಂಬೆಗಾಲಿಡತೊಡಗಿದ್ದ (ಬಾಲ) ಗೋಪಾಲಕೃಷ ಕಾದಂಬರಿಯನ್ನು ಬರೆದು ಮುಗಿಸಿ, "ಜಾಪ್ರಿ" ಎಂದು ಸಹಿಮಾಡಿದರು. (ಮುಂದೆ ಕೆಲಗಾಲ "ಜಾಪ್ರಿ" ಎಂಬುದೇ ಅವರ ಕಾವ್ಯ ನಾಮವಾಗಿತ್ತು. ಜಾನಕಿಯು ಗರ್ಭವತಿಯಾದಳು.....ಪ.ಗೋ. ಜೀವನದಲ್ಲಿ ಅತ್ಯಂತ ಸಂತೋಷದ ದಿನಗಳವು ಎನ್ನುತ್ತಿದ್ದರು ಅವರ ಕುಂಞ ತಮ್ಮ ಸದಾಶಿ.

## ಮತ್ತೆ ದಾರ ಹರಿದ ಗಾಳಿಪಟ

ಬೇಸಿಗೆ ರಜೆಯಲ್ಲಿ ನಾನು ಊರಿಗೆ ಬಂದೆ. ಮರುದಿನ ಗೋಪಾಲಕೃಷ ಮಾಷ್ಟ್ರನ್ನು ನೋಡಲು ಹೋದೆ. ಮಹಾರಾಯ ಮುಖದಲ್ಲಿ ಚಿಂತೆಯ ಗೆರೆಗಳು ಮೂಡಿದ್ದವು! "ಏನು ಸಮಾಚಾರ"? ಎಂದು ವಿಚಾರಿಸಿದೆ. ತುಸು ಹೊತ್ತು ಸುಮ್ಮನಿದ್ದು, "ಜಾನಕಿಗೆ....ದಿನ ತುಂಬಿದೆ..... ತಾಯಿ ಮನೆಗೆ ಹೋಗಿ ತಿಂಗಳ ಮೇಲಾಯ್ತು-ಸುದ್ದಿಯೇ ಇಲ್ಲ. ಅದೇ ಯೋಚನೆಯಾಗಿದೆ" ಎಂಧು ಮೆಲ್ಲಗೆ ಹೇಳಿದ್ದು ಕೇಳಿಸಿತು.

"ಹಾಗೇನೂ ವಿಶೇಷ ಇರಲಿಕ್ಕಿಲ್ಲ ಅಲ್ಲಿ ಬೆಳ್ಳಾರೆಯಲ್ಲಿ ಡಾಕ್ಟರ್ ಪಿ.ಎಂ ಭಟ್ಟರು ಇದ್ದಾರೆ ಸಮರ್ಥ ಡಾಕ್ಟರು, ಎಂಥಾ ಕಷ್ಟದ (ಹೆರಿಗೆ) ಕೇಶನ್ನೂ ನಿಭಾಯಿಸುತ್ತಾರೆ.... ಚಿಂತೆಗೆ ಕಾರಣವೇ ಇಲ್ಲ..... ಇನ್ನೂ ನಾಲ್ಕು ದಿನ ನೋಡಿ! ಸುದ್ದಿ ಬಂದೇ ಬರುತ್ತೆ" ಎಂಬ ಭರವಸೆಯ ಎರಡು ಮಾತಾಡಿ ಮರಳಿದೆ..... ಯಾಕೋ.... ಏನೋ-ಎಲ್ಲೋ-ಏನೋ ಸ್ವಲ್ಪ ದಾರಿ ತಪ್ಪಿದೆ ಎಂದು ಮನಸ್ಸಿಗೆ ಅನಿಸಿತು ಎಂದುಕೊಂಡರೂ ಅಷ್ಟಕ್ಕೇ ಆ ವಿಷಯವನ್ನು ನಾನು ಕೈಬಿಟ್ಟೆ.

ಮರುದಿನ ಮುಂಜಾನೆಯೇ ಸುದ್ಧಿ ಬಂತು; ಜಾನಕಿಗೆ "ಸೀರಿಯಸ್" ತಕ್ಷಣ ಹೊರಟು ಬರಬೇಕು. "ನೀನೂ ಬಾ" ಅಂತ ಹೇಳಿಕಳಿಸಿದಾಗ, ಮರುಮಾತಿಲ್ಲದೆ ಕಾರು ಹತ್ತಿ ಕುಳಿತೆ. 10ಗಂಟೆ ಸುಮಾರಿಗೆ ಊರು ತಲುಪಿದಾಗ ತೀರಾ ವಿಳಂಬವಾಗಿತ್ತು.... ಜಾನಕಿ ಹೆರಿಗೆ ನೋವಿನಲ್ಲೇ ತೀರಿಕೊಂಡಿದ್ದಳು . ತಲೆಯ ಮೇಲೆ ಕೈಹೊತ್ತು ದಿಙ್ಮೂಡರಾಗಿ ಗೋಪಾಲಕೃಷ ಜಗಲಿಯಲ್ಲಿ ಕುಳಿತುಬಿಟ್ಟರು. ಮೌನರೋಧನದಲ್ಲಿ ಎಷ್ಟೋ ಹೊತ್ತು ಕಳೆಯಿತು. "ಮುಂದಿನ ಕರ್ಮಗಳನ್ನು ಮಾಡಿ ಮುಗಿಸಬೇಕಾಗಿದ್ದುದರಿಂದ ಗೋಪಾಲಕೃಷಭಟ್ಟರನ್ನು ಅಲ್ಲೇ ಇರಗೊಟ್ಟು ಕಾರು ಹಿಂದಿರುಗಿತು. ಸಾಂತ್ವನದ ಮಾತು ಹೇಳುವುದಕ್ಕೆ ಕೂ ನನ್ನ ನಾಲಿಗೆ ಹೊರಳಲಿಲ್ಲ.

ಎರಡನೇ ದಿನ ಪರೀಕ್ಷೆಯ ಫಲಿತಾಂಶ ತಿಳಿಸುವ ತಾರು' ಮೈಸೂರಿನಿಂದ ಬಂತು; "ಎರಡು ವಿಷಯಗಳಲ್ಲಿ ಪಾಸಾಗಿದೆ" ಅಂತ ಅಂದರೆ ಇನ್ನುಳಿದ 3ವಿಷಯಗಳಲ್ಲಿ ಪಾಸಾಗಿಲ್ಲ!!" ಅಂತ ಅಂದರೆ ಇನ್ನುಳಿದ 3ವಿಷಯಗಳಲ್ಲಿ ಮತ್ತೆ ಪರೀಕ್ಷೆಗೆ ಕಟ್ಟಬೇಕು ಎಂಬುದು ಅದರ ಅಂತರಾರ್ಥ.... ಮನೆಯಿಂದ ಒಂದಿಷ್ಟು ಹಣ ಪಡೆದುಕೊಂಡು ಮೈಸೂರಿಗೆ ಹೊರಟುಬಿಟ್ಟೆ.

## ಮೈಸೂರಲ್ಲಿ ತಾತ್ಕಾಲಿಕ ಮುಕ್ಕಾಂ

ಮೈಸೂರಿಗೆ ತಲುಪಿದ ಕೂಡಲೆ, ನನ್ನ ಚಟುವಟಿಕೆಗಳನ್ನು ಬದಿಗಿಟ್ಟು ಪುಸ್ತಕ ಕೈಗೆತ್ತಿಕೊಂಡೆ; ಮನಸ್ಸಿಟ್ಟು ಓದತೊಡಗಿದೆ. ಈ ಸಪ್ಲಿಮೆಂಟರೀ ಪರೀಕ್ಷೆಯಲ್ಲಿ ಪಾಸಾಗಲೇ ಬೇಕೆಂದು ಹಟತೊಟ್ಟೆ.... ನಾಲ್ಕಾರು ವಾರಗಳ ನಂತರ ಊರಿನಿಂದ ಬಂದ ಪತ್ರದಲ್ಲಿ ಕಿರಿಯ ಸ್ನೇಹಿತರೊಬ್ಬರು ಹೀಗೆ ಬರೆದಿದ್ದರು. "(ಗೋಪಾಲಕೃಷ್ಣ ಮಾಷ್ಟ್ರು) ಶಾಲೆಗೆ ಸರಿಯಾಗಿ ಹೋಗುತ್ತಿಲ್ಲ; ಪಾಠವನ್ನೂ ಸರಿಯಾಗಿ ಮಾಡುತ್ತಿಲ್ಲ... ಕೆಲಸದಿಂದ ತೆಗೆದು ಹಾಕಿಬಿಟ್ಟಿದ್ದಾರೆ. ಯಾರ ಜೊತೆಗೂ ಮಾತಿಲ್ಲ-ಕತೆಯಿಲ್ಲ ಮನಸ್ಸು ನೆಮ್ಮದಿ ಕಳೆದು ಕೊಂಡ ಹಾಗಿದೆ," ಪರಿಸ್ಥಿತಿಯ ಗಂಭೀರತೆಯನ್ನು ನಾನು ಅರ್ಥಮಾಡಿಕೊಂಡೆ. "ಸ್ವಲ್ಪ ಬದಲಾವಣೆ ಬೇಕೆನ್ನಿಸಿದರೆ, ಮೈಸೂರಿಗೆ ಬಂದು , ಇರಬಹುದು" ಎಂದು ಕಾರ್ಡಿನಲ್ಲಿ ಎರಡು ಗೆರೆ ಬರೆದೆ. ನಾನು ಮೈಸೂರಿನ ನಾರಾಯಣಶಾಸ್ತ್ರಿ ರಸ್ತೆಯ ಮನೆಯೊಂದರ ಮಹಡಿ ಕೋಣೆಯಲ್ಲಿ ಇನ್ನೊಬ್ಬ ವೈದ್ಯ ವಿದ್ಯಾರ್ಥಿ ಬಂಧು ಕೆ.ಆರ್ ಗೋಪಾಲ್ (ದಿ॥ ಕೀಲಾರು ಗೋಪಾಲಕೃಷ್ಣಯ್ಯ) ಜೊತೆಗೆ ವಾಸಿಸುತ್ತಿದ್ದೆ. ಎಂಟನೇ ದಿನ ಸಂಜೆ ಕಾಲೇಜ್ ಲೈಬ್ರರಿಯಲ್ಲಿ ಸಾಕಷ್ಟು ವೇಳೆ ಕಳೆದು ರೂಮಿಗೆ ಬಂದು ನೋಡುತ್ತೇನೆ. ಕೈಯಲ್ಲೊಂದು ಟ್ರಂಕ್, ಹೆಗಲ ಬ್ಯಾಗ್ ಸಹಿತ ಗೋಪಾಲಕೃಷ್ಣ ಬಾಗಿಲ ಬಳಿ ನಿಂತಿದ್ದರು. ಎಷ್ಟು ಹೊತ್ತಿನಿಂದ ಅಲ್ಲಿ ನಿಂತಿದ್ದರೋ ತಿಳಿಯದು! ಅವರನ್ನು ನೋಡಿ ನನಗೆ ಸಂಕಟವಾಯಿತು. ಚೈತನ್ಯದ ಚಿಲುಮೆಯಾಗಿದ್ದ ಪಿ.ಜಿ ಈಗ ಇಲ್ಲಿ ದೈನ್ಯತೆಯೇ ಮೈತಳೆದಂತೆ; ನೂರಾರು ಸೋಲಿಗೂ ಸೊಪ್ಪು ಹಾಕದೆ, ಹೊಸ ಸಾಹಸಕ್ಕೆ ಮರುಗಳಿಗೆಯಲ್ಲೇ ಧುಮಿಕುತ್ತಿದ್ದ ಕಾರ್ಯಶೀಲ ಗೋಪಾಲಕೃಷ್ಣ ಮೈ-ಮನಸ್ಸುಗಳ ಬಳಲಿಕೆಯಿಂದ ಬಹಳ ಕಂಗೆಟ್ಟು ದೀರ್ಘ ಪ್ರಯಾಣ ಮಾಡಿದ ಆಯಾಸದಿಂದ ಇನ್ನಷ್ಟು ಬಳಲಿ, ಬಂದೀಗ ಬಾಗಿಲಲ್ಲಿ ಕಾದಿದ್ದಾರೆ! "ಒಳಗೆ ಬಾ" ಎಂದೆ.

## 'ಕರಕ್ಕರೆ'ಯ ಕರ್ಕಶವಾದ್ಯ

ಅಂದು ರಾತ್ರೆ ನನಗೆ ಆಸ್ಪತ್ರೆಯ "ವಾರ್ಡ್‌ಡ್ಯೂಟಿ" ಇದ್ದುದರಿಂದ ಬೇಗನೇ ಹೊರಡಬೇಕಾಯಿತು. ಹೆಚ್ಚಿನ ಮಾತುಕತೆ ಏನೂ ನಡೆಸದೆ, ಅತಿಥಿಯನ್ನು

ಅವರ ಪಾಡಿಗೇ ಇರಲು ಬಿಟ್ಟು ನಾನು ಆಸ್ಪತ್ರೆಗೆ ಹೋದೆ.... ಹಗಲು ಕಾಲೇಜ್, ಕೆಲವು ದಿನ ರಾತ್ರಿಯ ಡ್ಯೂಟಿ, ಜೊತೆಗೆ ಸಪ್ಲಿಮೆಂಟರೀ ಪರೀಕ್ಷೆಗೆ ಓದುವುದು- ಹೀಗೆ ನನ್ನದೇ ಕಿರುವರ್ತುಲದಲ್ಲಿ ಸುತ್ತು ಬರುತ್ತಿದ್ದ ನನಗೆ, ಗೋಪಾಲಕೃಷ್ಣ ಏನು ಮಾಡುತ್ತಾರೆ, ಸಮಯ ಹೇಗೆ ಕಳೆಯುತ್ತಿದ್ದಾರೆ ಎಂಬುದನ್ನು ಗಮನಿಸುವುದಕ್ಕೂ ಸಾಧ್ಯವಾಗಲಿಲ್ಲ. ಅವರ ಊಟ-ತಿಂಡಿ ವ್ಯವಸ್ಥೆಯ ಬಗ್ಗೆ ಕೂಡ ವಿಚಾರಿಸುವುದಕ್ಕಾಗಲಿಲ್ಲ.

"ಬಹಳ ಹೊತ್ತು ಪುಸ್ತಕ ಹಿಡಿದು ಕೂತಿರ್ತಾರೆ, ಕೆಲವು ಸಲ ಹೊರಗೆ ಕಟಕಟೆಯಲ್ಲಿ ನಿಂತುಕೊಂಡು 'ಮೌತ್ ಆರ್ಗನ್ ಬಾರಿಸ್ತಾರೆ" ಎಂದು ತಿಳಿಯಿತು. ಕೆಲವು ದಿನ ಹೀಗೇ ಸಾಗಿತು. ಕ್ರಮೇಣ, ನಾವು ಓದುತ್ತಿದ್ದಾಗಲೂ 'ಮೌತ್ ಆರ್ಗನ್' ಬಾರಿಸುವುದಕ್ಕೆ ಪ್ರಾರಂಭವಾಯಿತು. ನಾಲ್ಕಾರು ದಿನ ಕಳೆಯುವಷ್ಟರಲ್ಲಿ ಹೊತ್ತು ಗೊತ್ತು ಯಾವದೂ ಇಲ್ಲದೆ, ಯಾವಾಗಲೆಂದರೆ ಆವಾಗ, ತಾರಕಸ್ವರದಲ್ಲಿ ಕಿವಿಗಡಚಿಕ್ಕುವಷ್ಟು ಕರ್ಕಶವಾಗಿ ಏರು ಸ್ವರದಲ್ಲಿ ಊದುತ್ತಿದ್ದರು. ಅವರ ಮನೋಸ್ಥಿತಿಯನ್ನು ಅರಿತಿದ್ದ ನಾವು-ನಾನು ಮತ್ತು ಕೆ.ಆರ್. ಗೋಪಾಲ್ ಇಬ್ಬರೂ ತುಟಿಪಿಟಕ್ಕೆನ್ನದೆ ಸಹಿಸಿಕೊಂಡೆವು..... ಆದರೆ ಪರೀಕ್ಷೆಯೊಂದು ಹತ್ತಿರ ಬರುತ್ತಿತ್ತಲ್ಲ? ಈ ಗಾನ ಮಂಜರಿಯ ದೆಸೆಯಿಂದ ಓದುವುದು ಸಾಧ್ಯವೇ ಇಲ್ಲ ಎಂಬ ಪರಿಸ್ಥಿತಿ ತಲುಪಿದಾಗ ವಿಧಿಯಿಲ್ಲದೆ- ಪರಿಹಾರೋಪಾಯ ಹುಡುಕಲೇ ಬೇಕಾಯಿತು!

## ದಸರೆಯ (ದಶಾವತಾರ) ಬಯಲಾಟ

ಇದೇ ಹೊತ್ತಿನಲ್ಲಿ ಮೈಸೂರಿನ ದಸರಾವಸ್ತು ಪ್ರದರ್ಶನದ ಸಿದ್ಧತೆ ಭರದಿಂದ ಪ್ರಾರಂಭವಾಗಿತ್ತು. ಸಾಂಸ್ಕೃತಿಕ ಕಾರ್ಯಕ್ರಮಗಳು ಅದರ ಅತ್ಯ ಪ್ರಿಯವಾದ ಅಂಶಗಳಲ್ಲೊಂದು. ಶ್ರೀ.ನ.ಭದ್ರಯ್ಯನವರು ಆ ವಿಭಾಗದ ಪ್ರಮುಖ್ಯರಾಗಿದ್ದರು. ಹಿಂದಿನ ವರ್ಷ 'ದಸರೆ'ಯಲ್ಲಿ ದಕ್ಷಿಣ ಕನ್ನಡದ ಜನಪದ ಗೀತೆಗಳ (ವೃಂದಗಾಯನ) ಎರಡು ಕರ್ಯಕ್ರಮಗಳನ್ನು ನಡೆಸಿಕೊಡುವ ಅವಕಾಶವನ್ನು ನನಗೆ ಒದಗಿಸಿ ಕೊಟ್ಟಿದ್ದರು. ತುಳು ಪದಗಳು ಮುಖ್ಯವಾಗಿ "ಓಬೇಲೆ ಸೋಬಾನೆ" ತಕ್ಕಷ್ಟು ಜನಪ್ರಿಯತೆ ಗಳಿಸಿತ್ತು..... ಪ್ರಸಕ್ತ ಸಾಲಿನಲ್ಲೂ ಭದ್ರಯ್ಯನವರೇ ಮುಖ್ಯಸ್ಥರಾಗಿದ್ದರು..... ಅವರ ಬಳಿಗೆ ಓಡಿದೆ. "ಸಾರ್, ಈ ವರ್ಷ ಏನಾದರೂ ಕಾರ್ಯಕ್ರಮ" ಎಂದು ಕೇಳುತ್ತಿದ್ದ ಹಾಗೇ 'ಯಕ್ಷಗಾನ ಬಯಲಾಟ' ಎಂದು ಭದ್ರಯ್ಯ "ಒಂದು ಗಂಟೆ ಕಾರ್ಯಕ್ರಮ; ಒಂದು ನೂರು ರೂಪಯಿ ಸಂಭಾವನೆ" ಎಂಬ ಕರಾರನ್ನು ಪ.ಗೋಪಾಲಕೃಷ್ಣರನ್ನು ಸಂದರ್ಶಿಸಿದ ತರುವಾಯ ಭಕ್ತಯ್ಯ ನೀಡಿದರು.

ಅಂದೇ ಸಂಜೆ ಗೋಪಾಲಕೃಷ್ಣ ಮಂಗಳೂರಿಗೆ ಅಲ್ಲ ಮಂಜೇಶ್ವರಕ್ಕೆ ಹೊರಟು ಬಿಟ್ಟರು. ಆಗ ಧರ್ಮಸ್ಥಳದ ಸುಪ್ರಸಿದ್ಧ ಯಕ್ಷಗಾನ (ಬಯಲಾಟ) ಮೇಳಕಾಡೂರು

ರಾಮಭಟ್ಟರು ಮತ್ತು ಕುರಿಯ ವಿಠಲ ಶಾಸ್ತ್ರಿಗಳ ಹಿರಿತನದಲ್ಲಿ ಇತ್ತು. ಕುರಿಯ ವಿಠಲಶಾಸ್ತ್ರಿಗಳು ಸುಪ್ರಸಿದ್ಧ ಯಕ್ಷಗಾನ ಕಲಾವಿದರಯ(ವೇಷಧಾರಿ); ಅಷ್ಟೇ ಅಲ್ಲದೆ ಪ.ಗೋಪಾಲಕೃಷ್ಣ ಅವರ ರಕ್ತಸಂಬಂಧಿ.... ಹೀಗಾಗಿ ನಾಲ್ಕಾರು ದಿನಗಳಲ್ಲಿ ಎಲ್ಲ ವ್ಯವಸ್ಥೆ ಪೂರೈಸಿಕೊಂಡು, "ಧರ್ಮಸ್ಥಳ ಶ್ರೀ ಮಂಜುನಾಥೇಶ್ವರ ಕೃಪಾಪೋಷಿತ ದಶಾವತಾರ ಮೇಳ"ದ ಹೆಸರಿನಲ್ಲಿ ಕೆಲವು ವೇಷಧಾರಿಗಳನ್ನೂ, ಹಿಮ್ಮೇಳ, ವೇಷಭೂಷಣಾದಿ ಅಗತ್ಯ ಪರಿಕರಗಳನ್ನು ಜೋಡಿಸಿಕೊಂಡು ಸಮಯಕ್ಕೆ ಸರಿಯಾಗಿ ಮೈಸೂರಿಗೆ ಬಂದು ತಲುಪುವಂತೆ ವ್ಯವಸ್ಥೆ ಮಾಡಿಕೊಂಡು ಹಿಂದಿರುಗಿದರು.

"ಆಟದ ಮೇಳ" ಮೇಳದಲ್ಲಿ 3–4ಮೇಳದಿಂದ ಆಯ್ದ ಗುಂಪು ಮೈಸೂರಿಗೆ ತಲುಪಿದಾಗ, "ಧರ್ಮಸ್ಥಳ" ಶ್ರೀ ಮಂಜುನಾಥೇಶ್ವರ ದಶಾವತಾರ ಮೇಳ ಎಂಬ ಹೆಸರು ಅದ್ಭುತ ಪರಿಣಾಮ ಬೀರಿತು. ಕಲಾತಂಡದವರು ಬಂದ ಲಟಾರಿ (ಹರಕುಮುರುಕು) 'ಮಿನಿವ್ಯಾನ್'ನಲ್ಲಿ ಬರೆದಿದ್ದ 'ಧರ್ಮಸ್ಥಳ ಮೇಳ' ಎಂಬ ಹೆಸರನ್ನು ನೋಡಿದವರೇ ದಾಸಪ್ರಕಾಶ ಹೋಟೆಲಿನ ಮ್ಯಾನೇಜರ್ ಶ್ರೀ ತಂತ್ರಿಯವರು ಸುಖಗ್ರಾಸ ಭೋಜನವನ್ನು ಉಚಿತವಾಗಿ ಒದಗಿಸಿದರು.... ಇನ್ಯಾರೋ ವಸತಿಯನ್ನು ಏರ್ಪಾಡು ಮಾಡಿದರು....... ಎಲ್ಲವನ್ನೂ ಸುಸೂತ್ರವಾಗಿ ಹೊಂದಿಸಿಕೊಂಡಿದ್ದರು ಗೋಪಾಲಕೃಷ್ಣ.

ದಸರಾ ವಸ್ತುಪ್ರದರ್ಶನದಲ್ಲಿ ಏರ್ಪಡಿಸಿದ ಬಯಲಾಟ ಯಶಸ್ವಿಯಾಯಿತು. ನೂರಾರು ಪ್ರೇಕ್ಷಕರು ನೋಡಿ ಸಂತೋಷಪಟ್ಟರಲ್ಲದೆ ಅನೇಕರು ಪತ್ರ ಬರೆದು ಮೆಚ್ಚುಗೆ ಸೂಚಿಸಿದರು. 'ಮಂಗಳೂರು ಗಣೇಶ್ ಬೀಡಿ'ಯಂತಹ ಕೆಲವು (ದಕ್ಷಿಣ ಕನ್ನಡ ಮೂಲದ ಮೈಸೂರು ನಿವಾಸಿ) ಉದ್ಯೋಗ ಪತಿಗಳು ಗೌರವಧನ ಸಮರ್ಪಿಸಿದರು. 'ಅಯ್ಯನಾರ್' ಕಲಾಮಂಟಪದಲ್ಲಿ ಒಂದು 'ತಾಳಮದ್ದಳೆ' ಕೂಟವೂ ವ್ಯವಸ್ಥೆಯಾಗಿತ್ತು. (ಪ್ರೊ॥ ಗೋಪಲಕೃಷ್ಣ ಅಡಿಗರು ಕರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು).... ಒಟ್ಟಿನಲ್ಲಿ ಕಾರ್ಯಕ್ರಮ ಚೆನ್ನಾಗಿ ನಡೆಯಿತು; ಯಶಸ್ಸಿಗೆ ಬಹುಮಟ್ಟಿನ ಕಾರಣಕರ್ತೃ ಗೋಪಾಲಕೃಷ್ಣ ಭಟ್ಟರೆಂಬುದರಲ್ಲಿ ಸಂದೇಹವೇ ಇಲ್ಲ. (ಅಷ್ಟೇ ಅಲ್ಲದೆ ಮೈಸೂರಿನಲ್ಲಿ ಮೊದಲ ಬಾರಿಗೆ ನಡೆದ ಆ ದಕ್ಷಿಣ ಕನ್ನಡದ ಯಕ್ಷಗಾನ ಬಯಲಾಟ ಪ್ರದರ್ಶನದ ಸೂತ್ರಧಾರಿಯಾಗಿದ್ದರು. ಪ. ಗೋಪಾಲಕೃಷ್ಣ ಎಂಬುದೊಂದು ಐತಿಹಾಸಿಕ ದಾಖಲೆ.

## ದಕ್ಷ ಯಜ್ಞಕ್ಕೆ ಮಾರು ಹೋದ ಕ್ರುಶ್ಚೇವ್

ದಸರೆಯ ಬಯಲಾಟವನ್ನು ನೋಡಿ ಸಂತೋಷ ಪಟ್ಟ ಅಭಿಮಾನಿಯೊಬ್ಬರು (ಛಾಯಾಗ್ರಾಹಕ ಶ್ರೀ ಟಿ.ಎಸ್ ಸತ್ಯನ್ ಇನ್ನೊಂದು ಮಹಾನ್ ಪ್ರದರ್ಶನಕ್ಕೆ ಸಿದ್ಧರಾಗುವಂತೆ ಗೋಪಾಲಕೃಷ್ಣ ಭಟ್ಟರನ್ನು ಪ್ರೋತ್ಸಾಹಿಸಿದರು. ಆಗಿನ ರಷ್ಯಾ

ಪ್ರಧಾನಿ ಬಲಾನಿನ್ ಮತ್ತು ಸರ್ವ ಸಮರ್ಥ ಕಮ್ಯೂನಿಸ್ಟ್ ಪಕ್ಷದ ಮಹಾಕಾರ್ಯದರ್ಶಿ ಕ್ರುಶ್ಚೇವ್ ಇಷ್ಟರಲ್ಲೇ ಭಾರತಕ್ಕೆ ಭೇಟಿ ನೀಡುವವರಿದ್ದು, ಅವರು ಬೆಂಗಳೂರನ್ನು ಸಂದರ್ಶಿಸುವ ಸಂದರ್ಭದಲ್ಲಿ ಲಾಲ್‌ಬಾಗ್ ಗಾಜಿನ ಮಂಟಪದಲ್ಲಿ ಸಾಂಸ್ಕೃತಿ ಕಾರ್ಯಕ್ರಮವನ್ನು ವೀಕ್ಷಿಸುವ ವ್ಯವಸ್ಥೆಯ ಪೂರ್ವ ಸಿದ್ಧತೆಗಳು ಭರದಿಂದ ನಡೆಯುತ್ತಿದ್ದವು. ದಸರಾದಲ್ಲಿ ಯಕ್ಷಗಾನ ಬಯಲಾಟ ಯಶಸ್ವಿಯಾದ ಹಿನ್ನೆಲೆಯಲ್ಲಿ ಗೋಪಾಲಕೃಷ್ಣ ಕಾರ್ಯಕ್ರಮ ವ್ಯವಸ್ಥಾಪಕರನ್ನು ಸಂಪರ್ಕಿಸಿದಾಗ 'ಬಯಲಾಟ' ಪ್ರದರ್ಶನವನ್ನು ಕಾರ್ಯಕ್ರಮ ಪಟ್ಟಿಯಲ್ಲಿ ಸೇರಿಸಿಕೊಂಡರು. ಆದರೆ ಒಂದು ಷರತ್ತು ಹಾಕಿದ್ದರು. 'ಕೇವಲ 10 ನಿಮಿಷಗಳ ಕಲಾವಕಾಶದಲ್ಲಿ 'ಬಯಲಾಟ' ಮಾಡಬೇಕು.

ಸರಿ ಗೋಪಾಲಕೃಷ್ಣ ಮತ್ತೊಮ್ಮೆ ಚುರುಕಿನಿಂದ ಓಡಾಡಿದರು. ಧರ್ಮಸ್ಥಳ ಮೇಳದಿಂದ ಆಯ್ದಗುಂಪು–ನಾಲ್ಕಾರು ಕಲಾವಿದರು, ಹಿಮ್ಮೇಳ, ವೇಷಭೂಷಣ ಇತ್ಯಾದಿಗಳೆಲ್ಲವನ್ನೂ ಜಮಾಯಿಸಿದರು. ಭಾಗವತರು 3ಹಾಡುಗಳ ಎರಡೆರಡು ತುಣುಕುಗಳನ್ನು ಹಾಡಿದರೆ, ಗಿರಿಜೆಯ ಶೋಕಾರ್ತ ಅಭಿನಯ, ದಕ್ಷನ ದರ್ಪದ ನಟನೆ, 'ತಂದೆಯೇ ಏನಪ್ಪಣೆ?' ಎಂದು ಕೇಳಿದ ವೀರಭದ್ರನಿಗೆ ಬದ್ಧಭ್ರುಕುಟಿ ಕ್ರುದ್ಧ ಪರಶಿವನು "ಮಗನೇ ಕೊಲ್ಲು"... (ವೀರಭದ್ರನೇ ದಕ್ಷನನ್ನು ಕೊಲ್ಲು") ಎಂದು ಆಜ್ಞಾಪಿಸಿದಾಗ ದೊಂದಿ (ದೀವಟಿಗೆ)ಯ ಬೆಂಕಿಗೆ 'ರಾಳ'ದ ಹುಡಿ ಹಾರಿಸುತ್ತ, ಚಂಡೆ ಮದ್ದಳೆ, ಚಕ್ರತಾಳದ ತಾರಕಧ್ವನಿಗೆ ಸರಿಹೊಂದುವ ವೀರಭದ್ರನ ಅಟ್ಟಹಾಸ ಭರಿತ ಅಬ್ಬರದ ಕುಣಿತ, ಕಣ್ಣು ಕುಕ್ಕುವ ವೇಷಭೂಷಣಗಳಿಂದ ರಂಗಸ್ಥಳ ಪ್ರತ್ಯಕ್ಷ ಪುರಾಣ ಯುಗವನ್ನೇ ಕಣ್ಣ ಮುಂದೆ ನಿಲ್ಲಿಸಿ, ಪ್ರೇಕ್ಷಕರ ದೀರ್ಘ ಕರತಾಡನ ಸಹಿತವಾದ ಮೆಚ್ಚುಗೆ ಗಳಿಸಿತು. (ಯಕ್ಷಗಾನದ ಧಾಟಿಯಲ್ಲಿ ಹೇಳುವುದಾದರೆ, 'ಜಯಜಯ, ಜಯಜಯ' ಎನ್ನಿಸಿತು) ಅತಿಥಿ ಮಹಾಶಯರು ಎಷ್ಟು ಸಂತೋಷಪಟ್ಟುಕೊಂಡರೆಂದರೆ, ಗುಂಪಿನೊಂದಿಗೆ, ವೀರಭದ್ರನ ಕೈ ಹಿಡಿದುಕೊಂಡು ಕ್ರುಶ್ಚೇವ್ ಫೋಟೋ ತೆಗೆಸಿಕೊಂಡಿದ್ದು ಅಲ್ಲದೆ, ಕೆಲವು ತಿಂಗಳ ತರುವಾಯ ತಮ್ಮ ದೇಶಕ್ಕೆ ಬಂದು ಪ್ರದರ್ಶನ ನೀಡಲು ಆಹ್ವಾನ ನೀಡಿದರೆಂದು ಕೂಡ ಹೇಳುತ್ತಾರೆ. (ಯಾವುದೋ ಕಾರಣದಿಂದ ರಷ್ಯಾ ಯಾತ್ರೆ ಫಲಿಸಲಿಲ್ಲ). ಕಲಾಸಕ್ತರ ವಿಶೇಷ ಕೋರಿಕೆಯ ಮೇರೆಗೆ ಮರುದಿನ ಸಂಜೆ ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಗೃಹದಲ್ಲಿ ಕವಿ ಸಂಕಯ್ಯ ಭಾಗವತರ ಪ್ರಸಿದ್ಧ ಪ್ರಸಂಗದ ಪ್ರದರ್ಶನ ನಡೆಯಿತು. ರಾತ್ರೆ ಮಲ್ಲೇಶ್ವರದ 'ಕೆನರಾ ಹಾಲ್'ನಲ್ಲಿ 'ಕರ್ಣಾವಸಾನ' ಅತ್ಯಂತ ಮನ:ಸ್ಪರ್ಶಿ ಪ್ರದರ್ಶಿತವಾಯಿತು.... ಹೀಗೆ ಗೋಪಾಲಕೃಷ್ಣ ದಕ್ಷಿಣ ಕನ್ನಡದ ಯಕ್ಷಗಾನ ಬಯಲಾಟ ಪ್ರದರ್ಶನವನ್ನು ಮೈಸೂರು–ಬೆಂಗಳೂರುಗಳಲ್ಲಿ ಮೊದಲ ಬಾರಿಗೆ ಏರ್ಪಡಿಸಿದ ಕೀರ್ತಿಗೆ ಬಾಧ್ಯರು. (ಪ್ರಾಸಂಗಿಕವಾಗಿ ಹೇಳುವುದಾದರೆ, ಇವರ ತಂದೆ ಪದ್ಯಾಣ ಈಚಣ್ಣ ಭಟ್ಟರು ತಮ್ಮೂರು ಅಡ್ಯನಡ್ಕದಲ್ಲಿ ಪ್ರತಿವರ್ಷವೂ ಒಂದೆರಡು

ಉಚಿತ ಬಯಲಾಟ ಪ್ರದರ್ಶನ ಏರ್ಪಡಿಸುತ್ತಿದ್ದರು. ಈ ಪದ್ಧತಿ ಅನೇಕ ವರ್ಷ ರೂಢಿಯಲ್ಲಿತ್ತು)…. ಈ ಬೆಂಗಳೂರು 'ಬಯಲಾಟವನ್ನು ಆಕಾಶವಾಣಿ (ಮೈಸೂರಿನಿಂದ ಅದೇ ತಾನೇ ಬೆಂಗಳೂರಿಗೆ ಸ್ಥಳಾಂತರ ಹೊಂದಿ ಬಂದು ಸೇರಿದ್ದ) ಧ್ವನಿಮುದ್ರಿಸಿಕೊಂಡು ಪ್ರಸಾರ ಮಾಡಿತು. ಅನಂತರ, ಯಕ್ಷಗಾನ "ತಾಳಮದ್ದಳೆ" ಕಾರ್ಯಕ್ರಮಗಳನ್ನು ಪ್ರಸ್ತುತಪಡಿಸಲು 'ಆಕಾಶವಾಣಿ' ಗೋಪಾಲಕೃಷ್ಣರನ್ನು ಆಹ್ವಾನಿಸಿತು. ಈ ಎಲ್ಲ ಕಾರ್ಯಕ್ರಮಗಳೂ ಚೆನ್ನಾಗಿ ನಡೆದವು; ಯಶಸ್ವಿಯಾದವು…. ಇಷ್ಟು ಹೊತ್ತಿಗೆ ನನ್ನ 'ಹೌಸ್ ಸರ್ಜನ್' ತರಬೇತಿಯ ಅವಧಿ ಪ್ರಾರಂಭವಾದುದರಿಂದ ನಾನೂ ಬೆಂಗಳೂರು ಸೇರಿಕೊಂಡು, ಈ ಎಲ್ಲ ಸಂದರ್ಭಗಳಲ್ಲಿ ಗೋಪಾಲಕೃಷ್ಣರ ಜೊತೆಗೇ ಇದ್ದೆ. ರಾಜ್ಯೋತ್ಸವ ಮೊದಲಾದ ಅನೇಕ ಬೇರೆ ಬೇರೆ ದಿನಾಚರಣೆಗಳಲ್ಲಿ ಕೂಡ ಯಕ್ಷಗಾನ ಬಯಲಾಟವನ್ನು ಪ್ರದರ್ಶಿಸಲು ಗೋಪಾಲಕೃಷ್ಣ ಆಹ್ವಾನಿತರಾದರು. ದೆಹಲಿಗೂ ಹೋಗಿ ಬಂದರು. ಬೆಂಗಳೂರಿನ ಪತ್ರಿಕೆಗಳು ಸ್ವಲ್ಪಮಟ್ಟಿಗೆ ಪ್ರಚಾರವನ್ನೂ ನೀಡಿದವು. "ಚಿತ್ರಗುಪ್ತ"ದ ಭರದ್ವಾಜರು ಸಚಿತ್ರ ಲೇಖಾಂಕವನ್ನೇ ಪ್ರಕಟಿಸಿದರು. (ಈಗ ವಿಯೆನ್ನಾದಲ್ಲಿರುವ ಹಿರಿಯ ಪತ್ರಿಕೋದ್ಯಮಿ ಕುಳವರ್ಮ ಬಾಲಕೃಷ್ಣ ಲೇಖನ ಬರೆದಿದ್ದರು,)

## ಪತ್ರಿಕೋದ್ಯಮದ ಓನಾಮ

ಹೀಗೆ ಬೆಂಗಳೂರಲ್ಲಿ ಗೆಲುವನ್ನು ಕಾಣುತ್ತ ಬರತೊಡಗಿದುದರಿಂದಲೋ ಏನೋ, ಗೋಪಾಲಕೃಷ್ಣ ಬೆಂಗಳೂರಲ್ಲಿ ನೆಲೆಸುವುದಕ್ಕೆ ಮುಂದಾದರು. ಅರಳೆ ಪೇಟೆಯ ಅಂಚಿನಲ್ಲಿ ಹಳೇ ತಾಲೂಕು ಕಛೇರಿ ರಸ್ತೆ( ಓ.ಟಿ.ಸಿ ರೋಡ್)ಯಲ್ಲೊಂದು 3 ಮಹಡಿಯ ಕಟ್ಟಡದ ಕಿರುಕೋಣೆಯೊಂದರಲ್ಲಿ ನಾವು ವಾಸಿಸತೊಡಗಿದೆವು. ನನಗೆ, ಆಸ್ಪತ್ರೆ ಡ್ಯೂಟಿ ಇತ್ತು; ಸಂಜೆ ಹೊತ್ತು ಒಂದು 'ಖಾಸಗಿ ಚಿಕಿತ್ಸಾಲಯದಲ್ಲಿ ನಾಲ್ಕುಗಂಟೆಗಳ ಕಾಲ 'ಪಾರ್ಟ್ ಟೈಂ' ಕೆಲಸ ಮಾಡುತ್ತಿದ್ದೆ. ಮನೆಯಿಂದ ಕಳಿಸುತ್ತಿದ್ದ ಅಷ್ಟಿಷ್ಟು ಹಣ, ಡ್ಯೂಟಿ ಸ್ಟೈಫಂಡ್, ಖಾಸಗಿಯಾಗಿ ಸಂಪಾದಿಸುತ್ತಿದ್ದ ಕೆಲವು ರೂಪಾಯಿಗಳು ಇಷ್ಟೆಲ್ಲಾ ಒಟ್ಟು ಸೇರಿದರೂ ತಿಂಗಳ ಕೊನೆ ಕಾಣಲು ಕಷ್ಟವಾಗುತ್ತಿತ್ತು. ಆಕಾಶವಾಣಿ ಇತ್ಯಾದಿ ಮೂಲಗಳಿಂದ ಗೋಪಾಲಕೃಷ್ಣ ಒಂದಿಷ್ಟು ಹಣ ಸಂಪಾದಿಸುತ್ತಿದ್ದರೂ ಪರಿಸ್ಥಿತಿಯನ್ನು ನಿಭಾಯಿಸಿಕೊಳ್ಳುವುದು ಕಷ್ಟವೇ ಆಗುತ್ತಿತ್ತು..

ಒಂದು ದಿನ ಕುಮಾರ ವೆಂಕಣ್ಣ ಭೇಟಿಯಾದರು. ಅವರು ಮಂಗಳೂರು ಕಡೆಯವರು-ಕೆಲವು ವರ್ಷಗಳಿಂದ ಬೆಂಗಳೂರನ್ನೇ ಗಟ್ಟಿಯಾಗಿ ಹಿಡಿದುಕೊಂಡಿದ್ದರು. "ಬರೆದೇ ಬದುಕುವ" ನಿರ್ಧಾರ ಮಾಡಿ ಅದನ್ನು ಕಾರ್ಯಗತ

ಮಾಡಿದ ಸಾಹಸೀ ಸಾಹಿತಿ; ಪತ್ರಿಕೋದ್ಯಮಿ, ಗೋಪಾಲಕೃಷ್ಣ ವೆಂಕಣ್ಣನವರ ಪರಿಚಯದಿಂದ, "ವಿಶ್ವ ಕರ್ನಾಟಕ" ಸೇರಿದರು. ಅದು ತಿ.ತಾ ಶರ್ಮರು ಸ್ಥಾಪಿಸಿದ್ದ ಪತ್ರಿಕೆ; ವೆಂಕಣ್ಣ ಹಿರಿಯ ಉಪ ಸಂಪಾದಕರು ಗೋಪಾಲಕೃಷ್ಣ (ಅಪ್ರೆಂಟಿಸ್) ಆಗಿ ವಿಶ್ವ ಕರ್ನಾಟಕ ಸೇರಿದಾಗ ವೆಂಕಣ್ಣ ಪತ್ರಿಕೋದ್ಯಮದ ಓನಾಮ ಹೇಳಿಕೊಟ್ಟರು.

ವಿಶ್ವಕರ್ನಾಟಕ ತನ್ನ ಗತವೈಭವದ ಛಾಯೆಯಲ್ಲೇ ದಿನದೂಡುತ್ತಿದ್ದ ಕಾಲವದು. ಬಹಳ ಕಷ್ಟದಿಂದ ನಿತ್ಯ ಸಂಚಿಕೆ ಹೊರಬರುತ್ತಿತ್ತು. ಇಲ್ಲಿ ಆರ್ಥಿಕವಾಗಿ ಗೋಪಾಲಕೃಷ್ಣ ಬಳಲಿದರೂ ಪತ್ರಿಕಾ ವ್ಯವಸಾಯದ ಧರ್ಮ-ಮರ್ಮಗಳನ್ನು ಚೆನ್ನಾಗಿ ತಿಳಿದುಕೊಂಡರು; ಅದರ ಶಕ್ತಿ-ದೌರ್ಬಲ್ಯಗಳನ್ನು ಕಣ್ಣಾರೆ ಕಂಡರು-ಅನುಭವಿಸಿದರು. ತಿಂಗಳು ಗಟ್ಟಲೆ ಸಂಬಳ ದೊರಕುವುದು ವಿಳಂಬವಾಗುತ್ತಿತ್ತು. ಅದೂ ಮಾಹೆಯಾನ ಮೂವತ್ತು ರೂಪಾಯಿ!... '25ರೂಪಾಯಿಯ ಮೇಷ್ಟರುಗಿರಿಯಿಂದ 5ರೂಪಾಯಿ ಬಡ್ತಿ ಇಲ್ಲಿ; ಸಂತೋಷವಲ್ಲವೇ ಎಂಬುದಾಗಿ ನಕ್ಕು ತೇಲಿಸಿ ಮಾತಾಡಲು ಅಭ್ಯಾಸ ಮಾಡಿಕೊಂಡರು.

## ಪತ್ತೇದಾರಿ ಕಾದಂಬರಿಕಾರ

ಈ ಅವಧಿಯಲ್ಲಿ ಬೇರೆ ಬೇರೆ ಪತ್ರಿಕೆಗಳಲ್ಲಿ ಬರೆಯಲಾರಂಭಿಸಿದರು. (ಜನಪ್ರಗತಿ, ನವಚೇತನ ಇತ್ಯಾದ) ದಕ್ಷಿಣ ಕನ್ನಡದ ಅನೇಕ ಪ್ರಕಾರದ "ಜಾನಪದ" ನೃತ್ಯ-ಹಾಡುಗಳ ಬಗ್ಗೆ ಕಿರು ಪ್ರಬಂಧಗಳನ್ನು ರಚಿಸಿದರು. 'ಬಂತು, ಬಾಲ್ಯೆ ಸಾಂತು' 'ನಾರಿಕೇಳದ ಮಹಿಮೆ', ಮೊದಲಾದ ಲೇಖನಗಳು, ದಕ್ಷಿಣ ಕನ್ನಡದ -ಮುಖ್ಯವಾಗಿ ತುಳು ಜಾನಪದ ಲೋಕ ದ ಬಗ್ಗೆ ಬೆಂಗಳೂರಿನ ಪತ್ರಿಕೆಗಳಲ್ಲಿ ಪ್ರಕಟವಾದ ಮೊದಲ ಬರೆಹಗಳು ಎನ್ನಬಹುದು-ಈ ರೀತಿಯಾಗಿ ಒಂದಿಷ್ಟು ಪುಡಿ ಕಾಸು ಸಂಪಾದನೆಯಾಗುತ್ತಿತ್ತು. ಇಷ್ಟೇ ಅಲ್ಲದೆ ಭಯಂಕರವಾದ-ಆದರೆ 'ಸೈಂಟಿಫಿಕ್ ಟಚ್' ಇದ್ದ ರಸವತ್ತಾದ ಎರಡು ಪತ್ತೇದಾರಿ ಕಾದಂಬರಿಗಳನ್ನು ಬರೆದು, ಸರ್ವಸ್ವಾಮ್ಯವನ್ನು ಬಳೇಪೇಟೆಯ ಪತ್ತೇದಾರಿ ಪ್ರಕಾಶಕರೊಬ್ಬರಿಗೆ ಮಾರಿ, ಪುಸ್ತಕವೊಂದಕ್ಕೆ 75ರೂಪಾಯಿ ಗಳಿಸಿದರು.

## ಈಗ ಅವರ ಕಾವ್ಯ ನಾಮ "ಪ.ಗೋ."

## ಕಾಸರಗೋಡು ಕರ್ನಾಟಕ ಪ್ರಾಂತೀಕರಣ ಚಳುವಳಿ:

ಕಾಸರಗೋಡು ಕರ್ನಾಟಕದಿಂದ ಕತ್ತರಿಸಿ, ಕೇರಳಕ್ಕೆ ಕಸಿ ಮಾಡುವ ಘಟನೆ ಆಗಲೇ ನಡೆದು ಹೋಗಿತ್ತು. (ಕಾಸರಗೋಡು ತಾಲೂಕಲ್ಲೇ ಪ.ಗೋ. ಮನೆ ಇದ್ದದ್ದು ಕಾಸರಗೋಡಿನಲ್ಲಿ ಕನ್ನಡಕ್ಕೆ, ಜನಸಮುದಾಯಕ್ಕೆ ರಾಜಕಾರಣಿಗಳಿಂದಾದ

ದೊಡ್ಡ ಅನ್ಯಾಯ; ಅಪಮಾನ. ಇದನ್ನು ವಿರೋಧಿಸಿ, ತಾಲ್ಲೂಕಿನಾದ್ಯಂತ ಚಳುವಳಿ ಪ್ರಾರಂಭವಾಯಿತು; ಪ್ರದರ್ಶನ, ಪ್ರತಿಭಟನೆ, ಸಭೆ-ಸಮ್ಮೇಳನ, ಜಾಥಾ, ಜೈಲ್‌ಭರೋ(ಎಲ್ಲ ಅಹಿಂಸಾತ್ಮಕ) ಹೋರಾಟ ವಿಧಾನಗಳಿಂದ ಜನಸಾಮಾನ್ಯರು ತಾವೇ ಸಿಡಿದೆದ್ದು ನಿಂತು ನ್ಯಾಯಕ್ಕಾಗಿ ದನಿ ಎತ್ತಿದರು; ಒಕ್ಕೊರಲಿನಿಂದ ಅನ್ಯಾಯುವನ್ನು ವಿರೋಧಿಸಿದರು. ಬೆಂಗಳೂರಿನಲ್ಲಿರುವ ಕಾಸರಗೋಡು ಅಭಿಮಾನಿಗಳು ಕೆಲವರು, ಈ ಬಗ್ಗೆ ಬೆಂಗಳೂರಿನಲ್ಲಿ ಪ್ರಚಾರ ನೀಡಿ, ಜನಾಭಿಪ್ರಾಯ ರೂಢಿಸಿ ಸರ್ಕಾರದ ಮೇಲೆ ನೈತಿಕ ಪ್ರಭಾವ ಬೀರಲು ಸಾರ್ವಜನಿಕಾಭಿಪ್ರಾಯ ಮೂಡಿಸಲು ಒಂದು ಕಾಸರಗೋಡು ಕರ್ನಾಟಕ ಪ್ರಾಂತೀಕರಣ ಪ್ರಚಾರ ಸಮಿತಿಯನ್ನು ಸ್ಥಾಪಿಸಿದಾಗ, ಗೋಪಾಲಕೃಷ್ಣ ರ ಕೊಠಡಿಯೇ ಅದರ ಕಾರ್ಯಾಲಯವಾಯಿತು. ಅವರು ತನ್ನ ಪತ್ರಿಕಾ ಧರ್ಮಕ್ಕೆ ಹಾಗೂ ಕರ್ಮಕ್ಕೆ ಚ್ಯುತಿ ಬಾರದಂತೆ ದುಡಿಯುವ ಸಕ್ರಯ ಕಾರ್ಯಕರ್ತರೂ ಆದರು. ಪತ್ರಿಕೆಗಳಿಗೆ ಮಾಹಿತಿ ನೀಡುವುದು, ಪ್ರಮುಖ ವ್ಯಕ್ತಿಗಳನ್ನು ಭೇಟಿ ಮಾಡಿ, ಕಾಸರಗೋಡು ಕರ್ನಾಟಕ ಪರವಾದ ಹೇಳಿಕೆಗಳನ್ನು ಕೊಡಿಸುವುದು....ದು... ಮೊದಲಾದ ಕೆಲಸಗಳನ್ನು ಮುತುವರ್ಜಿಯಿಂದ ಮಾಡಿದರು. ಆದರೆ ಬೆಂಗಳೂರಿನ ಮುಖಂಡರಿಂದಾಗಲಿ, ರಾಜಕಾರಣಿಗಳಿಂದಾಗಲಿ, ಕನ್ನಡ ಕನ್ನಡ ಎಂದು ಬೊಬ್ಬಿಡುವ ಸಾಹಿತ್ಯೋತ್ತಮರಿಂದಾಗಲಿ ಹೇಳಿಕೊಳ್ಳುವಂತಹ ಪ್ರೋತ್ಸಾಹ ದೊರಕಲಿಲ್ಲ. (ಪ್ರಜಾವಾಣಿ-ವಿಶ್ವಕರ್ನಾಟಕಗಳು ಮಾತ್ರ ಪ್ರತಿದಿನ ಕಾಸರಗೋಡು ಕರ್ನಾಟಕ ಪ್ರಾಂತೀಕರಣದ ಸಂಬಂಧವಾದ ವಾರ್ತೆಗಳನ್ನು ಪ್ರಕಟಿಸುತ್ತಿದ್ದವು).... ಕ್ರಮೇಣ ಕಾಸರಗೋಡಿನಲ್ಲಿ ಚಳುವಳಿ ತಣ್ಣಗಾದಾಗ 'ಬೆಂಗಳೂರಿನ ಪ್ರಚಾರ ಸಮಿತಿ ತಾನಾಗಿ ಅಸ್ತಂಗತವಾಯಿತು. ನನ್ನ 'ಹೌಸ್ ಸರ್ಜನ್' ಎಂಬ ತರಬೇತಿ ಅವಧಿ ಮುಗಿಯಲು ನಾನು ಡಾಕ್ಟರ್ ಆಗಿ ಅಧ್ಯನಡಕ್ಕೆ ಹಿಂದಿರುಗಿದೆ. ಪ.ಗೋ. ಬೆಂಗಳೂರಲ್ಲಿ ಪತ್ರಿಕೋದ್ಯಮಕ್ಕೆ ಅಂಟಿಕೊಂಡು ಉಳಿದರು. ಕ್ಷಿಪ್ರಗತಿಯಲ್ಲಿ ತಾಯಿನಾಡು, ಕಾಂಗ್ರೆಸ್ ಸಂದೇಶ್, ಸಂಯುಕ್ತ ಕರ್ನಾಟಕ ಮೊದಲಾದ ಪತ್ರಿಕಾ ಕಾರ್ಯಾಲಯಗಳನ್ನು ಹೊಕ್ಕು ಹೊರಟರು. ಈ ಅವಧಿಯಲ್ಲೇ ಬೆಂಗಳೂರಿನ ಹುಡುಗಿ 'ಸಾವಿತ್ರಿ'ಯನ್ನು ಮದುವೆ ಮಾಡಿಕೊಂಡು ಪ.ಗೋ. ಮತ್ತೆ ಗೃಹಸ್ಥಾಶ್ರಮಕ್ಕೆ ಹಿಂದಿರುಗಿ ಕೌಟುಂಬಿಕ ಜೀವನವನ್ನು ಪ್ರಾರಂಭಿಸಿದರು.

**ಪತ್ರಕರ್ತ-ಅಂಕಣಕಾರ-ಲೇಖಕ**

ಬೆಂಗಳೂರು ವಾಸ್ತವ್ಯದ ಅವಧಿಯಲ್ಲಿ ಹಲವು ಪತ್ರಿಕೆಗಳಲ್ಲಿ ದುಡಿದು ಪತ್ರಿಕೋದ್ಯಮದ ಒಳಹೊರಗನ್ನೆಲ್ಲ ಅರೆದು ಕುಡಿದರು. ವೃತ್ತಿನಿಷ್ಠೆ, ಸತ್ಯದೃಷ್ಟಿ, ವಿಮರ್ಶಾಶಕ್ತಿ ಹಾಗೂ ವ್ಯಕ್ತಿಗತ ನಿರ್ಮೋಹತ್ವಗಳನ್ನು ಮೈಗೂಡಿಸಿಕಕೊಂಡು ವೃತ್ತಿ ಬಾಂಧವರ ಸ್ನೇಹ ಬಾಂಧವ್ಯವನ್ನು, ಗೌರವಾಭಿಮಾನಗಳನ್ನು

ಸಂಪಾದಿಸಿಕೊಂಡರು. ಇವರ ಲೇಖನಿಯ ಮೊನಚು ಶೈಲಿ, ಪಾರದರ್ಶಕ ಚಿತ್ರಣಗಳಿಂದ ತನ್ನದೇ ಆದ ವಿಶಿಷ್ಟ ಸ್ವರೂಪ ಪಡೆದುಕೊಂಡಿತು; ಜನಪ್ರಿಯವೂ ಆಯಿತು. 'ಸುಧಾ' ಪತ್ರಿಕೆಯ ಸಂಪಾದಕರು ಆಸಕ್ತಿಯಿಂದ ಬರೆಸಿದ ಯಕ್ಷಗಾನ ಬಯಲಾಟ ಪ್ರಪಂಚದ ಹಿರಿಯ ಕಲಾವಿದ ಶ್ರೀ ಕುರ್ಯವಿಠಲಶಾಸ್ತ್ರಿಗಳ "ಬಣ್ಣದ ಬದುಕು" ಲೇಖಾಂಕ ಯಕ್ಷಗಾನ ಕಲಾವಿದರ ಬಗೆಗೆ ಬರೆದ ನುಡಿ ಚಿತ್ರಗಳಲ್ಲಿ ಇಂದಿಗೂ ಮೇಲ್ಪಂಕ್ತಿಯಲ್ಲಿ ನಿಲ್ಲುವ ಕೃತಿಯಾಗಿದೆ.

**ಬೆಂಗಳೂರಿನಲ್ಲಿ ಬಿಡಾರ ಹೂಡಿ**

ತನ್ನ ವೃತ್ತಿಯಲ್ಲಿ ಶ್ರದ್ಧೆಯಿಂದ ದುಡಿಯುವ ಪ.ಗೋ. ಪತ್ರಿಕೋದ್ಯಮದ ಒಳಹೊರಗನ್ನೆಲ್ಲ ಚೆನ್ನಾಗಿ ಅರಿತುಕೊಂಡರು. ಸಿನೆಮಾ ಪುಟದಿಂದ ತೊಡಗಿ ಸಂಪಾದಕೀಯದವರೆಗೆ; ವಿಶೇಷ ಲೇಖನದಿಂದ ಹಿಡಿದು ಸಂದರ್ಶನ ವರದಿ ರಾಜಕೀಯ ಸ್ಥಿತಿ ಗತಿಯ ವಿಮರ್ಶೆ, ಆರ್ಥಿಕ ಚಿಂತನೆ, ಸಾಹಿತ್ಯದ ಇಣುಕುನೋಟ, ಪುಸ್ತಕ ವಿಮರ್ಶೆ–ಹೀಗೆ ಎಲ್ಲಾ ವಿಭಾಗಗಳಲ್ಲೂ ಕೈಯಾಡಿಸಿದರು. ಅಲ್ಪಕಾಲಾವಧಿಯಲ್ಲೇ ಬೆಂಗಳೂರಿನ ಹಿರಿಕಿರಿಯ (ಪತ್ರಿಕಾ ಪ್ರಪಂಚದ) ಬಂಧುಗಳಲ್ಲಿ ಗೆಳೆತನಸಂಪಾದಿಸಿದರು ವಿಶ್ವಾಸ ಗಳಿಸಿಕೊಂಡರು. ಇದಕ್ಕೊಂದು ನಿದರ್ಶನ ಕೊಡಬಹುದು: ಮೈಸೂರು ವಿಧಾನ ಮಂಡಲದ ಮುಂದೆ ಆಯುರ್ವೇದ ವೈದ್ಯರಿಗೆ ಸಂಬಂಧಿಸಿದ ಮಸೂದೆಯೊಂದು ಮಂಡಿಸಲ್ಪಟ್ಟು ಕಾನೂನಾಗಿ ಮಾರ್ಪಡಲು ತಯಾರಾಗಿತ್ತು. ಅದರಲ್ಲಿ ಅನೇಕ ಲೋಪದೋಷಗಳು ಇದ್ದು, ಅಂಗೀಕಾರಕ್ಕೆ ಮೊದಲು ಸೂಕ್ತ ತಿದ್ದುಪಡಿಗಳು ಆಗಬೇಕಾದದ್ದು ಅನಿವಾರ್ಯವಾಗಿದ್ದುದರಿಂದ ನನ್ನನ್ನು ಈ ಕಾರ್ಯಕ್ಕೆ ಮುಂದೂಡಿದ್ದರು. ನಾಲ್ಕಾರು ವಾರಗಳ ಕಾಲ ಬೆಂಗಳೂರಿನಲ್ಲಿ ಓಡಾಡಿ, ಶಾಸಕರನ್ನು ಅಷ್ಟಿಷ್ಟು ಒಪ್ಪಿಸಿದ್ದರೂ, ಪತ್ರಿಕಾ ವಲಯವನ್ನು ಪ್ರವೇಶಿಸುವುದು, ಸಂಪಾದಕೀಯ ವರ್ಗದವರನ್ನು ಈ ಕುರಿತು ಬರೆಯುವಂತೆ ಪ್ರೇರೇಪಿಸುವುದು ಸಾಧ್ಯವಾಗಿರಲಿಲ್ಲ. ಅಸೆಂಬ್ಲಿ ಸೇರಲು ನಾಲ್ಕೇ ದಿನ ಇನ್ನುಳಿದಿದೆ ಎನ್ನುವಾಗ ಪ.ಗೋ. ಅವರಿಗೆ ಪರಿಸ್ಥಿತಿಯನ್ನು ತಿಳಿಸಿ, ಸಹಕರಿಸಲು ವಿನಂತಿಸಿದೆ.... ಮುಂದೆ, ಎರಡೇ ದಿನಗಳಲ್ಲಿ, ಬೆಂಗಳೂರಿನ ಕೊಂಪೆಯೊಂದರಲ್ಲಿದ್ದ ಕಿರು ಧನ್ವಂತರೀ ಮಂದಿರದಲ್ಲಿ ವಾರ್ತಾಗೋಷ್ಠಿಯನ್ನು ಕರೆದಾಗ, ಬೆಂಗಳೂರಿನ ಎಲ್ಲ ಪತ್ರಿಕಾ ಪ್ರತಿನಿಧಿಗಳು, ಪಿ.ಟಿ.ಐ, ರಾಯ್‌ಟರ್ ಮೊದಲಾದ ವಾರ್ತಾ ಸಂಸ್ಥೆಗಳ ಹಿರಿಯ ಸುದ್ದಿಗಾರರೂ ಅಲ್ಲಿ ಹಾಜರಾಗುವಂತೆ ಪ.ಗೋ. ವ್ಯವಸ್ಥೆ ಮಾಡಿದರು. ಪತ್ರಿಕಾ ಪ್ರಪಂಚ ನೀಡಿದ ನೆರವಿನಿಂದ, ಪ್ರಚಾರ ದೊರಕಿಸಿಕೊಂಡುದರಿಂದ ನಾವು ಅಪೇಕ್ಷಿಸಿದ ಎಲ್ಲ ತಿದ್ದುಪಡಿಗಳನ್ನು ವಿಧಾನ ಮಂಡಲ ಒಪ್ಪಿಕೊಂಡಿತು.

ಈ ನಡುವೆ ಗೋಪಾಲಕೃಷ್ಣ ಬರೆದಿದ್ದ 'ಬೆಳ್ಳಿಯ ಸೆರಗು' ಕಾದಂಬರಿ ಪ್ರಕಟವಾಯಿತು. ಕಲ್ಮಡ್ಕದ ಸಂಗಮ ಕಲಾ ಸಾಹಿತ್ಯ ಪ್ರಕಾಶನದವರು ಇದನ್ನು ಹೊರತಂದವರು. ಈ ಪ್ರಕಟಣಾಲಯದ ನೇತೃತ್ವ, ಮೈಸೂರಿನಲ್ಲಿ ಉಚ್ಚಶಿಕ್ಷಣ ಪಡೆಯುತ್ತಿದ್ದ ಕಲ್ಮಡ್ಕದ ಕೆ. ರಾಮಚಂದ್ರ ಪ್ರಕಾಶಕರಿಗೂ, ಲೇಖಕರಿಗೂ ನಾನು ಸಂಪರ್ಕ ತಂತುವಾಗಿದ್ದೆ. ಅಷ್ಟೇ ಅಲ್ಲದೆ, ಪುಸ್ತಕದ ಪ್ರೂಫ್ ತಿದ್ದುವುದೇ ಮೊದಲಾದ ಕೆಲಸಗಳನ್ನು ಸಹ ನಾನೇ ಮಾಡಿ ಪೂರೈಸಿದ್ದೆ. ಮುದ್ರಣವಾದದ್ದು ಮೈಸೂರಿನ ಒಂದು ಪ್ರೆಸ್‌ನಲ್ಲಿ ಇದರ ಜೊತೆಗೇ ಪ.ಗೋ. ಬರೆದಿದ್ದ (ಅಡ್ಯನಡ್ಕದಲ್ಲಿ ರಂಗಭೂಮಿಯ ಮೇಲೆ ಪ್ರದರ್ಶಿವಾಗಿದ್ದ 'ದೇಶಭಕ್ತರು' ನಾಟಕವನ್ನು ಕೂಡ ಪ್ರಕಟಿಸುವುದಕ್ಕೆ ಪ್ರಯತ್ನಿಸಿದರೂ ಅದು ಸಾಧ್ಯವಾಗಲಿಲ್ಲ. ಯಾರೋ ಒಬ್ಬರು ಪ್ರಸಿದ್ಧ ಪ್ರಕಾಶಕರಿಗೆ ಪ್ರಕಟಿಸುತ್ತೇನೆ ಎಂದು ಮೂಪ್ರತಿಯನ್ನು ಕೊಂಡೊಯ್ದವರಿಂದ ಮುಂದಿನ ಸುದ್ದಿ ಇದುವರೆಗೂ ಇಲ್ಲ! ಇದ್ದ ಒಂದೇ ಒಂದು ಹಸ್ತಪ್ರತಿ ಕೂಡ ಈ ರೀತಿ ಕಣ್ಮರೆಯಾಯಿತು..... ಈ ಕೃತಿಯನ್ನು 'ಜಾಪ್ರಿ' ಎಂಬ ಕಾವ್ಯನಾಮದಿಂಧ ಪ.ಗೋಪಾಲಕೃಷ್ಣ ಬರೆದಿದ್ದರು.

### ಮಂಗಳೂರಿನಿಂದ ಬಂತು ಮಹತ್ವದ ಕರೆ

ಮಂಗಳೂರು ಕನ್ನಡ ಪತ್ರಿಕಾ ಪ್ರಪಂಚದ ತವರು. ದೊಡ್ಡ ಸಂಖ್ಯೆಯಲ್ಲಿ ವಾರಪತ್ರಿಕೆಗಳು, ಮಾಸಪತ್ರಿಕೆಗಳು ಅಲ್ಲಿಂದ ಪ್ರಕಟವಾಗುತ್ತಿದ್ದವು. ಆದರೆ, ದಿನಪತ್ರಿಕೆಯ ಮಟ್ಟಿಗೆ ಹೇಳುವುದಾದರೆ " ನವಭಾರತ"ದ್ದೇ ಏಕಾಧಿಪತ್ಯ. ಸಂಧ್ಯಾದೀಪದಂತಹ ಸಣ್ಣ ಪುಟ್ಟ ಪತ್ರಿಕೆಗಳು ಇದ್ದರೂ ಅವುಗಳ ಪ್ರಸಾರ ವ್ಯಾಪ್ತಿ ತೀರ ಕಿರಿದಾಗಿತ್ತು. ರಾಜಕೀಯ ಹಾಗೂ ಉದ್ಯಮ ಪೈಪೋಟಿಯ ಹಿನ್ನೆಲೆಯಲ್ಲಿ ದೀರ್ಘಕಾಲ ಸಾರ್ವಭೌಮತ್ವ ಹೊಂದಿದ್ದ ನವಭಾರತಕ್ಕೆ ಪ್ರಬಲ ಪ್ರತಿಸ್ಪರ್ಧೆ ನೀಡುವಂತಹ ದಿನಪತ್ರಿಕೊಂದನ್ನು ಪ್ರಕಟಿಸುವ ವ್ಯವಸ್ಥೆ ನಡೆಯುತ್ತಿದ್ದುದ್ದನ್ನು ಗಮನಿಸಿದ ನವಭಾರತದ "ಯಜಮಾನರು" ನವಭಾರತಕ್ಕೆ ಕಯಕಲ್ಪ ಮಾಡಿ, ಹೊಸ ರೂಪುಕೊಟ್ಟು ಸ್ಪರ್ಧೆಯನ್ನೆದುರಿಸಲು ನಿರ್ಧರಿಸಿದರು. ಈ ವಿಧಾನದ ಅಂಗವಾಗಿ ಹೊಸ ರೀತಿಯ ಪುರವಣಿ–ಸಾಪ್ತಾಹಿಕ ಅಲ್ಲ–'ಪಾಕ್ಷಿಕ ಸಂಚಿಕೆಯನ್ನು' ಹೊರತರಲು ನವಭಾರತದ ಮಾಲೀಕರು ತೀರ್ಮಾನಿಸಿದಾಗ, ಜವಾಬ್ದಾರಿಯನ್ನು ನಿರ್ವಹಿಸಲು ಅವರಿಗೆ ಗೋಚರಿಸಿದ್ದು ಗೋಪಾಲಕೃಷ್ಣ ರ ಹೆಸರು. ಬೆಂಗಳೂರಿನಲ್ಲಿ ಪಳಗಿದ್ದ ತರುಣ ಪತ್ರಕರ್ತ ಹಾಗೂ ಪ್ರಾದೇಶಿಕ ಸಾಹಸಿ ಎಂಬುದರಿಂದ ನವಭಾರತಕ್ಕೆ ಸೇರಲು ಗೋಪಾಲಕೃಷ್ಣ ರಿಗೆ ಆಹ್ವಾನ ಹೋಯಿತು. ಊರಿನ ಸೆಳೆತ ಹೆಚ್ಚಾಯಿತೋ ಅಥವಾ ಇನ್ನೇನು ಕಾರಣವೋ ತಿಳಿಯದು ಗಂಟುಮೂಟೆ ಕಟ್ಟಿಕೊಂಡು ಹೆಂಡತಿ ಸಹಿತ ಮಂಗಳೂರಿಗೆ ಬಸ್ ಏರಿಯೇ ಬಿಟ್ಟರು ಪ.ಗೋ.

ನವಭಾರತದ ಸಂಪಾದಕೀಯ ವರ್ಗದಲ್ಲಿ ಆಗ, ಸರ್ವಶ್ರೀ ಎಂ.ವಿ ಹೆಗ್ಡೆ ಬನ್ನಂಜೆ ರಾಮಾಚಾರ್ಯ, ಗೋವಿಂದಾಚಾರ್ಯರಂಥ ಅತಿರಥ ಮಹಾರಥರಿದ್ದರು. ತನ್ನ ನಿರ್ದಿಷ್ಟ ಪರಿಧಿಯೊಳಗೆ ತಕ್ಕಮಟ್ಟಿಗೆ ಸಮರ್ಥವಾಗಿಯೇ ನವಭಾರತ ಹೊರಬರುತ್ತಿತ್ತು. ಪ.ಗೋ.ಸೇರಿ ದುಡಿದರೂ 'ಬದಲಾವಣೆ" ಉಂಟಾಗಲಿಲ್ಲ; ನಿರೀಕ್ಷಿತ 'ಹೊಸತನ' ಕಾಣಿಸಲಿಲ್ಲ. ಕ್ರಮೇಣ ಹತ್ತರ ಜೊತೆಗೆ ಹನ್ನೊಂದಾಗಿ ಹೊಂದಿಕೊಂಡು ಹೋಗಬೇಕಾದ ಪರಿಸ್ಥಿತಿ ಉಂಟಾಯಿತು; ಪರಿಸ್ಥಿತಿಗೆ ಶರಣಾಗದ ವಿಧಿಯಿಲ್ಲ ಎನ್ನುವಂತಾಯಿತು. ಅಷ್ಟರಲ್ಲಿ, ಆಡಳಿತಾತ್ಮಕವಾಗಿ ನಡೆಯಿತೆಂದು ಹೇಳಲಾದ ಒಂದು ಘಟನೆಯಿಂದ ತೀರಾ ಮನನೊಂದ ಪ.ಗೋ. ರಾಜೀನಾಮೆ ನೀಡಿ, ನವಭಾರತದಿಂದ ಹೊರಬಂದರು.... ಮಂಗಳೂರಿನಲ್ಲಿ ಬೇರೊಂದು ಕೆಲಸ ಸಿಗುವುದು ಅಷ್ಟೇನೂ ಸುಲಭವಾಗಿರಲಿಲ್ಲ ಅದರಲ್ಲೂ :ಮಾಜೀ ನವಭಾರತ"ದ, ಬೆಂಗಳೂರು ರಿಟರ್ನ್ಡ್ ಪತ್ರಿಕೋದ್ಯೋಗಿಗೆ! ಆಗ ಪುತ್ತೂರಿಗೆ ಬರಲು ನಾನು ಆಹ್ವಾನ ಕೊಟ್ಟೆ. ಅದರ ಕತೆ ಹೀಗಿದೆ.

## ವಿಚಾರವಾಣಿಯ ವರ್ತುಲದಲ್ಲಿ

ನಾನು ಈಗಾಗಲೇ, ಮೈಸೂರಿನಿಂದ, 'ಡಾಕ್ಟರ್' ಎನ್ನಿಸಿಕೊಂಡು ಹುಟ್ಟೂರಿಗೆ ಹಿಂದಿರುಗಿ, ಅಡ್ಯನಡ್ಕದಲ್ಲಿ ಸ್ವಂತ ಚಿಕಿತ್ಸಾಲಯ ಪ್ರಾರಂಭಿಸಿ, ಪ್ರಾಕ್ಟೀಸ್ ನಡೆಸುತ್ತಿದ್ದೆ. ಪ್ರಾರಂಭದ ದಿನಗಳಲ್ಲಿ "ಚಿಕಿತ್ಸೆ"ಯತ್ತ ಸಂಪೂರ್ಣ ಗಮನವಿರಿಸಿ ದುಡಿದರೂ, ಕ್ರಮೇಣ ಹಿಂದಿನ 'ಚಾಳಿ' ಒಂದೊಂದಾಗಿ ಮರುಕಳಿಸತೊಡಗಿದವು... "ವಿಚಾರವಾಣಿ" ಪತ್ರಿಕೆಯ (ಪುನರ್) ಪ್ರಕಟಣೆಯೂ ಅವುಗಳ ಪೈಕಿ ಒಂದು. (ವಿಚಾರವಣಿ)ಯನ್ನು ಶ್ರೀ ಶಿವರಾಮಕಾರಂತರು ಹತ್ತು ವರ್ಷಗಳ ಮೊದಲು ಪುತ್ತೂರಿನಿಂದ ಹೊರಡಿಸಿ, ಸ್ವಲ್ಪ ಕಾಲಾನಂತ ಮಂಗಳೂರಿಗೆ ಸ್ಥಳಾಂತರಿಸಿ, ಹಸ್ತಾಂತರಗೊಳಿಸಿದ್ದರು. ಆ ವ್ಯವಸ್ಥೆಯೂ ಸರಿಹೋಗದೆ ಪತ್ರಿಕೆಯ ಪ್ರಕಟಣೆ ನಿಂತು ಹೋಗಿತ್ತು. ಇಂತಹ ಸಂದರ್ಭದಲ್ಲಿ ಪುತ್ತೂರಿನ ಕೆಲವು ಗೆಳೆಯರು– ಮುಖ್ಯವಾಗಿ ಪಾರ್ಪಕಜೆ–ಈಶ್ವರಭಟ್ಟರು, ವಾರ್ಣಾಶಿ ಸುಬ್ರಾಯ ಭಟ್ಟರು, ಬಡೆಕ್ಕಿಲ ಮಹಾಬಲ ಭಟ್ಟರು ಮೊದಲಾದವರು ಪುತ್ತೂರಿನಿಂದ ಮತ್ತೆ ವಿಚಾರವಾಣಿಯನ್ನು ಪ್ರಕಟಿಸುವ ಪ್ರಯತ್ನಕ್ಕೆ ತೊಡಗಿದಾಗ ಸಂಪಾದಕ–ಪ್ರಕಾಶಕನಾಗಲು ನಾನೂ ಒಪ್ಪಿಕೊಂಡೆ.... ಪ್ರಕಟಣೆ ಪ್ರಾರಂಭವಾಯಿತು; ಅದಕ್ಕಾಗಿ ಒಂದು ಕಿರು ಅಚ್ಚುಕೂಟವನ್ನೂ ಸ್ಥಾಪಿಸಿದ್ದಾಯಿತು; ತಕ್ಕಷ್ಟು ಹಣವನ್ನು ಜೊತೆಗೂಡಿಸಿಕೊಂಡು ; ಜನ ವಾರ್ಷಿಕ ಚಂದಾದಾರರನ್ನು ಸೇರಿಸಿಕೊಂಡು....ಡು... ಆಗಿತ್ತು. ಬೆಂಗಳೂರಿನ ಹತ್ತು ಹಲವು ಸತ್ಯ "(ಈಗ ಕನ್ನಡಪ್ರಭಾದ ಪ್ರಧಾನ ಸಂಪಾದಕರಾಗಿ ನಿವೃತ್ತರಾಗಿದ್ದಾರೆ) ವೆಂಕಟರಾಜ ಪಾನಸೆ, ಕುಮಾರ ವೆಂಕಣ್ಣ ಮೊದಲಾದವರು ಅಂಕಣ ತುಂಬುತ್ತಿದ್ದರು. ಆಗಾಗ ತ.ರಾ.ಸು, ಬಸವರಾಜ ಕಟ್ಟೀಮನಿ,

ಶಾ.ಬಾಲೂರಾವ್ ಮೊದಲಾದವರು ವಿಶೇಷ ಬರೆಹಗಳನ್ನು ನೀಡುತ್ತಿದ್ದರು. ಸುಪ್ರಸಿದ್ಧ ರೇಖಾ ಚಿತ್ರಗಳನ್ನು ಆರ್.ಎಸ್. ಎನ್; ಪಿ.ಆರ್. ತಿಪ್ಪೇಸ್ವಾಮಿ–ಹೀಗೆ ದೊಡ್ಡ ಪಟ್ಟಿಯೇ ಇತ್ತು. ಆದರೆ, ಈ ಎಲ್ಲ ಅನುಕೂಲತೆಗಳನ್ನು ಬಳಸಿಕೊಳ್ಳುವ ಸಂಯೋಜಕರೊಬ್ಬರ ಅಭಾವವಿದ್ದುದರಿಂದ ಪ್ರತಿ ಸಂಚಿಕೆ ಹೊರಬರುವುದು ಕೂಡ 'ತೇಕು–ಮುಳುಕು' ಆಗಿಯೇ ಇರುತ್ತಿತ್ತು.

ಪ.ಗೋ. ನವಭಾರತದಿಂದ ಹೊರಬಂದ ದಿನವೇ, ನನ್ನ ಸ್ವಂತ ಕೆಲಸದ ನಿಮಿತ್ತ ನಾನು ಮಂಗಳೂರಿಗೆ ಹೋಗಿದ್ದೆ. ಹಂಪನಕಟ್ಟೆಯಲ್ಲಿ ಅನಿರೀಕ್ಷಿತವಾಗಿ ಭೇಟಿಯಾದರು ಪ.ಗೋ. ವಿಷಯವೆಲ್ಲ ತಿಳಿಯಿತು' ಪರಿಸ್ಥಿತಿಯು ಮನವರಿಕೆಯಾಯಿತು. ಪುತ್ತೂರಿಗೆ ಬಂದು 'ವಿಚಾರವಾಣಿ' ಸೇರಲು ಆಹ್ವಾನಿಸಿದೆ. ಮರುದಿನವೇ ಪುತ್ತೂರಿಗೆ ಬಂದು, 'ವಿಚಾರ ವಾಣಿ ಪತ್ರಿಕೆ ಹಾಗೂ 'ವಾಣಿಪ್ರಿಂಟರಿಯ' ವ್ಯವಸ್ಥೆಯನ್ನು ನೋಡಿಕೊಳ್ಳಲು ಪ್ರಾರಂಭಿಸಿಯೂ ಆಯಿತು. ಒಂದು ವಾರದಲ್ಲಿ 'ಮನೆಯೂ ವರ್ಗಾವಣೆಯಾಯಿತು.

**ಕಿರುಲೋಪದಿಂದ ಕೆಲಸ ಹೋಯಿತು**

ಪ.ಗೋ ಶ್ರದ್ಧೆಯಿಂದ ಕೆಲಸ ಪ್ರಾರಂಭಿಸಿದರು. ವಿಚಾರವಾಣಿ ವಾರದಿಂದ ವಾರಕ್ಕೆ ಮೈತುಂಬಿಕೊಂಡು, ಅಚ್ಚುಕಟ್ಟಾಗಿ ಮುದ್ರಣಗೊಳ್ಳತೊಡಗಿತು. ನಿಶ್ಚಿತಾವಧಿಗಿಂತ ಒಂದು ದಿನ ಮುಂಚಿತವಾಗಿಯೇ ಮುದ್ರಣ ಪೂರೈಸುತ್ತಿತ್ತು.

ಒಂದಿಷ್ಟು ಜಾಹೀರಾತುಗಳು ಬರತೊಡಗಿದವು. ವಾರ್ಷಿಕ ಚಂದಾವಸೂಲಿಗೆಂದು ಹಳ್ಳಿಗಳಿಗೆ ಹೋದಾಗ, ಹಣ ಜಮೆಯಾಗುವುದು ಸುಲಭವಾಗತೊಡಗಿತು. "ಇತ್ತಿತ್ತಲಾಗಿ ಸೋಮವಾರಕ್ಕೆ ಸರಿಯಾಗಿ ಬಟವಾಡೆಯಾಗುತ್ತಿದೆಯಲ್ಲ–ಅದನ್ನೇ ಖಾಯಂ ಮಾಡಿ' ಎಂದು ನಮ್ಮ ಪೋಷಕರು (ಚಂದಾದಾರರು) ಸ್ಪಷ್ಟವಾಗಿ ಹೇಳುತ್ತಿದ್ದರು. ಈ ವಿಚಾರವನ್ನು ಪ.ಗೋ. ಅವರಿಗೆ ತಿಳಿಸಿ ಯಾವ ಕಾರಣಕ್ಕೂ ವಿಚಾರವಾಣಿಯ ಸಂಚಿಕೆ ಪ್ರ "ಶುಕ್ರವಾರ" ಟಪ್ಪಾಲಿಗೆ ಹೋಗಲೇಬೇಕು ಎಂದು ಖಚಿತವಾಗಿ ತಿಳಿಸಿದ್ದೆ. ಸ್ವಲ್ಪ ದಿವಸ ಎಲ್ಲವೂ ಸುಸೂತ್ರವಾಗಿ ನಡೆಯುತ್ತಿದ್ದವು. "ನಮ್ಮ" ತಲೆಬಿಸಿ ಕೂಡ ಕಮ್ಮಿಯಾಗಿತ್ತು.... ಒಂದು ಕಿರು ವಿಶೇಷ ಸಂಚಿಕೆ, ಗುರುವಾರ ರಾತ್ರೆ ಮುದ್ರಣ ಪೂರ್ಣಗೊಂಡು ಮರುದಿನ ಅಂಚೆಗೆ ಹೋಗಲು ಸಿದ್ಧವಾಗಿತ್ತು. (ಸ್ಟ್ಯಾಂಪ್ ಅಂಟಿಸದೆ ಟಪಾಲಿಸುವ ಪರವಾನಗಿ ವಿಚಾರವಾಣಿಗ ದೊರಕಿತ್ತು) 'ಶುಕ್ರವಾರ' ಅಂಚೆ ಕಛೇರಿಗೆ ತಲುಪಿಸುವ ಜವಾಬ್ದಾರಿಯನ್ನು ಪ.ಗೋ. ಅವರಿಗೆ ಒಪ್ಪಿಸಿ, ನಾವೆಲ್ಲ ನಮ್ಮ ನಮ್ಮ ಕೆಲಸದ ಮೇಲೆ ನಮ್ಮ ನಮ್ಮ ಮನೆಗಳಿಗೆ ಹೊರಟುಹೋದೆವು.

ಸೋಮವಾರ, ನಮ್ಮೂರಲ್ಲಿ ಟಪ್ಪಲಿಗೆ ಕಾದೆ ಪತ್ರಿಕೆ ಬರಲಿಲ್ಲ. (ನಮ್ಮೂರಿಗೆ, ನನಗೆ ಸಹ ಟಪ್ಪಾಲ್ ಮೂಲಕವೇ ಪತ್ರಿಕೆ ರವಾನೆಯಾಗುತ್ತಿತ್ತು) ಮಂಗಳವಾರವೂ ಬರಲಿಲ್ಲ. ಬುಧವಾರವೂ ಪತ್ರಿಕೆಯ ದರ್ಶನ ಆಗಲಿಲ್ಲ. (ಈ ನಡುವೆ 2 ದಿನ ಟಪ್ಪಾಲಿಗೆ ರಜೆ ಇತ್ತು ಎನ್ನಿ) ಗುರುವಾರ ಮಧ್ಯಾಹ್ನ ನೇರವಾಗಿ ವಿಚಾರವಾಣಿ ಕಾರ್ಯಾಲಯದ ಮುಂದೆ ಕಾರು ನಿಲ್ಲಿಸಿದೆ. ಆಗ ಮಧ್ಯಾಹ್ನ 2.30ರ ಸಮಯ. ಪ್ರೆಸ್‌ನಲ್ಲಿ ಏನೋ ಪ್ರಿಂಟಿಂಗ್ ಕೆಲಸ ನಡೆದಿತ್ತು. ಪ.ಗೋ. –ಪ್ರೂಫ್ ತಿದ್ದುವುದರಲ್ಲಿ ಮಗ್ನರಾಗಿದ್ದರು.

ಮಾಮೂಲಿ ಮುಗುಳ್ನಗು ನನ್ನನ್ನು ಸ್ವಾಗತಿಸಿದರೂ ನಾನು ಸಿಟ್ಟಿನಿಂದ ಕುದಿದೆ.

ಪತ್ರಿಕೆ ಯಾಕೆ ಪೋಸ್ಟಿಗೆ ಹೋಗಲಿಲ್ಲ ಶುಕ್ರವಾರ? ಅಧಿಕಾರವಾಣಿಯಿಂದ ನೇರವಾಗಿ ಪ್ರಶ್ನಿಸಿದೆ. ಪ.ಗೋ. ಏನೋ ಸಬೂಬು ನೀಡಿದರು. ಅದರಿಂದ ಸಮಾಧಾನವಾಗುವ ಬದಲು ನನ್ನ ಕೋಪ ಇನ್ನಷ್ಟು ಹೆಚ್ಚಾಯಿತು. ಕೆರಳಿ ಕೆಂಡವಾದೆ. ("") (ನಿಮ್ಮನ್ನು ಕೆಲಸದಿಂದ ಅಮಾನತ್ ಮಾಡಲಾಗಿದೆ) ಎಂದು ಆರ್ಭಟಿಸಿ, ದೊಪ್ಪನೆ ಕುರ್ಚಿಯ ಮೇಲೆ ಕುಳಿತೆ. 15ನಿಮಿಷಗಳ ತರುವಾಯ ಒಂದಿಷ್ಟು ಚಿಲ್ಲರೆ ಹಣ, ಲೆಕ್ಕಪತ್ರಗಳ ಪುಸ್ತಕ ಮತ್ತು ಕೀಲಿ ಕೈ ಗೊಂಚಲನ್ನು, ಒಳಗೆ ಪ್ರೆಸ್‌ನಲ್ಲಿ ಕೆಲಸ ಮಾಡುತ್ತಿದ್ದ ಸಹಾಯಕನ ಕೈಗೆ ಒಪ್ಪಿಸಿ ಮಾತಾಡದೆ, ಯಾವುದೇ ಬಗೆಯ ಭಾವನೆಯನ್ನು ವ್ಯಕ್ತಪಡಿಸದೇ ಪ.ಗೋ. ಹೊರಟು ಹೋದರು.... ಆಗಲೂ ನನ್ನ ಸಿಟ್ಟು ಇಳಿಯಲಿಲ್ಲ. ಎಷ್ಟೋ ಹೊತ್ತಿನ ಮೇಲೆ ನಮ್ಮ ಗುಂಪಿನ ಪ್ರಮುಖ ಕಾರ್ಯಕರ್ತರೂ, ಸ್ನೇಹಿತರೂ ಆದ ಪಾರ್ಪಕಜೆ ಈಶ್ವರಭಟ್ಟರು ಬಂದರು. ಪ್ರೆಸ್‌ನಲ್ಲಿ ಅನಿರೀಕ್ಷಿತ ಮೌನ ಆವರಿಸಿದ್ದನ್ನು ಕಂಡು ಆಶ್ಚರ್ಯ ಚಕಿತರಾಗಿ, ಕೆಲಸಗಾರರನ್ನು ಪ್ರಶ್ನಾರ್ತಕವಾಗಿ ನೋಡಿದರು.

## ಪುತ್ತೂರಿಗೆ ವಿದಾಯ

ನಾನು ಹೊರಡಿಸಿದ 'ಹುಕುಮ್'ನ್ನು ಸಮರ್ಥಿಸಿ 10 ನಿಮಿಷ ನಾನೇ ವಿವರಣೆ ನೀಡಿ ಅವರನ್ನು ನಂಬಿಸಲು ಪ್ರಯತ್ನಿಸಿದೆ.... ಸ್ವಲ್ಪ ಹೊತ್ತಿನ ನಂತರ ಕಾರು ಡ್ರೈವ್ ಮಾಡಿಕೊಂಡು ನಮ್ಮೂರಿನತ್ತ ಹೊರಟುಬಿಟ್ಟೆ. ನಾಲ್ಕಾರು ಮೈಲಿ ಬಂದಾಗ ನೆನಪಾಯಿತು. 'ಸಾವಿತ್ರಿ'ಗೆ (ಶ್ರೀಮತಿ ಪ.ಗೋ.) ಕೊಡಲು ನಮ್ಮ ಆಸ್ಪತ್ರೆಯಿಂದ ಕೆಲವು ಮಾತ್ರೆಗಳನ್ನೋ, ಟಾನಿಕ್ಕನ್ನೋ ತಂದಿದ್ದೆ. (ಆಕೆ ಆಗ ತುಂಬು ಗರ್ಭಿಣಿ) ಈ ಅವಾಂತರದಲ್ಲಿ , ಔಷಧಿಯನ್ನು ಹಸ್ತಾಂತರಿಸಲು ಮರೆತೇಬಿಟ್ಟಿದ್ದೆ. ಆ ಔಷಧಿ ಸೇವಿಸುವುದು ಗರ್ಭಿಣಿಯ ಆರೋಗ್ಯದ ದೃಷ್ಟಿಯಿಂದ ಅಗತ್ಯವಾಗಿತ್ತು.

ಈಗ ಅವರ ಮನೆಗೆ ಹೋಗುವುದೇ–ಬಿಡುವುದೇ ಎಂಬ ಪ್ರಶ್ನೆ ಬಂತು. ಹೋಗದಿದ್ದರೆ ಮಾತ್ರೆ –ಔಷಧಿ ತಲುಪಿಸುವುದು ಹೇಗೆ?.... 'ಇಷ್ಟೆಲ್ಲಾ' ಆಗಿರುವಾಗ ಅಲ್ಲಿಗೆ ಹೋಗುವುದಾದರೂ ಹೇಗೆ?.... ಕೊನೆಗೂ ವೃತ್ತಿಧರ್ಮಕ್ಕೆ ಚ್ಯುತಿ ಉಂಟಾಗಬಾರದೆಂದು ನಿರ್ಧರಿಸಿ, ಕಾರು ತಿರುಗಿಸಿಕೊಂಡು ಪುತ್ತೂರಿಗೆ ಹಿಂತಿರುಗಿದೆ. ಹೋಗಿ, ಮನೆಯೆದುರು ನಿಂತು ಬಾಗಿಲು ತಟ್ಟಿದರೆ, ಬಾಗಿಲು ತೆರೆದದ್ದು ಪ.ಗೋ....!

"ಈ ಮಾತ್ರೆ ಔಷಧಿ, ನಮ್ಮ ಆಸ್ಪತ್ರೆಯಿಂದ ತಂದಿದ್ದೆ; ಕೊಡಲು ಮರೆತಿದ್ದೆ" ಎಂಧು ಹೇಳಿ, ಔಷಧಿ ಬಾಟಲಿ... ಮಾತ್ರೆ ಪ್ಯಾಕೆಟ್ ಮುಂದೆ ಚಾಚಿದೆ. ಅದನ್ನು ತೆಗೆದುಕೊಂಡು 'ನಾಳೆ ಕಳಿಸಿದ್ರೆ ಸಾಕಿತ್ತು.... ಸಾತಿ (ಸಾವಿತ್ರಿ)...ರ ಮನೆಗೆ ಹೋಗಿದ್ದಾರೆ.... ಔಷಧಿ ಮಾತ್ರೆ ಎಲ್ಲ ಮೊದಲಿನ ಹಾಗೇ ದಿನಕ್ಕೆರಡು ಸರ್ತಿ ತಾನೇ>" ಎಂದು ವಿಚಾರಿಸಿದಾಗ ಹೌದೆಂದು ತಲೆಯಾಡಿಸಿದೆ. ಮತ್ತೊಂದು ನಿಮಿಷವೂ ತಡಮಾಡದೇ ಹೊರಟು ಬಿಟ್ಟೆ.

ಸ್ವಲ್ಪ ಹೊತ್ತಿನ ಮುಂಚೆ 'ವಿಚಾರವಾಣಿ' ಘಟನೆ ಸಂಭವಿಸಿದ್ದುದರ ಛಾಯೆ ಕೂಡ ಪ.ಗೋ ಮಾತಿನಲ್ಲಿ , ಮುಖದಲ್ಲಿ ಇರಲಿಲ್ಲ!

## ಮತ್ತೆ ಮಂಗಳೂರು ಚಲೋ....

ಪುತ್ತೂರಿನಲ್ಲಿ (ವಿಚಾರವಾಣಿ ಕೆಲಸವಿಲ್ಲವಾದುದರಿಂದ ಪ.ಗೋ. ಮತ್ತೆ ಮಂಗಳೂರಿನಲ್ಲಿ ಒಂದು ಕನ್ನಡ (ದೀನ) ಪತ್ರಿಕೆಯಲ್ಲಿ ಉದ್ಯೋಗಕ್ಕೆ ಸೇರಿಕೊಂಡರೂ "ಹೆರಿಗೆಯಾಗುವವರೆಗೂ ಬಿಡಾರ ಬದಲಾಯಿಸುವುದಿಲ್ಲ" ಎಂದು ತೀರ್ಮಾನಿಸಿ, ತಾನು ವಾರಕ್ಕೆ ಎರಡೋ ಮೂರೋ ಬಾರಿ ಮಂಗಳೂರಿನಿಂದ ಪುತ್ತೂರಿಗೆ ಬಂದು ಹೋಗುತ್ತಿದ್ದರು. ಹಣದ ಅಡಚಣೆಯ ಜತೆಗೆ, ಆತಂಕ ಬೇರೆ!

ಈ ನಡುವೆ ಪ.ಗೋ. ಪುತ್ತೂರಿನಿಂದ ಒಂದು ದಿನ ಪತ್ರಿಕೆಯನ್ನು ಹೊರಡಿಸುವ ಯೋಚನೆ ಮಾಡಿ, ಪಿ.ಟಿ.ಐ. ವಾರ್ತಾಸಂಸ್ಥೆಗೆ ಪತ್ರ ಬರೆದು 'ಸುದ್ದಿ' ಸೇವೆಗಾಗಿ ಅರ್ಜಿ ಕಳಿಸಿದ್ದರಂತೆ! ಹಣ ಒದಗಿಸುವ ಆಶ್ವಾಸನೆ ಇತ್ತಿದ್ದವರು ಕೊನೇ ಗಳಿಗೆಯಲ್ಲಿ ಹಿಂದೇಟು ಹಾಕಿದ್ದರಿಂದ "ಬಂಡ್ವಾಳವಿಲ್ಲದ ಬಾಯಿ"ಯಾಗಿ, ಹುಟ್ಟುವ ಮುಂಚೆಯೇ ಆ ಪ್ರಯತ್ನ ಕಣ್ಣು ಮುಚ್ಚಿತು!

ಅಡ್ಯನಡ್ಕದಿಂದ ಸಹೋದರ ರಾಮಕೃಷ್ಣ ಬಂದು 'ಅತ್ತಿಗೆ'ಯನ್ನು ಕರೆದುಕೊಂಡು ಹೋದರು. ಹೆರಿಗೆ ಬಾಣಂತನ ಇತ್ಯಾದಿಗಳೆಲ್ಲ ಸಸೂತ್ರವಾಗಿ ನಡೆದವು.

ಆರು ತಿಂಗಳ ನಂತರ ಮಂಗಳೂರಿನಲ್ಲಿ ಬಿಡಾರ ಮಾಡಿ ಹೆಂಡತಿ–ಮಕ್ಕಳು ಸಹಿತ ಸಂಸಾರ ಹೂಡಿದರು. ಪ.ಗೋ. ಹೆಸರಿಗೊಂದು (ಪತ್ರಿಕಾ) ಉದ್ಯೋಗವಿದ್ದುದು ನಿಜವಾದರೂ ತಿಂಗಳುಗಟ್ಟಲೆ ಸಂಬಳ ಪಾವತಿಯಾಗುತ್ತಿರಲಿಲ್ಲ. ಅಲ್ಲಿ, ಇಲ್ಲಿ, ಅವರ ಹತ್ತಿರ, ಇವರ ಹತ್ತಿರ ಕೈಗಡ ಮಾಡಿ ದಿನ ದೂಡುವ ಪರಿಸ್ಥಿತಿ.... ಒಂದೊಂದು ಬಾರಿ ಅಡುಗೆಗೆ ಒಲೆ ಹೊತ್ತಿಸುವುದಕ್ಕೂ ಕಷ್ಟವಾಗುತ್ತಿತ್ತು. ಜೊತೆಗೆ ಎಳೆಮಗುವಿನ ಅವಶ್ಯಕತೆಗಳು ಬೇರೆ ಸೇರಿಕೊಂಡಿದ್ದವು. ಇದೇ ಸಮಯದಲ್ಲಿ ಒಂದು ದಿನ ಮಧ್ಯಾಹ್ನ ತಾನು ಕೆಲಸ ಮಾಡುತ್ತಿದ್ದ ದಿನಪತ್ರಿಕೆಯ ಕೆಲಸವೂ ಹೋಯಿತು; ಮತ್ತೆ ನವಭಾರತ ಸೇರಿ–ಬಿಟ್ಟೂ ಆಯಿತು. ರಾಜಕಾರಣಿಗಳು ಪ್ರಕಟಣೆಗೆ ಮುಂದಾದ ಇಂಗ್ಲೀಷ್ ದಿನಪತ್ರಿಕೆಯನ್ನು ಸೇರಿದರು. ಅದೂ ಕಣ್ಣು ಮುಚ್ಚಿತು. ತಾನೇ ಸ್ವತ: 'ವಾರ್ತಾಲೋಕ' ಪ್ರಾರಂಭಿಸಿದರು. ಅದರ ಪ್ರತಿಗಳನ್ನು 30 ಹೆಂಡತಿಯ ಕೈಗೆ ಕೊಟ್ಟು, ಈ ಸಂಜೆ ದಿನಪತ್ರಿಕೆಯನ್ನು ಸಂಪಾದಿಸಿ, ಅಚ್ಚಿಸಿ , ಪ್ರಕಟಿಸುತ್ತೇನೆ. 50 ಪ್ರತಿಗಳನ್ನು ಮನೆ ಮನೆ ತಿರುಗಿ ಮಾರಾಟ ಮಾಡಿ, ಹಣ ಸಂಗ್ರಹಿಸಿ, "ಮನೆವಾರ್ತೆ" ನೋಡಿಕೋ ಹಣ ಮಾತ್ರ ನನ್ನಲ್ಲಿ ಇಲ್ಲ" ಎಂದು ಹೇಳಿದರು ಪ.ಗೋ. ಪರಿಸ್ಥಿತಿ–ಅಲ್ಲ ದು:ಸ್ಥಿತಿಯನ್ನು ನೋಡುತ್ತಿದ್ದ ಸಾವಿತ್ರಿ ಮರುಮಾತಿಲ್ಲದೆ ಗಂಡ ಪ್ರಕಟಿಸುತ್ತಿರುವ ಪತ್ರಿಕೆಯನ್ನು ಮಾರಾಟ ಮಾಡಲು ಮನೆಯ ಹೊರಗೆ ಕಾಲಿಟ್ಟರು. ವರ್ಷ ತುಂಬುವ ಮಗುವನ್ನು ಸೊಂಟಕ್ಕೇರಿಸಿಕೊಂಡು!...... ನಾಲ್ಕಾರು ತಿಂಗಳು ಹೀಗೆ ಕಾಲಯಾಪನೆ ಮಾಡಿದರು ಆ ದಂಪತಿ, ಮತ್ತು ಕಿರುಗೂಸು 'ವಿಶ್ವ' ಈಗ ಭಾರತ ಸೇನೆಯ ತುರ್ತು ಸೇವಾ ವಿಭಾಗದಲ್ಲಿ ಕೆಲಸ ಮಾಡುವ ಡಾಕ್ಟರು).

'ವಾರ್ತಾಲೋಕ'ವೂ ಒಂದು ಕಣ್ಣು ಮುಚ್ಚಿತು. ಪ.ಗೋ. "ಟೈಮ್ಸ್ ಆಫ್ ಡೆಕ್ಕನ್' ಸೇರಿದರು. ಈ ಅವಧಿಯಲ್ಲಿ ನಾನು ಹೆಚ್ಚಿನ ವೈದ್ಯಕೀಯ ವ್ಯಾಸಂಗಕ್ಕೆ ಜರ್ಮನಿಗೆ ಹೊರಡುವ ಸಿದ್ಧತೆಯಲ್ಲಿದ್ದೆ (ಜರ್ಮನ್ ಭಾಷೆ ಕಲಿಯಲು ಪುಣೆ; ಅನಂತರ ಪಾಸ್‌ಪೋರ್ಟ್, ಫಾರಿನ್ ಎಕ್ಸ್‌ಚೇಂಜ್, ವೀಸಾ–ಅದು ಇದು ಅಂತ ಮದರಾಸು, ಡೆಲ್ಲಿ, ಬೆಂಗಳೂರುಗಳಿಗೆ ಓಡಾಡುತ್ತಿದ್ದೆ.... ಅಡ್ಯನಡ್ಕದಲ್ಲಿ ನಡೆದ 'ವಿದಾಯ ಕೂಟ'ದ ವಿವರವಾದ ವರದಿಯೊಂದನ್ನು ಪ್ರಕಟಿಸಿ, ಅದರ ಎರಡು ಪ್ರತಿಗಳ ಜೊತೆಗೆ, ತಮ್ಮ ಪತ್ರಿಕೆಯ ವಿಶೇಷ (ಸಂಚಾರೀ) ಬಾತ್ಮೀದಾರ ಎಂಬ ಗುರುತು ಕಾರ್ಡನ್ನು ಸಹ ನಾನು ಮುಂಬೈ ತಲುಪುವಾಗ ಕೈಸೇರುವಂತೆ ಕಳುಹಿಸಿಕೊಟ್ಟಿದ್ದರು. ಒಂದೋ–ಎರಡೋ ವಾರ್ತಾಪತ್ರಗಳನ್ನು ಜರ್ಮನಿಯ ಹ್ಯಾಂಬರ್ಗ್‌ನಿಂದ ಬರೆದು ಕಳುಹಿಸಿದೆ; ಅನಂತರ ಸಂಪರ್ಕ ಕಡಿದು ಹೋಯಿತು! ಮುಂದೆ ನಾನು ವೈದ್ಯಕೀಯ ವ್ಯಾಸಂಗವನ್ನೂ ವಿದೇಶ ಯಾತ್ರೆಯನ್ನೂ ಮುಗಿಸಿಕೊಂಡು ಊರಿಗೆ ಹಿಂತಿರುಗುವಾಗ,ಪ.ಗೋ ಮಂಗಳೂರಿನಲ್ಲಿ 'ಪಕ್ಕಾ' ಪತ್ರಿಕೋದ್ಯೋಗಿಯಾಗಿ ತಳವೂರಿದ್ದರು. ಬೇರೆ ಬೇರೆ ಪತ್ರಿಕೆಗಳ ಬಾತ್ಮೀದಾರರಾಗಿ

ದುಡಿದು ಕೊನೆಗೆ ಟ್ರೈಬ್ಸ್ ಆಫ್ ಇಂಡಿಯಾದ ಮಂಗಳೂರು ವಿಭಾಗದ ಕಾರ್ಯಾಲಯದ ಜವಾಬ್ದಾರಿಯನ್ನು ಸಹ ಹಲವು ವರ್ಷಗಳ ಕಲ ನಿರ್ವಹಿಸಿದರು. ನಾನು ನನ್ನ ವೃತ್ತಿ ಮತ್ತು ನಿವಾಸದ ಪರಿಧಿಯನ್ನು ವಿಸ್ತರಿಸಿ, ಮೊದಲು ಗಲ್ಬರ್ಗ ಜಿಲ್ಲೆಯ ಚಿತ್ತಾಪುರದಲ್ಲಿಯೂ ಅನಂತರ ಆಂದ್ರಪ್ರದೇಶದ ಪಡಕ್ಕಲ್‌ನಲ್ಲಿಯೂ, ವೈದ್ಯವೃತ್ತಿಯನ್ನೊಳಗೊಂಡ ಗ್ರಾಮಾಭಿವೃದ್ಧಿ ಕಾರ್ಯದಲ್ಲಿ ನಿರತವಾದ ಸ್ವಯಂ ಸೇವಾ ಸಂಸ್ಥೆಯನ್ನು ಸೇರಿಕೊಂಡೆ. ಮುಂದೆ ಆರೇಳು ವರ್ಷಗಳ ಕಾಲ ಮೈಸೂರಿನ ಹೆಗ್ಗಡೆದೇವನಕೋಟೆಯಲ್ಲಿ ಬುಡಕಟ್ಟು ಜನರ ನಡುವೆ ಆರೋಗ್ಯ ರಕ್ಷಣಾ ಕಾರ್ಯಕ್ರಮ ಹಾಕಿಕೊಂಡು ದುಡಿದೆ. ಹೀಗೆ ನನ್ನದೇ ಕಾರ್ಯ ವರ್ತುಲದಲ್ಲಿ ಲೀನನಾಗಿ ಹೋದುದರಿಂದ, ನಮ್ಮೊಳಗಿನ ಸಂಪರ್ಕ ತೀರಾ ಕಮ್ಮಿಯಾಯಿತು. ಎಂದೋ ಒಂದೆರಡು ಬಾರ, 'ಊರಿಗೆ' ಮಿಂಚಿನ ವೇಗದಲ್ಲಿ ಬಂದು ಹೋಗುತ್ತಿದ್ದಾಗ ಕ್ಷಣಾರ್ಧದ ಭೇಟಿ ನಡೆಯುತ್ತಿತ್ತು ಅಷ್ಟೆ.... ಪ.ಗೋ. ಒಂದು ತುಳು ಸಿನಿಮಾ ಕೂಡ ತಯಾರಿಸಿ ಕೈಸುಟ್ಟು ಕೊಂಡರೆಂದು ಕೇಳಿದ್ದೆ.

**ಕೊನೆಯ ಭೇಟಿ**

1997 ಏಪ್ರಿಲ್ ಕೊನೆಯಲ್ಲಿ ಕೌಟುಂಬಿಕ ಕಾರ್ಯಕ್ರಮವೊಂದರ ನಿಮಿತ್ತ 'ಊರಿಗೆ' ಬಂದಿದ್ದಾಗ ಬೆಂಗಳೂರಿಗೆ ಹಿಂದಿರುಗುವ ಮುನ್ನ ಗೋಪಾಲಕೃಷ್ಣರನ್ನು ಕಾಣಲು ಮಂಗಳೂರಿಗೆ ಹೋದೆ. ಕೆಲವು ಸಮಯದ ಹಿಂದೆ ಒಂದು ಕಾರ್ಡ್ ಬರೆದು, 'ವೃತ್ತಪತ್ರಿಕಾ' ಜೀವನದಿಂದ ತಾನು ನಿವೃತ್ತನಾಗಿರುವುದಾಗಿಯೂ, ಮಂಗಳೂರಿನ 'ವಸಂತನಗರ'ದ ಗಿಡಮರಗಳ ಪರಿಸರದಲ್ಲಿ ತಾನೇ ಕಟ್ಟಿ ನಿರ್ಮಿಸಿದ "ಕಾಟೇಜ್"ನಲ್ಲಿ ವಾಸ ಮಾಡುವುತ್ತಿರುವುದಾಗಿಯೂ ತಿಳಿಸಿದ್ದರು.; ಅತ್ತ ಕಡೆ ಬಂದರೆ, ಮನೆಗೆ ಬರಲು ಇದು ಆಹ್ವಾನ..... ಪ.ಗೋ. 'ಕಾಲಂ' ಅನೇಕ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿತ್ತು. ದಕ್ಷಿಣ ಕನ್ನಡದ ಮಟ್ಟಿಗೆ ಪತ್ರಿಕಾ ವ್ಯವಸಾಯದ ಭೀಷ್ಮ ಎಂದು ಹೇಳುತ್ತಿದ್ದ ಮಾತು ಅನರ್ಥವಾಗಿತ್ತು. ಆಗಿನ ಜೀವನ ಸರಳ ಮಂಚದ ಮೇಲೆ ಮಲಗಿದ ಭೀಷ್ಮಾಚಾರ್ಯರ ಹಾಗೆ, ಆ ದಿನ ಬರುವುದನ್ನೇ ಕಾಯುತ್ತಿದ್ದರೆಂದೇ ಕಾಣುತ್ತದೆ. ವಸಂತನಗರದ ಮನೆಯನ್ನು ಸ್ವಲ್ಪ ಪ್ರಯಾಸದಿಂದ ಹುಡುಕಿ, ಮನೆಯೊಳಗೆ ಕಾಲಿಟ್ಟೆ (ಬಾಗಿಲು ತೆರೆದೇ ಇತ್ತು. ಹೆಸರೆತ್ತಿ ಕರೆದೆ" ಬಂದೆ ಎಂದು ಉತ್ತರದ ಹಿಂದಯೇ ಪ.ಗೋ. ಪ್ರತ್ಯಕ್ಷ!

ನನ್ನೆದುರಿಗೆ ನಿಂತ ಗೋಪಾಲಕೃಷ್ಣರನ್ನು ನೋಡಿ– ಒಂದು ಕ್ಷಣ ದಿಗ್ಭ್ರಮೆಗೊಂಡೆ! ಎಲುಬು ಚರ್ಮ ಅಂಟಿಕೊಂಡ ಕ್ಷೀಣವಾದ ಕೃಷಕಾಯ! ಕ್ಷೌರಕಾಣದ ಮುಖ–ಬತ್ತಿದ ಕೆನ್ನೆಗಳು, ಕೈಯ್ಯಲ್ಲೊಂದು ಬೆಂಕಿಪೆಟ್ಟಿಗೆ. (ಅದರೊಳಗೆ ಬೆಂಕಿ ಕಟ್ಟಿಗಳಿಗಿಂತ ಹೆಚ್ಚು ಉರಿದು ಆರಿಸಿದ ಬೀಡಿ ತುಂಡುಗಳು!).... ಅಂದಿನ

1947ರಲ್ಲಿ ನಾನು ಮೊದಲ ಬಾರಿಗೆ ಅಡ್ಯನಡ್ಕದ ಅವರ ತಾಯಿ ಸುಬ್ಬಕ್ಕನ ಬಿಡಾರದಲ್ಲಿ ಕಂಡಿದ್ದ, ಕಟ್ಟುಮಸ್ತಾದ, ಆರೋಗ್ಯದ (ದೃಢಕಾಯದ) ಜವ್ವನಿಗನೆಲ್ಲಿ– ಇಂದಿನ ಈ ಒಣಕಲು ದೇಹದ 'ಜನ' ಎಲ್ಲಿ! ಉತ್ಸಾಹದ ಚಿಲುಮೆಯಾಗಿದ್ದ ಅಚ್ಚುಕಟ್ಟಾಗಿ ಡ್ರೆಸ್ ಮಾಡಿಕೊಳ್ಳುತ್ತಿದ್ದ (ಸೋರ್ಡ್‌ಕಟ್ ಮೀಸೆಯ) ಆ ಆಕರ್ಷಕ ವ್ಯಕ್ತಿ ಎಲ್ಲಿ? ಈ ಬಳಲಿದ ಮನುಷ್ಯ ಎಲ್ಲಿ?.... ಆದರೆ, ಅದೇ, ಅಂದಿನದೇ ಪ್ರಭಾವಶಾಲಿ ಕಣ್ಣುಗಳು, ತುಟಿಯಂಚಿನಲ್ಲಿ ಕಿರುನಗು ಕಚ್ಚಿ ಹಿಡಿದ ಹೊಗೆಯಾಡುವ ಬೀಡಿ!

ಸ್ವಲ್ಪ ಹೊತ್ತು 'ಲೋಕಾಬಿರಾಮ' ಮಾತಾಡಿದ ತರುವಾಯ ನನ್ನ ಪ್ರಸ್ತುತದ 'ಬೆಂಗಳೂರು' ವಾಸದ ಬಗ್ಗೆ ವಿಚಾರಿಸಿದ್ದಾಯಿತು. ಅಡ್ಯನಡ್ಕಕ್ಕೆ ಹೋಗಿ ಬಂದಿದ್ದುದರಿಂದ ಅಲ್ಲಿನ ಇತ್ತೀಚಿನ ಕೆಲವು ಘಟನೆಗಳ ಬಗ್ಗೆ ಸಂಕ್ಷಿಪ್ತ ಟೀಕೆ ಟಿಪ್ಪಣಿಯಾಯಿತು. ಬೆಂಗಳೂರಿನ 'ಹಳೆಯ ಪಳಕೆಯ ಮುಖಗಳ' ಬಗ್ಗೆ ಮೆಲುಕಾಡಿದ್ದಾಯಿತು. ಮಾತಿನ ಸುಳಿಯ ನಡುವೆ "ಗೋಪಾಲಕೃಷ್ಣ– ಈಗೇನು ಔಷಧಿ, ಚಿಕಿತ್ಸೆ ನಡೆದಿದೆ?" ಎಂದು ಕೇಳಿದೆ. ಯಾವುದೋ ಒಂದು 'ಪ್ರಿಸ್ಕ್ರಿಪ್ಶನ್' ಹುಡುಕುವ ಪ್ರಯತ್ನ ಮಾಡಿ, ಹಾಳಾದ್ದು ಎಲ್ಲಿ ಇಟ್ಟೇದ್ದೀನೋ ನೆನಪಾಗುತ್ತಿಲ್ಲ– ಕೈಗೆ ಸಿಗುತ್ತಿಲ್ಲ" ಎಂದು ಗೊಣಗಿಕೊಂಡು ಮಾತನ್ನು ಬೇರೆಡೆಗೆ ಹೊರಳಿಸಿದರು ಮಹರಾಯ ಅರ್ಥ ಸ್ಪಷ್ಟವಾಗಿತ್ತು. "ಔಷಧೋಪಚಾರ ಸಾಕಾಗಿದೆ.... ಇದ್ದಷ್ಟು ದಿವಸ, ಹೇಗೋ ದಿನ ತಳ್ಳುವುದು" ಎಂದು ನಗೆ ಮಾತಿನಲ್ಲಿ ವಿಷಯಕ್ಕೆ ಮುಕ್ತಾಯ ಹಾಕಿದರು! ಅದರಲ್ಲಿ ವಿಷಾದದ ಛಾಯೆಯಿತ್ತು....(ಮಾತಿನಲ್ಲಿ ಅಡಗಿದ್ದ "ಇನ್ನೆಷ್ಟು ದಿವಸ" ಎಂಬ ಅಂತರಾರ್ಥವನ್ನು ಆ ಕ್ಷಣದಲ್ಲಿ ನಾನು ಗ್ರಹಿಸಲಾರದೇ ಹೋದೆ!)

ಅಷ್ಟರಲ್ಲಿ ಫೋನ್ ಗುರುಗುಟ್ಟಿತು. 'ಶ್ರೀಮತಿ ಸಾವಿತ್ರಿ' ಹೊರಗೆಲ್ಲೋ ಹೋಗಿದ್ದರು. ತಾನು ಹಿಂದಿರುಗುವುದು ತುಸು ವಿಳ:ಂಬಬಾಗಬಹುದೆಂದು ತಿಳಿಸಲು ಫೋನ್ ಮಾಡಿದ್ದರು. ಆ ಮಾತುಗಳನ್ನು ಆಲಿಸಿಕೊಂಡು, "ಎಂ.ಬಿ. ಬಂದಿದ್ದಾನೆ" ಎಂದು ಹೇಳಿ ಫೋನ್ ಕೆಳಗಿಟ್ಟರು ಪ.ಗೋ.! ಸ್ವಲ್ಪ ಹೊತ್ತಿನಲ್ಲಿ 'ಸಾತಿ' ಹಿಂದಿರುಗಿದರು. ತನ್ನ ತಮ್ಮನ ಮನೆಯಲ್ಲಿ ನಡೆದ ಯಾವುದೋ 'ಪೂಜೆ'ಗೆ ಹೋಗಿದ್ದವರು, ಪ್ರಸಾದವನ್ನು ಕಟ್ಟಿಸಿಕೊಂಡು ಬಂದಿದ್ದರು. ಅದನ್ನೇ ಬಾಯಿತುಂಬ ಸವಿಯುತ್ತ ತಿಂದು ಮುಗಿಸಿ, ಸ್ವಲ್ಪ ಹೊತ್ತು ಹಗುರವಾಗಿ ಮಾತಾಡುತ್ತ ಕಾಲಕಳೆದವು. ನಾನು ಬೆಂಗಳೂರಿಗೆ ಹೊರಡುವ ಬಸ್‌ನ ವೇಳೆಯಾಗಿದ್ದುದರಿಂದ "ಬೈ ಬೈ" ಹೇಳಿದೆ.... ಅದೇ ಜತೆಯಲ್ಲಿದ್ದು ಸಂತೋಷದಿಂಧ ನಾವು ಕಳೆದ ಕೊನೆಯ ಕ್ಷಣಗಳಾದವರು!

11.8.1997ರಂದು ಪ.ಗೋಪಾಲಕೃಷ್ಣ ನಿಧನರಾದರು.

1998ರಲ್ಲಿ ಪ.ಗೋಪಾಲಕೃಷ್ಣ ಸಹೋದ್ಯೋಗಿಗಳೂ, ಅಭಿಮಾನಿಗಳೂ ಸೇರಿ "ಪ.ಗೋಪಾಲಕೃಷ್ಣ ಸ್ಮಾರಕ ಸಮಿತಿ'ಯನ್ನು ರಚಿಸಿ, ಸಂಸ್ಮರಣಾ ಸಂಚಿಕೆಯನ್ನು ಪ್ರಕಟಿಸಿದರು. ಮುಂದೆ ಶ್ರೀ.ಯು ನರಸಿಂಹರಾಯರ ನೇತೃತ್ವದಲ್ಲಿ ಅದನ್ನು ಒಂದು ಟ್ರಸ್ಟ್ ಆಗಿ ನೋಂದಾಯಿಸಿ, ಪ್ರತಿ ವರ್ಷ ಗ್ರಾಮೀಣ ಶ್ರೇಷ್ಠ ವರದಿಗಾರಿಕೆಗೆ ಪ್ರಶಸ್ತಿಯನ್ನು ನೀಡುವ ವ್ಯವಸ್ಥೆಯಾಯಿತು. ಅವರ ಕಾಲಂ ಸಾಹಿತ್ಯಗಳನ್ನು ಸಂಗ್ರಹಿಸಿ, ಪುಸ್ತಕಗಳಾಗಿ ಪ್ರಕಟಿಸುವ ಯೋಜನೆ ರೂಪುಗೊಂಡಿತು. ಹಿರಿಯ ಯಕ್ಷಗಾನ ಬಯಲಾಟ ಕಲಾವಿದ ದಿ॥ ಕುರಿಯ ವಿಠಲಶಾಸ್ತ್ರಿಗಳ ಬಣ್ಣದ ಬದುಕು (ಅನೇಕ ವರ್ಷಗಳ ಹಿಂದೆ ಪ.ಗೋಪಾಲಕೃಷ್ಣ ಬರೆದ ಲೇಖನ ಪುಸ್ತಕವಾಗಿ ಪ್ರಕಟವಾಯಿತು. ಪ.ಗೋ. ಕೆಲ ಸಾಹಿತ್ಯದ ಕೃತಿ "ನೋಛೇಂಜ್ ಕಥೆಗಳು" ಪುಸ್ತಕ ರೂಪದಲ್ಲಿ ಪ್ರಕಟವಾಯಿತು.

**(ಕೃಪೆಪ.ಗೋ. ಸಂಸ್ಮರಣೇ: 1998)**

* * * * *

# ನಮ್ಮ ಪರಿಸರ

ನಾವೆಲ್ಲ ಪ್ರಕೃತಿಯ ಮಡಿಲಲ್ಲಿ ಬದುಕುವ ಮಕ್ಕಳು. ನಮಗೆ ಜೀವಿಸಲು ನೀರು, ಗಾಳಿ ಮತ್ತು ಆಹಾರ ಅಗತ್ಯ. ಇವೆಲ್ಲ ಪ್ರಕೃತಿಯಿಂದಲೇ ನಮಗೆ ದೊರಕುತ್ತವೆ. ಬೀಸುವ ಗಾಳಿ, ಹರಿಯುವ ನೀರು, ಬೆಟಟ, ಅರಣ್ಯ, ಮಣ್ಣು, ನದಿ, ವನ್ಯಜೀವಿಗಳು–ಎಲ್ಲವು ಪ್ರಕೃತಿಯ ಕೊಡುಗೆಗಳು. ಇವುಗಳನ್ನೇ ನಾವು ಒಟ್ಟಾಗಿ 'ನಮ್ಮ ಪರಿಸರ' ಎಂದು ಕರೆಯುತ್ತೇವೆ. ನಮ್ಮ ಜೀವನ ಹಸನಾಗಿರಲು, ಪರಿಸರ ಶುದ್ಧವಾಗಿರಬೇಕು, ಸಮೃದ್ಧವಾಗಿರಬೇಕು ಮತ್ತು ಅದರಲ್ಲಿ ಸಮತೋಲನ ಇರಬೇಕು. ಪರಿಸರ ಹದಗೆಟ್ಟರೆ ಬದುಕೂ ಹದಗೆಡುತ್ತದೆ.

ಮನುಷ್ಯನಿಗೆ ಆಸೆಗಳು ಅನೇಕ. ಅವು ಮಿತಿಮೀರಿದರೆ ದುರಾಸೆ ಎನ್ನಿಸಿಕೊಳ್ಳುತ್ತವೆ. ಗಾಂಧೀಜಿ ಹೇಳಿದ್ದಾರೆ; "ಪ್ರಕೃತಿ ಮನುಷ್ಯನ ಅಗತ್ಯಗಳನ್ನು ಪೂರೈಸುತ್ತದೆ. ಆದರೆ ಅವನ ದುರಾಸೆಗಳನ್ನಲ್ಲ" ನಮ್ಮ ಅಗತ್ಯಗಳನ್ನು ಮೀರಿ ನಾವು ಪ್ರಕೃತಿಯನ್ನು ಕೊಳ್ಳೆ ಹೊಡೆಯಬಾರದು. ಅದರ ಪರಿಣಾಮ ನಮ್ಮ ಮಕ್ಕಳು, ಮೊಮ್ಮಕ್ಕಳ ಮೇಲೆಯೇ ಆಗುತ್ತದೆ. ಆಧುನಿಕತೆಯ ಹೆಸರಿನಲ್ಲಿ, ಔದ್ಯೋಗಿಕ ಪ್ರಗತಿಯ ನೆಪದಲ್ಲಿ ನಮ್ಮ ದುರಾಸೆಗಳಿಗಾಗಿ ನಾವು ನಮ್ಮ ಪರಿಸರವನ್ನು ಹಾಳು ಮಾಡಿಕೊಳ್ಳುತ್ತಿದ್ದೇವೆ. ಇದು ನಿಲ್ಲದಿದ್ದರೆ ಗಂಭೀರ ಪರಿಣಾಮಗಳಾದಾವು.

## ಅರಣ್ಯಗಳು:

ಅರಣ್ಯವೆಂದರೆ ಹೆಚ್ಚಿನವರಿಗೆ ದೊಡ್ಡ ಮರಗಳು ಬೆಳೆದಿರುವ ವನ ಎಂಬ ಭಾವನೆ ಇದೆ. ಅವುಗಳ ಉಪಯೋಗವೆಂದರೆ ನಮಗೆ ಕಟ್ಟಿಗೆ, ಹಣ್ಣು ಕಾಯಿಗಳು ಮತ್ತು ಔಷಧೀಯ ಗಿಡಮೂಲಿಕೆಗಳನ್ನು ಒದಗಿಸುವುದು ಮಾತ್ರ ಎಂಥೂ ನಾವು ತಿಳಿಯುತ್ತೇವೆ. ಇವೆಲ್ಲ ಉಪಯೋಗಗಳು ಇರುವುದು ನಿಜವೇ; ಆದರೆ ಪರಿಸರದಲ್ಲಿ ಅರಣ್ಯಗಳ ಪಾತ್ರ ಇಷ್ಟಕ್ಕೆ ಮಾತ್ರ ಮೀಸಲಾಗಿಲ್ಲ.....

## ಹರಿದೋಡುವ ಮಳೆ ನೀರು

ಮಳಗಾಲದಲ್ಲಿ ರಭಸದಿಂದ ಬೀಳುವ ಮಳೆನೀರು ಸಾಧ್ಯವಿದ್ದಷ್ಟು ಆಳವಾಗಿ ನೆಲದಲ್ಲಿ ಇಂಗಿಕೊಳ್ಳಬೇಕು. ಅಂಥ ನೀರು ಭೂಮಿಯ ಅಡಿಯಲ್ಲಿರುವ ಅಂತರ್ಜಲದ ಪ್ರವಾಹಕ್ಕೆ ಸೇರಿಕೊಳ್ಳುತ್ತದೆ. ಅದರಿಂದ ಕೆರೆ, ಬಾವಿಗಳಲ್ಲಿ ವರ್ಷವಿಡೀ ಸಮೃದ್ಧವಾಗಿ ನೀರು ದೊರಕುತ್ತದೆ. ದಟ್ಟವಾದ ಕಾಡುಗಳಿದ್ದಲ್ಲಿ ಅವುಗಳ ಅಗಲವಾದ ಎಲೆಗಳು ಚಾಚಿಕೊಂಡು ಮಳೆಯ ಹನಿಗಳನ್ನು ತಡೆಗಟ್ಟುತ್ತವೆ. ಎಲೆಯ ಮೇಲೆ ಬಿದ್ದ ಮಳೆ ನಿಧಾನವಾಗಿ ನೆಲಕ್ಕೆ ತೊಟ್ಟಿಕ್ಕುತ್ತದೆ. ಹನಿಹನಿಯಾಗಿ ಬೀಳುವ ನೀರನ್ನು ಭೂಮಿ ಸುಲಭವಾಗಿ ಹೀರಿಕೊಂಡು ಸಂಗ್ರಹಿಸುತ್ತದೆ.

## ಭೂ ಸವಕಳಿ; ಕೆರೆಯಲ್ಲಿ ಹೂಳು

ಮರಗಳು ಹೆಚ್ಚಿನ ಸಂಖ್ಯೆಯಲ್ಲಿದ್ದಾಗ ಅವುಗಳ ಬೇರುಗಳೂ ಆಳವಾಗಿ ನೆಲದಲ್ಲಿ ಇಳಿದಿರುತ್ತವೆ. ಇವು ಮೇಲ್ಭಾಗದ ಮಣ್ಣನ್ನು ಗಟ್ಟಿಯಾಗಿ ಕಚ್ಚಿಕೊಂಡು ಹಿಡಿದಿರುತ್ತದೆ. ಗಿಡ ಮರಗಳಾಗಲಿ, ಅರಣ್ಯಗಳಾಗಲಿ ಇಲ್ಲದಿದ್ದರೆ ಮಳೆನೀರು ರಭಸದಿಂದ ನೆಲಕ್ಕೆ ಅಪ್ಪಳಿಸುತ್ತದೆ. ಭೂಮಿಯ ಆಳಕ್ಕೆ ಇಂಗಿ ಹೋಗುವ ಬದಲಿಗೆ ಮೇಲ್ಭಾಗದಲ್ಲಿರುವ ಫಲವತ್ತಾದ ಮಣ್ಣನ್ನು ಕೊಚ್ಚಿಕೊಂಡು ಹರಿದು ಹೋಗುತ್ತದೆ. ಆಗ ಮಳೆನೀರು ಉತ್ತಮವಾದ ಮಣ್ಣು ಎರಡನ್ನೂ ನಾವು ಕಳೆದು ಕೊಳ್ಳುತ್ತೇವೆ. ಮಮಳೆನೀರಿನಲ್ಲಿ ಕೊಚ್ಚಿ ಬಂದ ಮಣ್ಣು ಕೆರೆ, ಜಲಾಶಯಗಳಲ್ಲಿ, ನದಿಯ ಪಪಾತ್ರದಲ್ಲಿ ಸಂಗ್ರಹವಾಗುತ್ತದೆ.

ಇದರಿಂದ ಇನ್ನೂ ಎರಡು ಹಾನಿಗಳಿವೆ; ನದಿ, ಕೆರೆಗಳಲ್ಲಿ ಹೂಳು ತುಂಬಿ ನೀರಿನ ಪ್ರಮಾಣ ಕಡಿಮೆಯಾಗುತ್ತದೆ; ಹೂಳಿನಿಂದ ಅಂತರ್ಜಲ ಹರಿದು ಬರುವ ಮಾರ್ಗಗಳು ಮುಚ್ಚಿಕೊಂಡು ನೀರು ಇನ್ನೂ ಕಡಿಮೆಯಾಗುತ್ತದೆ. ಹೂಳು ತುಂಬಿದ ನದಿಯ ಹರವು ಮತ್ತು ಆಳ ಕಡಿಮೆಯಾಗುತ್ತದೆ; ಬೇಸಿಗೆಯಲ್ಲಿ ಅದು ಬೇಗ ಬತ್ತಿ ಹೋಗುತ್ತದೆ. ಇದಕ್ಕೆ ವಿರುದ್ಧವಾಗಿ ಮಳೆಗಾಲದಲ್ಲಿ ಹೆಚ್ಚಿನ ನೀರು ಹರಿದು ಬಂದಾಗ ಉಕ್ಕಿ ಹರಿದು ನೆರೆ ಹಾವಳಿಯಾಗುತ್ತದೆ.

## ಕಾಡಿದ್ದರೆ ಕಾಲ ಕಾಲಕ್ಕೆ ಮಳೆ

ಅರಣ್ಯಗಳು ಮಳೆಯ ಮೇಲೆಯೂ ತಮ್ಮ ಪ್ರಭಾವ ಬೀರುತ್ತವೆ. ಮರಗಳು ದಟ್ಟವಾಗಿ ಬೆಳೆದ ಕಾಡುಗಳಲ್ಲಿ ಮಳೆಯೂ ಕಾಲ ಕಾಲಕ್ಕೆ ತಪ್ಪದೇ ಆಗುತ್ತದೆ. ಇಲ್ಲದಿದ್ದರೆ ಮಳೆಯ ರೀತಿ ಅಸ್ತವ್ಯಸ್ತಗೊಂಡು, ಕೆಲವು ವರ್ಷ ಅತಿ ವೃಷ್ಟಿಯಾದರೆ ಕೆಲವು ವರ್ಷ ಅನಾವೃಷ್ಟಿಯಾಗುತ್ತದೆ.

ಮರಗಳಿಂದ ನಾವು ಉಸಿರಾಡುವ ಹವೆಯೂ ಶುದ್ಧವಾಗುತ್ತದೆ. ನಾವು ಉಸಿರಾಡುವಾಗ ಹವೆಯಲ್ಲಿನ ಪ್ರಾಣವಾಯುವನ್ನು ಹೀರಿ ಮಲಿನವಾಯು ಇಂಗಾಲದ ಡೈಆಕ್ಸೈಡನ್ನು ಹೊರಗೆ ಬಿಡುತ್ತೇವೆ. ಮರಗಳ ಉಸಿರಾಟ ಇದಕ್ಕೆ ತದ್ವಿರುದ್ಧ. ಅವು ಇಂಗಾಲದ ಡೈಆಕ್ಸೈಡನ್ನು ಹೀರಿಕೊಂಡು ನಮಗೆ ಬೇಕಾಗುವ ಪ್ರಾಣವಾಯುವನ್ನು ಹೊರಗೆ ಬಿಡುತ್ತವೆ. (ಪ್ರಾಣ ವಾಯು 'ಆಕ್ಸಿಜನ್' ಎಂಧು ಹೇಳುತ್ತಾರೆ).

**ಅರಣ್ಯಗಳ ಪುನರುಜ್ಜೀವನ**

ನಮ್ಮ ಜೀವನಕ್ಕೆ ಅತ್ಯಾವಶ್ಯಕವಾದ ಪ್ರಾಣವಾಯುಉ, ಮಳೆ, ನೀರು, ಮಣ್ಣು ಎಲ್ಲವನ್ನೂ ಮರಗಳು ನಿಯಂತ್ರಿಸುತ್ತವೆ. ಆದ್ದರಿಂದ ಸಮೃದ್ಧ ಪರಿಸರಕ್ಕೆ ಆದಷ್ಟು ಹೆಚ್ಚಿನ ಪ್ರಮಾಣದಲ್ಲಿ ಅರಣ್ಯಗಳು ಇರಬೇಕಾದದ್ದು ಅಗತ್ಯ. ಅರಣ್ಯವೆಂದರೆ ಊರ ಹೊರಗೆ ದೂರ ಇರುವ ಮರಗಳು ಎಂದು ಮಾತ್ರ ಅರ್ಥವಲ್ಲ. ಊರಲ್ಲಿಯೂ ಸಾಧ್ಯವಿದ್ದ ಗಿಡ, ಮರಗಳನ್ನು ಬೆಳೆಸಬೇಕು. ಶಾಸ್ತ್ರಜ್ಞರ ಪ್ರಕಾರ ಭೂಮಿಯ ಮೂರರಲ್ಲಿ ಒಂದು ಭಾಗವಾದರೂ ಪೂರ್ತಿಯಾಗಿ ಮರಗಳಿಂದ ತುಂಬಿರಬೇಕು. ಆದರೆ ಇಂದು ಹತ್ತರಲ್ಲಿ ಒಂದು ಭಾಗದಷ್ಟು ಕಾಡುಗಳನ್ನೂ ನಾವು ಉಳಿಸಿಕೊಂಡಿಲ್ಲ.

**ವೃಕ್ಷನಾಶ –ಏಕೆ ಮತ್ತು ಹೇಗೆ ಆಗುತ್ತಿದೆ?**

ವನಗಳ ವಿನಾಸಕ್ಕೆ ಅನೇಕ ಕಾರಣಗಳಿವೆ: ಕಾಗದ, ಕೃತಕನೂಲು(ರೇಯಾನ್, ಪಾಲಿಫೈಬರ್) ಕಾರ್ಖಾನೆಗಳಿಗೆಂದು ಸಹಸ್ರಾರು ಹೆಕ್ಟೇರ್ ಅತ್ಯುತ್ತಮ ಕಾಡುಗಳ ನಾಶವಾಗಿದೆ; ಇನ್ನೂ ಆಗುತ್ತಲೇ ಇದೆ. ಅಣೆಕಟ್ಟುಗಳು, ನೀರಾವರಿ ಯೋಜನೆಗಳು, ಗಣಿಗಾರಿಕೆ ಮತ್ತು ಇತರ ದೊಡ್ಡ ಯೋಜನೆಗಳ ಹೆಸರಿನಲ್ಲಿ ಅರಣ್ಯ ನಾಶವಾಗುತ್ತಿದೆ. ಜನಸಂಖ್ಯೆ ಹೆಚ್ಚಿದಂತೆ ಮರಮುಟ್ಟುಗಳಿಗೆ ಬೇಡಿಕೆಯೂ ಏರುತ್ತದೆ. ಅರಣ್ಯಗಳ ನಾಶವನ್ನು ತಪ್ಪಿಸಿ ಅವುಗಳನ್ನು ಪುನರುಜ್ಜೀವನಗೊಳಿಸಬೇಕು. ಇಲ್ಲದಿದ್ದರೆ ಮುಂಬರುವ ವರ್ಷಗಳಲ್ಲಿ ಜೀವನ ಇನ್ನಷ್ಟು ಕಷ್ಟದಾಯಕವಾದೀತು.

**ಬದಲಿ ಇಂದನ ವ್ಯವಸ್ಥೆ**

ಮೊದಲಿಗೆ ಅರಣ್ಯಗಳ ಮೇಲೆ ನಮ್ಮ ಅವಲಂಬನೆಯನ್ನು ಕಡಿಮೆ ಮಾಡಿಕೊಳ್ಳಬೇಕು. ಕಾಡಿನಿಂದ ಬೇಕಾದ್ದನ್ನು ಸ್ವಲ್ಪವೇ ಪ್ರಮಾಣದಲ್ಲಿ, ಗಿಡಮರಗಳಿಗೆ ಹೆಚ್ಚಿನ ಹಾನಿಯಾಗದಂತೆ ತೆಗೆದುಕೊಳ್ಳಬೇಕು. ಮರಗಳನ್ನು ಬೇರು ಸಹಿತ ಕಿತ್ತು ನಾಶ ಮಾಡಲು ಬಿಡಬಾರದು. 'ಅಸ್ತ್ರ'ದಂತ ಸುಧಾರಿತ ಒಲೆಯನ್ನು ಮನೆಗಳಲ್ಲಿ ಬಳಸುವುದು ಒಳ್ಳೆಯದು. ಅದರಲ್ಲಿ ಕಡಿಮೆ ಕಟ್ಟಿಗೆ ಉರಿಸಿ, ಹೊಗೆ ಇಲ್ಲದೆ ಅಡಿಗೆ ಮಾಡಬಹುದು. ಜೈವಿಕ ಅನಿಲ ಅಥವಾ ಗೋಬರ್ ಸ್ಥಾವರವನ್ನು

ಸ್ಥಾಪಿಸುವುದು ಇನ್ನೂ ಒಳ್ಳೆಯದು. ವ್ಯರ್ಥವಾಗಿ ಹೋಗುವ ಸಗಣಿಯನ್ನು ಅದು ಅನಿಲಕ್ಕೆ ಪರಿವರ್ತಿಸುತ್ತದೆ. ದಿನವೂ ನೀರು ಕಾಯಿಸುವ ಅಗತ್ಯ ಇದ್ದಲ್ಲಿ ಸೌರಶಕ್ತಿಯ ನೀರೊಲೆಯನ್ನೇ ನಿರ್ಮಿಸಬಹುದು.

## ಗೋಮಾಳ: ಸಾರ್ವಜನಿಕ ಆಸ್ತಿ

ಪ್ರತಿಯೊಂದು ಹಳ್ಳಿಗೂ ಸೇರಿದಂತೆ ಅದರದೇ ಆದ ಅರಣ್ಯ-ಗೋಮಾಳದಂತ ಸಾಮೂಹಿಕ ಭೂಮಿ ಇರುತ್ತದೆ. ಇವು ಗ್ರಾಮದ ಮಹತ್ವಪೂರ್ಣ ಸಾರ್ವಜನಿಕ ಆಸ್ತಿಗಳು. ಗ್ರಾಮಸ್ಥರೆಲ್ಲರೂ ಒಟ್ಟಾಗಿ ಅವುಗಳನ್ನು ಬೆಳೆಸಿ, ಪೋಷಿಸಬೇಕು. ಸಾಮೂಹಿಕ ಭೂಮಿಯಲ್ಲಿ ಜಾನುವಾರುಗಳಿಗೆ ಬೇಕಾದ ಮೇವು ಮತ್ತು ಇತರ ಉಪಯುಕ್ತ ಗಿಡಗಳನ್ನು ಬೆಳೆಸಬೇಕು.

## ನೀಲಗಿರಿಯೊಂದೇ ಸಾಲದು

ಅರಣ್ಯಗಳ ಪುನರುಜ್ಜೀವನದ ಹೆಸರಿನಲ್ಲಿ ನಮ್ಮ ಹಳ್ಳಿಗಳ ಸುತ್ತ ನೀಲಗಿರಿಯ ನೆಡು ತೋಪುಗಳನ್ನು ಬೆಳೆಸಲಾಗುತ್ತಿದೆ; ಇದು ಸರಿಯಲ್ಲ; ನೀಲಗಿರಿ ಅಥವಾ ಒಂದೇ ಜಾತಿಯ ಮರಗಳು ಇರುವ ನೆಡುತೋಪು ಅರಣ್ಯವೇ ಅಲ್ಲ. ಎಲ್ಲಿ ವಿವಿಧ ಜಾತಿಯ ಮರ, ಗಿಡ, ಬಳ್ಳಿಗಳು ದಟ್ಟವಾಗಿ ಬೆಳೆದಿವೆಯೋ ಅದನ್ನು ಮಾತ್ರ ಅರಣ್ಯವೆಂದು ಕರೆಯಬಹುದು. ನೀಲಗಿರಿಯ ನೆಡುತೋಪು ನೆಲವನ್ನು ನಿಸ್ಸತ್ವಗೊಳಿಸಿ ನೀರನ್ನು ಬತ್ತಿಸುತ್ತದೆ.

ಆಲ, ಮಾವು, ಬೇವು, ಮತ್ತಿ, ಹೊನ್ನೆ, ಹುಣಸೆ, ಹಲಸು ಮುಂತಾದವು ನಮ್ಮಲ್ಲಿ ಸ್ವಾಭಾವಿಕವಾಗಿ ಬೆಳೆಯುವ ಮರಗಳು. ಇವುಗಳನ್ನು ಸಾಧ್ಯವಿದ್ದ ಎಲ್ಲಾ ಕಡೆಗಳಲ್ಲಿ ನೆಟ್ಟು ಪೋಷಿಸಬೇಕು. ವಿಶಾಲವಾದ ಮರಗಳು ಬೆಳೆಯಲು ಎಷ್ಟೋ ವರ್ಷಗಳು ಬೇಕು. ಯಾವ ಮರಗಳಿಂದ ನಾವು ಇಂದು ಲಾಭ ಪಡೆಯುತ್ತಿದ್ದೇವೆಯೋ ಅವುಗಳನ್ನಾದರೂ ನಮ್ಮ ಹಿರಿಯರೆ ನಮ್ಮ ಒಳಿತಿಗಾಗಿ ನೆಟ್ಟು ಪೋಷಿಸಿದ್ದರಲ್ಲವೆ? ನಾವು ಬೆಳೆಸುವ ಮರಗಳು ಮುಂಬರುವ ನಮ್ಮ ಮಕ್ಕಳ, ಮೊಮ್ಮಕ್ಕಳ ದಿನಗಳ ಪರಿಸರವನ್ನು ಶುದ್ಧವಾಗಿಡಲು ಅಗತ್ಯವಾಗಿದೆ.

## ನೀರು

ಮನುಷ್ಯನಿಗೆ ನೀರು ಅತ್ಯಾವ್ಯಶ್ಯಕ. ಅದಿಲ್ಲದೆ ಅವನು ಬದುಕಲಾರ. ನೀರು ಸಾಕಷ್ಟು ಪ್ರಮಾಣದಲ್ಲಿ ಸಿಗಬೇಕು; ಶುದ್ಧವಾಗಿರಬೇಕು. ಹಿಂದೆಲ್ಲ ನಮ್ಮ ಹಳ್ಳಿಗಳ ಕೆರೆ, ಬಾವಿಗಳಲ್ಲಿ ವರ್ಷವಿಡೀ ನೀರು ದೊರಕುತ್ತಿತ್ತು. ಈಗ ಅವು ಬೇಸಿಗೆಗೆ ಮೊದಲೇ ಬತ್ತಿ ಹೋಗುತ್ತಿವೆ. ಅರಣ್ಯ ನಾಶವೇ ಇದಕ್ಕೆ ಕಾರಣ. ನೀರು

ಹೆಚ್ಚಿನ ಪ್ರಮಾಣದಲ್ಲಿ ಬಳಸಬೇಕು. ಮಹಾರಾಷ್ಟ್ರದ ಕೆಲವು ಹಳ್ಳಿಗಳಲ್ಲಿ ಇಪ್ಪತ್ತು ವರ್ಷಗಳ ಹಿಂದೆ ಗ್ರಾಮಸ್ಥರೆಲ್ಲರೂ ಒಟ್ಟಾಗಿ ಗಿಡ ನೆಡುವ ಕಾರ್ಯಕ್ರಮಗಳನ್ನು ಆರಂಭಿಸಿದರು. ಗಿಡಗಳು ಬೆಳೆದಂತೆ ಹಳ್ಳಿಯ ಕೆರೆ ಮತ್ತು ಬಾವಿಗಳಲ್ಲಿ ನೀರಿನ ಮಟ್ಟ ಏರತೊಡಗಿತು. ಇಂದು ಅಲ್ಲಿನ ಬಾವಿಗಳಲ್ಲಿ ವರ್ಷವಿಡೀ ನೀರು ಸಿಗುವಂತಾಗಿದೆ.

ಮರಗಳು ಇಲ್ಲದಾಗ ಕೆರೆ, ಕಾಲುವೆ, ನದಿಗಳಲ್ಲಿ ಹೂಳು ತುಂಬುವುದೂ ಜಾಸ್ತಿ. ಆದ್ದರಿಂದ ಮರ ಬೆಳೆಸುವ ಜೊತೆಗೆ ಕೆರೆಗಳಲ್ಲಿ ಹೂಳು ತೆಗೆಯುವ ಕೆಲಸವನ್ನೂ ಮಾಡಬೇಕು. ಬಾವಿಗಳನ್ನೂ ಸ್ವಚ್ಛವಾಗಿಡಬೇಕು. ಕಸಕಡ್ಡಿ ಬೀಳದಂತೆ ಬಾವಿಗಳಿಗೆ ಮೇಲ್ಮುಚ್ಚಳ ಹಾಕಬೇಕು.

## ನದಿ ನೀರಿನಲ್ಲಿ ವಿಷ

ನದಿಗಳಲ್ಲಿ ನೀರು ಇದ್ದರೆ ಮಾತ್ರ ಸಾಲದು; ಅದು ಶುದ್ಧವಾಗಿರಬೇಕು; ನಮ್ಮ ಉಪಯೋಗಕ್ಕೆ ಯೋಗ್ಯವಾಗಿರಬೇಕು. ಆದರೆ ನಮ್ಮ ದೇಶದಲ್ಲಿರುವ ನೂರಕ್ಕೆ ಎಪ್ಪತ್ತರಷ್ಟು ನದಿಗಳ ನೀರು ಕುಡಿಯಲು ಯೋಗ್ಯವಾಗಿರುವುದಿಲ್ಲ. ದಂಡೆಯಲ್ಲಿ ಸ್ಥಾಪಿಸಿರುವ ಕಾರ್ಖಾನೆಗಳು ತಮ್ಮ ಹೊಲವನ್ನು ನೇರವಾಗಿ ನದಿಗಳಲ್ಲಿ ಬಿಡುವುದೇ ಇದಕ್ಕೆ ಕಾರಣ. ಇಂಥ ಹೊಲಸಿನಲ್ಲಿ ಅಪಾಯಕಾರಿ ರಾಸಾಯನಿಕಗಳು ಇರುತ್ತವೆ; ವಿಷಕಾರಿ ಪದಾರ್ಥಗಳೂ ಇರುತ್ತವೆ; ಭಾರವಾದ ಲೋಹದ ಧಾತುಗಳೂ ಇರುತ್ತವೆ. ಕೆಲವೊಮ್ಮೆ ಕಾರ್ಖಾನೆಯ ಕಲ್ಮಷ ಅತ್ಯಂತ ಬಿಸಿಯಾಗಿ ಕುದಿಯುತ್ತಿರುತ್ತದೆ!

ಕರ್ನಾಟಕದಲ್ಲಿ ಭದ್ರಾ, ತುಂಗಭದ್ರಾ, ಕಾಳಿ ಮುಂತಾದ ನದಿಗಳ ನೀರು ಕಾರ್ಖಾನೆಗಳು ಹೊರತಳ್ಳುವ ಕಲ್ಮಷದಿಂದ ಕಲುಷಿತಗೊಂಡಿದೆ. ಕಲುಷಿತಗೊಂಡ ನೀರನ್ನು ಸೇವಿಸುವುದು ಅಪಾಯಕರ. ಅದರಿಂದ ದೇಹದಲ್ಲಿ ವಿಚಿತ್ರವಾದ ವಿಕಾರಗಳೂ ಕಾಯಿಲೆಗಳೂ ಉಂಟಾಗುತ್ತವೆ. ಕಾರ್ಖಾನೆಗಳಿಂದ ಕಲುಷಿತಗೊಂಡ ನೀರಿನಲ್ಲಿ ಸ್ನಾನಮಾಡುವುದು ಕೂಡ ಅಹಿತಕರ. ಅದರಿಂದ ಮೈಹುಣ್ಣು, ಚರ್ಮರೋಗಗಳು ಉಂಟಾಗಬಹುದು. ಕಲುಷಿತಗೊಂಡ ನೀರು ಜಾನುವಾರುಗಳ ಆರೋಗ್ಯಕ್ಕೂ ಒಳ್ಳೆಯದಲ್ಲ. ದೂಷಿತ ನದಿಯ ನೀರಿನಲ್ಲಿ ಮೀನುಗಳು ಬದುಕುವುದು ಕಷ್ಟ; ಬದುಕಿ ಉಳಿದ ಮೀನುಗಳೂ ನದಿಯ ಹೊಲಸನ್ನು ತಮ್ಮ ದೇಹದಲ್ಲಿ ತುಂಬಿ ಕೊಂಡಿರುತ್ತವೆ ಅವುಗಳನ್ನು ತಿಂದರೆ ಅದೇ ವಿಷ ನಮ್ಮ ದೇಹಕ್ಕೂ ಸೇರಿಕೊಳ್ಳುತ್ತದೆ. ಕಾರ್ಖಾನೆಗಳು ತಮ್ಮ ಕಲ್ಮಷಗಳನ್ನು ಕುಡಿಯುವ ನೀರಿನ ರೂಪದಲ್ಲಿ ಬಿಟ್ಟಾಗ ರಾಶಿಗಟ್ಟಲೆ ಮೀನುಗಳು ಬಲಿಯಾಗಿ ಚಿಕಿತ್ಸೆ ಪಡೆಯುವುದಕ್ಕಿಂತ ನದಿಯ ನೀರು ಶುದ್ಧವಾಗಿರುವಂತೆ ನೋಡಿಕೊಳ್ಳುವುದೇ ಉತ್ತಮ.

## ಮಣ್ಣು ಮತ್ತು ಬೇಸಾಯ

ಆಧುನಿಕ ಬೇಸಾಯ ಎಂದಕೂಡಲೇ ನಾವು ಹೈಬ್ರಿಡ್ ಬೀಜಗಳು, ರಸಗೊಬ್ಬರ, ಕೀಟನಾಶಕಗಳು, ನೀರಾವರಿ ಕಾಲುವೆಗಳು ಮೊದಲಾದುವನ್ನು ಕಲ್ಪಿಸಿಕೊಳ್ಳುತ್ತೇವೆ. ಇಂಥ ಬೇಸಾಯ ಪದ್ಧತಿ ಕೆಲವು ಕಾಲ ಲಾಭ ತರಬಹುದಾದರೂ ಅದರಿಂದ ಪರಿಸರಕ್ಕೆ ಆಗುವ ಹಾನಿ ಶಾಶ್ವತವಾದದ್ದು.

## ದೋಷಪೂರಿತ ಕೀಟನಾಶಕಗಳು

ಮಾರುಕಟ್ಟೆಯಲ್ಲಿ ಇಂದು ಸಿಗುವ ಹೆಚ್ಚಿನ ಕೀಟನಾಶಕಗಳು ಆರೋಗ್ಯಕ್ಕೆ ಹಾನಿಕರ. ಅವುಗಳನ್ನು ಸಿಂಪಡಿಸಿದ ಧಾನ್ಯ, ಹಣ್ಣು, ತರಕಾರಿಗಳ ಸಾರದಲ್ಲಿ ವಿಷ ತುಂಬಿಕೊಳ್ಳುತ್ತದೆ. ಸೇವಿಸುವವರಿಗೆ ರೋಗಗಳು ಉಂಟಾಗುತ್ತವೆ. ಕೀಟನಾಶಕಗಳನ್ನು ಸಿಂಪಡಿಸುವವರ ಉಸಿರಿನಲ್ಲಿಯೂ ಅವು ಸೇರಿಕೊಂಡು ಶ್ವಾಸಕೋಶದ ಕಾಯಿಲೆಗಳಿಗೆ ಕಾರಣವಾಗುತ್ತವೆ. ಅತಿಯಾದ ಕೀಟನಾಶಕಗಳ ಬಳಕೆಯಿಂದ ಮಣ್ಣು ಸಹ ಕಲುಷಿತಗೊಳ್ಳುತ್ತದೆ. ಆರೋಗ್ಯಕ್ಕೆ ಮಾರಕವೆಂದು ವಿದೇಶಗಳಲ್ಲಿ ಪ್ರತಿಬಂಧಿಸಲಾದ ಡಿ.ಡಿ.ಟಿ.ಯಂತಹ ಅನೇಕ ಕೀಟನಾಶಕಗಳು ಇನ್ನೂ ನಮ್ಮ ಮಾರುಕಟ್ಟೆಯಲ್ಲಿ ದೊರೆಯುತ್ತಿವೆ; ಅವುಗಳನ್ನು ಸರ್ವಥಾ ಉಪಯೋಗಿಸಬಾರದು.

## ನೈಸರ್ಗಿಕವಾಗಿ ಕೀಟ ನಿವಾರಣೆ

ಬೇಸಾಯಕ್ಕೆ ಅತ್ಯಂತ ಕಡಿಮೆ ಪ್ರಮಾಣದಲ್ಲಿ, ಸುರಕ್ಷಿತವೆನ್ನಿಸಿಕೊಂಡ ಕೀಟನಾಶಕಗಳನ್ನು ಮಾತ್ರ ಬಳಸಬೇಕು. ವಿಷಪೂರಿತ ರಾಸಾಯನಿಕಗಳ ಬಳಕೆಯನ್ನು ಕೈಬಿಡಬೇಕು . ನೈಸರ್ಗಿಕವಾಗಿ ದೊರೆಯುವ ಅನೇಕ ವಸ್ತುಗಳಲ್ಲಿಯೇ ಔಷಧೀಯ ಗುಣಗಳಿರುತ್ತವೆ. (ಉದಾಹರಣೆಗೆ ಬೇವಿನೆಣ್ಣೆ) ಕಪ್ಪೆ, ಹಾವುಗಳಂಥ ಪ್ರಾಣಿಗಳು ಹುಳ ಹುಪ್ಪಟೆಗಳನ್ನು ತಿನ್ನುತ್ತ ಕೀಟಗಳ ಹತೋಟಿಗೆ ನೆರವಾಗುತ್ತವೆ. ಅವುಗಳಿಗೆ ಸ್ವೇಚ್ಛೆಯಾಗಿ ಹೊಲದಲ್ಲಿ ಓಡಾಡಿಕೊಂಡಿರುಲು ಬಿಡಬೇಕು. ಚೆಂಡುಮಲ್ಲಿಗೆ, ಬೆಳ್ಳುಳ್ಳಿಯಂಥ ಗಿಡಗಳು ನೈಸರ್ಗಿಕ ಕೀಟ ನಿವಾರಕಗಳು. ಇಡೀ ಹೊಲದಲ್ಲಿ ಒಂದೇ ಬೆಳೆ ಇದ್ದಾಗ ಅದಕ್ಕೆ ರೋಗ ತಗಲುವ ಸಾಧ್ಯತೆ ಹೆಚ್ಚು. ಕ್ರಿಮಿಕೀಟಗಳ ಹಾವಳಿಯೂ ಹೆಚ್ಚು, ರಾಸಾಯನಿಕಗಳ ಅಗತ್ಯ ಉಂಟಾಗುತ್ತದೆ. ಇದರ ಬದಲಿಗೆ ಜಮೀನಿನ ಸುತ್ತ ಮರಗಳನ್ನು ನೆಟ್ಟು , ಒಳಗಡೆ ದವಸ-ಧಾನ್ಯ ಹಣ್ಣು, ಹೂವು ತರಕಾರಿಗಳನ್ನು ಮಿಶ್ರವಾಗಿ ಬೆಳೆಸಬಹುದು. ಪ್ರತಿವರ್ಷವೂ ಬೆಳೆಗಳನ್ನು ಬದಲಿಸಬೇಕು. ಇದು ಅತ್ಯಂತ ಮಹತ್ವದ್ದು. ವೈವಿಧ್ಯಮಯ ಸಸ್ಯಗಳಿರುವ ಪರಿಸರದಲ್ಲಿ ಅವುಗಳಿಂದ ದೊರೆಯುವ ಆಹಾರವು ಸಮೃದ್ಧವೂ ಶುದ್ಧವೂ ಆಗಿರುತ್ತದೆ.

## ಸಾವಯವ ಗೊಬ್ಬರವೇ ಮೇಲು

ರಾಸಾಯನಿಕ ಗೊಬ್ಬರಗಳ ಅತಿ ಬಳಕೆಯಿಂದ ಮಣ್ಣು ತನ್ನ ಸಾರವನ್ನು ಕಳೆದು ಕೊಳ್ಳುತ್ತದೆ; ಕ್ರಮೇಣ ಬರಡಾಗುತ್ತದೆ. ಅದರ ಬದಲಿಗೆ ಸಾವಯವ ಗೊಬ್ಬರಗಳನ್ನು ಬಳಸುವುದು ಉತ್ತಮ. (ಹಸಿರೆಲೆ ಮತ್ತು ಕಾಂಪೋಸ್ಟ್ ಗೊಬ್ಬರಗಳನ್ನು ಈಗಾಗಲೇ ನಮ್ಮ ರೈತರು ಬಳಸುತ್ತಿದ್ದಾರೆ. ಇದು ಇನ್ನೂ ಹೆಚ್ಚಬೇಕು). ಇತ್ತೀಚೆಗೆ ಎರೆಹುಳುಗಳನ್ನು ಸಾಕಿ ಅವುಗಳಿಂದ ಸಾವಯವ ಗೊಬ್ಬರಗಳನ್ನು ತಯಾರಿಸುವ ಪದ್ಧತಿ ಜನಪ್ರಿಯವಾಗುತ್ತಿದೆ. ಬೇಸಾಯದ ಕಳೆ, ಉಳಿದ ಆಹಾರ, ತರಕಾರಿ –ಹಣ್ಣಿನ ಸಿಪ್ಪೆ ಮುಂತಾದ ನಿರುಪಯುಕ್ತ ವಸ್ತುಗಳನ್ನು ಕೊಳೆಯಿಸಿ ನೀಡಿದರೆ ಎರೆಹುಳುಗಳು ಅತ್ಯುತ್ತಮ ದರ್ಜೆಯ ಗೊಬ್ಬರವನ್ನು ತಯಾರಿಸಬಲ್ಲವು. ಎರೆಹುಳುಗಳಿಂದ ದೊರೆಯುವ ಗೊಬ್ಬರ ಸುರಕ್ಷಿತ, ನೈಸರ್ಗಿಕ ಮತ್ತು ಅತ್ಯಂತ ಫಲವತ್ತಾದ ಗೊಬ್ಬರ.

## ಹೈಬ್ರಿಡ್ ಬೀಜ–ಎಷ್ಟು ಕಾಲ?

ಹೈಬ್ರಿಡ್ ಬೀಜಗಳು ಆರಂಭದಲ್ಲಿ ಸಮೃದ್ಧ ಫಸಲನ್ನು ಕೊಡುತ್ತವೆ. ಆದರೆ ಅದು ಕೆಲವೇ ವರ್ಷ ಮಾತ್ರ . ಆಮೇಲೆ ಇಳುವರಿ ಕಡಿಮೆಯಾಗುತ್ತ ಹೋಗುತ್ತದೆ. ಹೈಬ್ರಿಡ್ ಬೀಜಗಳಿಗೆ ಅಪಾರವಾದ ನೀರು, ಗೊಬ್ಬರ ಬೇಕು. ಅವುಗಳಿಗೆ ರೋಗ ಬಾಧೆಯೂ ಹೆಚ್ಚು. ಇಂಥ ಬೇಸಾಯ ಪದ್ಧತಿಯನ್ನು ನಿರಂತರವಾಗಿ ನಡೆಸಿಕೊಂಡು ಹೋಗುವುದು ಸಾಧ್ಯವಿಲ್ಲ. ಬದಲಿಗೆ ನಮ್ಮ ಪರಿಸರಕ್ಕೆ ಹೊಂದಿಕೊಳ್ಳುವಂಥ ಬೀಜಗಳನ್ನು ಮಾತ್ರ ಉಪಯೋಗಿಸಿ, ರಸಗೊಬ್ಬರ–ಕೀಟನಾಶಕಗಳ ಬಳಕೆನ್ನು ಕಡಿಮೆ ಮಾಡುವ ನೈಸರ್ಗಿಕ ಕೃಷಿ ವಿಧಾನವು ಶ್ರೇಷ್ಟವಾದದ್ದು–ಪರಿಸರದಲ್ಲಿ ಅದರಿಂದ ಹರಡುವ ವಿಷವೂ ಕಡಿಮೆಯಾಗುತ್ತದೆ.

## ವಾಯುಮಾಲಿನ್ಯ

ಮನುಷ್ಯ ಪ್ರತಿಕ್ಷಣವೂ ಗಾಳಿಯನ್ನು ಉಸಿರಾಡಿಕೊಂಡೇ ಜೀವಿಸುತ್ತಾನೆ. ಈ ಗಾಳಿಯೂ ಕಲುಷಿತಗೊಂಡರೆ ಅವನ ಬದುಕೇ ದುಸ್ಸಹವಾದೀತು. ಪಟ್ಟಣಗಳಲ್ಲಿ ವಿಪರೀತ ಜ ದಟ್ಟಣೆ, ಸ್ಕೂಟರು, ಕಾರು ಟ್ರಕ್ಕುಗಳಂಥ ವಾಹನಗಳೂ ಹೆಚ್ಚು. ಅವುಗಳು ಹೊರಬಿಡುವ ಹೊಗೆಯಿಂದ ವಾಯುಮಾಲಿನ್ಯ ಉಂಟಾಗುತ್ತದೆ. ಕಾರ್ಖಾನೆಗಳಿಂದಲೂ ಹವೆ ದೂಷಿತವಾಗುತ್ತದೆ. ಕಲ್ಲಿದ್ದಿಲಿನ ವಿದ್ಯುತ್ ಸ್ಥಾವರಗಳು, ಸಿಮೆಂಟ್ ಮತ್ತು ಇತರ ಕಾರ್ಖಾನೆಗಳ ಕಲ್ಮಶ, ಹುಡಿಯ ರೂಪದಲ್ಲಿದ್ದು ಹಲವಾರು ಕಿಲೋಮೀಟರ್ ದೂರದವರೆಗೆ ಹರಡುತ್ತದೆ. ಶಾಖ ವಿದ್ಯುತ್ ಸ್ಥಾವರಗಳು ಪ್ರತಿದಿನವೂ ಸಾವಿರಾರು ಟನ್ ಬೂದಿಯನ್ನು ಹೊರಗೆ ಕಕ್ಕುತ್ತದೆ.

ಕಾರ್ಖಾನೆಗಳಿಂದ ಗಾಳಿಯಲ್ಲಿ ಹರಡುವ ಕಲ್ಮಷ ಎಲ್ಲ ವಿಧದಲ್ಲಿಯೂ ಹಾನಿಕಾರಕ. ಅದನ್ನು ಉಸಿರಾಡುವವರಿಗೆ ಉಬ್ಬಸ, ಗೂರಲು, ಕ್ಷಯ, ಕ್ಯಾನ್ಸರ್‌ನಂಥ ಕಾಯಿಲೆಗಳು ತಟ್ಟುತ್ತವೆ. ಮಕ್ಕಳು, ಮುದುಕರು ಮತ್ತು ಮಹಿಳೆಯರಲ್ಲಿಯೇ ಇದು ಜಾಸ್ತಿ. ಹೊಲ ತೋಟಗಳ ಮೇಲೆ ಕಾರ್ಖಾನೆಗಳ ಧೂಳು ಹರಡಿಕೊಂಡರೆ ಅಲ್ಲಿನ ಬೆಳೆ ಹಾಳಾಗುತ್ತದೆ.

## ಪ್ರದೂಷಣದ ನಿವಾರಣೆ: ನಿಯಂತ್ರಣ

ಶುದ್ಧ ಪರಿಸರ ನಮ್ಮೆಲ್ಲರ ಹಕ್ಕು. ಅದನ್ನು ನಾಶ ಮಾಡುವ ಅಥವಾ ದೂಷಿತಗೊಳಿಸುವ ಅಧಿಕಾರ ಯಾರಿಗೂ ಇಲ್ಲ. ಪ್ರದೂಷಣದ ಮುಖ್ಯ ಕಾರಣ ಕೆಲವೇ ಜನರ ಸ್ವಾರ್ಥ ಮತ್ತು ಜನ ಸಾಮಾನ್ಯರಲ್ಲಿರುವ ಅಜ್ಞಾನ.

ಪ್ರದೂಷಣವನ್ನು ನಿಯಂತ್ರಿಸುವ ಕಾರ್ಖಾನೆಗಳಿಗೆ ತಗಲುವ ವೆಚ್ಚ ಅತ್ಯಂತ ಕಡಿಮೆ. ಅವರು ತಮ್ಮ ಕಲ್ಮಷಗಳನ್ನು ಕಾರ್ಖಾನೆಯ ಆವರಣದಲ್ಲಿಯೇ ಸಂಸ್ಕರಿಸಿ ಶುದ್ಧ ಮಾಡಬಹುದು. ಅದರಿಂದ ಜಲಮಾಲಿನ್ಯದ ಪ್ರಮಾಣ ಸಾಕಷ್ಟು ಕಡಿಮೆಯಾಗುತ್ತದೆ. ಎತ್ತರವಾದ ಚಿಮಣಿಗಳನ್ನು ಸ್ಥಾಪಿಸಿ ಕನಿಷ್ಟ ಪ್ರಮಾಣದಲ್ಲಿ ಮಾತ್ರ ಹೊಗೆಯನ್ನು ಕಕ್ಕಿದರೆ ವಾಯುಮಾಲಿನ್ಯವೂ ಮಿತಿಯಲ್ಲಿ ಇರುತ್ತದೆ. ತಮ್ಮಿಂದಾಗಿ ಉಂಟಾಗುವ ಎಲ್ಲಾ ಬಗೆಯ ಪರಿಸರ ಮಾಲಿನ್ಯವನ್ನು ಸಂಪೂರ್ಣ ನಿಯಂತ್ರಣದಲ್ಲಿ ಇಡಬೇಕಾದದ್ದು ಕಾರ್ಖಾನೆಗಳ ಸಾಮಾಜಿಕ ಜವಾಬ್ದಾರಿಯಾಗಿದೆ

## ಪ್ರದೂಷಣದಿಂದ ಸರ್ವತ್ರ ನಾಶ

ದುರದೃಷ್ಟವೆಂದರೆ ಕಾರ್ಖಾನೆಗಳನ್ನು ನಡೆಸುವವರು ಪರಿಸರವನ್ನು ಶುದ್ಧವಾಗಿ ಇಡುವುದರ ಬಗ್ಗೆ ತಮ್ಮ ಹೊಣೆಯನ್ನು ತಿಳಿದಿಲ್ಲ. ತಿಳಿದರೂ ಅದನ್ನು ಪಾಲಿಸುವುದಿಲ್ಲ. ಅದರಲ್ಲಿಯೂ ಪ್ರದೂಷಣದ ಪ್ರಭಾವ ಹಳ್ಳಿಗಳ ಮೇಲೆ ಮಾತ್ರ ಆಗುವ ಸಂದರ್ಭಗಳಲ್ಲಿ ಇನ್ನಷ್ಟು ನಿರ್ಲಕ್ಷ್ಯದ ಮನೋಭಾವನೆ! ಹೀಗಾಗಿ ಅವರ ಮೇಲೆ ಒತ್ತಾಯ ತರುವುದು ಅನಿವಾರ್ಯ. ಪರಿಸರನಾಶ ಅಥವಾ ಪ್ರದೂಷಣ ಒಬ್ಬಿಬ್ಬರದಲ್ಲ. ಇಡೀ ಗ್ರಾಮವನ್ನೇ ಹಾಳು ಮಾಡುತ್ತದೆ. ಆದ್ದರಿಂದ ಗ್ರಾಮಸ್ಥರೆಲ್ಲರೂ ಒಂದಾಗಿ ಅದನ್ನು ಪ್ರತಿಭಟಿಸಬೇಕು. ನೀರು. ಗಾಳಿಗಳಲ್ಲಿ ಕಲ್ಮಶಗಳನ್ನು ಹರಡುವುದನ್ನು ನೇರವಾಗಿ ವಿರೋಧಿಸಬೇಕು.

## ಪರಿಸರ ಸಂರಕ್ಷಣೆಗೆ ಜನಾಂದೋಲನ

ಹೆಚ್ಚಿನ ಸಂದರ್ಭಗಳಲ್ಲಿ ಪರಿಸರನಾಶ ಮತ್ತು ಪ್ರದೂಷಣದ ದುಷ್ಫಲಗಳು ಒಂದೆರಡಲ್ಲ–ನೂರಾರು. ಗ್ರಾಮ ಒಗ್ಗಟ್ಟಿನಿಂದ ಆಂದೋಲನ ಮಾಡಬೇಕಾಗುತ್ತದೆ.

ಗ್ರಾಮ ಪಂಚಾಯಿತಿ, ಮಂಡಲ ಪಂಚಾಯಿತಿಗಳು ಪರಿಸರ ರಕ್ಷಣೆಯ ಹೋರಾಟದಲ್ಲಿ ಮುಂದಳುತನ ವಹಿಸಬೇಕು. ಸಂಘಟನೆ ಒಗ್ಗಟ್ಟು ಇಂಥ ಹೋರಾಟದಲ್ಲಿ ಮುಖ್ಯವಾದವು. ಅಭಿವೃದ್ಧಿಪರ ಸ್ವಯಂಸೇವಾ ಸಂಸ್ಥೆಗಳು ಜನಜಾಗೃತಿ ಮೂಡಿಸಲು ಹೆಚ್ಚು ಶ್ರದ್ಧೆ ವಹಿಸಬೇಕು.

ಪರಿಸರ ನಾಶ, ಪ್ರದೂಷಣಗಳನ್ನು ತಡೆಗಟ್ಟುವುದರ ಜೊತೆಗೆ ನೈಸರ್ಗಿಕ ವಸ್ತುಗಳ ದಕ್ಷ ಬಳಕೆಗೂ ಅಷ್ಟೇ ಗಮನ ಕೊಡಬೇಕು. ಸುಧಾರಿತ ಒಲೆಗಳು, ಗೋಬರ್‌ಗ್ಯಾಸಸ, ಸೌರಶಕ್ತಿ, ಕಾಂಪೋಸ್ಟ್, ಸಾವಯವ ಗೊಬ್ಬರಗಳ ಬಳಕೆ ವ್ಯಾಪಕವಾಗಬೇಕು. ಸಹಜಕೃಷಿಗೆ ಪ್ರಾಧಾನ್ಯತೆ ನೀಡಬೇಕು. ಹಳ್ಳಿಯ ಸುತ್ತಮುತ್ತ ಹಾಗೂ ಹೊಲಗಳ ಬದುಗಳಲ್ಲಿ ಬೇರೆ ಬೇರೆ ಜಾತಿಯ ಮರಗಳನ್ನು ನೆಟ್ಟು ಬೆಳೆಸುವ ವ್ಯಾಪಕ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕು.

'ಈ ಭೂಮಿಯನ್ನು ನಾವು ನಮ್ಮ ಹಿರಿಯರಿಂದ ಬಳುವಳಿಯಾಗಿ ಪಡೆದಿಲ್ಲ. ನಮ್ಮ ಮಕ್ಕಳು ಮೊಮ್ಮಕ್ಕಳಿಂದ ಬಾಡಿಗೆಗೆ ತೆಗೆದುಕೊಂಡಿದ್ದೇವೆ' ಎಡಂದು ತಿಳಿದವರೊಬ್ಬರು ಹೇಳಿದ್ದಾರೆ. ಇದು ಅರ್ಥಪೂರ್ಣವಾದ ಮಾತು. ಪ್ರಕೃತಿಯನ್ನು ಕೊಳ್ಳೆ ಹೊಡೆದು ಲಾಭಮಾಡಿಕೊಳ್ಳುವ ಮನೋಭಾವನೆ ಸಲ್ಲದು. ನಮ್ಮ ಮಕ್ಕಳು, ಮೊಮ್ಮಕ್ಕಳ ಉಪಯೋಗಕ್ಕಾಗಿ ಸ್ವಚ್ಛ ಸುಂದರ ಪರಿಸರಬನ್ನು ಉಳಿಸಬೇಕಾದದ್ದು ನಮ್ಮೆಲ್ಲರ ಕರ್ತವ್ಯ.

(ಈ ಲೇಖನವನ್ನು ಶ್ರೀ ಸಂಜಯ ಹಾವನೂರ ಅವರ ಸೌಜನ್ಯದಿಂದ ಪ್ರಕಟಿಸಲಾಗಿದೆ)

* * * * *

# ಹೊಸ ಮನೆ

"ಚಿಕ್ಕಮನೆ, ವಿಶಾಲವಾದ ಹಜಾರ, ಅಗಲವಾದ ಬಾಗಿಲು, ಅಂದವಾದ ಕೊಠಡಿ, ಅನವರತ ನೀರು ಸುರಿಸುವ ನಲ್ಲಿ, ಎಲೆಕ್ಟ್ರಿಕ್ ದೀಪ, ಅಕ್ಕಪಕ್ಕ ಆಫೀಸರರ ಮನೆಗಳು, ಮುಂದುಗಡೆ ಫ್ಲವರ್ ಗಾರ್ಡನ್ ಹಾಕಲು ಅನುಕೂಲವಾದ ಅಂಗಳ, ಹಿಂದುಗಡೆ ನೀರತೊಟ್ಟಿ, ಸೇದೋ ಬಾವಿ, ಒಗೆಯೋ ಕಲ್ಲು...... ಚೆನ್ನಾಗಿರೋ ಮನೆ, ಡೀಸೆಂಟ್ ಬಿಲ್ಡಿಂಗ್, ಶಾಂತಿನಿಲಯ, ಪ್ರಶಾಂತವಲಯ....... ತಿಂಗಳಿಗೆ ಅರವತ್ತೈದೇ ರೂಪಾಯಿ, ಯಾವ ತಕರಾರೂ ಇಲ, ಸಣ್ಣ ಸಂಸಾರ ಸುಖವಾಗಿರಬಹುದು, ಚೆಲುವಾದ ತಾಣ"..... ಇತ್ಯಾದಿಯಾಗಿ ಚೆಣ್ಣೆಯಂತೆ ನುಣ್ಣಗೆ ಮಾತಾಡಿ, ಹೊಸ ಮನೆಯ ಹಿರಿಮೆಯನ್ನು ಹಾಡಿ, ಹೊಗಳಿ, ಮನೆ ಮಾಲಿಕ ನನ್ನೆದೆಗೆ ತಂಪನ್ನು ತಂದಿದ್ದ. ಮೂರು ವಾರದಿಂದಲೂ ಪೇಚಾಡಿ, ಮನೆ ದೊರೆಯದೆ, ಹೋಟಲ್ ರೂಮಿನಲ್ಲಿ ಇಳಿದು, ಉಳಿದು ಕೊಂಡಿದ್ದ ನನ್ನ ಬೆಂದೆದೆಗದು ಆಪ್ಯಾಯಮಾನವಾದ ಆಹ್ಲಾದಕರ ವಾರ್ತೆಯಾಯಿತು. ಮರುಮಾತನಾಡದೆ, ಮೂರು ತಿಂಗಳ ಅಡ್ವಾನ್ಸ್ ಕೊಟ್ಟು, ಬಾಡಿಗೆಗೆ ಹಿಡಿದೆ– ಶಂಕರಮಠ ಓಣಿಯಲ್ಲಿದ್ದ (ಮೈಸೂರ್ ದಕ್ಷಿಣದ) ಆ ಪುಟ್ಟ ಮನೆಯನ್ನು.

## 2

'ಲೇ, ಹೊಸಮನೆ ಕಣೇ, ಎಷ್ಟು ಚೆನ್ನಾಗಿದೆ ಅಂತಿಯಾ? Model house ! ಉಂ, ನಾಳೆನೇ ಸಾಗಿಸಿಬಿಡೋಣ ಸಾಮಾನುಗಳನ್ನು. ಊಟಕ್ಕೆ ಮಾತ್ರ, ಎರಡು ದಿನಗಳ ಮಟ್ಟಿಗೆ ಹೋಟಲಿಗೇ ಬರೋಣವಂತೆ, ಆಂ?" ಎಂದು ನನ್ನಾಕೆಗೊರೆದೆ, ಹೋಟಲ್‌ರೂಂನಲ್ಲಿ.

"ಈ ಸಂಜೆಯೇ ಸಾಗಿಸಿಬಿಡಬಹುದಾಗಿತ್ತು ಸಾಮಾನುಗಳನ್ನ, ಹೇಗೂ ಮನೆ ನಿಶ್ಚೈಸಿಕೊಂಡಾಗಿದೆ ಅಂದಮೇಲೆ ನಾಳೆ ಬೆಳಗ್ಗೆ ಅಂದರೆ ಮತ್ತೆ ಸುಮ್ಮಗೇ ಒಂದು ಇಡೀ ದಿನದ ಬಾಡಿಗೆ ತೆರಬೇಕು ಹೋಟಲಿಗೆ ದಂಡ !" ಎಂದಳು

ಸರೂ, ನನ್ನ ಮಮತೆಯ ಮನೆಯಾಕೆ– ಮಡದಿ– ಸರೋಜ.

"ಪರವಾಗಿಲ್ಲ ಕಣೇ, ಹೇಗೂ ನಾಳೆ ಭಾನುವಾರ– ಆಫೀಸ್‌ಗೂ ರಜಾ ಇರುತ್ತೆ. ಬೆಳಗ್ಗೆ ಇಲ್ಲಿಂದ ಸಾಮಾನುಗಳನ್ನಷ್ಟು– ಸಾಮಾನುಗಳಂದರೇನು, ಈ ಎರಡು ಟ್ರಂಕ್, ಬೆಡ್ಡಿಂಗ್, ರೈಲು ಚೊಂಬು, ಇಷ್ಟನ್ನೇ– ಸಾಗಿಸಿಬಿಟ್ಟು, ಪಾತ್ರೆ, ತರಕಾರಿ– ಅದು ಇದು ಎಲ್ಲ ಹಾಗೇ ಅದೇ ಟಾಂಗದಲ್ಲೇ ಹೋಗಿಬಿಟ್ಟು ಪರ್ಚೇಸ್ ಮಾಡಿಕೊಂಬರೋಣವಂತೆ ಮಾರ್ಕೆಟ್‌ನಿಂದ..... ಹಾಗೇನೇ ಅಡಿಗೆಗೂ ಯಾವನಾದರೂ ಮಾಣಿ ಸಿಗುತ್ತಾನೋ ಅಂತ ವಿಚಾ–"

"ಅಡಿಗೆಯವನ ವಿಚಾರ ಇರ್ಲಿ, ಸದ್ಯ ರೇಶನ್‌ಗೇನು ಮಾಡ್ತೀರಿ ಹೇಳಿ? ಇನ್ನೂವೆ ಆಗಿಲ್ವಲ್ಲ ಕಾರ್ಡು? ಜವಾನನ್ನ ಕಳಿಸಿದ್ರೆ ಕೆಲ್ಸ ಆಗಲ್ಲ, ರಾಯರಿಗೆ ಹೋಗೋದಕ್ಕೆ Dignity ಗೆ ಕಮ್ಮಿ........ ಈಗ ಅದಕ್ಕೇನ್ಮಾಡ್ತೀರಿ ಹೇಳಿ?"

"ಅಯ್ಯೋ, ಅದೇನ್ ಮಹಾ ಅಂತ ಒದ್ದಾಡಿಕೋತಿಯಲ್ಲ? ಸದ್ಯ ಒಂದೆರಡು ವಾರಕ್ಕಾಗುವಷ್ಟು ಬಿ.ಎಂ.ನಿಂದ ತೆಗೆದುಕೊಳ್ಳೋಣವಂತೆ. ಮುಂದೆ ನಿಧಾನವಾಗಿ ಮಾಡಿಸೋಣವಂತೆ ರೇಶನ್ ಕಾರ್ಡು......"

"ನಿಮ್ಮ ನಿಧಾನಕ್ಕೆ ಮಾತ್ರ ದಿನಗಳ Scale ಅಲ್ಲ ಅಂತ ಕಾಣಿಸುತ್ತೆ : ಪ್ರಾಯಶಃ ವರುಷದ್ದೇ ಬೇಕಾಗುತ್ಯೇನೋ?.......... ಅಲ್ಲಾ, ಒಂದು ವ್ಯಾಲು ಸೀರೆ ಬೇಕೂಂತ ನಾನು ಕೇಳಿದಾಗ, ತರ್ತೇನೆ ನಿಧಾನವಾಗಿ ಅಂತಂದವರಿಗೆ, ತಂದು ಕೊಡಬೇಕಾದರೆ ಆದ ಆ ಆರುತಿಂಗಳ ನಿಧಾನವೇ ಅಲದೇ ನಿಮ್ಮ ನಿಧಾನದ ಅಳತೆಗೆ? ಅದೂ, ನಾನು ದಿನಾ ಅತ್ತು, ಕಾಡಿ, ಬೇಡಿ ಆಶಿಸಿ, ಹಂಬಲಿಸಿ, ಮುನಿದು........."

"ಸಾಕು ಮಾಡೇ, ಸಾಕು ಮಾಡೇ ಸರೋಜಾ ನಿನ್ನ ಪುರಾಣ. ಸರೋಜಾ ನೀನು ಹೀಗೆಲ್ಲ ಮಾತಾಡತೊಡಗಿದರೆ, ನನಗೆ ನಿಜ್ವಾಗ್ಲೂ ಸಿಟ್ಟೇ ಬಂದ್ಬಿಡುತ್ತೆ ನೋಡು..... ಕೊಂಚ ಹುಶಾರಾಗಿರ್ಬೇಕು ಸರೂ–"

"ಹೂಂ, ನಿಮಗೆಲ್ಲ ಸಿಟ್ಟೂಂದ್ರೆ ಮೂಗಿನ ತುದೀಲೇ ಇರುತ್ಯೇನೋ ಪಾಪ. ಕರೆದ ಹಾಗೆಲ್ಲಾ ಬರೋದಿಕ್ಕೆ?"

"ಆದರೂವೆ ನಿಮ್ಮ ಕಣ್ಣೀರಿನಷ್ಟು ಮಾತ್ರ ಅಲ್ಲಾ ಅನ್ನು. ನಿಮಗೇನು ಹೆಂಗಸರಿಗೆ, ತೌರುಮನೆಯದಾರಿ, ಕಣ್ಣೀರಧಾರೆ, ಎರಡು ಮಹಾ ಅಸ್ತ್ರಗಳು– ಪಾಪದ ಪುರುಷರನ್ನ ಬಗ್ಗಿಸಲಿಕ್ಕೆ."

"ಪಾಪವಂತೆ ಪಾಪ, ತವರನ್ನು ಬಾಯ್ತುಂಬ ಹಳಿಯೋದಿಕ್ಕೆ ಬರುತ್ತಲ್ವೆ ನಿಮಗೆ ಬಾಯುದ್ದ? ನೋಡ್‌ಬೇಕಾಗಿತ್ತು ನೀವು ಮಾಡಿದ ಮುಲ್ತಾನೀ ಅಳಿಯತನವನ್ನು, ಆಹಹ....."

"ಅಂ, ಇರ್ಲಿ ಬಿಡು, ನೀನೀಗ, ನಾಳೆ ಏನೇನು ಪಾತ್ರೆ ಸಾಮಾನು ಬೇಕು, ಏನೇನು ಕೊಂಡುಕೋಬೇಕು— ಎಲ್ಲ ಲೆಕ್ಕ ಹಾಕಿ, ಲಿಸ್ಟ್ ಮಾಡಿಕೊಡ್ತೀಯಾ"?

"ಲಿಸ್ಟ್ ಕೊಡ್ತೇನೆ.. ಆದ್ರೆ- ರಾಯರೇ- ಅವೆಲ್ಲಾ ಲಿಸ್ಟ್‌ನಲ್ಲೇ ಉಳಿದರೆ ಮಾತ್ರ, ನಿಮ್ಮ ಮನೇನೂ ಮನಸ್ನಲ್ಲೇ ಉಳ್ದೀತು ರಾಯರೇ, ನೆನ್ಪಿರ್ಲಿ....." ವಯ್ಯಾರದ ಮುನಿಸನ್ನು ಪ್ರದರ್ಶಿಸಿದಳೂ ನನ್ನ ರಾಜ್ಞಿ ಅದು ಹುಸಿಮುನಿಸೆಂದು ನಾನರಿಯೆನೆ? ನನಗೆ ಗೊತ್ತಿಲ್ಲವೇ ನನ್ನ ದೇವರ ಸತ್ಯ?

"ಹೌದು ಸರೋಜ, ನಮ್ಮ ಮನೆಯಿರುವುದು ಅಲ್ಲೇ— ನಮ್ಮ ಪ್ರೇಮದ ಮಂದಿರವಿರುವುದು ಹೃದಯದಲ್ಲಿಯೇ ಸರೋಜ...." ಎಂದು ನುಡಿಯುತ್ತಾ ಅವಳ ಕೋಮಲವಾದ ಕರಗಳೆರಡನ್ನೂ ಮೃದುವಾಗಿ ಅದುಮಿ....

## 3

"ಇದೇ ಮನೆ, ಎಡಗಡೆಯುದು, ಉಂ, ಥ್ಲೀ, ಅದೇ ಅದೇ; ಆ ಬೆಮ್ಮಾಡಿರುವಂಥಾದ್ದು- ಹಳದಿಗಾರೆ- ಕೊಟ್ಟಿದೆಯಲ್ಲ, ಅದೇನೇ....... ಲೇ ಟಾಂಗ ನಿಲ್ಲಿಸಯ್ಯ. ಆಂ, ಇಲ್ಲೇ ನಿಲ್ಲಿಸಯ್ಯಾ, ಇಲ್ಲಿಯೇ......."

"ಸಾಮಾನುಗಳನ್ನು ಒಡಗಿಡಲಾ ಬುದ್ಯೋರೆ?" ಗಾಡಿಸಾಬಿ ಪ್ರಶ್ನಿಸಿದ.

"ಹೌದಪ್ಪ, ಇಡು, ಇಡು...... ಸರೂ, ನೋಡಿದಿಯಾ, ಎಷ್ಟು ದೊಡ್ಡ ಕಾಂಪೌಂಡು ಎಷ್ಟು ನೀಟಾಗಿದೆ ನೋಡು, ಈ ಗೇಟು ನೋಡು, ಎಷ್ಟು ಅಗಲವಾಗಿದೆ! ಸುಂದರವಾಗಿದೆ!.............. ಹಿಂದೆಯೂ ಇಷ್ಟೇ ದೊಡ್ಡ ಕಾಂಪೌಂಡ್ ಇದೆ ಕಣೇ- ಅಲ್ಲಿ ಸದ್ಯಕ್ಕೇನೋ ಆ ಪಕ್ಕದ್ಮನೆ ಯವರು ತರಕಾರಿ ಹಾಕಿದ್ದಾರೆನ್ನು......... ಊಂ ಅವ್ರೂ ಇದೇ ಕಾಂಪೌಂಡ್ ನಲ್ಲಿರುವ ಆ...... ಆ ಮನೆಯವರು ಕಣೇ....... ಒಟ್ಟು ಮೂರು ಸಂಸಾರ ಈ ಕಂಪೌಂಡ್‌ನೊಳಗೆ...... ಇಲ್ಲಿ ತರ್ಕಾರಿ ಹಾಕಿಕೊಂಡಿದಾರೆ- ಪಕ್ಕದ್ಮನೆಯವರಲ್ವೇ?....... ಏನಂತಿಯಾ ಸರೋಜ ಮನೆ ಚೆನ್ನಾಗಿಲ್ವೇ?..... ಆ ಮುಖಮಂಟಪ ನೋಡು-ಎಷ್ಟು ಚೊಕ್ಕಟಾಗಿದೆ ! ಎರಡು ಛೇರು, ಒಂದು ಟೇಬ್ಲ್ ಹಾಕಲು ಎಕ್ಯುರೆಟ್ ಆಗಿರುತ್ತೆ ನೋಡು......... ಮನೆ ಎಷ್ಟು ಅನುಕೂಲವಾಗಿದೆ ಅಂತಿಯಾ- ಒಳಗಡೆ ಕಿಚನ್ ಬೇರೆ, ಬಾತ್‌ರೂಂ

ಬೇರೆ, ಸ್ಟೋರ್ ರೂಂ ಬೇರೆ, ಡೈನಿಂಗ್ ಹಾಲ್ ಬೇರೆ........ ಛ್— ಎಷ್ಟು ಚೆನ್ನಾಗಿದೆ ಅಂತಿಯ! ನೋಡು ಆ ಕಿಟಕಿಗಳಿಗೆ ಬಣ್ಣಗಾಜು, ಹೊರಗಡೆಯಿಂದ ವೈರ್‌ನೆಟ್ಟು....."

"ರೀ ಸಾಮಿ, ಬಾಗ್ಲು ತೆಗೀತೀರಾ ಬುದ್ದೀ, ಬೆಡ್ಡೀಂಗ್ ಒಳಗಿಡ ಬೇಡ್ವೇ ಸಾಮಿ—" ಎಂದು ಜಟಕಾಸಾಬಿ ಮನೆ ಬಾಗಲೆದುರಿಗೆ ಟ್ರಂಕ್ ಹೋಲ್ಡಾಲ್‌ಗಳನ್ನು ಪೇರಿಸಿನಿಂತು ಕೂಗಿದಾಗಲೇ ನನ್ನ ವಿವರಣೆ ನಿಂತುದು........ 'ಹಾಂ? ಬೀಗದ ಕೈ? ತೆಗೆದುಕೊಂಡೇ ಇಲ್ವಲ್ಲ? ಚ್...... ಚ್...... ಚ್....... ಹಾಳಾದ್ದು, ಮನೆ Owner ಕೈಲೇ ಉಳಿದು ಬಿಟ್ಟಿದೆಯಲ್ಲ...... ಥೂ...... ಈಗೇನು ಮಾಡೋಣ ಸರೂ?.... ನಾನು ಬೇಗನೆ ಹೋಗಿ ಬಂದುಬಿಡ್ಲಾ? ಆಂ. ನೀನಿಲ್ಲೇ ನೀತಿರುವೆಯಂತೆ ಹೊರಗೇ, ಬೇಗ್‌ಬಂದ್ಬಿಡ್ತೀನಿ ಕಣೇ..... ಹಾಗಾದ್ರೆ ಈ ಬೆಡ್ಡಿಂಗನ್ನೂ ಪಕ್ಕದ್ಮನೇಲಿರಿಸಿ ಕುಳಿತಿರ್ತೀ ಅಂತಿಯಾ? ನಾನು ಬೇಗ ಬಂದ್ಬಿಡ್ತೇನೆ........ ಹೂಂ, ಬೇಡಾಂತಿಯಾ? ಅದೂ ಸರಿ..... 'ಇರೆಸ್ಪಾನ್ಸಿ. ಬಲ್ಸ್' ಅಂತ ಗ್ರಹಿಸ್ತಾರೇನೋ— ಅಷ್ಟಾಗಿ ಮೊದಲ್ನೇ ದಿನ, ಪರಿಚಯ ಸಹಿತ ಇಲ್ಲ! ಪಕ್ಕದ್ಮನೆಯವರಿಗೇಕೆ ಶರಣುಹೋಗ್ಬೇಕು?..... ಸರಿ, ಸರಿ. ನೀನೂ ಬಂದ್ಬಿಡು, ಗಾಡಿಯಲ್ಲೇ ಅಲ್ಲಿವರೆಗೂ ಹೋಗಿ ಬಂದ್ಬಿಡೋಣ ವಂತೆ........ ಲೇ ಗಾಡೀ ಹೊಡಿಯಯ್ಯಾ....."

ಸರಿ, ಮತ್ತೆ ಹೊರಟಿತು ಗಾಡಿ— ಮನೆಯ ಮಾಲಿಕನಾದ ಆ ಹೋಟಲ್ ಮಾಲಿಕನ ಮನೆಗೆ !

## 4

"ಒಂದು ಇದ್ದಿಲೊಲೆ, ಒಂದು ಸೌದೆ ಒಲೆ. ಹುಂ, ಚೆನ್ನಾಗಿದೆ. ಬಳಿಯಲ್ಲೆ ನಲ್ಲಿಯಿದೆ. ಅರೆಯುವ ಕಲ್ಲಿದೆ. ನಲ್ಲಿಯಲ್ಲಿ ನೀರೂ ಬರುತ್ತಿದೆ....." ಸರೋಜ ಮನೆ ನೋಡಿ, ಅಡಿಗೆ ಕೋಣೆಯ ತನಿಖೆ ನಡೆಸುತ್ತಾ ನುಡಿದಳು.

"ನಲ್ಲಿಯಲ್ಲಿ ನೀರು ಬರುವುದೇನು ಮಹಾ? ನೋಡು ಈ ಬಲ್ಬ್ ಹ್ಯಾಗೆ ಉರಿಯುತ್ತೆ, ಹ್ಞ!" ಎಂದು ವಿನೋದಕ್ಕಾಗಿ ಸ್ವಿಚ್ ಒತ್ತಿದೆ. 'ಟಕ್' ಎಂದಿತು--ಆದರೆ ಬಲ್ಬ್ ಮಾತ್ರ ಬೆಳಕನ್ನು ಕಾರಲಿಲ್ಲ ! ಗುಂಡಿಯನ್ನು ಮೇಲಕ್ಕೆ ತಳ್ಳಿದೆ, ಕೆಳಕ್ಕೆ ತಳ್ಳಿದೆ.... 'ಟಕ್– ಟಕ್' ಶಬ್ದವಾಯಿತೇ ವಿನಾ, ಲೈಟ್ ಆಗಲಿಲ್ಲ! ನೋಡುತ್ತೇನೆ–– ನೇತಾಡುತ್ತಿರುವ ಇಲೆಕ್ಟ್ರಿಕ್ ವೈರಿನ ತುದಿಯಲ್ಲಿ Shade ನ ಮರೆಯಲ್ಲಿ ಬಲ್ಬೇ ಇರಲಿಲ್ಲ!....... ಬರಿಯ Shade ವೈರಿನ ತುದಿಯಲ್ಲಿ ನೇತಾಡುತ್ತಿತ್ತು ಮೌನವಾಗಿ !

.........ಬಾಯಿಗೆ ಸೆರಗಿನ ತುದಿಯನ್ನು ತುಂಬಿಸಿ ನಗುತ್ತಿದ್ದಳು ನನ್ನ ರಾಣಿ!..........

ಪರೀಕ್ಷಿಸಿ ನೋಡುತ್ತೇನೆ, ಇಡಿಯ ಮನೆಗೆಲ್ಲಾ ನಡುವಣ ಹಾಲಿನಲ್ಲಿ ಮಾತ್ರ ಒಂದು ಬಲ್ಬ್ ಇದೆ. ಅದನ್ನಷ್ಟು ಉರಿಸಿ ನನಗೆ ತೋರಿಸಿದ್ದ ಮನೆಯೊಡೆಯ. ಪ್ರತಿಯೊಂದು ಸ್ವಿಚ್ಚನ್ನೂ ಕೂಲಂಕುಶವಾಗಿ ಪರೀಕ್ಷಿಸಿ ನೋಡಿರಲಿಲ್ಲ ನಾನು.

## 5

"ಹೋಟಲಿಗೆ ಹೋಗಿ ಊಟ ಮುಗಿಸಿಕೊಂಡು, ಹಾಗೇ ಬರ್ತಾ ಸಾಮಾನು ಪರ್ಚೇಸ್ ಮಾಡಿಕೊಂಡು ಬರೋಣ, ಆಗದೇ ಸರೋಜ?" ಎಂದು ಪರ್ಮಿಶನ್ ಕೇಳಿದೆ.

"ಜಟಕಾ ಬರಲಿ" ರಾಣಿಯವರ ಅಪ್ಪಣೆಯಾಯಿತು.

"ಅರೇ, ಇಲ್ಲೆಲ್ಲಿ ಸಿಗುತ್ತದೆ ಜಟಕ? ಒಂದು ಮೈಲಿ ನಡೆಯಬೇಕಲ್ಲ ಆ ಜಟಕಾ ಸ್ಟ್ಯಾಂಡಿಗೆ? ಉರಿಬಿಸಿಲಿಗೆ ಹೇಗೆ ಹೋಗಲಿ ಸರೋಜ?" ದೀನನಾಗಿ ನಾನು ಬೇಡಿಕೊಂಡೆ.

ಆಕೆ ಸುಲಭವಾದ ಉಪಾಯ ಸೂಚಿಸಿದಳು : "ಸೈಕಲ್‌ನಲ್ಲಿ ಹೋಗಿ ಬನ್ನಿ."

"ಸರಿಯೇ. ಆದರೆ ಸೈಕಲ್‌ಶಾಪ್ ಇಲ್ಲೆಲ್ಲಿದೆಯೋ ಗೊತ್ತಿಲ್ವಲ್ಲ?"

"ಅದಕ್ಕೇನ್ರೀ, ಈ ಓಣಿ ತುದಿಯಲ್ಲಿ ಆ 'ಅಯ್ಯರ್ ಹೋಟಲ್' ಇದೆಯಲ್ರೀ– ಅಲ್ಲಿ ಒಂದರ್ಧ ಕಾಫಿ ಕುಡಿಯಿರಿ, ಹಾಗೇ ಬಿಲ್ ಪೇ ಮಾಡುತ್ತಾ ಸೈಕಲ್ ಶಾಪ್ ಎಲ್ಲಿದೆ ಅಂತ ವಿಚಾರಿಸಿದರಾಯ್ತು."

ಸರಿ, ಸರೋಜಳ ಸಲಹೆ ಸ್ವೀಕಾರ ಮಾಡಲೇಬೇಕಾಯಿತು.

## 6

"ನೋಡ್ರಿ ಅಲ್ಲಿ, ಆ ಸ್ಕ್ವೇರ್ ಇದೆಯಲ್ಲ, ಅದೇ ರೋಡಿನಲ್ಲಿ ಸ್ವಲ್ಪ ಮುಂದೆ ಹೋಗಿ, ಸುಮಾರು ಅರ್ಧ ಫರ್ಲಾಂಗ್‌ಗೆ ಬಲಕ್ಕೆ ಒಂದು ರಸ್ತೆ ತಿರುಗುತ್ತದೆಯಲ್ಲ. ಅದರಲ್ಲಿ ಒಂದು ಟೆನ್ ಯಾರ್ಡ್ಸ್ ನಡೆಯಿರಿ ಎಡಕ್ಕೆ ಒಂದು ರೈಸ್ ಮಿಲ್ಲಿದೆ, ಪಕ್ಕದಲ್ಲೇ ಒಂದು ಓಣಿ ತಿರುಗುತ್ತದೆ ನೋಡಿ, ಅದೇ ಗಲ್ಲಿಯ ಹದಿನೆಂಟನೇ

ಮನೆಯ ಮುಂದೇನೇ ಸೈಕಲ್ ಶಾಪ್ ಇರೋದು....."

ಅಬ್ಬಾ ! ತಲೆಯೋ– ತಲೆಯ ಸುತ್ತ ನಿಂತ ಭೂಮಿಯೋ ತಿರುಗ ತೊಡಗಿದ ಅನುಭವವಾಯಿತು ನನಗೆ ! ದಾರಿಯ ವಿವರಣೆ ನನ್ನ ತಲೆ ಯೊಳಗೆ ತಿರುಗಲಿಲ್ಲ, ಸ್ತಂಭಿತನಾಗಿ ನಿಂತುಬಿಟ್ಟೆ.

"ಏನ್ರೀ ನೀವು ಹೊಸಬರೇನ್ರಿ?" ಆತನ ಪ್ರಶ್ನೆ.

"ಹೌದು" ಎಂದು ಹೇಳಲೇಬೇಕಾಯಿತು; ಜೊತೆಗೆ, ನನ್ನ ನೌಕರಿ, ಸಂಬಳ, ಮನೆಬಾಡಿಗೆ, ಮಕ್ಕಳುಮರಿ (ಇಲ್ಲ ಎಂದು !) ಇತ್ಯಾದಿಗಳ ಸವಿವರವರದಿಯನ್ನೂ ಒಪ್ಪಿಸಬೇಕಾಯಿತು. ಕೊನೆಗೆ ವಿನಯ ಪೂರ್ವಕ ದೈನ್ಯವಾಗಿ ಕೇಳಿದೆ, "ರೀ, ಅಲ್ಲಿಯವರೆಗೆ ನಿಮ್ಮ ಹೋಟಲಿನ ಯಾವನಾದರೂ ಹುಡುಗನ್ನ ಕಳಿಸಿಕೊಟ್ಟು ಒಂದು ಉಪಕಾರ ಮಾಡ್ತೀರಾ? Please," ಎಂದು. "ಆಗಲಿ" ಎಂದು ಆತ ಒಪ್ಪಿದ.

ಕ್ಲೀನರ್ ಹುಡುಗನೊಬ್ಬನನ್ನು ಕರೆದು, 'ಲೋ ಇವನೇ, ಇವರನ್ನು ಆ ಸೈಕಲ್ ಶಾಪಿಗೆ ಕರೆದುಕೊಂಡು ಹೋಗಿ ಬಿಟ್ಟುಬಿಟ್ಟು ಬೇಗನೇ ಬಂದ್ಬಿಡೋ. ಹಾಗೇ ಅವರು ನಾಲ್ಕಾಣೆ ಕೊಡ್ತರೆ. ಇಸ್‌ಕೋ, ಹೋಗು........... ಲೇಟ್‌ಗೀಟ್ ಮಾಡೀಯಾ ಬರ್‍ತಾ......... ಜಲ್ದಿ ಬಂದ್ಬಿಡು, ಬೀಡಿ ಸೇದ್ತಾ ನಿಂತ್ಬಿಡ್ಬೇಡ.........."

'ಸದ್ಯ ಬದುಕಿದೆಯಾ ಬಡಜೀವವೇ' ಎಂದು ಉಸಿರೆಳೆದುಕೊಂಡು ಹೊರಟೆ.

ಅದೂ ಇದೂ ಹರಟೆ ಹೊಡೆಯುತ್ತ, ಉರಿಯುವ ಸುಡುಬಿಸಿಲಿಗೆ ಬೆವರುತ್ತ ನಡೆದೆ....... ಸುಮಾರು ಅರ್ಧ ಮೈಲಿನಷ್ಟು ದೂರ.

ಥಟ್ಟನೆ ನಿಂತುಬಿಟ್ಟನಾ ಹುಡುಗ. 'ಓ ಅಲ್ಲಿ ನೋಡಿ ಒಂದು ಮಂಗಳೂರು ಹೆಂಚಿನ ಮನೆಯಿದೆಯಲ್ಲ, ಅದರ ಎದುರುಗಡೆಗೆ ಮೂರು ಬಿಟ್ಟು ನಾಲ್ಕನೆಯ ಮನೆಯಿದೆಯಲ್ಲ, ಅದೂ ಕಳೆದು ಸಿಗುತ್ತೆ ನೋಡಿ ಆ ಐದನೇ ಮನೆ, ಅದರ ಒತ್ತಿನ ಮನೆಯ ಪಕ್ಕದ್ದೇ ಸೈಕಲ್ ಶಾಪ್ ಕಣ್ರೀ...... ನೋಡ್ರಿ ನಾನು ಇದಕ್ಕಿಂತ ಮುಂದೆ ಬರೋಹಾಗಿಲ್ಲ, ಲೇಟ್ ಆಗುತ್ತೆ, ಸಾವ್ಕಾರ್‍ರು ಮತ್ತೆ ಬೈಕೋತಾರೆ, ಎಂದು, ತಲೆ ತುರಿಸಿ, ಹಲ್ಲು ಕಿರಿದು ನಿಂತುಕೊಂಡ. ಮರುಮಾತನಾಡದೆ, ಎಂಟಾಣೆಯ ಪಾವಲಿಯೊಂದನ್ನಿತ್ತೆ– ಅವನ ಕೈಗೆ, 'ಚಿಲ್ಲರೆ ಇಲ್ಲವಲ್ಲೋ' ಎಂದು. 'ಪರವಾಗಿಲ್ಲ ಸಾರ್' ಎಂದು ನಗುತ್ತ ಸೆಲ್ಯೂಟ್ ಹೊಡೆದು ಹಿಂತಿರುಗಿದ ನನ್ನ ಮಾರ್ಗದರ್ಶಕ.

# 7

ಟಕ್, ಟಟ್, ಟಕ್.......... ಬಾಗಲು ತಟ್ಟಿದೆ.

"ಯಜ್ಮಾನ್ರಿಲ್ಲ ಶಂಖರ್ರಾಯ್ರೇ, ಬರುತ್ಲೂ ನಿಮ್ಮನೆಗೇ ಕಳಿಸಿ ಬಿಡ್ತೇನ್ರೀ ಅವ್ರನ್ನ, ಪಾಪ, ಕೊಟ್ಟ ಹತ್ತು ರೂಪಾಯಿ ವಸೂಲಿಗಾಗಿ ನೀವು ಎಷ್ಟು ಬಾರಿ ಸುತ್ತಿ ದಣಿಯೋದೂಂದ್ರೆ, ಅದಕ್ಕೊಂದು ಮಿತಿ ಇಲ್ವೇ...... ನಮ್ಮವರಿಗಂತೂ, ತಲೆಯಲ್ಲಿ ತಾವು– ತಮ್ಮಕೆಲ್ಸ ಇಷ್ಟೇವಿನಾ, ಬೇರೆಯವರು– ಪಾಪ– ತೊಂದರೆ ಪಟ್ಟುಕೋತಾರೆ ಅಂತ ಯೋಚನೆಯೇ ಇಲ್ಲ...... ನೀವೇನೂ ಯೋಚಿಸ್ಬೇಡಿ ಶಂಕರ್ರಾಯ್ರೇ, ನೆಟ್ಟಗೆ ಹೊರ ಟ್ಹೋಗಿ, ಬರುತ್ಲೂ, ಖಂಡಿತಾ ನಿಮ್ಮನೆಗೇ ಕಳಿಸ್ತೀನಿ....." ––ನಸು ಗಡುಸಿನ ಹೆಣ್ದನಿಯೊಂದು ಬಾಗಲಾಚೆಯಿಂದ ನುಡಿಯುತ್ತಿತ್ತು. ಏನೀ ಆಕಾಶಭಾಷಣವೆಂದು ಬೆರಗಾದೆ, ದಿಗಿಲುಗೊಂಡೆ. ಅದೇ ಆ ಸೈಕಲ್ ಶಾಪ್‌ಗಾಗಿ ಬೀದಿಯೆಲ್ಲ ಹುಡುಕಿ ಹುಡುಕಿ, ದಣಿದು, ಪತ್ತೆ ಹೆಚ್ಚಲಾರದೆ, ಕೊನೆಗೆ ಹೇಗೋ ಧೈರ್ಯ ಮಾಡಿ ಬೀದಿಯ ಮನೆಯೊಂದರ ಬಾಗಲು ತಟ್ಟಿದ್ದೆ ! ಪರಿಣಾಮ– ಈ ದನಿ !.......... ಏನಾದರಾಗಲಿ ಎಂದು ಮತ್ತೊಮ್ಮೆ ಬಾಗಲು ತಟ್ಟಿದೆ.

ಈಗ ಗಂಡಸು ದನಿಯೊಂದು ಕೇಳಿಬಂತು :

"ಯಾರ್ರೀ ಅದು?"

ನಾನು, "ನಾನು– ಯಜಮಾನ್ರಿಲ್ವೇ" ಎಂದು ಒರಲಿದೆ.

"ಹೋ– ಯಾರೋ ಹೊಸಬರು ಕಣೇ, ಶಂಕರ್‌ರಾಯನಲ್ಲ, ಬೇರೆ ಸ್ವರ ಕಣೆ, ಬಾಗಲು ತೆಗಿ,....... ತಡಿ, ನಾನೇ ತೆಗೆಯುವೆ........." ಎಂಬ ಪಿಸುಮಾತು– ದಪ್ಪನೆಯ ದನಿಯಲ್ಲಿ ಕೇಳಿಸಿತು– ಬಾಗಲಿನಾಚೆಗಿನಿಂದ. ಹಾರಿಹೋದ ಉಸಿರು ಮರಳಿಬಂತು ನನಗೆ. ಧೈರ್ಯ ತಂದುಕೊಂಡೆ.

ಬಾಗಲು ತೆರೆಯಿತು.

"ಯಾರು ಬೇಕಾಗಿತ್ತು ರೀ?"

"ಅ್ಞ ! ಯಾರೂ ಇಲ್ಲ. ಇಲ್ಲೇ ಪಕ್ಕದ್ದು ಯಾವುದೋ ಸೈಕಲ್ ಶಾಪ್ ಇದೆಯಂತೆ, ಹಾಳಾದ್ದು ಎಷ್ಟು ಹುಡುಕಿದರೂ ಪತ್ತೆಯಾಗಲ್ಲ, ಯಾವ ಅಂಗಡಿ ಅಂತ ಸ್ವಲ್ಪ ತೋರಿಸ್ತೀರಾ, ದಯವಿಟ್ಟು?"

"ಸೈಕಲ್ ಶಾಪೆ? ಇಲ್ಲೆಲ್ಲೂ ಇಲ್ವಲ್ಲ? ಲೇ, ಇವ್ಳೇ, ಕೇಳಿದಿಯೇನೇ?....."

"ಏನೂಂದ್ರೆ? ಬಂದವ್ರನ್ನ ನಿಂತೇ ಮಾತಾಡಿಸ್ತೀರಲ್ರೀ, ಕುಳಿತ್ಕೊಳ್ಳೋದಕ್ಕಾದರೂ ಹೇಳ್‌ಬಾರ್ದೇ?"

"ಇಲ್ಲರೀ, ಪರವಾಗಿಲ್ಲ......... ಸೈಕಲ್ ಶಾಪ್-"

"ರೀ ಕುಳಿತುಕೊಳ್ಳಿ ಇವರೆ, ಚಾಪೆ ಹಾಸ್ತೇನೆ"

"ಹ್ಹ, ಏನೂ ಬೇಡ. ಏನೂ ಬೇಡ,....... ಸೈಕಲ್ ಶಾಪ್-"

"ತಾವು........ ಹ್ಹೆ...... ಹ್ಹೆ....... ಹ್ಹೆ....., ಪರಿಚಯ...... ಹ್ಹೆ...... ಹ್ಹೆ...... ಹ್ಹೆ...... ಆಗಲಿಲ್ಲ....... ಹ್ಹೆಹ್ಹೆಹ್ಹೆ.....

"ನಾನು ಹೊಸದಾಗಿ ಮನೆ ಮಾಡಿಕೊಂಡೆ, ಅದೇ ಆ ಶಂಕರ್ ಮಠ ಓಣಿಯ ಮೂರನೇ ಮಾಡೆಲ್ houseನ್ನ !....... ಅದೇ.... ಸೈಕಲ್-"

"ಯಾವ್ದು, ಆ ಹೊಸಮನೆಯನ್ನು ಮಾಡಿಕೊಂಡ್ರ? ಬಾಡಿಗೆಗೆ ಬಂದ್ರಂತ ಕಾಣಿಸ್ತೆ...... ಹೊಸತಾಗಿ ಊರಿಗೆ ಬಂದ್ರೇನ್ರಿ, ವರ್ಗವಾಗೀಂತ ಕಾಣಿಸುತ್ತೆ......" ಕುತೂಹಲಪೂರ್ಣ ದನಿಯಲ್ಲಿ ರಾಗವೆಳೆದಳಾರಮಣಿ, ರಮಣೀಯವಾಗಿ.

"ಹೌದು....... ಸೂಪರಿಂಟೆಂಡೆಂಟ್ ನಾನು, ಇಲ್ಲಿಗೆ ವರ್ಗವಾಗಿ ಬಂದು ಮೂರು ನಾಲ್ಕು ವಾರವಾಯಿತು, ಮನೆ ಸಿಗದೆ, ತುಂಬ ಪೇಚಾಡಿದೆ, ಕೊನೆಗೆ ಸಿಕ್ಕಿತು ಆ ಮನೆ ಅಂತಲೆ.......... ಉಂ......... ಸೈಕಲ್-"

"ಅಯ್ಯೋ ನಮಗೊಂದಿಷ್ಟು ಸುದ್ದಿ ತಿಳಿಸಬಾರದಿತ್ತೇನ್ರೀ, ಇಲ್ಲಿ ಪಕ್ಕದ್ಮನೇನೇ ಖಾಲಿ ಇತ್ತಲ್ರೀ, ತುಂಬ ಚೆನ್ನಾಗಿತ್ತು, ಚೀಪಾಗಿಯೂ ಸಿಗ್ತಿತ್ತು......... ಎಷ್ಟು ಒಳ್ಳೆಯ ಮನೆ ಅಂತೀರಾ?........."

"ಪರವಾಗಿಲ್ಲ, ಈಗ ಸಿಕ್ಕಿರೋ ಮನೇನೂವೆ ದೇವರ ದಯೆಯಿಂದ ಚೆನ್ನಾಗೇ ಇದೆ...... ತಾವು ದಯವಿಟ್ಟು ಸೈಕಲ್ ಶಾಪ್ ಯಾವುದೆಂದು ಹೇಳಿಬಿಟ್ಟರೆ ತುಂಬ ಉಪಕಾರವಾದ ಹಾಗಾಗುತ್ತೆ."

"ಓ ! ಸೈಕಲ್ ಶಾಪೆ? ಇಲ್ಲೆಲ್ಲೂ ಇದ್ದ ಹಾಗಿಲ್ಲವಲ್ಲರೀ. ರೀ, ಇವ್ರೇ ನಿಮಗ್ಗೊತ್ತೇನ್ರೀ ಸೈಕಲ್ ಶಾಪ್ ಇದ್ಯೋಂತ?...... ತಡೀರಿ. ಅಲ್ಲಿ ಮನೆಗೆಲಸದಾಕೆ ಬಂದಾಳೆ, ಅವಳನ್ನ ವಿಚಾರಿಸಿಬಿಟ್ಟು ಬರ್ತೀನಿ......"

"ಓಹ್ ! ನನ್ನ ದುರಾದೃಷ್ಟವೇ" ಎಂದು ಕೈಕೈ ಹಿಸುಕಿಕೊಂಡು, ಎದುರುಬೀದಿಯನ್ನು ಶೂನ್ಯದೃಷ್ಟಿಯಿಂದ ನೋಡಿದೆ- ಅರೇ ಇದರಾ ! ಅದೇ

ಎದುರಿಗೆ ಇದೆಯಲ್ಲ, "ಶ್ರೀ ಗಜಾನನ ಸೈಕಲ್ ಮಾರ್ಟ್– ಇಲ್ಲಿ ಸೈಕಲ್‌ಗಳು ರಿಪೇರಿಮಾಡುತ್ತೇವೆ ಮತ್ತು ಬಾಡಿಗೆಗೆ ಕೊಡಲ್ಪಡುತ್ತೇ" ಎಂಬ ಬೋರ್ಡ್ !

## 8

ಅಂತೂ ಮನೆ ಮಾಡಿಯಾಯಿತು– ಸಂಸಾರ ಹೂಡಿದೆವು ! ಒಂದು ವಾರ ಕಳೆಯಿತು. ಅಕ್ಕಪಕ್ಕದ ಮನೆಗಳ ಪರಿಚಯವಾಯಿತು; ಅಂಗಡಿಗಳ ಗುರುತೂ ಆಯಿತು. ಮನೆಗೆ ಬಲ್ಬುಗಳು ಬಂದುವು; ಪಾತ್ರೆಗಳಾದುವು; ಮಾಣಿಯೂ ದೊರಗಿದ. ಆಪೀಸ್– ಮುಗಿದೊಡನೆ ಮನೆ; ಮನೆ ತೊರೆದರೆ ಆಫೀಸ್, ಅಂತೂ ಸಂಸಾರ ರಥ ಸುಗಮವಾಗಿ ಓಡತೊಡಗಿತು.

ಪ್ರತಿದಿನ ಆಫೀಸ್ ಮುಗಿಸಿ ಮನೆಗೆ ಬಂದೊಡನೆ, 'ಮನೆವಾರ್ತೆ' ಯನ್ನಾಲಿಸುವುದೇ ನನಗೆ ಕಾದಿಟ್ಟ ಕೆಲಸವಾಯಿತು. 'ಗೃಹಮುಚ್ಚ್ಯತೇ' ಎಂದು ಮಾಡಿಬಿಡಬೇಕೆಂಬ ಅತ್ಯಾಸೆಯಿಂದ, ಉಸಿರು ಬಿಗಿಹಿಡಿದು ದುಡಿಯುತ್ತಿದ್ದಳು, ನನ್ನ ಮುದ್ದುಗಿಣಿ-- ಅಲ್ಲ ಗೃಹಿಣಿ !

ಒಂದು ಸಂಜೆ ಆಫೀಸ್‌ನಿಂದ ಬಂದಾಗ ಸರೋಜ ಹೇಳಿದಳು :

"ಹಾಲಿನಾಕೆ ಬಂದಿದ್ದಳೊಬ್ಬಳು"

"ನಾವು ಗವರ್ನಮೆಂಟ್ ಡಿಪೋನಿಂದಲೇ ತರಿಸುತ್ತಿದ್ದೇವಲ್ಲ?"

"ಅವಳೀಮನೆಗೆ ಮೊದಲಿನಿಂದಲೂ ಹಾಲು ಕೊಡುತ್ತಿದ್ದಳಂತೆ.?"

"ಇರಬಹುದು ಸರೋಜ. ಆದರೂ, ನಮಗೆ ಅವಳ ಹಾಲಿನ ಅವಶ್ಯಕತೆಯಿಲ್ಲವೆಂದು ಹೇಳಿಬಿಡು."

"ಅದು ಸಾಧ್ಯವಿಲ್ಲವಂತೆ. ರೂಪಾಯಿಗೆ ಸೇರೂವರೆನಂತೆ ಕೊಡ್ತಾಳಂತೆ, ಅಪ್ಪಟ ಹಸುವಿನ ಹಾಲು....."

"ನಮ್ಮ ಗವರ್ನಮೆಂಟ್ ಡಿಪೋ?"

"ಅದನ್ನವಳು ಕೇಳುವುದೇ ಇಲ್ಲ; ಇವಳಿಂದಲೇ ಹಾಲಕೊಂಡ್ಕೋಬೇಕಂತೆ, ಮಾಮೂಲಾಗಿ ಈ ಮನೆಗೆ ಇವಳದೇ ಹಾಲು ಸಪ್ಲೈ ಆದ್ದರಿಂದ ಅವಳು ನಿಲ್ಲಿಸೋ ಹಾಗಿಲ್ಲವಂತೆ. ಎಷ್ಟು ಸಂಸಾರ ಬಂದು ಹೋದರೂ, ಅವಳು ಮಾತ್ರ ಖಾಯಂ; ತಪ್ಪಲೊಲ್ಲಳಂತೆ!"

"ಹಾಗೇ ಆಗಲಿ," ಎನ್ನದೆ ಗತ್ಯಂತರವಿಲ್ಲದಾಯಿತು ನನಗೆ.

ಮತ್ತೊಂದು ದಿನ, ಜಲಗಾರರಿಬ್ಬರು ಬಂದು, ಈ ಮನೆ ಕಕ್ಕಸ್ಸು ಗುಡಿಸುವವನು ತಾನು, ತಾನು ಎಂದು ಜಗಳಾಡಿಧರೆಂದು ತಿಳಿಸಿದಳು ಸರೋಜ.

"ದೊಡ್ಡ ಯಜಮಾನರ ಕಾಲದಿಂದಲೇ ನಾನು ಈ ಮನೆ ಗುಡಿಸುತ್ತಿದ್ದೆ" ಎಂದನೊಬ್ಬ.

"ಹಿಂದಲ ರಾಯರ ಕಾಲದಲ್ಲಿ ನನ್ನನ್ನು ನೇಮಿಸಿದ್ದರು ಬುದ್ದಿ." ಎಂದು ಇನ್ನೊಬ್ಬನ ದೂರು.

'ನಾನೇ ಇಲ್ಲಿನ ಖಾಯಂ ಆಳು' ಇಬ್ಬರದೂ ಒಂದೇ ದನಿಯಾಗಿ ಹೊರಡುವ ಮಾತದು ! ಸೊಲೊಮನನ್ನೇ ನೆನೆಯಬೇಕಾಯಿತು ನ್ಯಾಯ ತೀರ್ಮಾನ ಮಾಡಲು! ಕೊನೆಗೆ, ತೆಪ್ಪಗಾಗಿ ಇಬ್ಬರಿಗೂ ತಿಂಗಳಾ ಎರಡೆರಡು ರೂಪಾಯಿ ಕೊಡುತ್ತೇನೆಂದು ಹೇಳಿ– ಕಳಿಸಿದೆ–– ಆಸೆ ತೋರಿಸಿ.

ಕಸಮುಸುರೆಗಾಗಿ, ಕೆಲಸದಾಕೆ ಒಬ್ಬಳನ್ನು ಪಡೆಯಲು ಪಟ್ಟ ಪಾಡು–– ಅಬ್ಬಾ ಆ ಭಗವಂತನೆನ್ನುವವನಿಗೇ ತೃಪ್ತಿ !

"ಸಾಹೇಬರ ಮನೆಕೆಲಸ, ಚಾಚೂ ತಪ್ಪಿದರೆ ಕಷ್ಟ, ನಮ್ಮಿಂದಾಗಾಕಿಲ್ಲ" ಎಂದು ಮುದುಕಿಯೊಬ್ಬಳು ಹೇಳಿದಳು.

"ಇಬ್ಬರದೇ ಸಂಸಾರ, ಕೆಲಸ ಕಮ್ಮಿ, ಹೆಚ್ಚು ಸಂಬಳ ಕೇಳೋ ಹಾಗಿಲ್ಲ" ಎಂದು ಇನ್ನೊಬ್ಬಳು ಹೇಳಿದಳು.

ಕೊನೆಗೆ ಹೇಗೋ ಮಾಡಿ, ಏನೋ ಮಾಡಿ, 'ನೀನು ಮಾಡಿದಷ್ಟು ಕೆಲಸ, ಹೇಳಿದಷ್ಟು ಸಂಬಳ'ದ ಶರತ್ತಿನ ಮೇಲೆ ಒಬ್ಬಳನ್ನು ಗೊತ್ತು ಮಾಡಿದಾಗ, ನನ್ನ ಆ ಪ್ರಯತ್ನ ಭಗೀರತ ಯತ್ನಕ್ಕಿಂತ ಕಿಂಚಿತ್ತೂ ಕಮ್ಮಿಯಾದ್ದಲ್ಲವೆನ್ನಿಸಿತು ನನಗೆ.

–ಅಂತೂ ಸಂಸಾರ ಸಾಗರದಲ್ಲಿ ತೇಲಹೊರಟಿತು– ಜೀವನ ನೌಕೆ !

## 9

'ಅಕ್ಕಪಕ್ಕದ ಆಫೀಸರರ ಮನೆಯಾಕೆಯವರ' ಸಹವಾಸದ ಸೌಭಾಗ್ಯ ಬಹು ದಿನಗಳವರೆಗಲ್ಲದಿದ್ದರೂ, ಕೆಲದಿನಗಳ ಮಟ್ಟಿಗಾದರೂ ಲಭಿಸಿತ್ತು. ನನ್ನ ಸರೋಜೆಗೆ ಊಟ ಮುಗಿಸಿ ಎಂಜಲೆಲೆ ತೊಟ್ಟಿಗೆಸೆಯಲೆತ್ತಿಕೊಂಡು ಹೋಗುತ್ತಿರುವಾಗ, 'ಊಟ

ಮುಗಿಯಿತೇನ್ರೀ ಸರೋಜಮ್ಮ' ಎಂದು ಪ್ರಶ್ನಿಸೋದರಿಂದ ಹಿಡಿದು, ಬಟ್ಟೆ ಒಗೆಯುವ ಸದ್ದು ಕೇಳಿದೊಡನೆ, 'ಬಟ್ಟೆ ಒಗೀತೀರೇನ್ರೀ' ಅಂತ ಅನ್ನುವವರೆಗಿನ ಕೂಲಂಕಶ ವಿಚಾರಣೆ ನಡೆಸುತ್ತಿದ್ದರಂತೆ-- ಆ 'ಅಮ್ಮಾವರುಗಳು!' "ಎಲ್ಲಿ ಸರೋಜಮ್ಮ, ನೀವು ಉಪ್ಪು ಬೆರಸಿ, ಒಣಗಿಸಿಟ್ಟಿದ್ರಲ್ಲ ಸರೋಜಮ್ಮ, ಆ ಹುಣಸೇಹಣ್ಣು ಎಷ್ಟು ರುಚಿಯಾಗಿರುತ್ತೇಂತೀರ, ನಮ್ಮ ಯಜಮಾನ್ರಿಗೆ ಅದರ ತಿಳಿಸಾರು ಮಾಡಿದ್ರೆ ತುಂಬ ಹಿಡಿಸುತ್ತೆ, ಒಂದು ಸ್ವಲ್ಪ ಕೊಟ್ಟಿರಿ....." ಎಂದು ಹೊಗಳಿ ಸಾಮಗ್ರಿಗಳನ್ನು ಸಾಗಿಸುವ ಅವರ ಚಾತುರ್ಯಕ್ಕೆ ಸರೋಜ ಆನಂದರಿಂದ ಮಾರುಹೋದಳಂತೆ. ಕೊನೆಗೆ, "ಇವತ್ನಮ್ಮ ರಾಮೂ ನಿಮ್ಮನೇ ಬಚ್ಚಲಲ್ಲೇ ಸ್ನಾನ ಮಾಡ್ತೀನಿ ಅಂತ ಹಟ ಹಿಡಿದಿದ್ದಾನೆ ಸರೋಜಮ್ಮ, ಬಿಸಿನೀರಿದೆ ತಾನೇ" ಎಂದು ಮಕ್ಕಳ ಮೈ ತೊಳೆಯುವ ಸ್ಟೇಜಿನವರೆಗೂ ತಲಪಿತು. ತನ್ಮಧ್ಯೆ, ನನ್ನನ್ನು ಕೊಂಚ ಹೀನೈಸಿ, ನನ್ನಾಕೆಯನ್ನು ಸ್ವಲ್ಪ ಹೊಗಳಿ, ತವರನ್ನು ಕಂಠೋಕ್ತ ಪ್ರಶಂಸಿಸಿ- ಅದೂ ಇದೂ ಹಣಕಾಸಿನವರೆಗೆ ಕೈಕಡಕೊಳ್ಳಲಾರಂಭ..... ನೆರೆ, ಹೊರೆಯಾಗಿ ಕಾಣಿಸತೊಡಗಿತಂತೆ ಸರೋಜಗೆ. ಕೊನೆಗೆ ಕೊಂಡುಹೋದ ವಸ್ತುಗಳನ್ನು ಮರಳಿಸುವ ಬದಲು, ನನ್ನನ್ನು ಹೊಗಳಿ, ನಮ್ಮಾಕೆಯನ್ನು ಬೈದು, ತವರನ್ನು ಹೀನೈಸಿ ಆಡಲು ಪ್ರಾರಂಭ..... ಸರಿ. ಇನ್ನೇನು ಸುಮ್ಮಗಿರುತ್ತಾಳೆಯೇ ನಮ್ಮ 'ಅಮ್ಮಾವರು'! ಶುರು ಜಗಳಕ್ಕೆ !......... ದೂರು ನನ್ನ ಹತ್ತರವೂ ಬಂದು. ಕಾಯುತ್ತಿದ್ದ ಸುಸಂಧಿ ಸಿಕ್ಕಿತು ಎಂತಲೇ "ಸ್ನೇಹಾಚಾರ" ನಿಲ್ಲಿಸಿಬಿಡು ಎಂದೆ. ನಿಲ್ಲಿಸಿದಳು.

## 10

ಒಂದು ಸುಂದರವಾದ ಶನಿವಾರ. 'ಆಕೆ ಕೂಡೆ ಮೆಟನೀ' ಚಪಲದಿಂದ ತಲೆನೋವಿನ ನೆಪ ಹಾಕಿ, ಆಫೀಸಿಗೆ ಅರ್ಧ ದಿನ ಚಕ್ಕರ್ ಹಾಕಿ, ಮಧ್ಯಾಹ್ನ ಒಂದು ಗಂಟೆಗೇ ಮನೆಗೆ ಬಂದಿದ್ದೆ.

ಊಟ ತೀರಿಸಿ, ತಾಂಬೂಲದ ತಟ್ಟೆಗೆ ಕೈ ಹಾಕುತ್ತೇವೆ- ಅಷ್ಟರಲ್ಲಿ ಬಂದು ಬಾಗಿಲ ಮುಂದೆ ನಿಂತನೊಬ್ಬ ಜವಾನ. 'ಇವನ ಮನೆ ಹಾಳಾಗ' ಎಂದು ಗೊಣಗುತ್ತ ಹೊರಗೆ ಬಂದು ನೋಡುತ್ತೇನೆ, ಇಲೆಕ್ಟ್ರಿಕ್ ಡಿಪಾರ್ಟ್‌ಮೆಂಟ್ ನೌಕರ.

"ಮೀಟರ್ ಎಲ್ಲಿದೆ ರೀ, Power Disconnect ಮಾಡ್ಬೇಕು"

"ಯಾಕಪ್ಪ? ರಿಪೇರಿ ಗಿಪೇರಿಯೇನಾದ್ರೂ ಆಗ್ಬೇಕೇನು?"

ಅದ್ಯೇನೋ ನಂಗೊತ್ತಿಲ್ಲ ಸದ್ಯ Disconnect ಗೆ order ಬಂದಿದೆ. ಮಾಡ್ಬೇಕು."

"ಸಂಜೆಗೆ ಮತ್ತೆ Connection ಬರುತ್ತೆ ತಾನೆ?"

Connection ಬರುತ್ತೋ ಇಲ್ವೋ, ನಂಗೊತ್ತಿಲ್ಲ, ನಾನೀಗ Disconnect ಮಾಡ್ಬೇಕು."

"ಅದ್ಯಾಕಪ್ಪ ಅವಾಂತರ? ಕಾರಣ ಇಲ್ದೆ Disconnect ಅಂದ್ರೆ"

"ಅಂದ್ರೆಗಿಂದ್ರೆ ನನ್ನಲ್ಯಾಕೆ ಹೇಳ್ತೀರಿ? ಮೀಟರ್ ಎಲ್ಲಿದೆ, ಅಷ್ಟು ತೋರಿಸಿಬಿಡಿ. ಮತ್ತೆ ಬಿಲ್ ಕಟ್ಟದಿದ್ರೆ ನಿಲ್ಲಿಸದಿರುತ್ತಾರ್ಯೆ?'

"ಬಿಲ್? ಎಲ್ಲಪ್ಪಾ ನಮಗೆ ಬಂದೇ ಇಲ್ವಲ್ಲ? ನಾವಿಲ್ಲಿಗೆ ಬಂದು ತಿಂಗಳೂ ಪೂರ್ತಿ ಆಗಿಲ್ಲ....... ಆದ್ರೂ ಬಿಲ್‌ಕಟ್ಬೇಕು ಅಂತಾಂದ್ರೆ, ಕಟ್ಟೋಣವಂತೆ, ವಿಚಾರಿಸಿ."

"ನೀವು ವಿಚಾರಿಸಿಕೊಳ್ಳಿ- ಏನು ಬೇಕಾದ್ರೂ ಮಾಡಿಕೊಳ್ಳಿ. ಆದ್ರೆ ! ಈಗ ನಾನು ಮಾತ್ರ Power disconnect ಮಾಡಲೇ ಬೇಕು!"

ಅದೆಂತಹ ಯೋಜನೆಗೂ ಬಾಗದೆ, ಯೋಚನೆಗೆ ಅವಕಾಶವನ್ನು ನೀಡದೆ Disconnect ಮಾಡಿಯೇ ಬಿಟ್ಟ- ಸ್ವತಂತ್ರ ಭಾರತ ಸರಕಾರದ ನಿಷ್ಠಾವಂತ ನೌಕರ !

Phone ಮಾಡಿ ವಿಚಾರಿಸಿದೆ; ಗ್ರಹಚಾರ- 'ಶನಿವಾರ 1 ಗಂಟೆಗೇ Power house office ಮುಚ್ಚಿದೆ, ಭಾನುವಾರ ರಜ, ಸೋಮವಾರ 11 ಗಂಟೆ ಮೇಲೆ ವಿಚಾರಿಸಿ' ಎಂದು ಉತ್ತರ ಬಂತು !....... ಅಂತೂ ಎರಡಿರುಳುಗಳನ್ನು 'ಕ್ಯಾಂಡ್ಲ್'ನಲ್ಲೇ ಕಳೆದೆವು!

**11**

ಮನೆಮಾಡಿ ಮೂರು ತಿಂಗಳು ಕಳೆಯಿತು. ಚಿಕ್ಕ ಚೊಕ್ಕ ಸಂಸಾರ ಬೆಚ್ಚನೆಯ (ಬೆಡ್ಡುಳ್ಳ) ಮನೆ; ಇಚ್ಛೆಗೆ ತಕ್ಕ(ಂತೆ ಜೊತೆಯೊಳೇಸಿನೇಮಾಕ್ಕೆ ಬರುವ) ಮಡದಿ, ವೆಚ್ಚಕ್ಕೆ ತಕ್ಕ(ಷ್ಟು) ರೊಕ್ಕ-ಇದ್ದುದರಿಂದ, ಸರ್ವಜ್ಞನನ್ನು ಮೂದಲಿಸಿ, 'ಸ್ವರ್ಗಕ್ಕೆ ಕಿಚ್ಚಿಕ್ಕು' ಎನ್ನುವಷ್ಟಲ್ಲವಾದರೂ, ಆ ಸುಖವನ್ನು ನೆನೆನೆನೆದು ಅಸೂಯೆಪಟ್ಟುಕೊಳ್ಳುವ ಅವಕಾಶವಂತೂ, ಖಂಡಿತವಾಗಿ ಇದ್ದಿಲ್ಲ ! ಮನೆಯಲ್ಲಿ ಅಡಿಗೆಯವನಿದ್ದ, ಆಫೀಸ್‌ನಲ್ಲಿ ಜವಾನನಿದ್ದ, ನಾವು ಇಬ್ಬರೇ ಇಬ್ಬರು- ನಾನೂ, ನನ್ನಾಕೆಯೂ !........ ಆಹ್ !

ಹೀಗೆ ಸಂಭ್ರಮದಿಂದ ಸುಖವನ್ನು ಸವಿಯುತ್ತಿದ್ದಾಗ– ಹೊಸ ಮನೆ ಹೂಡಿ ಸುಖಿಸುವ ನನ್ನ ಆಸೆ ಪೂರೈಸಿತೆಂದು ಹಿಗ್ಗಿ ಹೂವಾಗುತ್ತಿದ್ದೆ. ಮದುವೆಯಾದ ಹೊಸದು– ಪರವೂರಿಗೆ ವರ್ಗವಾಗಿದೆ ಎಂಬ ಸುದ್ದಿ, (ನಾನು ಬೇಕಂತಲೇ ಮಾಡಿಸಿಕೊಂಡೆ ಅನ್ನಿ!) ಕೇಳಿದೊಡನೆಯೇ, ನನ್ನ–ನನ್ನಾಕೆಯ ಎರಡು ಮನೆಗಳ ಹಿರಿಯರೂ ಇಲೆಕ್ಟ್ರಿಕ್ ಶಾಕ್ ಬಡಿದಂತೆ ತತ್ತರಿಸಿ ಹೋದರು. ಚೇತರಿಸಿಕೊಂಡ ಮೇಲೆ, ನನ್ನ ತಾಯಿಯೋ – ನನ್ನಾಕೆಯ ತಾಯಿಯೋ, ಯಾರಾದರೊಬ್ಬರು, ಕೆಲವು ದಿನಗಳ ಮಟ್ಟಿಗೆ ಬಂದು, ಮನೆ ಹೂಡಿ, ಸಂಸಾರ ಸ್ಥಾಪನೆ ಮಾಡಿಕೊಟ್ಟು ಹೋಗುವ ತೀರ್ಮಾನ ಮಾಡಿದಾಗ– 'ಬೇಡ, ನೀವು ಬರುವ ಅಗತ್ಯವಿಲ್ಲ, ನಾವೇ ಹೋಗಿ ಎಲ್ಲ ವ್ಯವಸ್ಥೆ ಮಾಡಿಕೊಳ್ಳುತ್ತೇವಂತೆ, ದಯವಿಟ್ಟು ಕಳಿಸಿಕೊಡಿ (ನನ್ನವಳಾದ! ) ನಿಮ್ಮ ಸರೋಜಳನ್ನು, ಎಂದು ಅಂಗಲಾಚಿದೆ. 'ನೀವಿಬ್ಬರೇ– ಹೊಸಬರೇ– ಹೋಗಬೇಡ್ರೋ, ಮನೆ ಹೂಡೋಕೆ ಕಷ್ಟವಾಗತ್ತೆ ಕಣೋ' ಎಂದರು ನಮ್ಮಮ್ಮ. 'ಬ್ಯಾಡಕಣೋ ಮಹಾರಾಯ' ಎಂದರು ನಮ್ಮಪ್ಪ. ನಿಮಗೆ ಗೊತ್ತಿಲ್ಲ ಇನ್ನೂ, ತೊಂದರೆಗಳು ಬರುತ್ತವೆ' ಎಂದರು ನಮ್ಮ ಮಾವ. 'ಸಾಧ್ಯವಾಗಕ್ಕಿಲ್ಲ ಕಣೇ' ಎಂದಳು ನಮ್ಮತ್ತೆ (ಆಕೆಗೆ!) 'ಒಬ್ಬಳೇ ಮಗಳು– ನಿಮ್ಮವಳು– ದಣಿದಾಳೆಂದು ಬೆದರದಿರಿ ಮಾವನವರೇ, ನೋಡಿರೊಬ್ಬಳೇ ಮಡದಿಯೆನಗೆ' ಎಂದು ಮಾವನಿಗೆ ಆಶ್ವಾಸನೆ ನೀಡಿದೆ; 'ಸಾಧ್ಯವಾಗುತ್ತೆ ಅತ್ತೆಮ್ಮನವರೇ' ಎಂದು ಅತ್ತೆಗೆ ಭರವಸೆ ಕೊಟ್ಟೆ; 'ಬರುವ ತೊಂದರೆಗಳನ್ನೆಲ್ಲ ಸುಖವಾಗಿ ತಪ್ಪಿಸಿಕೊಳ್ಳುವೆ'ವೆಂದೂ, 'ನಾವು ಹೋಗಿಯೇ ಹೋಗ್ತೇವೆ, ಇಬ್ಬರೇ' ಎಂದೂ ಹಲವು ವಿಧವಾಗಿ ಹೇಳಿ, ಕೊನೆಗೂ "ಹೊಸ ಸಂಸಾರ" ಸಾಗಿಸುವ ಆಸೆಯಿಂದ, ಎಲ್ಲರ ಮಾತನ್ನೂ ಕಡೆಗಣಿಸಿ, ಹೊರಟೆವು !... ........

......... ಈಗ ಹೊಸಮನೆ ರೂಪುಗೊಂಡಿದೆ..........

ಪ್ರಸವವೇದನೆಯ ನಂತರ, ಮಗುವಿಗೆ ಹೆಸರಿರಿಸುವ ದಿನ ತಾಯಿಗಾಗುವಷ್ಟು ಆನಂದ ನನಗೆ ಅನುಭವಕ್ಕೆ ಬಂತು– ಮನೆಯೊಂದು ರೂಪಕ್ಕೆ ಬಂದಾಗ. ಅಂತೂ ನಾನೂ ಆನಂದದಿಂದ 'ಧನ್ಯ' ಮನೆ– ಹೊಸ ಮನೆ–ಮಾಡಿ 'ಧನ್ಯ' ಎಂದು ಅಂದುಕೊಂಡೆ......

ನಿತ್ಯದ ನಂತರ ಬಂತೊಂದು ದಿನ ದೀಪಾವಳಿ!.... ಹೊಸದೀಪಾವಳಿ!....... ಅದೂ ಹೊಸಮನೆಯ ಹೊಸ ಸಂಸಾರದ ನಮಗೆ ದೀಪಾವಳಿ ! ವಿಜೃಂಭಣೆಯಿಂದ ಆಚರಿಸಬೇಕೆಂದು ನಿಶ್ಚೈಯಿಸಿದೆವು.

"ಸಂಜೆ ನನ್ನ ಸ್ನೇಹಿತರಿಗೆ ಕೆಲವರಿಗೆ ಲಘು ಉಪಾಹಾರವೀಯಬೇಕು" ಎಂದು ನಾನು ಹೇಳಿದೆ.

"ನನ್ನ ಗೆಳತಿ ಶಾರದಾ ಇಲ್ಲಿದ್ದಾಳೆ– ಚೊಚ್ಚಲ ಬಸುರಿ; ಉಡಿ ತುಂಬಿಸಿ ಕಳುಹಿಸಬೇಕು, ಬರಹೇಳುತ್ತೇನೆ" ಎಂದಳು ಸರೋಜ.

.........ಸರಿ, ಎಲ್ಲ ವ್ಯವಸ್ಥೆಗಳಿಗೂ 'ಮಾಣಿ' ಮಹಾಶಯನನ್ನೇ ಕೇಂದ್ರವಾಗಿ ಇರಿಸಿಕೊಂಡು ತೀರ್ಮಾನಿಸಿದೆವು.

"Strong Tiffeen ನ ಹಾಗಿರಬೇಕು" ಎಂದು ನಾನು ಸೂಚಿಸಿದೆ.

"Riceless Dinner ನ ಹಾಗಿರಬೇಕು" ಸರೋಜಳ ಸೂಚನೆ.

"Strong Riceless Dinner ಮಾಡಿಬಿಡ್ತೇನೆ ಸಾರ್" ಎಂದು ಮಾಣಿ ಮಹಾಶಯ ಭರವಸೆ ಕೊಟ್ಟ.

"Good" ಎಂದು ಒಮ್ಮತದ ಒಕ್ಕೊರಲ ಕೂಗು ನಮ್ಮಿಬ್ಬರದು.

"ಜಿಲೇಬಿ..... ಜಾಂಗೀರು, ಹೋಳಿಗೆ......... ಮೂರು ಸ್ವೀಟು, ಕೀರು,...... ಖಾರದ ಎರಡು ತಿಂಡಿ, ಉಪ್ಪೇರಿ, ವಾಂಗೀಭಾತು, ಚಿತ್ರಾನ್ನ......"

"ಅವಲಕ್ಕಿ, ಬಾದಾಮಿಹಲ್ವ, ಕೋಸಂಬರಿ....."

...... ಪಟ್ಟಿ ಉದ್ದಕ್ಕೂ ಸಾಗಿತು,

...... ಆಮಂತ್ರಣ ಎಲ್ಲರಿಗೂ ಹೋಯಿತು,

....... ಏರ್ಪಾಡುಗಳೆಲ್ಲವೂ ಆಯಿತು.

ಹಬ್ಬದ ಹಿಂದಿನ ರಾತ್ರೆ ! "ನಾಳೆ ಮಧ್ಯಾಹ್ನ 3–30ಕ್ಕೆ ರೆಡೀ ಆಗಿರುತ್ತೇ ಸಾರ್, ನಿಮಗೇನೂ ಯೋಚನೆ ಬೇಡ" ಎಂಬ ಭರವಸೆ ಮಾಣಿಮಹಾಶಯನಿಂದ ಬಂದದ್ದೂ ಬಂದದ್ದೆ; ಸಾಮಾನು ನೆನೆಹಾಕಿದ್ದೂ ಹಾಕಿದ್ದೇ; ಹುರಿದದ್ದೂ ಹುರಿದದ್ದೇ; ಅರೆಯುವ ಕಲ್ಲು ತಿರುವಿದ್ದೂ ತಿರುವಿದ್ದೇ.... ಅಂತೂ ಸಂಭ್ರಮ, ಗಡಿಬಿಡಿ, ಉತ್ಸಾಹ..... (ಮರುದಿನ) ಮದುವೆಯಾದರೆ, ಚಪ್ಪರಕ್ಕೆ ಮುಗಿಯುವ (ಮುನ್ನಾದಿನದ) ಗಲಭೆ ಎಬ್ಬಿಸಿ ಭರವಸೆ ತುಂಬಿಸಿದ್ದ ಮಹಾನುಭಾವ ಮಾಣಿ !

'ಪರವಾ ಇಲ್ಲ, ಭೇಷಾಗಿ ನಡೆಯುತ್ತೆ,' ಅಂತ ಮನಸಿನಲ್ಲೇ ಅಂದುಕೊಂಡು– ಸುಖವಾಗಿ ನಿದ್ರೆ ಹೋದೆ (ವು.)

ಇನ್ನೂ ನಸುಬೆಳಕು ಹರಿಯುತ್ತಿತ್ತಷ್ಟೆ. ಸೂರ್ಯಕಿರಣಗಳು ಇನ್ನೂ ಮೂಡಿರಲಿಲ್ಲ; ಮುಂಜಾವದ ಸಿಹಿನಿದ್ರೆಯ ಮಧುರ ಮಾಧುರ್ಯವನ್ನು ಸವಿಯುತ್ತಿದ್ದೆ.....

"ರೀ..... ರೀ.... ಇವ್ರೇ, ಏಳ್ರಿ..... ಕೊಂಚ ಏಳ್ರಿ......."!

ಇದೇನು ಗ್ರಹಚಾರ ವಕ್ರಿಸಿತು- ಈ ಮುಂಜಾನೆಯಲ್ಲೇ ಎಂದು ಗೋಳ್ ನುಡಿಯುತ್ತಾ, ಕಣ್ಣು ಹಿಸುಕಿಕೊಂಡು ಎದ್ದು ಕುಳಿತೆ.

"ಏನೂ ಇಲ್ಲ, ಎದ್ದು, ಕೊಂಚ, ಒಲಗೆ ಉರಿ ಹಚ್ತೀರಾ?"......

"ಅಡಿಗೇಮಾಣಿ ಗಂಟುಮೂಟೆ ಸಹಿತ ಪತ್ತೆಯಿಲ್ಲ- ನಾನೂ ಮೂರು ದಿನದ ರಜಾ ತಗೊಂಡಿದೀನಿ....... ಕೊಂಚ ಒಲೆ......" ರೋಗದ ರಾಗದಿಂದ ಕೂಗುತ್ತಿದ್ದಳು ನನ್ನ ಅ(ರೆ)ಗಿಣಿ ದೂರದ ಮೂಲೆಯಲ್ಲಿ ಚೊಂಬು ಸಹಿತ ಕುಳಿತು ! ಆಹ್ ! ನಿದ್ರೆಯೆಲ್ಲ ಹರಿದೋಡಿತು ನನಗೆ !

ಎಕ್ಸ್‌ಪ್ರೆಸ್ ಟೆಲಿಗ್ರಾಂ ಬಿಟ್ಟೆ ಮನೆಗೆ- 'Start Immediately' ಅಂತ. ಸಂಜೆಯ ಟ್ರೈನಿಗಾದರೂ ಅಮ್ಮ ಬಂದಾಳೇ ಎಂದು ದಾರಿಕಾಯುವುದು ನನ್ನ ಭಾಗ್ಯವಾಯಿತು!.........

# ನಂದಿದ ದೀಪ

ನಂದಿದ ದೀಪ– ಸ್ವತಂತ್ರ ಸಾಮಾಜಿಕ ಕಾದಂಬರಿ. ಲೇಖಕರು– ಶ್ರೀಮಾನ್ ನಂದಿ ಅವರು. ಪ್ರಕಾಶನ– ಝುಮೆಸರ್ಸ್ ನಂದೂ ಬ್ರೂಸ್, ತರಳೆಪೇಟೆ, ತಂಗಳೂರು. ಬೆಲೆ– ರೂಪಾಯಿಗೆ ಹದಿನಾರಾಣೆ.

'ನಂದಿದ ದೀಪ'ವು ಕನ್ನಡದ ಅಪ್ರಸಿದ್ಧ (ಅತಿ+ಪ್ರಸಿದ್ಧ, ಲೋಪಸುಸಂಧಿ !) ಸಾಹಿತಿಗಳಾದ ಶ್ರೀಮಾನ್ ನಂದಿಯವರ ಕೊನೆಯ ಕಾದಂಬರಿ. ಪ್ರಸಿದ್ಧ ಉರ್ದೂ ಲೇಖಕ ಶ್ರೀ ಕ್ಷೇಮ ಚಂದ್ರರ ಒಂದು ಪೌರಾಣಿಕ ದೃಶ್ಯವನ್ನು, ಐತಿಹಾಸಿಕ ನೀಳ್ಗತೆಯಾಗಿ ಪರಿವರ್ತಿಸಿ, ಕನ್ನಡದ 'ಸ್ವತಂತ್ರ ಸಾಮಾಜಿಕ ಕಾದಂಬರಿ' ಎಂದು ಕರೆದು, ವಾಚಕರನ್ನು 'ಬೆಪ್ಪು'ಗೊಳಿಸಿದ (ಬೆರಗುಪಡಿಸಿದ) ಶ್ರೀಮಾನ್ ನಂದಿಯವರ ಈ ಅಭೂತಪೂರ್ವ ಸಾಹಸವು ನಿಜವಾಗಿಯೂ ನವ್ಯವಾಗಿದೆ, ದಿವ್ಯವಾಗಿದೆ, ಭವ್ಯವಾಗಿದೆ.

ಕತೆಯ ವಸ್ತುವು ಚಿರಪರಿಚಿತವಾದಷ್ಟು ಹೃದಯಸ್ಪರ್ಶಿಯಾಗಿದೆ. ನಡುವಿರುಳು ಕುಡಿದು ಮತ್ತನಾಗಿ, ರಸ್ತೆಯಲ್ಲಿ ಬಿದ್ದು ಗಳಹುತ್ತಿರುವ ಕಥಾನಾಯಕ ನೊಂದಯ್ಯನ ಒಂದೊಂದು ನುಡಿಯೂ ಕರುಳನ್ನ ಕತ್ತಿಹಾಕಿ ಇರಿಯುವಂತಿದೆ. ನಾಯಕಿಯ ಪಾತ್ರದಲ್ಲಿ ಬರುವ ನಂದಿನಿಯ ಕುರೂಪ, ಬುದ್ಧಿಹೀನತೆ, ಅರೆಮರುಳುತನಗಳೇ ಮೊದಲಾದ ವೈಶಿಷ್ಟ್ಯಗಳು ಈಗಲೂ ನಮ್ಮ ಕಣ್ಣನ್ನು ಕಟ್ಟುವವು. ಅಡಿಗೆ ಮನೆಯಲ್ಲಿ, ಆಕೆ ದೋಸೆ ಸಟ್ಟುಗದಿಂದ, ಗಂಡ ನೊಂದಯ್ಯನಿಗೆ ಪೂಜೆ ಸಲ್ಲಿಸುವ ದೃಶ್ಯವಂತೂ ಇದುತನಕ, ಕನ್ನಡದ– ಏಕೆ, ಪ್ರಪಂಚದ ಯಾವುದೇ ಭಾಷೆಯ, ಯಾವುದೇ ಕೃತಿಯಲ್ಲಿ ಸಹ ಕಂಡು ಬಂದಿರದಂಥ 'ಅಪರೂಪ' ವೈಶಿಷ್ಟ್ಯದಿಂದ ಕೂಡಿದೆ. ಪೋಷಕವರ್ಗದಲ್ಲಿ ಬರುವ ಇತರ ಪಾತ್ರಗಳು ಅಗಾಗ ಮುಖತೋರಿಸಿಹೋದರೂ, ತಮ್ಮ ವ್ಯಕ್ತಿತ್ವವನ್ನು ಒಂದಿಷ್ಟೂ ವಾಚಕರಿಗೆ ಅರಿಯಗೊಟ್ಟು ಶೋಷಕ ವರ್ಗಕ್ಕೆ ಸೇರುವುದಿಲ್ಲ. ಸಂದರ್ಭಕ್ಕೆ ಸರಿಯಾಗಿ ವ್ಯಕ್ತಿಗಳು ಬದಲಾಗಿ ಹೋಗುವುದೇ ಕಾದಂಬರಿಯ ವೈಶಿಷ್ಟ್ಯ ಎಂದು ಹೇಳಬೇಕಾಗಿದೆ.

ಕಾದಂಬರಿಯುದ್ದಕ್ಕೂ ಪುಟಪುಟದಲ್ಲೂ ಎಂಬ ಹಾಗೆ ವಾಕ್ಯ ವಾಕ್ಯದಲ್ಲೂ ಶಬ್ದಶಬ್ದದಲ್ಲೂ ಸಹ ಅಚ್ಚಿನ ದೋಷಗಳು ಹೇರಳವಾಗಿದ್ದರೂ ಸರಾಗವಾಗಿ ನಾವು ಓದಿಕೊಳ್ಳುವಂತಿದೆ. 'ದೇವಲಾಯ' 'ವಿಧ್ಯೆ' 'ಎಮ್ಮೆಮರಿ' ಮುಂತಾದ ಅಪಭ್ರಂಶ ಪ್ರಯೋಗಗಳು ಸಾಕಷ್ಟು ಇದ್ದರೂ ವಾಕ್ಯಗಳು ಉದ್ದುದ್ದವಾಗಿದ್ದು, ಏಕವಚನದಲ್ಲಿ ಆರಂಭವಾಗಿ, ಬಹುವಚನದಲ್ಲಿ ಮುಂದುವರಿದು, ವಚನರಹಿತವಾಗಿ ಕೊನೆಗೊಂಡರೂ ಪೂರ್ಣವಾಗದಿರುವಂಥಾ ನೂತನ ಚಮತ್ಕಾರವೊಂದನ್ನು ನಾವು ಕಾಣಬಹುದು. ಬಂದ ಶಬ್ದಗಳೇ ಬಹಳ ಸಾರಿ ಬಂದುದರಿಂದ, ಲೇಖಕರು ಬಳ(ಲಿ)ಸಿದ ಭಾಷೆ ತೀರ ಸರಳವಾದುದೇ ಆಗಿದೆ; ಮಾತ್ರವಲ್ಲದೆ ಕೆಲವು ಅನಿಶ್ಚಿತ ಶಬ್ದಗಳ ಜೋಡಣೆಗಳಿಂದಲೂ ವಾಕ್ಯಗಳನ್ನು ರಚಿಸಬಹುದೆಂದು ಲೇಖಕರಿಲ್ಲಿ ತೋರಿಸಿಕೊಟ್ಟ ರೀತಿ ನಿಜವಾಗಿಯೂ ಹೊಸತೊಂದು ಮಾದರಿಯೇ ಆಗಿದೆ. ಅಲ್ಪಾಕ್ಷರ- ಪ್ರಾಣಾಕ್ಷರ, ಲ-ಳಕಾರ, ನ-ಣಕಾರಗಳ ವ್ಯತ್ಯಾಸ- ವಿಶೇಷತೆಗಳೊಂದನ್ನೂ ಗಣಿಸದೆ, ಸರಾಗವಾಗಿ ಮನಬಂದಂತೆ ಬರೆಯುತ್ತಹೋದ ಲೇಖಕರ ಅಕ್ಷರ ನಿರ್ಮೋಹವನ್ನು ನಾವು ನಿಜವಾಗಿಯೂ ಮನಗಾಣಲೇ ಬೇಕಾಗಿದೆ.

ಪುಸ್ತಕದ ಹೊರಮೈ, ವರ್ಣರಹಿತವಾಗಿರುವುದರಿಂದ, ಗ್ರಂಥದ ಸರಳತೆಯು ಎತ್ತಿ ತೋರಿಸಲ್ಪಡುವುದು ಮತ್ತು ನಿರ್ಜನವಾದ ಮರಳುಗಾಡನ್ನು ನಮ್ಮ ಸ್ಮೃತಿಪಥದಲ್ಲಿ ಎಳೆದು ತಂದು ನಿಲ್ಲಸಬಲ್ಲಷ್ಟು ಶಕ್ತಿ ಯುಕ್ತವಾಗಿದ್ದು, ಮರುಭೂಮಿಯ ಜಲಾಶಯದಂತೆ ಅಪೂರ್ವವಾದ ಹಾಗೂ ಅತ್ಯುಪಯುಕ್ತ ಕೃತಿ ಈ ಪುಸ್ತಕದೊಳಗಿನ ಸಾಹಿತ್ಯವೆಂದು ಗ್ರಹಿಸಿಕೊಳ್ಳಬಹುದು. ಲೇಖಕರು ಸೂಚಿಸಿಲ್ಲವಾದರೂ, ಗ್ರಂಥದಲ್ಲಿ ತೋರಿಬರುವ ಮನರಂಜಕ ಉಪಮೆ, ಅಲಂಕಾರ ಮುಂತಾದುವು, ಕನ್ನಡದ ಪ್ರಸಿದ್ಧ ಸಾಹಿತಿಗಳ ಬೇರೆ ಬೇರೆ ಕೃತಿಗಳಲ್ಲಿನವೇ ಆಗಿವೆಯೆಂದು ಹೇಳಬಹುದು; ಆದ್ದರಿಂದಲೇ, ಕನ್ನಡದ ಅಮೂಲ್ಯ ಕೃತಿಗಳ ಅತ್ಯಮೂಲ್ಯ ಭಾಗಗಳು ಇದರಲ್ಲಡಕವಾಗಿವೆ ಎಂದು ಹೇಳಬೇಕಾಗುತ್ತದೆ.

ಗ್ರಂಥಕ್ಕೆ, ಪ್ರಸಿದ್ಧಾಂತರ ಸಾಲಿನಲ್ಲಿ ಪತ್ತೆಯಿಲ್ಲದೆ ಕುಳಿತವರೆಂದು ಲೇಖಕರಿಂದಲೇ ನಮೂದಿಸಿ, ಪರಿಚಯಿಸಲ್ಪಟ್ಟಿರುವ, ಶ್ರೀಮಾನ್ ನಿಂದ್ಯಾನಂದರ ಮುನ್ನುಡಿಯಿದೆ. ಬೆಲ್ಲದ ಬಯಲಿನಲ್ಲಿರುವ, ಬೆರ್ಚಪ್ಪನ ತಲೆಗೇರಿರುವ ಮಣ್ಣಿನ ಮಡಿಕೆಯ ಮುಂಡಾಸಿನಂತೆ ಈ ಮುನ್ನುಡಿಯು, ಕಾದಂಬರಿಯ ಕೀರ್ತಿಮಂದಿರಕ್ಕೆ ಕಲಶವಿಟ್ಟಂತಿದೆ. ಮುನ್ನುಡಿಕಾರರು, ತಮ್ಮ ಮುನ್ನುಡಿ (ಮನಸಿನ ಅಸಿನಿಕೆಯ ನುಡಿಗಳು) ಯಲ್ಲಿ ತಿಳಿಸಿದಂತೆ ಅವರ ಜೀವಮಾನದಲ್ಲಿ ಇಂತಹದೊಂದು ಕೃತಿಗೆ ಮುನ್ನುಡಿ ಬರೆಯುವ ಸುಯೋಗ ಅವರಿಗೆ ದೊರೆತುದೊಂದು ಮಹಾಸೌಭಾಗ್ಯವೆಂಬುದು ಒಪ್ಪತಕ್ಕ ಮಾತೇ ಆಗಿದೆ. ಅದೂ ಅಲ್ಲದೆ, ಅವರಿಗೆ ಮುನ್ನುಡಿ ಬರೆಯುವ ಭಾಗ್ಯ ಇದೀಗ, ಮೊದಲನೆಯ ಬಾರಿಯೇ ಆದರೂ,

ಬಂದುದಕ್ಕೆ ನಾವು ಅಭಿನಂದನೆಗಳನ್ನರ್ಪಿಸಲೇ ಬೇಕು. ಅಂತೂ, ಅವರ ಮಾತಿನಲ್ಲೇ ಹೇಳುವುದಾದರೆ, ಈ ರೀತಿಯ ಬೇರೊಂದು ಕೃತಿ ಪ್ರಕಟವಾಗಿಲ್ಲವೆಂದೂ, ಇನ್ನು ಮುಂದೆ ಆಗಲಾರ ದೆಂದೂ, ಆಗುವುದು ಅಸಾಧ್ಯ ಮತ್ತು ಆಗಲಿಕ್ಕಿಲ್ಲ ಎಂದೂ ನಾವು ಖಾಡಾಖಾಡಿ ಮನಗಾಣುವುದರಿಂದ, ಪ್ರಿಯ, ಅಭಿಮಾನೀ ವಾಚಕವೃಂದವು ತಮ್ಮ ಅಮೂಲ್ಯವಾದ ಧನವನ್ನು ದುರುಪಯೋಗ ಮಾಡುವ ಬದಲು, ಈ ಗ್ರಂಥವನ್ನು ಕೊಂಡುಕೊಳ್ಳುವುದು ಸಮಾನ ಧರ್ಮದ ಕಾರ್ಯವೆಂದು ಅನಿಸುತ್ತೆ ಎಂದು ನಾವಿಲ್ಲಿ ಒತ್ತಿ ಒತ್ತಿ ಬರೆಯದಿರಲಾರೆವು.

ಇಂತಹ ನೂತನ ಕೃತಿಯನ್ನು ರಚಿಸಿದ ಶ್ರೀಮಾನ್ ನಂದಿಯವರ ತೀರ ಕೊನೆಯ ಕೃತಿಯೇ ಇದಾದರೂ, ಶ್ರೀಯುತರ, ಈ 'ನಂದಿದ ದೀಪ'ವು, ಕನ್ನಡ ಸಾಹಿತ್ಯದ ಸಾಗರದಲ್ಲಿ ವಡಬಾನಲಿನಂತೆ ಎಂದೆಂದಿಗೂ ಉರಿಯದಿರದೆಂದು ನಾವು ಹೇಳದಿರಲಾರೆವು. ಹಾಗೂ, ಲೇಖಕರ ಶ್ರಮವೂ, ಪ್ರಕಾಶಕರ ಸಾಹಸವೂ, ವಾಚಕರ ಅಪಾರವಾದ ಕ್ಷಮೆಯಂತೆ ಅತ್ಯಂತ ಸ್ತುತ್ಯವಾದುದು ಎಂದು ನಮ್ಮ ನಂಬಿಕೆ.

# ಮಾನ್ಯ ಮಂತ್ರಿವರ್ಯರೇ......

ಸಂಸ್ಥಾನದ ಮಂತ್ರಿಮಂಡಳವು, ಮೊನ್ನೆ, ಮೂರು ತಿಂಗಳ ಹಿಂದೆ, ಪುನರ್ರಚಿತವಾದಾಗ, ನಮ್ಮೂರಿನ, ಮಾನ್ಯ, "ಮಂಕುಮತಿ" ಅವರನ್ನು ಮಂತ್ರಿಮಂಡಳಕ್ಕೆ ಹೊಸ ಚೈತನ್ಯವನ್ನು ತುಂಬಿ, ಆಡಳಿತದಲ್ಲೊಂದು ನೂತನ ಅಧ್ಯಾಯುವನ್ನು ಆರಂಭಿಸುವ ಸಲುವಾಗಿ ಸೇರಿಸಿಕೊಳ್ಳಲಾಯಿತು; ಈ ಶುಭವಾರ್ತೆಯನ್ನು ಸಾರುವ 'ಟೆಲಿಗ್ರಾಂ' ಬಂದ ಕೂಡಲೇ, ನಮ್ಮೂರ, 'ಆಬಾಲವೃದ್ಧ ಸಭೆ'ಯ ಪರವಾಗಿ, ಮಾನ್ಯರಿಗೊಂದು ಮಾವಿನ ಸೊಪ್ಪಿನ ಹಾರ ಹಾಕುವ ಸಮಾರಂಭವನ್ನೇರ್ಪಡಿಸ ಲಾಯಿತು. ಕಾರ್ಯಕ್ರಮದ ಕೊನೆಯಲ್ಲಿ ವಯೋವೃದ್ಧರೂ, ನೈಶ್ಯಜ್ಞಾನವೃದ್ಧರೂ ಆದ, ವೃದ್ಧವೈದ್ಯರಾಯರು, ಮಾನ್ಯಮಂತ್ರಿ ಮಹಾಶಯರಿಗೊಂದು ಹಿತವಚನವನ್ನು, ಆ ಬೀಳ್ಕೊಡಿಗೆ ಸಮಾರಂಭದ ಮುಕ್ತಾಯ ಕಾರ್ಯಕ್ರಮವಾಗಿ ನುಡಿದರು. ಅದೆಂತೆಂದರೆ:

1. ನೂತನ ಮಂತ್ರಿವರ್ಯರಾಗಿ "ನಾಮ ಕ(ರು)ಣಿಸಲ್ಪಟ್ಟ ತಮಗೆ ನಮ್ಮೂರಿನ ಪರವಾಗಿ ಹೆಮ್ಮೆಯ, ಅಭಿಮಾನದ ಹಾಗೂ ಪ್ರೇಮದ ಅಭಿನಂದನೆಗಳು. ನಮ್ಮ ಇದೇ ರೀತಿಯ ಅನಂತಾನಂತ ಅಭಿನಂದನೆಗಳನ್ನು ಆಗಾಗ ಸ್ವೀಕರಿಸಲಿಕ್ಕಾಗಿ, ನಮ್ಮೂರಿನಲ್ಲಿ ಹಾಗೂ ಇತರ ಊರುಗಳಲ್ಲಿ ತಮ್ಮ ಸಂಚಾರ ಕಾರ್ಯಕ್ರಮಗಳನ್ನು, ಕನಿಷ್ಟ ಪಕ್ಷ ಮಾಸಕ್ಕೊಮ್ಮೆಯಾದರೂ ಏರ್ಪಡಿಸಿರಿ..... ಪ್ರಪ್ರಥಮ ಕಾರ್ಯ ಕ್ರಮವಾಗಿ.

2. ಸಭೆಗಳಲ್ಲಿ ನೀವಾಡುವ ಮಾತುಗಳು ಯಾವತ್ತೂ, ತೀರ ಲಘುವಾಗಿ ಇರಲಿ (Silly) ಏಕೆಂದರೆ, ಮನೋವಾಕ್ಕಾಯುಗಳ ಸರಳತೆಯು, ಮಂತ್ರಿವರ್ಯರಾಗುವವರ ಅತ್ಯುತ್ತಮ ಅರ್ಹತೆಯೆಂದು ಗಾಂಧಿಯವರು ಹೇಳುತ್ತಿದ್ದ ಮಾತನ್ನು ಜನರಿನ್ನೂ ಪೂರ್ಣ ಮರೆತಿಲ್ಲ. ಅಲ್ಲದೆ, ಬಹಳ ಜನರು ಬಹಳ ಸಾರಿ, ಸಾರಿ ಸಾರಿ ಹೇಳಿದ ಮಾತನ್ನೇ ನೀವು ಮತ್ತೆ ಮತ್ತೆ ಒತ್ತಿ ಒತ್ತಿ, "ನಾನು ಹೇಳಿದ್ದೇನೆಂದು ನಂಬಿ, ಧೈರ್ಯವಾಗಿ ನಂಬಿ" (You take it from me I say) ಎಂದು ಹೇಳಿರಿ. ಹೊಸ ವಿಚಾರಗಳನ್ನಂತೂ ತಪ್ಪಿಯೂ ಉಸುರಬೇಡಿರಿ,

ಏಕೆಂದರೆ, ನೀವು ಕಾಂಗ್ರೆಸ್ ಮಂತ್ರಿಗಳು- ಎಂತಲೇ ಹೊಸ ವಿಚಾರಗಳಾಗಲಿ, ವಿಧಾನಗಳಾಗಲಿ, ನಿಮ್ಮ ಮೆದುಳನ್ನು ಸೇರಲೇಬಾರದು. ನಿಮ್ಮ ಭಾಷಣವನ್ನು ಗಾಂಧೀಜಿಯವರ ನಾಮೋಚ್ಚಾರಣೆಯಿಂದಲೇ ಆರಂಭಿಸಿರಿ; ಮುಂದೆ ಕ್ರಮಾಗತವಾಗಿ ಸತ್ಯ, ಅಹಿಂಸೆ, ತ್ಯಾಗ ಇತ್ಯಾದಿ ನಾನಾ ಶಬ್ದಪರಂಪರೆಯ ಮಳೆಯನ್ನೇ ಸುರಿಸಿರಿ; ಜನರು, ತಾವಾಗಿ ನಿಮ್ಮ ಭಾಷಣವನ್ನು ಗಮನಿಸದೆ, ತಮ್ಮಷ್ಟಕ್ಕೆ ಗುಜುಗುಟ್ಟುತ್ತಲೋ, (ಗುಸುಗುಸು ಎಂದು ಬುಸುಗುಟ್ಟುವುದು) ತೂಕಡಿಸುತ್ತಲೋ, ಹರಟುತ್ತಲೋ ಕುಳಿತುಕೊಳ್ಳುವರು. ಮುಂದೆ, ಸಾಧ್ಯವಿದ್ದಷ್ಟು ನೀರಸವಾಗಿ ಮತ್ತು ದೀರ್ಘವಾಗಿ ನಿಮ್ಮ ಭಾಷಣವನ್ನು ಮುಂದುವರಿಸಿರಿ. ಜನರು ಬೇಸರ ಸೂಚಿಸಿದರೆ, ಅಥವಾ ಸಭೆಯನ್ನು ತ್ಯಜಿಸಲು ಉಪಕ್ರಮಿಸಿದರೆ, ಆಗ ಅವರಿಗೆಲ್ಲ ತಾಳ್ಮೆಯ ಪಾಠವನ್ನು ಕಂಠಪಾಠ ಮಾಡಿಸಿರಿ, ಗಾಂಧೀಜಿ ಹೇಳಿ ಹೋಗಿದ್ದಾರೆಂದು ಹೇಳುತ್ತಾ, "ತಾಳಿದವ ಬಾಳಿಯಾನು" ಎಂಬಿತ್ಯಾದಿ ವೇದ ಸಮಾನವಾದ ಗಾದೆಗಳನ್ನು, ಸಾಧಿಸಿ, ಬೋಧಿಸಿರಿ.

3. ನಿಮ್ಮ ಮಂತ್ರಿಪದವಿಯ ಕಾಲದಲ್ಲಿ, ತೃಪ್ತಿಯಾಗುವಷ್ಟು ಸುಖ, ಸೌಭಾಗ್ಯ, ಭೋಗ, ವಿಲಾಸ, ವೈಭವ, ಸಂತೃಪ್ತಿಗಳನ್ನು ಸವಿದುಕೊಳ್ಳಿರಿ. ಜೀವಮಾನದ ಸುಖದ ಪರಮಾವಧಿಯನ್ನು ಈಗ ಸ್ವೀಕರಿಸಿಕೊಳ್ಳಿರಿ. ಇಂತಹ ಸತ್ಸಂಧಿ, ನಿಮಗೆ ಇನ್ನೊಮ್ಮೆ ಈ ಜೀವ ಮಾನದಲ್ಲಿ- ಏಕೆ ಏಳೇಳು ಜನ್ಮಗಳಲ್ಲೂ ಸಹ- ದೊರೆಯಲಾರದು. ಆದ್ದರಿಂದ ಉಮರನು ತನ್ನ ರುಬಾಯತ್ತಿನಲ್ಲಿ ಹಾಡಿದ, 'ಇಂದೇ ಕುಡಿದುಂಡು ಭೋಗಿಸು'ವುದಕ್ಕೆ ತಪ್ಪಬೇಡಿರಿ. ನಿಮ್ಮ ನಾಡಿನ ಪವಿತ್ರ ಗ್ರಂಥವೆನಿಸುವ ಗೀತೆಯಲ್ಲಿ ಭಗವಾನ್ ಶ್ರೀಕೃಷ್ಣ ಪರಮಾತ್ಮನೇ ಹೇಳಿರುವಂತೆ, 'ಎಣ್ಣೆ ಬಂದಾಗ ಕಣ್ಣುಮುಚ್ಚಿಕೊಳ್ಳುವುದು' ನಿಮಗೆ ಭೂಷಣವೂ ಅಲ್ಲ, ಸೌಭಾಗ್ಯವೂ ಅಲ್ಲ. ಒಟ್ಟಾರೆ ಮೇಲೆ, ನಿಮ್ಮ ಅಧಿಕಾರದ ಅವಧಿ ಮುಗಿಯುವ ಮುನ್ನವೇ ತೃಪ್ತಿಯೆನಿಸುವಷ್ಟು ಸುಖವುಣ್ಣಲು ಮರೆತೀರಾ? (ಜೋಕೆ!)

4. ನೀವು ನಿಮ್ಮ ಮಂತ್ರಿಪದವಿಗೆ ರಾಜೀನಾಮೆಯನ್ನು, ನಿಮ್ಮ ಪ್ರಾಂತ್ಯದ ಗವರ್ನರರಾಗಿ ನೇಮಕವಾಗದೆ, ಅಥವಾ ಪರದೇಶದ ರಾಯಭಾರಿಯಾಗಿ ನಿರ್ದೇಶಿಸಲ್ಪಡದೆ ಕೊಡಬೇಡಿರಿ. ಏಕೆಂದರೆ, ಒಂದು ಬಾರಿ ಸರಕಾರದ ಮಂತ್ರಿಗಳಾಗಿ ಸ್ವೀಕರಿಸಲ್ಪಟ್ಟ ನಿಮಗೆ ಸರಕಾರದ ಗುಟ್ಟುಗಳೆಲ್ಲವೂ ತಿಳಿದಿರುವ ಪ್ರಯುಕ್ತ, ಆ ಗುಪ್ತ ವಿಚಾರಗಳು (=ವಿದ್ಯೆಗಳು) ಹೊರಬೀಳದಂತೆ ಬಂದೋಬಸ್ತಾಗಿ ಉಳಿಯಲು, ಸರಕಾರದ ಯಾವುದಾದರೊಂದು ಹುದ್ದೆಗೆ ವರ್ಗಾಯಿಸಲ್ಪಡಲೇಬೇಕು. ಆದ್ದರಿಂದಲೇ ನಿಮ್ಮ ಕೈಗೆ ದೊರೆಯುವ ದ್ರಾಕ್ಷಿ, ಹಣ್ಣಾದ್ದಾಗಿರಲಿ!

5. ಸರಕಾರದ ಬೊಕ್ಕಸವನ್ನು ಕಂಡು, ಬೆಕ್ಕಸ ಬೆರಗಾದೀರಿ, ಜಾಗ್ರತೆ. ಆ ಹಣ, ಸಾರ್ವಜನಿಕರಿಗಾಗಿ– ಜನತೆಯದ್ದು ಎಂದು ಮುಂತಾಗಿ ಸಂಕೋಚ ದೃಷ್ಟಿಯಿಂದ ಸರಕಾರದ ಹಾಗೂ ನಿಮ್ಮ ನಾನಾ ಆಡಂಬರ ಕೃತ್ಯಗಳಿಗಾಗಿ ವೆಚ್ಚ ಮಾಡಲು ಹಿಂದೆ ಮುಂದೆ ನೋಡಬೇಡಿರಿ. ನೀವಲ್ಲವಾದರೆ, ನಿಮ್ಮ ಸ್ಥಾನಕ್ಕೆ ಬರುತ್ತಿದ್ದವರಾದರೂ ವೆಚ್ಚ ಮಾಡಿಯೇ ತೀರುತ್ತಿದ್ದರೆಂಬುದು ನಿಶ್ಚಿತವಾದ ವಿಚಾರ. ಅಲ್ಲದೆ, ಬಹುಕಾಲದಿಂದ, ಸ್ಥಾನ ಪಾರಂಪರ್ಯವಾಗಿ ನಡೆದು ಬಂದ ಪದ್ಧತಿಯಾದುದರಿಂದ ನೀವು ನಿಮ್ಮ ಧಾರಾಳತನದ ಪ್ರದರ್ಶನಮಾಡಲೇಬೇಕು. (ಯಾರಪ್ಪನ ಗಂಟೇನು ಹೋಗುತ್ತದೆ?)

6. ನಿಮ್ಮ ಮಂತ್ರಿತನ ಮುಗಿಯುವ ಮುನ್ನವೇ ಒಂದೆರಡು ಬಾರಿಯಾದರೂ ವಿದೇಶ ಯಾತ್ರೆಯನ್ನು ಪೂರೈಸಿಕೊಳ್ಳಿರಿ: ಆದರೆ, ವಿದೇಶಯಾತ್ರೆಯನ್ನು ಮಾತ್ರ ಆಡಂಬರ– ಸಿರಿವಂತಿಕೆಯ ಪರಮಾವಧಿಯ ಮಟ್ಟದಲ್ಲಿಯೇ ಮಾಡಬೇಕು. ಏಕೆಂದರೆ ನಿಮ್ಮ ನಾಡಿನ ಸಾಮಾನ್ಯ ಮಂತ್ರಿಯೊಬ್ಬನ ಜೀವನ ವೈಭವವೇ, ಪರದೇಶೀಯರಿಗೆಲ್ಲ, 'ಭಾರತವು ಸ್ವರ್ಣಭೂಮಿ, ಭೂಕೈಲಾಸ' ಎಂಬಿತ್ಯಾದಿ ಅನುಪಮ ಭಾವನೆಗಳನ್ನು ಉಂಟುಮಾಡಬೇಕು. ಪರದೇಶಯಾತ್ರೆಗಾಗಿ ಕೇವಲ ಒಂದು ಕ್ಷುಲ್ಲಕ–ಸಣ್ಣಪುಟ್ಟ–ಕಾರಣವನ್ನು ಮುಂದೆ ಮಾಡಿದರೂ ಸಾಕು. ಏಕೆಂದರೆ, ಆ ಕಾರಣಗಳೇನು ಪ್ರಾಮುಖ್ಯವಾದುವಲ್ಲ; ಆ ಪ್ರಯಾಣ 'ಕಾರ್ಯಸಾಧನೆ' ತಾನೇ ಮುಖ್ಯವಾದುದು.

7. ನಿಮಗೆ ವಿರೋಧವಾದ ಮಾತುಗಳನ್ನಾಡುವವರನ್ನು ಮೊತ್ತ ಮೊದಲು, ಅಧಿಕಾರಪ್ರಯೋಗದಿಂದ ಮಣಿಯಗೊಡಿರಿ ಮತ್ತು ಆ ಮೂಲಕ, ಜನಸಾಮಾನ್ಯರ ಪ್ರತಿನಿಧಿಯಾಗಿ ಬಂದ ನಿಮಗೂ, ಅಧಿಕಾರವನ್ನು ಚಲಾಯಿಸುವುದಕ್ಕೆ ತಿಳಿದಿದೆಯೆಂದು ತೋರಿಸಿ ಕೊಡಬೇಕು. ವಿರೋಧವಿಚಾರಗಳನ್ನು ತಂದು ಜನತೆಯ ಮನಸ್ಸನ್ನು, ನಿರ್ಮಲವಾದ ಮನಸ್ಸನ್ನು (ಕನ್ನಡದಲ್ಲಿ ಬೋಳೇ ಸ್ವಭಾವವನ್ನು ಎಂದು ಹೇಳುತ್ತಾರಲ್ಲ, ಅದೇನೇ) ಕದಡಿಸಲು ಹೊಂಚುಹಾಕುವವರ ಹುಟ್ಟಡಗಿಸಬೇಕಾದುದು, ರಾಷ್ಟ್ರದ ಹಿತದೃಷ್ಟಿಯಿಂದ ಅತ್ಯಗತ್ಯವಾದುದು ಹಾಗೂ ಪ್ರಪ್ರಥಮ ಕರ್ತವ್ಯ. ಸಾರ್ವಜನಿಕ ಶಾಂತಿರಕ್ಷಣೆಯೆಂಬ ಹೆಸರಿಗಾದರೂ ನೀವಿದನ್ನು ಸಾಧಿಸಬೇಕು. ನಿಮ್ಮಂತಹ ಉತ್ತಮೋತ್ತಮರ ಉತ್ಕೃಷ್ಟ ಧ್ಯೇಯ ಧೋರಣೆ–ಕಾರ್ಯಾಚರಣೆಗಳನ್ನು ಕೂಡಾ ಟೀಕಿಸುವುದೆಂದರೆ, ಅದು ಕೇವಲ ಅಸೂಯೆಯಿಂದ ವಿನಾ, ಮತ್ತೇತರಿಂದಲೂ ಅಲ್ಲ. ಉತ್ತಮರನ್ನು ಕಂಡರೆ ಸಹಿಸುವಂಥಾ ಕಾಲವಿದಲ್ಲ ಎಂದು ತಿಳಿದಿರಲಿ. "Too good is too bad" ಎಂದು (ದಿವಂಗತ) ಬರ್ನಾಡ್‌ಷಾ ಹೇಳಿದ ವಾಕ್ಯವನ್ನು ನೆನಪುಮಾಡಿಕೊಳ್ಳಿ; ಜನತೆಗೆ ತಿಳಿಯ ಹೇಳಿರಿ. ಕಾರ್ಯಸಾಧಕರ ಕಾಲವಿದು ಎಂದು ಸಾಧಿಸಿ, ಆ ಜನದ್ರೋಹಿ ವಂಚಕರನ್ನು

ವಿಚಾರಣೆಯಿಲ್ಲದೆ, ಸೆರೆಮನೆಗೆ ತಳ್ಳಿರಿ. ದಯೆದಾಕ್ಷಿಣ್ಯಗಳೊಂದೂ ಇಲ್ಲದೆ. ಮತ್ತೆ, ಬೇಕಾದಷ್ಟುದ್ದದ ಹೇಳಿಕೆಗಳನ್ನು ಹೊರಡಿಸಿ, ಅವರು ತಪ್ಪಿತಸ್ಥರೆಂದು ಘಂಟಾಘೋಷವಾಗಿ ಸಾರಿರಿ. ಮರುಮಾತಿಲ್ಲದೆ, ಮಂಕುಜನತೆ ಒಪ್ಪಿಕೊಳ್ಳುತ್ತದೆ; ಮತ್ತೂ ಬೇಕಾದರೆ ನಿಮ್ಮ ಕೈ (ವಾಡದ?) ಕೆಳಗಿನ ಪತ್ರಿಕೆ- ಹಾಗೂ ಪ್ರತಿಷ್ಠಿತರಿಂದ ಈ ಘೋಷಣೆಗಳು ಸ್ವಾಗತಿಸಲ್ಪಡಲಿ..... ಮತ್ತೆ ಕೇಳುವುದೇನು, ಹೇಳುವುದೇನು?

8. ನಿಮ್ಮ ಪ್ರಾಂತ್ಯದ ಯಾವ ಮೂಲೆಯಲ್ಲಾದರೂ ಸರಿಯೇ, ಒಂದು ಹಳೆಯ, 'ದೇವರಗುಡಿ'ಯ ಜೀರ್ಣೋದ್ಧಾರದ, ಹೊಸ ಕೆಸರು ಕಲ್ಲನ್ನು ಹಾಕುವ ಸಮಾರಂಭ, ರಿಸರ್ಚ್ ಎಂಬ ಹೆಸರಿನ ಸಂಘ ಸಂಸ್ಥೆಗಳ ಆರಂಭೋತ್ಸವ, ಹಾಗೂ ಎಲ್ಲ ನಮೂನೆಯ ಸಭೆ ಸಮಾರಂಭಗಳು ನಿಮ್ಮ ಅಮೃತ ಹಸ್ತಗಳಿಂದಲೇ ನೆರವೇರುವಂತೆ ಪ್ರಯತ್ನಿಸಿರಿ, ಜಾಗ್ರತೆ ವಹಿಸಿರಿ. ಒಂದು 'ಚಾನ್ಸ್'ನ್ನೂ ವ್ಯರ್ಥವಾಗ ಗೊಡಬೇಡಿರಿ. ಜನತೆಯೊಡನೆ ಒಂದಾಗಿ ಬಾಳುವೆ ಸಾಗಿಸುತ್ತಾ- ಅಧಿಕಾರ ನಡೆಸುವ ನೂತನ ಸಂವಿಧಾನವಿದೆಂದು ನಿಮಗೆ ತಿಳಿದಿರಲಿ! ವರ್ಷಕ್ಕೊಂದೆರಡು ಬಾರಿ ಅನ್ಯಪ್ರಾಂತ್ಯಗಳಿಗೂ ಭೇಟಿಕೊಡರಿ. ಪ್ರಾಂತ್ಯ ಪ್ರಾಂತ್ಯಗಳು ಪರಸ್ಪರ ಪ್ರೇಮ ಹಸ್ತಗಳಿಂದ ಆಂದೋಲನಮಾಡಿ, ಸಂಸ್ಥಾನಗಳ ಸಂಬಂಧವನ್ನು ಹೆಚ್ಚಿಸಿದಂತೆಯೂ ಆಗುತ್ತದೆ. ಒಂದೇ ಗುಂಡಿಗೆ ಎರಡು ಹಕ್ಕಿಗಳು ಉದುರಿದಂತೆಯೂ ಆಗುತ್ತದೆ!

9. ಸರಕಾರದ ಬೊಕ್ಕಸವು ಬರಿದಾದಾಗ ಸಣ್ಣ ಸಣ್ಣ ಸಂಬಳ ಬರುವ ಸರಕಾರಿ ನೌಕರರ ಪಗಾರಕ್ಕೆ ಕಡಿತ ಹಾಕಿರಿ. ಏಕೆಂದರೆ ತಿಂಗಳಿಗೆ 30 ರೂಪಾಯಿಗಳಲ್ಲೇ ಸಂಸಾರ ಸಾಗಿಸುವ ಅವರಿಗೆ, 20 ರೂಪಾಯಿಗಳಲ್ಲೇ "ಸುಧಾರಿಸುವುದು" ಕಷ್ಟದ ಮಾತೇನೂ ಅಲ್ಲ. ಆದರೆ, ಅದೇ ಸಾವಿರಾರು ರೂಪಾಯಿ ಸಂಬಳ ತಿನ್ನುವ ಅಧಿಕಾರಿಗಳ ಸುದ್ದಿಗೆ ಕೈಹಾಕಬೇಡಿರಿ. (ಪುಟ್ಟ ಸಂಬಳದ ಮೂಕ ನೌಕರರಂತೆ ಇವರೇನೂ ಸುಮ್ಮನೆ ಬಿಟ್ಟಾರೆಂದು ಭಾವಿಸಬೇಡಿ) ಇಷ್ಟು ಸಮಯ ವಿಲಾಸಮಯ ಜೀವನ ನಡೆಸುತ್ತಿದ್ದವರಿಗೆ ಒಮ್ಮಿಂದೊಮ್ಮೆ ಕೊಂಚವೇ ಆದರೂ ಕಡಿತಹಾಕುವುದೆಂದರೆ, ಹಾಲು (ಕೀರಿನ) ಲೋಟದೊಳಗೆ ನೊಣ ಕಂಡಂತೆ- ತೀರ ಅಲ್ಪ ಕಾರ್ಯವಾಗುತ್ತದೆ. ಆದ್ದರಿಂದ ಮರುಮಾತನಾಡದೆ ಸಹಿಸಿಕೊಳ್ಳುವ ಬಡನೌಕರರನ್ನೇ ಬೇಕಾದಷ್ಟು ಹಿಂಡಿರಿ.

10. ನಿಮ್ಮ ಸಹೋದ್ಯೋಗಿಗಳನ್ನು, ಮಾನ್ಯ ಮಂತ್ರಿವರ್ಯರೆಂದು ಜನತೆ ಅವರನ್ನು ಗೌರವಿಸುವುದನ್ನು ಕಂಡು, ಈ ಮೂಢರಿಗೂ ಇಂತಹ ಗೌರವವೇ! ಎಂದು ನಿಮಗೆ ನಗು ಬರಬಹುದು; ಆದರೂ, ಅವರನ್ನು ಸಂದರ್ಭ ಸಿಕ್ಕಿದಾಗಲೂ, ಸಿಗದಿದ್ದಾಗಲೂ, ಬಹಿರಂಗದಲ್ಲಿ ಹೊಗಳಿಬಿಡಬೇಕು. 'ದೇಶದ ಆಡಳಿತ ಶಕಟ ವನ್ನೊಯಲಿಕ್ಕೊಪ್ಪುವ ಹಯಗಳು' ಎಂದು ಆ(ಹಾ)ಯ್‌ವದನರನ್ನು ಪ್ರಶಂಸಿಸಿದರೆ

ನಿಮ್ಮ ಕಾರ್ಯ ಕೈಗೂಡಿದಂತೆಯೇ ಸರಿ! ಎಂದರೆ, ನಿಮ್ಮ ಮಾತಿಗುತ್ತರವಾಗಿಯೋ ಎಂಬಂತೆ ತಮ್ಮ ತಮ್ಮ ಶಕ್ತ್ಯಾನುಸಾರ ನಿಮ್ಮ ಪ್ರಶಂಸನೆಯನ್ನು ಮಾಡದಿರುವುದಿಲ್ಲ. ಮಾತ್ರವಲ್ಲದೆ, ಮಧುರವಾದ ಪ್ರಶಂಸನೆಯನ್ನು ಕಳೆದುಕೊಳ್ಳುವಷ್ಟು 'ಕೇವಲ'ರು ಅವರಲ್ಲವಾದ್ದರಿಂದ, ನಿಮ್ಮ ಪ್ರಶಂಸನೆ ಎಲ್ಲಿ ತಪ್ಪಿಹೋಗುವುದೋ ಎಂದು ಹೆದರಿ, ನಿಮಗೆ ವಿರೋಧವಾಗುವಂತೆ ಯಾವ ವಿಚಾರವನ್ನೂ ಉಸುರುವುದಿಲ್ಲ. ಆದ್ದರಿಂದ, ರೊಟ್ಟಿಯನ್ನೆಸೆದು, ತುಪ್ಪದ ಡಬ್ಬದಲ್ಲಿ ಮುಳುಗಿಸಿ, ಬಾಯಿಗೇರಿಸಿಕೊಳ್ಳುವ, ಈ ನೂತನ ಸಂವಿಧಾನವನ್ನು ನೀವು ರಾಷ್ಟ್ರದಾದ್ಯಂತ- ಆಸೇತು ಹಿಮಾಚಲ ಪರ್ಯಂತ- ಪ್ರಪ್ರಥಮವಾಗಿ ಆಚರಣೆಗೆ ತಂದು, ಇತರರಿಗೊಂದು ಮಾದರಿಯಾಗಿ ರಾರಾಜಿಸಬೇಕು.

11. ವಾತಾವರಣಕ್ಕೆ ಅನುಗುಣವಾಗಿ, ಬದಲಾಗುವ ಗುಣ, ಮಂತ್ರಿಗಳ ಒಂದು ವಿಶಿಷ್ಟ ಅರ್ಹತೆಯಾಗಿರುವುದರಿಂದ, ತಾವು ಸಂದರ್ಭಕ್ಕನುಗುಣವಾಗಿ ಮಾತುಕತೆ, ಕೃತಿ, ಕಾರ್ಯ, ಧ್ಯೇಯ, ಧೋರಣೆಗಳನ್ನು ಬಣ್ಣ ಬಣ್ಣಗಳಿಂದ ಬಳಿದು, ಒಳಗಿನ ಮೂಲ (ಭೂತವಾದ !) ಕಪ್ಪುಬಣ್ಣವು ಇತರರ ಕಣ್ಣಿಗೆ ಬೀಳದಂತೆ ಮಾಡಿ ಕಾರ್ಯಕುಶಲರಾಗಬೇಕು.

12. ಕೊನೆಯದಾಗಿ ನಾಡಿನ, ನೂತನ ಘಟನೆಯಲ್ಲಿರುವ ಉಪಯುಕ್ತವಾದ ಮತ್ತು ನ್ಯಾಯಬದ್ಧವಾದ ಹಾಗೂ ಅತ್ಯಗತ್ಯವುಳ್ಳ ಅಂಶಗಳನ್ನೆಲ್ಲಾ, ಯಾರಾದರೊಬ್ಬ (ಅಲ್ಲ, ಒಂದು ಸಮಿತಿಯ) ಸಂಶೋಧನಾ ಸಹಾಯದಿಂದ ಒಂದೆಡೆಯಲ್ಲಿ ಸೇರಿಸಿ, ಜೋಪಾನವಾಗಿ ಕೂಡಿಸಿ, ಒಂದು ಮೂಲೆಗೆಸೆದುಬಿಡಿರಿ. ವ್ಯವಹಾರದಲ್ಲಿ ಬರುವುದರಿಂದ, ಅದರ ದುರುಪಯೋಗವೆಲ್ಲಿ ಆದೀತೋ ಎಂದು ಶಂಕಿಸತಕ್ಕದ್ದು ಸ್ವಾಭಾವಿಕವೇ. ಆದ್ದರಿಂದ ಅಷ್ಟನ್ನುಳಿದು, ಬಾಕಿಯಿರುವ ಎಲ್ಲಾ ಅಂಶಗಳನ್ನೂ ನಿಮ್ಮ ನಿಶ್ಚಿತ ರೀತಿಯಲ್ಲಿ ಜಾರಿಗೆ ತಂದು ಜನತೆಗೆ- ನಾಗರಿಕ, ಪೌರತತ್ವಗಳಂತೆ ಸ್ವತಂತ್ರ ಭಾರತದ ಶ್ರೇಷ್ಠಪ್ರಜೆಗಳಾಗಿ ಬಾಳಲು ಮಾರ್ಗದರ್ಶನ ಮಾಡಬೇಕು.

# ಪಾರ್ತಿಸುಬ್ಬ

"ಹೊಲೆ"ದಲ್ಲಿ ಬಿಡದು ಹೊಲೆಯರ ದೈವ" ಎಂಬ ಗಾದೆಯನ್ನು ಪ್ರಾಯಶಃ ನನಗಾಗಿಯೇ ನಿರ್ಮಿಸಿರಬೇಕು; ಇಲ್ಲವಾದರೆ, ನಾನು ಜೀವನದಲ್ಲಿದ್ದಾಗ ಬಿಡಿ,- ಸತ್ತು, ಮಣ್ಣುಮುಕ್ಕಿದ ತರುವಾಯವೂ ನನ್ನ ವಿಚಾರದಲ್ಲಿ ಈ 'ಕನ್ನಡ ಜನ' ಇಷ್ಟೇಕೆ ಒದ್ದುಕೊಳ್ಳುತ್ತಿದ್ದಾರೆಯೋ ನನಗರ್ಥವಾಗುತ್ತಿಲ್ಲ. ಈಗಿತ್ತಲಾಗಂತೂ, ಕೇಳುವುದೇ ಬೇಡ; ಪತ್ರಿಕೆಗಳಲ್ಲಿ ನನ್ನ ಕುರಿತಾದ ತರ್ಕ- ವಿತರ್ಕಗಳೇ ! ಬರಹ, ಸಂಶೋಧನೆ, ವಿಮರ್ಶೆ, ಸಂಗ್ರಹ- ಹೀಗೆ ಹಲವಾರು ಹೆಸರುಗಳಿಂದ, ಅರ್ಥಾತ್ ಹತ್ತಾರು ರೂಪಗಳಿಂದ ನನ್ನ ವಿಚಾರವಾಗಿ ಬರೆದುಬಿಡುವುದೊಂದು ದೊಡ್ಡ, ಬಹು ದೊಡ್ಡ ಚಟವಾಗಿ ಬಿಟ್ಟಿದೆ, ಬರಿಯ ಬರೆಯುವುದಷ್ಟೇ ಆಗಿದ್ದರೆ ನಾನೇನೂ ತಲೆ ಕೆರೆದುಕೊಳ್ಳುವ ಕಾರಣವಿರಲಿಲ್ಲ; ಸಂತಸಪಡುತ್ತಿದ್ದೆ. ಆದರೆ ಇವರು ಮಾತ್ರ- ಬರೆಯುತ್ತಾ ಬರೆಯುತ್ತಾ ಬೈಯ್ದುಕೊಳ್ಳುವುದು, ಕಚ್ಚಿಕೊಳ್ಳುವುದು (ಬಡಾಯಿ) ಕೊಚ್ಚಿಕೊಳ್ಳುವುದು, ಚುಚ್ಚಿಕೊಳ್ಳುವುದೇ ಮೊದಲಾದ ಸರ್ವದಮನ ಸಾಧನೆಗಳನ್ನೂ ಕೈಗೊಂಡಿದ್ದಾರೆ. ಇವರ ಕತೆಗಳೇನೇ ಇರಲಿ, ನಾನು ಮಾತ್ರ ಈ ಜಗಳದ ಪ್ರವಾಹಕ್ಕೆ ಕೊಚ್ಚಿಕೊಂಡು ಹೋಗಲ್ಪಡುತ್ತಿದ್ದೇನೆ..... ಮೊದಮೊದಲು ಬರಿಯ ಭಾಷಣ, ಜೀವನ ಚರಿತ್ರೆಗಳಿಂದ ಆರಂಭವಾದ ನನ್ನ ವ್ಯಕ್ತಿ ಪರಿಚಯದ ಈ ಗಲಾಟೆ, ಈಗ ಮುಂದಿವರಿದು ಪರಸ್ಪರ ಶಕ್ತಿಯುಕ್ತಿ ಪರಿಚಯ- ಪ್ರದರ್ಶನಗಳತನಕವೂ ತಲುಪಿದೆ. ವಿಮರ್ಶೆ, ಪರಿಶೋಧನೆಗಳ ಹಂತವೂ ಕಳೆದು, ಸಂಶೋಧನೆಯ ವಿಧಾನದತನಕ ಮುಟ್ಟಿದೆ...... ನೂರಾರು ಮಂದಿ ವಾಗ್ಮಿಗಳು, ಸಾಹಿತಿಗಳು, ಸಂಶೋಧಕರು, ಅವರು, ಇವರು, ಯಾರೆಲ್ಲ ಈ ಬಗ್ಗೆ ಕೈಹಾಕಲು ಎದೆಯುಂಟೋ ಆ ಎಲ್ಲರೂ ಪ್ರವೇಶಿಸಿದ್ದಾರೆ; ಅಸಂಖ್ಯಾತ ಪತ್ರಿಕೆಗಳು, ಸಂಖ್ಯಾತೀತ ಲೇಖನಗಳನ್ನು ಪ್ರಕಟಿಸಿವೆ ಹೀಗೆ, ಒಂದಲ್ಲ, ಹಲವು ಬಗೆಗಳಿಂದ ನನ್ನ ಕುರಿತಾದ ಕೋಲಾಹಲವೆದ್ದಿದೆ. ನನ್ನ ಮಟ್ಟಿಗೆ ಹೇಳುವುದಾದರೆ- ಇದೆಲ್ಲ ನನ್ನ ದುರ್ದೈವವೆಂದೇ ಹೇಳಬೇಕಷ್ಟೆ. ಅಲ್ಲವಾದರೆ, ಯಃಕಶ್ಚಿತವಾದ ನನ್ನ- ಅದೂ ಎಂದೋ ಆಗಿಹೋದವನ-ಬಗ್ಗೆ ಇವರೆಲ್ಲ ಹೀಗೇಕೆ ಗುದ್ದಾಡಿಕೊಳ್ಳುತ್ತಿದ್ದರೋ- ದೇವರೇ ಬಲ್ಲ; ಅಥವಾ ಅವನಿಗೂ

ಅದು ಗೊತ್ತಿದೆಯೋ ಇಲ್ಲವೋ? ಹೇಗೂ ಇರಲಿ; ಇಷ್ಟುಮಾತ್ರ ನಿಜ: ಸತ್ತು ಎಲ್ಲೋ ಸ್ವಸ್ಥವಾಗಿ ಬಿದ್ದಿದ್ದ ನಾನು, ಇವರ ಈ ಜಗಳದಿಂದಾಗಿ "ಕಲ್ಲಿಲ್ಲದ ಗುಳಿಗೆ" ನಾಗಬೇಕಾಗಿದೆ !

ನನಗೀ ದುರವಸ್ಥೆ ಬಂದೊದಗಿದುದು ಹೇಗೆಂಬುದನ್ನು ತಿಳಿಯಲು ನಿಮಗೆ ಕುತೂಹಲ ಹುಟ್ಟಿರಬಹುದಲ್ಲವೆ? ನಿಮಗೆ ಹೇಳದೆ ನನಗೂ ನೆಮ್ಮದಿ ಎನಿಸದು. ದುಃಖವನ್ನು ಸಹಾನುಭೂತಿಯಿಂದ ಕೇಳುವವರಿದ್ದರೆ, ಅವರ ಮುಂದೆ, ತನ್ನೆಲ್ಲ ತೊಂದರೆಗಳನ್ನು ಬಿಡಿಸಿರಿಸಿದಾಗ ಎದೆಭಾರ ಸ್ವಲ್ಪವಾದರೂ ತಗ್ಗಬಹುದಲ್ಲವೇ? ಎಂತಲೇ ನನ್ನ ಕರುಣ ಕತೆಯನ್ನೊರೆಯುತ್ತೇನೆ.

ನಾನು, ಕುಂಬಳೆಯಲ್ಲಿ ಹುಟ್ಟಿಬೆಳೆದ, ಪಾರ್ವತಿಯ ಮಗ, ಸುಬ್ರಾಯನೆಂದು ತುಂಬಾ ಪ್ರತೀತಿಯಿತ್ತು. ನನ್ನ ಜೀವನಲೀಲೆ, ರಂಗ ಭೂಮಿಯ ಸೇವೆಯಲ್ಲಿ ಕಳೆದ ಮೇಲೆ ನಾನು ರಗಳೆಯಿಲ್ಲದೆ ಇದ್ದೆ. 'ಪಂಚವಟಿ' ಪ್ರಸಂಗವನ್ನು ಬರೆದ ಕವಿಯೆಂದೂ, ಯಕ್ಷಗಾನ ನಾಟ್ಯಕಲಾ (ಬಯಲಾಟ) ಸಂಸ್ಥಾಪನಾಚಾರ್ಯನೆಂದೂ– ಬೇಕಾದ ಹೊಗಳಿಗೆ ಸಲ್ಲಿಸುತ್ತಿದ್ದರು ಬೇಕಾದ ಹಾಗೆ ಜನ ಹೇಳಿ, ಹೊಗಳಿ ಪ್ರಚಾರ ಮಾಡಿಕೊಳ್ಳುತಿರಲಿ, ನನಗೇನಂತೆ ಎಂದು ತಾತ್ಸಾರದಿಂದ ಇದ್ದೆ ನಾನಾಗ; ತಪ್ಪುನೆಪ್ಪುಗಳ ವಿಮರ್ಶೆಗಾಗಲಿ, ತಿದ್ದುವ ಗೊಡವೆಗಾಗಲಿ ಹೋಗಲಿಲ್ಲ...... ಆದರೆ, ಈಗ ಮಾತ್ರ, ಪ್ರಸಂಗ ಕೈಮೀರಿ ಹೋಗಿಬಿಟ್ಟಿದೆ ! "ನೆಸಲು ಕೊಟ್ಟ ನಾಯಿ ನೊಸಲು ನೆಕ್ಕಿ"ದಂತೆ ಈ ಜನ– ನನ್ನನ್ನು ಸಂದಿಗ್ಧ ಪರಿಸ್ಥಿತಿಗೆ ತಂದಿಟ್ಟಿದ್ದಾರೆ– ಈಗ.

'ಶಂಕರನಾರಾಯಣ'ದಲ್ಲಿ ಬಯಲಾಟದ ಮೇಳ ಹೊರಡಿಸಿದ, 'ಕೋಟ'ದ ಭಾಗವಂತಯ್ಯ ನೀತ ಎಂದು ಒಬ್ಬರು ವಾದಿಸುತ್ತಿದ್ದಾರಾದರೆ, 'ಕಾಸರಗೋಡಿನ' ಬಳಿಯ ಕಣ್ವಪುರ– ಕಣ್ಯಾರದವನು, ಬಯಲಾಟದ ಭಾಗವತನಲ್ಲ, ಮೇಳದ ಯಜಮಾನನೆಂದು ಇನ್ನೊಬ್ಬರು ವಾದಿಸುತ್ತಿದ್ದಾರೆ. ಯಾರೋ ಒಬ್ಬರು, ವಿಜಾಪುರದವನು ಎಂದು ನನ್ನ ಬಗೆಗೆ ಹೇಳುತ್ತಾರೆ; ಮೈಸೂರೇ ನನ್ನ ಹುಟ್ಟೂರು ಎಂದು ಮಗುದೊಬ್ಬರ ಅಭಿಮತ! ಒಟ್ಟಾರೆಮೇಲೆ, ಹೀಗೆಲ್ಲಾ ವಾದಿಸುತ್ತಿರುವ ಮಹಾನು ಭಾವರ ದೆಸೆಯಿಂದಾಗಿ, ಕೇವಲ ಒಬ್ಬನೇ ಒಬ್ಬನಾದ ನಾನು, ಹತ್ತಾರು ಊರುಗಳಲ್ಲಿ ಹುಟ್ಟಿ, ಹಲವಾರು ರೀತಿಗಳಿಂದ ಬೆಳಗಿದವನಾಗಿದ್ದೇನೆ– ಅರ್ಥಾತ್, ನನಗೀಗ ಹುಟ್ಟೂರು ಎಂಬುದೇ ಇಲ್ಲದಂತಾಗಿದೆ! ಹಾಯ್ ನೋಡಿ: ಈ ನನ್ನ ಪೀಳಿಗೆಯ ಜನ ಮಾಡುತ್ತಿರುವ ಉಪಕಾರ?...... ಮೊದಲಾದರೆ, ಕುಂಬಳೆಯಾದರೆ– ಕುಂಬಳೆ– ಎಂಬ ಒಂದು ನಿಶ್ಚಯವಾದರೂ ಇತ್ತು; ಈಗ ಕುಂಬಳೆ ಅಲ್ಲವೆಂದು

ವಾದಿಸುತ್ತಾರೆ, ಬೇರಾವುದು ನನ್ನ ಜನ್ಮಸ್ಥಳವೆಂದು ಸಾಧಿಸಲರಿಯರು! ಹೀಗಿದೆ ನನ್ನ (ದುರ)ವಸ್ಥೆ!

ನನ್ನ ಜೀವನಾವಸ್ಥೆಯ ವಿಚಾರದಲ್ಲಿಯೂ ಹೀಗೇನೇ ! ದೇವಳದ ಪೂಜೆ ಭಟ್ಟನಾಗಿದ್ದನೆಂದು, ಹರಿಕತೆಯ ಹರಿದಾಸನಾಗಿದ್ದೆನೆಂದು ಏನೆಲ್ಲ ಹೇಳುತ್ತಿದ್ದಾರೆ. 'ಕುಂಬಳೆಯ ಅಡಿಕೆ ವ್ಯಾಪಾರಿ ಜನ್ನುಪೈಯವರ ಅಜ್ಜಂದಿರ ದೊಡ್ಡಪ್ಪ ಈ ಪಾರ್ತಿಸುಬ್ಬನ ಮಗನ ಮೊಮ್ಮಗನ ಹೆಂಡತಿಯ ತಮ್ಮನ ಕಿರಿಯ ಮಗನೊಂದಿಗೆ ಅಡಿಕೆ ವ್ಯಾಪಾರಕ್ಕಾಗಿ ಸ್ನೇಹ ಬೆಳೆಸಿದ್ದರು; ಅವರು ಹೇಳುವ ಕತೆಯಂತೆ......' ಎಂಬ ಆಧಾರ ಬೇರೆ ನೀಡುತ್ತಾರೆ.

ಮಂಜೇಶ್ವರ ಗೋವಿಂದ ಪೈಗಳೆಂಬ ಮಹನೀಯರಿದ್ದಾರಂತೆ; ಮಹಾರಾಯ ಹೇಗೆ ಪಂಚಾಂಗ ಇರಿಸಿ ಕಂಡು ಹಿಡಿದರೋ ಗೊತ್ತಿಲ್ಲ– ನನ್ನ ಜನನ, ಇಂಥಾ ಸಂವತ್ಸರದ ಇಂಥಾ ತಾರೀಕಿನ ಇಂಥಾ ದಿವಸ ಇಂತಿಷ್ಟೇ ಗಳಿಗೆಗೆ ಆದದ್ದು ಎಂದು ಸಹಿತ ಹೇಳುತ್ತಾರೆ ! ಅಬ್ಬಾ, ಮುದುಕನ ಹುಚ್ಚೆ? ಕಳೆದ ಕಾಲದ ಭವಿಷ್ಯ ಹೇಳುವ ಬುದ್ಧಿವಂತ! ಮದ್ರಾಸಿನಲ್ಲಿ ಈ ನನ್ನದೇ ಕತೆಯ ಕುರಿತು ಒಂದು ರೇಡಿಯೋ ಲೆಕ್ಚರ್ ಉಡಾಯಿಸಿಯೂ ಬಿಟ್ಟಿದ್ದಾರಂತೆ ! ನನ್ನ ಬಗ್ಗೆ ಹೀಗೆಲ್ಲ "ಆಧರಿಸಿ"ದ್ದರಿಂದಲೇ ಅವರು ಮದ್ರಾಸಿನ ರಾಷ್ಟ್ರಕವಿಗಳಾದರಂತೆ ಯಾರೋ ಹೇಳಿದ ನೆನಪು ನನಗೆ!

ಮುಳಿಯ ತಿಮ್ಮಪ್ಪಯ್ಯರೆಂಬವರಂತೆ– ಇನ್ನೊಬ್ಬ ಮಹಾ ಪುರುಷರು ! ನಾಡೋಜ ಎಂದು ಹೇಳುತ್ತಾ ಪಂಪನಿಗೂ ತಂಪಿನ ತಣ್ಣೀರು ಕುಡಿಸಿಬಿಟ್ಟ ಜನ ಇದು ! ನನ್ನ 'ಪಾರ್ತಿಸುಬ್ಬ ಕೃತ,' 'ಪಂಚವಟಿ' ಪ್ರಸಂಗಕ್ಕೆ 'ಸಟೀಕು ಅರ್ಥ' ಬರೆದುಬಿಟ್ಟಿದ್ದಾರೆ. ಇವರ ಅರ್ಥ ನೋಡುವಾಗ ನನಗೇ ಆಶ್ಚರ್ಯವಾಗುತ್ತದೆ– ಈ ಇವರ ಅರ್ಥ ಪುಸ್ತಕದಲ್ಲಿ ಹೇಳಿದಂಥಾ ಆ ಎಲ್ಲ ಚಮತ್ಕಾರ, ಸೌಂದರ್ಯ, ಉತ್ಪ್ರೇಕ್ಷೆ, ಉಪಮೆ, ಅಲಂಕಾರ, ವೈಶಿಷ್ಟ್ಯಗಳೆಲ್ಲಾ, ನಾನು ಬರೆದ ಆ ಪದಗಳಲ್ಲಿ ನಿಜವಾಗಿಯೂ ಇದ್ದುವೇ ಎಂದು? ಯಾವುದೋ ರಾಯನ ಕಾಲದಲ್ಲಿ ಬರೆದುದಲ್ಲವೆ? ಈಗ ಎಲ್ಲಿ ನೆನಪುಳಿಯುತ್ತದೆ? ಇದ್ದರೂ ಇರಬಹುದು.....

ಇನ್ನು, ಕೋಟಾ ಕಾರಂತರೆಂಬವರಂತೆ ಒಬ್ಬರು ನನಗೆ ಗೊತ್ತೇ ಇಲ್ಲ– ಈ ಇವರು ಸಹ ನನ್ನ ಕುರಿತು ವಾದಿಸಿ, ಪ್ರಮಾಣಕ್ಕೆ ನಿಂತುಬಿಟ್ಟಿದ್ದಾರೆ! ಶಂಕರನಾರಾಯಣದಲ್ಲಿ ಹುಟ್ಟಿ ಬೆಳೆದು ಭಾಗವತನಾಗಿ ಬಾಳಿದವನು ನಾನು ಎಂಬುದು ಈ ಮಹಾರಾಯರ ವಾದವಂತೆ ! ಇತ್ತ ಕಾಸರಗೋಡಿನಲ್ಲಿ

ಕಡಂಬಳಿತ್ತಾಯರು ಎಂಬವರೊಬ್ಬರು ನಾನು ಕುಂಬಳೆಯುವನೆಂಬುದನ್ನು ಪ್ರಮಾಣಮಾಡಲಿಕ್ಕೆ, ಪ್ರಮಾಣಪೂರ್ವಕ ತೋರಿಸಿಕೊಡಲಿಕ್ಕೆ ಎರಡಕ್ಕೂ ತಯಾರಾಗಿದ್ದಾರಂತೆ....... ಹೇಗೆ ಸ್ವಾಮೀ, ಸಾಕೇ?

ಏನ್ಮಾ್ಯ, ರಾವಣಾ । ನೀನ್ಮಾ್ಯ ಸೀತೆಯಾs ॥

ಕಾಣಾದ ಹಾಗೆ ಕದ್ದು । ತರಬಹುದೇನ್ಮಾ್ಯ ॥

ಎಂಬ ನನ್ನೊಂದು ಪದವನ್ನೆತ್ತಿಕೊಂಡು, ಪ್ರಗತಿಶೀಲ ಪ್ರಭೃತಿಗಳೊಬ್ಬರು, "…. ಈ ಪ್ರಗತಿಶೀಲ ಪ್ರವಾಹ ಯುಗಪ್ರವಾಹವಾಗಿದೆ, ಶತಶತಮಾನಗಳಿಂದಲೂ ಹರಿದು ಬರುತ್ತಿದೆ; ಈ ಮತಿ, ಗತಿ, ಮಾತ್ರೆ ಗಣಗಳನ್ನು ಬಿಟ್ಟು ಭಾವನೆಗೆ ಬೆಲೆಕೊಟ್ಟ ಸಜೀವ ಕೃತಿಗಳನ್ನ ನೀಡುತ್ತಲೇ ಬಂದಿದ್ದಾರೆ- ಪ್ರಗತಿಶೀಲರು ! ಉದಾಹರಣೆಗಾಗಿ ಪಾರ್ತಿಸುಬ್ಬನ ಈ ಮೇಲಣ ಪದಗಳನ್ನೇ ನೋಡಿರಿ"- ಎಂದಿತ್ಯಾದಿ ಪ್ರಗತಿ ಶೀಲವಾದಕ್ಕೂ ನನ್ನನ್ನು ಹೊಣೆಮಾಡಿದ್ದಾರೆ !

ಹೀಗೆ ಅದೆಷ್ಟೋ ಮಂದಿ ನನ್ನನ್ನು ನುಂಗಿ ನೀರ್ಕುಡಿದಿದ್ದಾರೆ; ಇವರಲ್ಲದೆ, ಪತ್ರಿಕೆಗಳು, ಲೇಖಕರು ತಾಳಮದ್ದಳೆಯ ಅರ್ಥಧಾರಿಗಳು- ಎಲ್ಲರೂ ನನ್ನನ್ನು 'ಪಟ್ಟಾಗಿ'ಹಿಡಿದುಕೊಂಡಿದ್ದಾರೆ; ಏನಾದರೂ ಬರೆಯುತ್ತಿದ್ದಾರೆ. ಅದಕ್ಕೂ ಕಾರಣವಿಲ್ಲದಿಲ್ಲವೆನ್ನಿ. ಈಗೀಗ ಅಸಂಖ್ಯಾತ ಸಂಖ್ಯೆಯಲ್ಲಿ ಹುಟ್ಟಿಬರುತ್ತಿರುವ ಪತ್ರಿಕೆಗಳಲ್ಲಿ, ಏನಾದರೂ ಬರೆದು ಭರ್ತಿಮಾಡಿ ಪುಟತುಂಬಿಸಿ, ಅಕ್ಷರಮಯವಾಗಿಸಿ ಹೊರಡಿಸಬೇಕಲ್ಲವೆ? ಅದಕ್ಕಾಗಿ, ಏನೂ ಸಿಗದಿದ್ದರೆ, ನನ್ನ ಕುರಿತು ಒಂದು ಲೇಖಾಂಕ ಆರಂಭಿಸಿಬಿಡುವುದು' ತೀರಿತು. ಸಿಕ್ಕಾಬಟ್ಟೆ ಅದರಲ್ಲಿ ಗೀಚುವುದು. ಜಿಲ್ಲೆಯ ಮೋಟಾರು ಕೆಲಸಗಾರರ ಸಂಪಿನಿಂದ (ಸಂಪುಬೇಡ, ಸತ್ಯಾಗ್ರಹಬೇಕು ಎಂಬುದೇ ಒಂದು ಲೇಖಾಂಕ!) ಶುರುವಾಗಿ, ನೆಹರೂ ಮಂತ್ರಿಮಂಡಳದಿಂದ ಮುಖರ್ಜಿ ಹೊರಬಂದ ವರೆಗಿನ ಸುದ್ದಿಸಮಾಚಾರಗಳೆಲ್ಲ ಆ ಸಂಚಿಕೆಯಲ್ಲಿ ಸಂಚಯವಾಗಿರುತ್ತವೆ; ಕರ್ಣಾರ್ಜುನ ಕಾಳೆಗದಿಂದ ಹಿಡಿದು, ದ್ವಿತೀಯ ಮಹಾಯುದ್ಧದವರೆಗಿನ ಎಲ್ಲ ಮಾತುಕತೆಗಳು ಅಲ್ಲಿ ಇಲ್ಲದಿರುವುದಿಲ್ಲ; ಒಟ್ಟಾರೆ, ವಿಷಯ ಏನೇ ಇರಲಿ, ಹೆಸರು ಮಾತ್ರ 'ಪಾರ್ತಿಸುಬ್ಬ ಲೇಖಾಂಗ !' ಎಂದು !

ಹಾಗೆಂದು ಎಲ್ಲಾ ಪತ್ರಿಕೆಗಳೂ ಇದೇ ನೀತಿಯನ್ನನುಸರಿಸುತ್ತವೆಂದು ಹೇಳಬರುವುದಿಲ್ಲ. ಬೇರೆಬೇರೆ ವಿಧಾನಗಳಿಂದ ಬದುಕುವ ಹಾದಿಯುನ್ನು ಕಂಡುಕೊಂಡಿವೆ. ಮೊನ್ನೆ ಮೊನ್ನೆ ಜಿಲ್ಲೆಯ "ಮೋಟಾರು ಮುಷ್ಕರ" ವಾಯಿತಷ್ಟೆ? ನಮ್ಮ ತಂಗಳೂರಿನ ಪತ್ರಿಕೆಯೊಂದು, ಆ ಸತ್ಯಾಗ್ರಹಿಗಳಿಗೆ ಸಹಾನುಭೂತಿ ತೋರಿಸುವ ಸಲುವಾಗಿ ತನ್ನೊಂದು ಸಂಚಿಕೆಯನ್ನು ಹೊರಡಿಸದೆ ನಿಲ್ಲಿಸಿ ಬಿಟ್ಟು- ಸಹಾಯ

ನೀಡುವುದಕ್ಕೆ ಅಥವಾ ಪ್ರೋತ್ಸಾಹಿಸುವುದಕ್ಕೆ ವಿಶೇಷ ಸಂಚಿಕೆಗಳನ್ನು ಹೊರಡಿಸುವುದೇ ಸಂಪ್ರದಾಯವೆಂದರಿತಿದ್ದ ವಾಚಕ ಲೋಕಕ್ಕೆ- ಹೊಸತೊಂದು ಚಿರನೂತನ ಪಥದೋರಿದ ಆ ಪ್ರಗತಿಶೀಲ ಪತ್ರಿಕೆಯ ಉಗ್ರಪುರೋಗಾಮಿ ಧೋರಣೆ ಮೆಚ್ಚತಕ್ಕದ್ದೇ; ನಾನೂ ಮೆಚ್ಚಿದೆ. ಆದರೆ ಮರು ಸಂಚಿಕೆಯಲ್ಲೇ ಬಂತಯ್ಯಾ, ಪಾರ್ತಿಸುಬ್ಬನ ಹುಟ್ಟೂರು ಕಂಬಳೆಯಲ್ಲ- ಕೋಣಿ ಕಾರಂತರ ಪ್ರಚಂಡವಾದ' ಎಂಬ ಲೇಖನ ! ಅದರ ಎದುರು ಪುಟದಲ್ಲೇ, 'ಕಾರಂತರವಾದ ಸತ್ಯವನ್ನ ವಿರೂಪಗೊಳಿಸಿದೆ ಎಂದು ಕಡಂಬಳಿತ್ತಾಯರ ಸಮರ್ಥನೆ !' ಎಂಬ ಜೊತೆ ಬರಹ !

ಹೀಗೆ ಪತ್ರಿಕೆಗಳಲ್ಲಿ ಪುಟಭರ್ತಿಗಾಗಿ ಮೊದಲು ಬರೆಯುವುದು; ಮತ್ತೆ ಅದನ್ನು ಟೀಕಿಸುವುದು; ಟೀಕೆಯ ಖಂಡನೆ, ಖಂಡನೆಗೆ ಪ್ರತಿದಂಡನೆ, ಖಂಡನೆ ದಂಡನೆಗಳ ಮಂಡನೆ ಎಂದು ಸಾರೋದ್ಧಾರ ಸಾಗುವುದು ! ಕೊನೆಗೆ ಅಲ್ಲಿಂದ ಬೇರೊಂದು ಪತ್ರಿಕೆಗೆ ಒಕ್ಕರಿಸಿಬಿಡುವುದು. ಪ್ರಶ್ನೋತ್ತರದಲ್ಲಿ ಅವತರಿಸಿ, ವಾಚಕರ ಪತ್ರದಲ್ಲಿ ಬೆಳೆದು, ವಾರದ ಬರಹದಲ್ಲಿ ವಿರಾಟರೂಪವಾಗಿ, ಸಂಪಾದಕೀಯದಲ್ಲಿ ಸಮಾಪ್ತಿ ಹೊಂದುವ ನಿಯಮ- ಈರೀತಿಯ ಕಚ್ಚಾಟದಲ್ಲಿಯೇ- ಇದನ್ನೇ ಪತ್ರಿಕಾ ಧರ್ಮದ ಮರ್ಮವೆಂದು ಹೇಳುವುದು- ಕಾಲಹರಣ ಮಾಡುವುದೊಂದು ದೊಡ್ಡ ಜಾಢ್ಯವಾಗಿದೆ !

ಒಟ್ಟಾರೆ ಮೇಲೆ ನನಗಿದು 'ಸಾಡೇಸಾತ್‌ಶನಿ' ಹಿಡಿದ ಕಾಲವೆಂದು ಕಾಣುತ್ತದೆ. ನನ್ನ ಹುಟ್ಟಿದ ಕಾಲ, ಸ್ಥಳ ನಿರ್ಣಯಕ್ಕೆ ಈಗ ಮುಂದಾಗಿರುವ ಈ ಜನರಿಗೆ ಏನೆನ್ನಬೇಕೋ ನಾನರಿಯೆ. ನಾನು ಹುಟ್ಟಿದ ಕಾಲದವರಾಗಲಿ, ಊರವರಾಗಲಿ ಯಾರೂ ಈಗ ಇಲ್ಲ; ಬೇರಾವ ಆಧಾರವೂ ಇವರ ಬಳಿ ಇಲ್ಲ; ಆದರೂ ಧೈರ್ಯದಿಂದ ನೋಡಿ, ಮುಂದೆ ಮುನ್ನುಗ್ಗಿದ್ದಾರೆ- ನನ್ನ ಕಾಲ ದೇಶ ತೀರ್ಮಾನಕ್ಕೆ! ಅದಾವ ನಿರ್ಧಾರಕ್ಕೆ ತಾವು ಬಂದಿಲ್ಲವಾದರೂ, ನನಗಿದ್ದ ನಿಶ್ಚಿತ ನಿಶ್ಚಿಂತೆಯನ್ನಿವರು ಕದಡಿಬಿಟ್ಟಿದ್ದಾರೆ ! ರೂಢಿಯಲ್ಲಿದ್ದ ಅಭಿಪ್ರಾಯಗಳೆಲ್ಲ ತಪ್ಪೆಂದುವಾದಿಸುತ್ತಾ ನಿಜವಾದ ನಿಜಸಂಗತಿಯೇನೆಂಬುದನ್ನು ಸಾಧಿಸಲಾರದೆ- ಕೈಕೈ ಹಿಸುಕಿಕೊಳ್ಳುತ್ತಾ, ನನ್ನ ಕತ್ತು ಹಿಸುಕಿಬಿಟ್ಟಿದ್ದಾರೆ. ನನಗೆ ಮಾತ್ರ ಈಗ 'ಊರು ಮನೆ' ಎಂಬುದೇ ಇಲ್ಲವಾಗಿದೆ. ಇವರು ಕೋಟವೆಂದರಿನ್ನು ಕೋಟದಲ್ಲಿ, ಕುಂಬಳೆಯೆಂದರೆ ಅಲ್ಲಿ, ವಿಜಾಪುರವೆಂದರೆ ವಿಜಾಪುರದಲ್ಲಿ- ಒಟ್ಟಾರೆ ಎಲ್ಲಿ ಇವರು ಹೇಳುತ್ತಾರೆಯೋ ಅಲ್ಲಿ ತೆಪ್ಪಗೆ ಬಿದ್ದಿರಬೇಕಾಗಿದೆ! ಇವರು ಹೇಳಿದಲ್ಲಿ ನನ್ನ ಹುಟ್ಟೂರು ಎಂದು ಒಪ್ಪಲೇ ಬೇಕಾಗಿದೆ ನೋಡಿ ! ಹುಟ್ಟಿ, ಬದುಕಿ, ಸತ್ತು ಎಲ್ಲ ಮುಗಿದ ನಂತರವೂ ಇಂತಹ ಚಿತ್ರಹಿಂಸೆಯನ್ನೇ ಅನುಭವಿಸಬೇಕೆಂದರೆ ಇದೆಂತಹ ದುರ್ವಿಧಿ ನನ್ನದು? ಅಯ್ಯೋ ದೇವರೇ......

ಅಯ್ಯೋ ! ನಾನು ಯಾಕೆ ಈ ಬೇಡದ ಯಕ್ಷಗಾನ ಪ್ರಸಂಗ ಬರೆಯುವ ಅಧಿಕ ಪ್ರಸಂಗಕ್ಕೆ ಕೈಹಾಕಿದೆನೋ ಎಂದು ಮರುಗುತ್ತಿದ್ದೇನೆ ಈಗ. ನಾನು ಆ ಕೃತಿ ರಚನೆಯಿಂದ ಪ್ರಸಿದ್ಧನಾದ ಕಾರಣ ತಾನೇ ಇವರು ಹೀಗೆಲ್ಲಾ ವಾದ, ಭೇದಗಳನ್ನು ಸಾಧಿಸುತ್ತಿರುವುದು? ಇಷ್ಟು ಮಾತ್ರವಲ್ಲದೆ, ಈಗೀಗ ಯಕ್ಷಗಾನ ಬಯಲಾಟಗಳಲ್ಲಿ, 'ಅಪೂರ್ವ ಸುಧಾರಣೆ' ಗಳೆಂಬ ಹೆಸರಿನಿಂದ ಆಗುತ್ತಿರುವ 'ಅಪರೂಪ'ದ ಸಿನೆಮಾ ಅನುಕರಣೆಗಳು, ಕಲೆಯ ಸೇವೆಯೆಂದು ಅದರ ಕೊರಳುಕೊಯ್ಯುವ ಸೋಗುಗಳು, ಮಾತಿನ ಮಲ್ಲರೋ– ಹೆಮ್ಮೆಯ ಹಿರಿಯರೋ ಸೇರಿಕೊಂಡು ಸೇವೆಯ ಸೋಗಿನಲ್ಲಿ ತಿಳಿದೂ– ತಿಳಿಯದೆಯೂ ಕಲೆಯ ಕೊಲೆಯನ್ನು ಮಾಡುತ್ತಿರುವುದನ್ನು ನೋಡಿಕೊಂಡು ಸೈರಿಸಿಕೊಂಡಿರುವುದಾದರೂ ಹೇಗೆ? ಇತ್ತ ಈ ಇವರ ಕಿರುಕುಳ, ಅತ್ತ ಆ ಅವರ ತೊಂದರೆಗಳಿಂದ ನನಗೀಗ ಎಂತಹ ಭಯಂಕರ ತಾಪತ್ರಯವುಂಟಾಗಿದೆಯೆಂದು ಹೇಳಲಿಕ್ಕೆ ಸಾಧ್ಯವೇ ಇಲ್ಲ !

ಹ್ಞು– ಹೀಗೆ ನನ್ನ ಹಾಲಹವಾಲೆಗಳೂ ಹಲವು ಸಾವಿರ ! ಹೇಳುತ್ತಾ ಹೋದರೆ, ನನ್ನದು ಇದೇ ಒಂದು ಪ್ರಸಂಗ– ಈಗಿತ್ತಲಾಗೆಲ್ಲ 'ತಾಳಮದ್ದಳೆ'ಗಳಲ್ಲಾಗುತ್ತಿರುವ 'ಅಧಿಕಪ್ರಸಂಗ!'– ಆಗಬಹುದೇನೋ ! ಆದ್ದರಿಂದ ಇಲ್ಲಿಗೇ ಸಮಾಪ್ತಗೊಳಿಸುತ್ತೇನೆ. ದುಃಖಭಾರದಿಂದ ನನ್ನ ಗಂಟಲು ಕಟ್ಟಿ, ಗೋಳ್ಗತೆಯನ್ನು ಮುಂದೆ ಹೇಳಲೂ ಬರುತ್ತಿಲ್ಲ ! ಆದ್ದರಿಂದ ಸದ್ಯಕ್ಕೆ ಇಷ್ಟಕ್ಕೆ ಸಮಾಪ್ತಗೊಳಿಸುತ್ತೇನೆ. ಆದರೆ ಆ ಮೊದಲು 'ಪಾರ್ತಿಸುಬ್ಬ'ನಾಗಿ ಸತ್ತು ಹುದುಗಿದ್ದ ನನ್ನನ್ನು ಮತ್ತೆ 'ಪಾರ್ಟಿಸುಬ್ಬ'ನಾಗಿ ಗೊಂದಲವೆಬ್ಬಿಸಿಯುಬ್ಬಿಸಿ, ನನ್ನ ಕುರಿತಾದ ಕೆಲವೊಂದು ಮಾತುಗಳನ್ನು ಹೇಳಲು ನನಗೂ ಒಂದಿಷ್ಟು ಅವಕಾಶವನ್ನು, ಸುಸಂಧಿಯನ್ನು ಒದಗಿಸಿಕೊಟ್ಟ ಕನ್ನಡದ ಪಂಡಿತವರ್ಗಕ್ಕೂ, ಸಾಹಿತಿಗಳ ಸಾಲಿಗೂ, ಸಂಶೋಧಕರ ಕೂಟಕ್ಕೂ, ಲೇಖಕವೃಂದಕ್ಕೂ, ಪತ್ರಿಕೆಗಳ ಬಳಗಕ್ಕೂ, ಸಂಪಾದಕ ವರ್ಗಕ್ಕೂ, ವಾಚಕ ಸಮಸ್ತರಿಗೂ, ಹಾಗೂ ತಮಗೆಲ್ಲರಿಗೂ ಮತ್ತು ಇತರರಿಗೂ ಕೂಡಾ ವಂದನೆಗಳನ್ನರ್ಪಿಸಿ, ಕನ್ನಡನಾಡು– ನುಡಿ–ಗುಡಿಗಳ ಒಮ್ಮುಖದ ಉನ್ನತಿಯನ್ನು ಬಯಸುತ್ತಾ ಸದ್ಯ, ವಿರಮಿಸಲು ಈ ಪಾರ್ತಿಸುಬ್ಬನು ಪೂರ್ತಿ ಅಪ್ಪಣೆ ಬೇಡುತ್ತಾನೆ !

●

# ಜರೂರು ಸಭೆ

ಶ್ರೀ ತೀರ್ಥರೂಪು ತಂದೆಯವರ ದಿವ್ಯಚರಣ ಸನ್ನಿಧಿಗಳಲ್ಲಿ ಬಿನ್ನಹಗಳು.

ಕೆಳಗಿನ ತಾರೀಕುವರೆಗೆ ಕ್ಷೇಮದಲ್ಲಿದ್ದೇನೆ. ಮನೆಯಲ್ಲು ಸಹ ಎಲ್ಲರೂ ಹಾಗೇ ಇರುವರೆಂದು ನಂಬುತ್ತೇನೆ. ತರುವಾಯ ನಮ್ಮ ವರ್ಷಾಬ್ಧಿ ಪರೀಕ್ಷೆ ಹತ್ತರ ಹತ್ತರ ಬರುತ್ತಾ ಇದೆ. ಮೇಷ್ಟುಗಳು ಕಾಟ ಕೊಡಲು ಈಗಾಗಲೇ ಶುರು ಮಾಡಿರುತ್ತಾರೆ. ಸಂಜೆ ಸಮಯದಲ್ಲಿ ನಾವು ಆಡಲಿಕ್ಕೆ ಹೋದರೆ, "ಏನೋ ಇಡೀ ದಿನ ಆಟದಲ್ಲೇ ಸಾಯ್ತಿಯಲ್ಲೋ ಪರೀಕ್ಷೆ ಬಂತೂ ಅಂತ ಗೊತ್ತಿಲ್ವೇನೋ, ನೋಡ್ತೀನಿ ನಾನೂ, ನೀನು ಹ್ಯಾಗೆ ಪ್ಯಾಸಾಗ್ತೀ ಅಂತ" ಎಂದೂ, ಸಂಜೆ ನಾವು ಲೈಬ್ರರಿಯಲ್ಲಿ ಓದುತ್ತಲೇ ಕುಳಿತು ಬಿಟ್ಟಿತು ಅಂತಂದ್ರೆ, "ಏನೋ, ಇಡೀ ದಿನ ಓದಿ, ಗಿಣಿ ಬಾಯಿಪಾಠ ಮಾಡಿಬಿಟ್ಟರೆ, ಪ್ಯಾಸ್ ಗಿಟ್ಟಿಸಬಿಡಬಹುದು ಅಂತ ಗ್ರಹಿಸಿ ಬಿಟ್ಯೇನೋ" ಅಂತಲೂ, ಕಂಡಾಬಟ್ಟೆ ಹೀನಾಮಾನವಾಗಿ, ಕಾಲು ಕೆದರಿ ಜಗಳಕ್ಕೆ ಶುರು ಹಚ್ಚಿದ್ದಾರೆ. ನನ್ನನ್ನು ನೋಡಿದ ತಕ್ಷಣ, ಕಣ್ಣು ಕೆಂಪಗೆ ಮಾಡಿ, ಮೀಸೆ ಹುರಿ ಕಾಯಿಸಿ, ಮೂಗಿನ ಹೊಳ್ಳೆಗಳೆರಡನ್ನೂ ಅಗಲಿಸಿ, ಕೆಕ್ಕರಿಸುವ ಕೆಟ್ಟ ದೃಷ್ಟಿಯಿಂದ ನೋಡತೊಡಗಿದ್ದಾರೆ! ಆದ್ದರಿಂದ ಇನ್ನು, 'ಟ್ಯೂಶನ್' ತೆಕ್ಕೊಳ್ಳದೆ ನಿರ್ವಾಹವಿಲ್ಲ. ದಯವಿಟ್ಟು ಇದಕ್ಕೆ ನೀವು ಒಪ್ಪಿದ್ದೀರಂತ ನಾನು ತಿಳಿದುಕೊಳ್ಳೋದಕ್ಕೋಸ್ಕರ, ರೂಪಾಯಿ 25ನ್ನು ಕೂಡಲೇ ಎಡ್ವಾನ್ಸ್ ಆಗಿ ಮಣಿಯಾರ್ಡರ್ ಮಾಡಬೇಕಾಗಿ ಬೇಡಿಕೊಳ್ಳುತ್ತೇನೆ.

ಮೈಸೂರು. ಇಂತು ಬೇಡುವ,

.................... ..............................

# ಸಾಹಿತ್ಯದ ಸುಗ್ಗಿ

ಈಗ ಬರೆಯುತ್ತಿರುವುದು, ನನ್ನಂತಹ ಬಡಬರಹಗಾರರ ಹಣೆ ಬರಹದ ವಿಚಾರವಾಗಿ. ಸರಸಿಜಬ್ರಹ್ಮನು, ತನ್ನ ಮುಸಲಲೇಖನಿಯಿಂದ ಮಾನವಕೋಟಿಯ ಹಣೆಬರಹವನ್ನು ಬರೆಯುವುದು ನಿಜವಾದ ಮಾತಾದರೆ- ಆ ಮಾನವರ ಹಣೆಬರಹವನ್ನು ಈ ಬರಹಗಾರರು ರೂಪಿಸುತ್ತಾರೆಂಬ ವಿಚಾರಸುಳ್ಳಲ್ಲ. (ಸು) ಸಂದರ್ಭವು ಹೀಗಿರುವುದರಿಂದ, ಈ 'ಬರಹಗಾರರ ಹಣೆಬರಹ'ವನ್ನು ಬರೆಯತೊಡಗಿದ್ದೇನೆಂದು, ಆ ಮಹಾಬೊಮ್ಮನಿಗೂ, ಈ ಬಡ'ಯಮ'ನಿಗೂ ಅದೇನೋ ದೂರದ- ಬಾದರಾಯಣ ಸಂಬಂಧವನ್ನು ಕಲ್ಪಿಸಬಹುದಾದರೂ..... ಇರಲಿ. ಕಮಲಾಸನನು, ತನ್ನ ಸೃಷ್ಟಿಯ ಮಾನವವರ್ಗದಲ್ಲಿ ಕೆಲವು ಮಂದಿಗೆ, "ಮಕ್ಕಳೇ, ನೀವು ಜಗತ್ತಿನಲ್ಲಿ ಶಾಶ್ವತವಾದ ಕೀರ್ತಿಯನ್ನು ಪಡೆದು ಮಡಿದು ಹೋಗಿ" ಎಂಬುದಾಗಿಯೂ, ಇನ್ನು ಹಲವರಿಗೆ "ಮುಠ್ಠಾಳರೇ, ನೀವು ಅರೆಹುಚ್ಚರಾಗಿ ಭೂಮಿಯಲ್ಲಿ ಬಾಳಿ" ಎಂದೂ ಯಾವ ದಯೆ, ಮಾಯೆ, ದಾಕ್ಷಿಣ್ಯಕಾರುಣ್ಯಗಳೂ ಇಲ್ಲದೆ, ತನ್ನ ಹಟ-ಯೋಗದಿಂದ ಹಣೆಬರಹವನ್ನು ರೂಪಿಸುವಂತೆಯೇ, ಈ ಬರಹಗಾರರು ತಮಗೆ 'ಖುಶಿ' ಬಂದಂತೆ ವ್ಯಕ್ತಿಗಳನ್ನು ಸೃಷ್ಟಿಸಿಯೂ, ಹಣೆಬರಹವನ್ನು ನಿರೂಪಿಸಿಯೂ ಬಿಡುತ್ತಾರೆ- ಎಂಬುದರಿಂದ, 'ಬ್ರಹ್ಮನ ಸಾಲಿಗೆ ಬರಹಗಾರರನ್ನು' ನಾನು, ಯಾವ ಸಂಶೋಧನೆಯೂ ಇಲ್ಲದೆ ಸುಖವಾಗಿ ಸೇರಿಸ ಹುದಷ್ಟೇ?

ನಮ್ಮ ಬರಹಗಾರರೆಂದರೆ, ಪ್ರಕೃತ ನಮ್ಮ ಕಣ್ಣು ಮುಂದೆ ಇರುವವರು; ನಮ್ಮ ಕಣ್ಣು ಮುಂದೆ ಕಾಣುವುದನ್ನೇ ಕೃತಿಗಳಲ್ಲಿ ನಿರೂಪಿಸುವವರು. ಕಲ್ಪನಾಶಕ್ತಿ- ಊಹನಾಶಕ್ತಿ- ಅಥವಾ ಭಾವನಾಶಕ್ತಿ ತಮಗಿಲ್ಲವಾದುದರಿಂದಲೋ ಏನೋ, ಇವರೆಲ್ಲ "ಪ್ರಗತಿಶೀಲ" ಎಂಬ ಬಿರುದು ಬೇರೆ ಹೊತ್ತುಕೊಳ್ಳುತ್ತಾರೆ- ಯಾರೂ ಕೊಟ್ಟಿರದಿದ್ದರೂ ಕೂಡ !....... 'ಹೆಸರಿನಲ್ಲೇನಿದೆ ಮಹಾ?' ಎಂದು ತಾತ್ಸಾರದಿಂದ ಅವರನ್ನು ಗಣನೆಗೆ ತಾರದೆ ಇರೋಣವೆ? ಸಾಧ್ಯವಿಲ್ಲದ ಮಾತದು. ಕಾರಣ: 'ಕಸ'ವನ್ನೇ 'ರಸ'ವೆಂದು ಸಾಧಿಸುವ ವಾದದಲ್ಲಿ ಇವರನ್ನು ಬಿಟ್ಟರುಂಟೆ !........ ಹೂಂ, ಇಂತಹ ಭೂಪತಿಗಳನೇಕರ ಹಣೆಬರಹವನ್ನೀಗ ನಾನು ಬರೆಯುತ್ತಿದ್ದೇನೆ.......

ಈ ಬರಹಗಾರರಲ್ಲಿನ ಬಹುಸಂಖ್ಯೆ- ತರುಣಜನಾಂಗ; ನಾಳಿನ ಭಾರತದ ನಾಗರಿಕರಾಗಲಿರುವ, ಇನ್ನೂ ಮೀಸೆ ಮೂಡುವ ಮುನ್ನವೇ, ದೇಶಸೇವೆಗೆ ಕೈಕೊಟ್ಟ ಕೂಸು-ಮರಿಗಳು! ಅದರಲ್ಲಿಯೂ, ಬುದ್ಧಿ ಬಲಿತಿರದಿದ್ದರೂ, ದೇಹ ಬಲಿತ ವಿದ್ಯಾರ್ಥಿಗಳು. ಈ ವಿದ್ಯಾರ್ಥಿ ಬರಹಗಾರರ ವೈಶಿಷ್ಟ್ಯವೇನೆಂದರೆ, 'ರಚಿಸಿದರೆ ರಚಿಸಬೇಕು, ಬರ್ನಾಡ್‌ಷಾ- ಠಾಕೂರ್‌ರನ್ನು ಮೀರುವ ಕೃತಿಗಳನ್ನು' ಎಂಬ ಭಯಂಕರ ಆಶಾವಾದ. ಆದುದರಿಂದಲೇ ಇರಬೇಕು- ಇವರು ತಮ್ಮ ಪ್ರಾಯ ಅನುಭವ ಮತ್ತು ಕಲ್ಪನೆಗಳ ಸೀಮಂತಕ್ಕೂ ಹೊರಗಿರುವಂಥ, ದೂರದ ನುಣ್ಣಗಿನ ಬೆಟ್ಟಗಳಂಥ ವಿಷಯಗಳನ್ನೇ ಆರಿಸುತ್ತಾರೆ- ಅಂದರೆ, ಇದೇನೋ ಒಂದು ಮಹಾ ವಿಚಾರವೆಂದು ನಾನು ಆಕ್ಷೇಪಿಸಲಾರೆ—ಏಕೆಂದರೆ, ನಾನು ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದಾಗ, 'ಕಾಲೇಜ್ ಶಿಕ್ಷಣ ಮಾಧ್ಯಮ' (ಇಂಗ್ಲೀಷ್ ಆಗಬೇಕೇ? ಮಾತೃಭಾಷೆಯೆ?) ಎಂಬ ವಿಷಯದ ಮೇಲೆ, ಘನಗಂಭೀರವಾಗಿ, ಧುರಮಧುರವಾಗಿ, ವಿಚಾರಪ್ರಫುಲ್ಲಿತವಾಗಿ, ಸುದೀರ್ಘಭಾಷಣವನ್ನು ಕೊಟ್ಟು, (ಅಚ್ಚಗನ್ನಡದಲ್ಲಿ ಇದಕ್ಕೇ 'ಉಡಾಯಿಸಿ' ಎಂದು ಹೇಳುತ್ತಾರೆ !) ಬಹುಮಾನವನ್ನು ಕೂಡ ಪಡೆದಿರುವಾಗ, ಈ ನನ್ನದೇ ಜಾತಿಯ, (ಸೋದರ !) ಬರಹಗಾರರು ಅನುಸರಿಸುತ್ತಿರುವ- ಅರ್ಥಾತ್ ಅನುಕರಿಸುತ್ತಿರುವ- ಮಾರ್ಗ, ಸರ್ವಥಾ ಸ್ವಾಗತಾರ್ಹವಾದುದೆಂದು ಹೇಳದೆ, ನನಗೆ ಗತ್ಯಂತರವಿಲ್ಲದಾಗಿದೆ. ತಮಗಿಂತ ಮಿಗಿಲಾದುದನ್ನು ಹಿಡಿಯಲಿಕ್ಕೆ ಅಥವಾ ಪಡೆಯಲಿಕ್ಕೆ ಪ್ರಯತ್ನಿಸುವುದೇ ಆಶಾವಾದಿಗಳ- ಅದರಲ್ಲೂ ಪ್ರಗತಿಶೀಲ ತರುಣರ ಕರ್ತವ್ಯವಲ್ಲವೇ? ಆದ್ದರಿಂದ, ತಪ್ಪಿನ ಪ್ರಶ್ನೆಯನ್ನಿಲ್ಲಿ ನಿಮ್ಮ ಮುಂದೆ ನಾನಾಗಿ ಇರಿಸಲಾರೆ; ಆದರೆ, ನನಗೆ ಗೊತ್ತಿದೆ, ರಕ್ತದ ಕಾವೇ ಆರಿಹೋಗಿರುವ ವೃದ್ಧ ಸಾಹಿತಿಗಳು, ನಾನಿಲ್ಲಿ ಆರೋಪಿಸದೆ ಬಿಟ್ಟರೂ, ಈ ವಿಚಾರವನ್ನು ಬಹಿರಂಗವಾಗಿ ಜನರೆದುರಿಗಿರಿಸಿ, ಬೈದು ತಮ್ಮ ಜಿಹ್ವಾಚಾಪಲ್ಯವನ್ನು ತೀರಿಸಿಕೊಳ್ಳದಿರುವುದಿಲ್ಲವೆಂದೂ ಇರಲಿ.

ಈ ನಮ್ಮ ಬರಹಗಾರರಿಗೆ, ಕತೆಗಳನ್ನು ಬರೆಯುವುದೆಂದರೆ, ಬಹಳ ಇಷ್ಟ. ಪ್ರಾಯಶಃ ಸುಪ್ರಸಿದ್ಧರ ಉತ್ಕೃಷ್ಟಕೃತಿಗಳ ಹೆಸರುಗಳನ್ನು ಕೇಳಿ, ಆರಸ-ಸರಸ, ಚಾತುರ್ಯ-ಮಾಧುರ್ಯಗಳ ಸುದ್ದಿ ಕೇಳಿ ಮೂರ್ಛೆ ಹೋಗಿ, "ಇದೇನು ಮಹಾ? ನಾನೂ ಸಾಧಿಸಿದರೆ, ಸಬಳ ನುಂಗಬಹುದಲ್ಲವೆ?" ಎಂದು ಯೋಚಿಸಿ, "ಸಾಹಿತಿಯಾಗುವುದು ಅಂಥಾ ಮಹಾ ಕೆಲಸವೇನೂ ಅಲ್ಲ- ಏನೋ ಒಂದಿಷ್ಟು ಬರೆದು ಬರಹವಾಗಿಸುವುದು." (ಬಗುಳಿ ಬಗುಳಿ ರಾಗ ಬರಿಸಿಕೊಂಬಂತೆ!) ಎಂದು, ಕಾರ್ಯೋತ್ಸುಕರಾಗುತ್ತಾರೆ; ಈಗ ಇನ್ನು ಕಾರ್ಯರಂಗಕ್ಕೆ ಧುಮುಕುವುದೊಂದೇ ಬಾಕಿ- ಅದಕ್ಕೂ ತಡವಿಲ್ಲ. ಆದರೆ, ಅಲ್ಲಿ, "ಪ್ರಥಮಚುಂಬನಕ್ಕೇ ಅಡ್ಡಿ ಬಂದ ದೀರ್ಘದಂತದೋಪಾದಿಯಲ್ಲಿ, ಏನು ಬರೆಯಲಿ," ಎಂಬ ಜಟಿಲ ಸಮಸ್ಯೆ ಭೀಮಾಕಾರದಲ್ಲಿ ಅವರ ಮುಂದೆ ನಿಲ್ಲುವುದು "ಕವನಿಸಲೆ?

ಕತಿಸಲೆ?..... ಹರಟಿಸಲೆ?...... ನಾಟಕಿಸಲೆ? ಏನು? ಏನು? ಏನು???........"
ಹೇಗೋ ಮಾಡಿ ಈ ಜಟಿಲ ಜಂಝೂವಾತದಿಂದ ಪಾರಾಗುತ್ತಾರೆನ್ನಿ- 'ಸಣ್ಣ ಕತೆ' ಎಂಬುದರಿಂದ, ಸುಲಭದಲ್ಲಿ ಆಗಿಬಿಡುವುದೆಂದು, ಕತೆಯ ಬಾಲ ಹಿಡಿದು, (ಕಾರ್ಯಸಾಧನೆಗಾಗಿ ಕತ್ತೆಯ ಕಾಲನ್ನಾದರೂ ಹಿಡಿಯಲು ಹಿಂದೆ ಮುಂದೆ ನೋಡದಂತಹ ಕಾಲವದು!) ಆದರೆ- ಪಾಪ ! ಹನಿಗೆ ಹೆದರಿ, ಹಳ್ಳಕ್ಕೆ ಬಿದ್ದಂತಾಗುತ್ತದೆ- ಅವರ ಗತಿ ! ಕತೆ ಬರೆಯಲಾಗುವುದೇ ಇಲ್ಲವೆನ್ನಿ. ಆದರೂ, ಎದೆಗುಂದದೆ, ಧೈರ್ಯಗೆಡದೆ, ತಮ್ಮ ಮನಸ್ಸಿಗೆ ತೋಚಿದ, ನಾಲ್ಕಾರು ಯೋಚನೆಗಳನ್ನು ಇದ್ದದ್ದಿದ್ದ ಹಾಗಿಯೇ ಗೀಚಿ, 'ಸಣ್ಣದಾದ ಕತೆ' ಎಂದು ಕರೆದು, ಹದಿನೈದು ಪುಟಗಳನ್ನು ಅಕ್ಷರಮಯವಾಗಿ ಮಾಡಿ ಹಾಕುತ್ತಾರೆ !

ಇವರಿಗೆ ಒಂದು ಸೌಲಭ್ಯವಿದೆ- ಬರೆಯಲು ವಿಷಯಗಳನ್ನಾರಿಸುವುದಕ್ಕೆ ಕಷ್ಟಪಡಬೇಕಾಗಿಲ್ಲ; ಏಕೆಂದರೆ- ಇದ್ದೇ ಇದೆ ತಾನೇ- ಇವರದೇ ಆಗಿರುವ, "ಪ್ರಣಯಪ್ರಸಂಗ!" (ಅದೇ ಕಾಲೇಜ್ ಹುಡುಗ-ಹುಡುಗಿಯರದ್ದು!) ಹುಡುಗ ತೀರ ಬಡವ. ಹುಡುಗಿ, ಕೋಟ್ಯಾಧೀಶನೊಬ್ಬನ, ಏಕಮಾತ್ರ, ನವಯೌವನಶಾಲಿನಿಯಾದ ಮಗಳು- ಸುಂದರ ತರುಣಿಯಾಕೆ. (ಇಲ್ಲಿ ಅನಿವಾರ್ಯವಾಗಿ, ಅವಳ, 'ಲತಾಂಗಿಯಂತಹ ಕೋಮಲ ಕಾಯ,' ನೀಳವಾದ 'ಕೇಶರಾಶಿಯಂತಹ ತಲೆಕೂದಲು', ಮನಮೋಹಕವಾದ 'ವದನಾರವಿಂದದಂತಹ ಮುಖಕಮಲ', ಮನೋಹರವಾದ 'ತುಂಬು ಕಪೋಲದಂತಹ ಮುದ್ದು ಕೆನ್ನೆಗಳು', ಇತ್ಯಾದಿತ್ಯಾದಿ, ವರ್ಣನಾತೀತವಾದ ವರ್ಣನೆ- ಜೊತೆಗೆ ಆಕೆ ಉಟ್ಟದ್ದು ಜಾರ್ಜೆಟ್ ಸೀರೆಯೋ- ಚಿಟ್ಟೆ ಪತ್ತಲವೋ, ಅವಳ ಜಡೆಯಲ್ಲಿ ಅರೆಬಿರಿದ ಗುಲಾಬಿಹೂ ಎಲೆ ಸಹಿತ ಇತ್ತೋ ಇಲ್ಲವೋ, ಎಂಬುದನ್ನು ಸವಿವರವಾಗಿ ವರದಿಸುತ್ತಾರೆ !) ಆಕೆ ಸಿರಿ-ಸೌಂದರ್ಯಗಳ ಗನಿ-ಹೆಗ್ಗನಿ. ಬಡವನೆಂದು ತಿಳಿದರೂ, ಆತನನ್ನೇ ಪ್ರೇಮಿಸುತ್ತಾಳೆ. (ಪ್ರಾಯಶಃ ಬಡವನೆಂದೇ, ಅವನನ್ನಾಕೆ ಪ್ರೇಮಿಸುತ್ತಿರಬೇಕೇನೋ!) ಅವಳ ಹಿರಿಯರು ಇದನ್ನು ಖಂಡಿತ ಒಪ್ಪುವುದಿಲ್ಲ; ಬದಲು, ಮುದುಕನೊಬ್ಬನನ್ನೋ, ಇಲ್ಲವೇ ತೀರ ಅಯೋಗ್ಯನೊಬ್ಬನನ್ನೋ ಬಲಾತ್ಕಾರವಾಗಿಯಾದರೂ ಇವಳ ಕುತ್ತಿಗೆಗೆ ಕಟ್ಟಿಬಿಡುತ್ತಾರೆ. ಪಾರಾಗಲು ಬೇರೆ ದಾರಿ ಕಾಣದೆ, ಆಕೆ, ತನ್ನ ಪ್ರಿಯಕರನಿಗೊಂದು, 'ಕೊನೆಯ ಪತ್ರ' ಬರೆದಿಟ್ಟು, 'ಆತ್ಮಹತ್ಯೆ' ಮಾಡಿಕೊಳ್ಳುತ್ತಾಳೆ. ಆತ ಅರೆಹುಚ್ಚನಾಗುತ್ತಾನೆ...... ಮುಗಿಯಿತು....... ಇದೇ ಕತೆಯನ್ನು ಸುಖಾಂತ್ಯವಾಗಿ ರೂಪಿಸಬೇಕೆಂದು ಲೇಖಕನಿಗೆ ಅನಿಸಿದರೆ, ಸರಿ- ಅವರಿಬ್ಬರೂ ಗುಟ್ಟಾಗಿ ದೇಶಾಂತರಕ್ಕೆ ಓಡಿಹೋಗುತ್ತಾರೆ. ಅಲ್ಲಿ ನೌಕರಿ, ಮತ್ತೆ ಇದ್ದೇ ಇದೆಯಲ್ಲ, ಯಥಾಪ್ರಕಾರ ಸುಖಮಯ ಜೀವನ ! ಸಂತೋಷದ ಬಾಳ್ವೆ! (ಆಹಾ, ಎಷ್ಟು ಸುಲಭ) Oh my god ! ಎಂದು ವಾಚಕರು ಬೆರಳು ಕಚ್ಚಲೇಬೇಕು- (ಉಗುರು ಕಡಿಯುವ ನೆನಪು ಬಂದು !) ಕೊನೆಗೆ "ಜೈ ಹಿಂದಿ" ನೊಂದಿಗೆ ಕತೆ ಅಂತ್ಯವಾಗುತ್ತದೆ !

ಇವರ ಈ ಎಲ್ಲ ಕೃತಿಗಳಲ್ಲಿ, ತರುಣ ಪ್ರೇಮಿಗಳು 'ಲಾಲ್‌ಬಾಗಿ' ನಲ್ಲಿ ಮಧುಚಂದ್ರಮದ ಸುಖವನ್ನು ಸವಿದುಬಿಡುತ್ತಾರೆ– ಮೈಸೂರಿನಲ್ಲೇ ಇದ್ದುಕೊಂಡು! ಅಂತೆಯೇ ಇನ್ನೂ ಟ್ರಾಮಿನ ಮುಖ ಕಾಣದಿರುವ ಬೆಂಗಳೂರಿನಲ್ಲಿ, ಟ್ರಾಮಿನಡಿಗೆ ಬಿದ್ದು, ಕಥಾನಾಯಕನ ಕೈ ಮುರಿದು ಹೋಗುತ್ತದೆ ! ಮೈಸೂರಿನ ಪೋಲೀಸರು ಕೆಂಪು ಪಕಡಿಯನ್ನು ಇರಿಸಿಕೊಂಡಿರುವುದಿದೆ ! ಹುಬ್ಬಳ್ಳಿಯಲ್ಲಿ ಹಡಗು ಹತ್ತಿ ಹೋದುದಾಗಿ ನಿರೂಪಿಸಲೂ ಹಿಂದೆಮುಂದೆ ನೋಡುವುದಿಲ್ಲ...... ಹೀಗೆ ! (ಇದೇ ಸ್ವಾರಸ್ಯ !)

ತರುಣ ಬರಹಗಾರರಲ್ಲಿ ಅಧಿಕಮಂದಿ ಹರಟೆಮಲ್ಲರು. ತಣ್ಣೀರಿನ ಲೋಟೆಯನ್ನು ಖಾಲಿ ಮಾಡಿದಷ್ಟು ಸುಲಭ– ಹರಟುವುದೆಂದು, ಕಾಫಿ ಕುಡಿಯುತ್ತ ಇವರು ಅಭಿಪ್ರಾಯಿಸುತ್ತಾರೆ. ನನ್ನ ಚಪ್ಪಲಿ, ನನ್ನ ಕೊಡೆ, ನನ್ನ ಪೆನ್ನು, ನನ್ನ ಗುಂಡಿ, ನನ್ನ ಕನ್ನಡಕ ಇತ್ಯಾದಿ ವಿಷಯಗಳು ! ಆದರೆ– ಗ್ರಹಚಾರವಶಾತ್, ಬರೆಯತೊಡಗಿದರೆ ಶಬ್ದಗಳೇ ಹೊರಡವು– ಮೌಖಿಕ ಪರೀಕ್ಷೆಯಲ್ಲಿ ಪರೀಕ್ಷಕರೆದುರಿಗೆ ಬಾಯಿಯಿಂದ ಶ್ವಾಸ ಕೂಡಾ ಹೊರಡದಿರುವಂತೆ !........ ಆದರೂ, ಕೊನೆಗೆ ಹೇಗೋ ಮಾಡಿ, ಏನೋ, ಮಾಡಿ, ಪೂರ್ತಿಗೊಳಿಸುತ್ತಾರೆನ್ನಿ....... (ಆ ಈ ಹರಟೆಗಳ, ಅದು–ಇದು ಸಂಗ್ರಹದಿಂದ, ಅಲ್ಲಿಂದ–ಇಲ್ಲಿಂದ ಅದೊಂದು–ಇದೊಂದು ವಾಕ್ಯಗಳನ್ನು ಅತ್ತ–ಇತ್ತ ಮಾಡಿ, ಅಂತು–ಇಂತು ಒತ್ತಟ್ಟಿಗೆ ಸೇರಿಸಿ.) ಆದರೆ– ಗ್ರಹಚಾರ, ನಗಿಸಬೇಕಲ್ಲಾ, ನಗೆಯಾಡಿಸುವ ಹೊಣೆ– ಇವರ ಲೇಖನಿಯ ತುದಿಯಲ್ಲಿ ಬಿದ್ದಿದೆಯಲ್ಲ? ಅದಕ್ಕೇನು ಮಾಡೋಣ? ಬೇರೇನೂ ದಾರಿ ಕಾಣದೆ, ಕೊನೆಗೆ, 'ವಾದವು ವೇದಕ್ಕೆ ಶರಣು ಬರುವಂ'ತೆ, 'ಗಾದೆಗೆ ಗಂಟಲು ಮಣಿಯುವ'ಂತೆ, ಇಂಗ್ಲೀಷ್ ಶಬ್ದಗಳನ್ನು ಕನ್ನಡಿಸಿ ಬಿಟ್ಟು ಕಾರ್ಯ ಸಾಧಿಸುತ್ತಿದೆ. ರಾಮಾಯಣ– I mean ರಾಮಾಯಣ– ಬರೆಯತೊಡಗಿ, Mrs ಸೀತಾಬಾಯಿ, Mr ಲಕ್ಷ್ಮಣ ಮತ್ತು His Highness ರಾವಣ, ಶೂರ್ಪನಖಿಯಮ್ಮಣ್ಣಿ, ಇತ್ಯಾದಿತ್ಯಾದಿಯಾಗಿ ಬರೆದು, ಸರಯೂ River ನ್ನು ಅವರು Boat ನಲ್ಲಿ Sail ಮಾಡಿ, Cross ಮಾಡಿದರು. ಆಗ Comrade ಗುಹನು, ಬಹಳ Sincearity ಯಿಂದ ಅವರನ್ನು Surve ಮಾಡಿದನು ಎಂದಿತ್ಯಾದಿಯಾಗಿ ನಮೂದಿಸಿಬಿಟ್ಟರೆ– ಎಂತಹ ಮುದುಕರ ಬೋಡು ಬಾಯಿಯಾದರೂ ಒಮ್ಮೆಗೆ ಅಗಲವಾಗಿ ಬಿರಿಯಲೇ ಬೇಕು! (ಆದರೆ, ಬೇಸರದ ವಿಚಾರ, ಬಾಯಿ ತೆರೆಯುವುದು ನಗೆಯಿಂದಲ್ಲ– ಆಕಳಿಕೆಯಿಂದ!)..... ಹಾಗೇ, Miss ವಿಷಯೆಯು prince ಚಂದ್ರಹಾಸನ Hand bag ನಲ್ಲಿದ್ದ Inlans letter ನ್ನು ತೆಗೆದು (ವಿಷದ ಬದಲು ವಿಷಯೆ ಎಂದು) ಬ್ಲೌಸ್‌ನಲ್ಲಿ ಸಿಕ್ಕಿಸಿಕೊಂಡಿದ್ದ ತನ್ನ Swan pen ನಿಂದ Correct ಮಾಡಿ, Silent ಆಗಿ, ಮೊದಲಿದ್ದಲ್ಲೇ At once ಅದನ್ನು Replace ಮಾಡಿದ್ದಳು. ಎಂದು ಉಲ್ಲೇಖಿಸಿದಾಗ, ಬರುವಂಥಾ

ಮಾತಿನ ಚಾತುರ್ಯ, ಶಬ್ದದ ಸೌಂದರ್ಯ, ವಾಕ್ಯದ ವೈಶಿಷ್ಟ್ಯಗಳನ್ನು ನಾವು ಮೆಚ್ಚದಿರಲಿಕ್ಕೆ ಸಾಧ್ಯವೇ ಇಲ್ಲ. (ಮತ್ತೆ ತಪ್ಪೇನು ಬಂತು?- ಅಂದು Madras ನಲ್ಲಿ ಸೇರಿದ್ದ ಕನ್ನಡ ಸಾಹಿತ್ಯ ಪರಿಷತ್ತಿನ President ship ವಹಿಸಿದ್ದ "ಕೈ" (ಲಾಸಂ!) ರೊಡನೆ, ಒಬ್ಬಾನೊಬ್ಬ ಪ್ರಗತಿಶೀಲ Writer, "ಎನ್ನಾರ್, ನೀವು ನಿಮ್ಮ Dramas ನಲ್ಲಿ Too much ಇಂಗ್ಲೀಷ್ Words ನ್ನು Mix up ಮಾಡ್ತೀರಲ್ಲ, ಅದರಿಂದ ನಿಮ್ಮ Language ನ್ನ Understand ಮಾಡೋಕೆ, Difficult ಅಲ್ವೇ" ಎಂದು ಕೇಳಿದ್ದರಲ್ಲಿ?)

ಇತ್ತೀಚೆಗಂತೂ, ಹಿಂದಿ, ತುಳು, ಮಲೆಯಾಳ, ಮುಂತಾದ ಅನ್ಯಭಾಷಾ ಶಬ್ದಗಳನ್ನು ನಿಸ್ಸಂಕೋಚವಾಗಿ ಬಳಸಹತ್ತಿದ್ದಾರೆ. ಅಂತೂ, ಶಬ್ದಗಳ ವಿಕೃತ ಪ್ರಯೋಗಗಳಿಂದ, ನಗೆಯ ಹೊಗೆಯನ್ನು ಕಾರಿಸಬಹುದೆಂಬ (ಸ್ವಯಂ) ಸಿದ್ಧಾಂತ ನಮ್ಮ ಹರಟೆಮಲ್ಲರದ್ದು ! ಇವರ ಮುಂದಿನ ಬರಹ- 'ನಾನು ಮಡಿದ ಮರುದಿನ', 'ಸ್ವರ್ಗದಲ್ಲಿ ನನ್ನ ನಾಲ್ಕು ದಿನಗಳ ಸಂಚಾರ' ಇತ್ಯಾದಿ ಇತ್ಯಾದಿ. ಅಲ್ಲೂ ಇಷ್ಟೇ. ಮಿ॥ ಯಮಧರ್ಮರಾಯನ ಭೇಟಿ......

ನಮ್ಮ ಬರಹಗಾರರಿಗೆ ಗಂಟುಬೀಳುವ ಕಥಾನಾಯಕರೋ? ತೀರ, 'ವಿಚಿತ್ರ'ರೇ ಸರಿ. ಉಮೇಶ. ರಮೇಶ, ದಿನೇಶ...... ಕೊನೆಗೆ ಸಕೇಶ- ಅನಂತರ ಸಕಲೇಶ, ಕಡೆಗೆ ಲವಲೇಶ ! ಆದರೆ ಇತ್ತೀಚೆಗೆ ಮಾತ್ರ ಕಾಳ, ತುಕ್ರ, ತನಿಯ, ತಿಮ್ಮಿ, ಗಂಗಿಯರನ್ನು ಕಂಡಕಂಡಲ್ಲಿ ಎಳೆದು ತರತೊಡಗಿದ್ದಾರೆ.

ನಮ್ಮ ಬರಹಗಾರರೆಲ್ಲ ಇತ್ತೀಚೆಗೆ, ಪ್ರಣಯಪ್ರಬಂಧಗಳಿಗೆ ಶತಶಃ ತಿಲಾಂಜಲಿಯಿತ್ತಿದ್ದಾರೆಂದು ಹೇಳಲ್ಪಡುತ್ತಿದೆ. ಕ್ಷಣಕ್ಷಣಕ್ಕೂ ಬದಲಾಗುತ್ತಿರುವ, ಪ್ರಗತಿಪರ ಪ್ರಪಂಚವನ್ನು, ತಾವು ಬೆನ್ನು ಹತ್ತಿ (ಯೋ-ಬೆನ್ನಟ್ಟಿಯೋ?) ಬರುತ್ತಿದ್ದೇವೆಂದು ಹೇಳುತ್ತಾ, ಇವರು, ಇಂದಿನ ಜನತಾಮುಖಂಡರ 'ಉಸಿರುಸಿರು'ಗಳಲ್ಲಿ ಕೇಳಿಬರುತ್ತಿರುವ, ರೈತ-ಕೂಲಿಕಾರರನ್ನು ಶರಣು ಹೋಗಿದ್ದಾರೆ..... ಹುಲ್ಲಿನ ಹೊರೆಯನ್ನು ಹೊತ್ತು, ಸಂತೆಗೆ ಹೋಗಿ, ಮಾರಿ, ದಿನ ನಾಲ್ಕಾಣೆ ಕೂಲಿತರುವ ನಿಂಗಿ, ಹಾರೆ ಗುದ್ದಲಿ ಹಿಡಿದು, ನೆಲ ಅಗೆಯುವ- ಉಳುವ ರೈತ ಸುಬ್ಬನ ಮಗಳು. ನೆರೆಮನೆಯ ಹೈದ ಚಿಕ್ಕನಿಗೆ ಮಾರುವೋಗುತ್ತಾಳವಳು. ಹೊಲ- ಅವರ ಒಲವಿನ ಕೂಟಕ್ಕೆ ನೆಲೆಯಾಗುತ್ತದೆ.... ಹೀಗೆ ಜೀವನ ಸಾಗುತ್ತದೆ ಗುಟ್ಟಾಗಿ. ಒಂದುದಿನ ಸುಬ್ಬನಿಗೆ ಇದು ತಿಳಿದುಬರಲು, ಉಳುತ್ತಿದ್ದ ನೇಗಿಲಿನಿಂದಲೇ ಹೊಡೆದು, ತಿಮ್ಮಿಯನ್ನು ಕೊಲ್ಲುತ್ತಾ, ತನ್ನ 'ನೇಗಿಲ ಯೋಗ'ವನ್ನು ಆಚರಿಸುತ್ತಾನೆ !

ಹೀಗೆ ನಮ್ಮ ಹೊಸಬರಹಗಾರರು ನಾನಾಮುಖವಾಗಿ, ನಾನಾ ವಿಧವಾಗಿ, ನಾನಾವಿಧಾನವಾಗಿ, ನಾನಾವಿಚಾರವಾಗಿ ಸಾಹಿತ್ಯರಂಗಕ್ಕೆ ಸಾಮೂಹಿಕವಾಗಿ ಹಾಗೂ

ವೈಯಕ್ತಿಕವಾಗಿ ಧುಮ್ಮಿಕ್ಕುತ್ತಿದ್ದಾರೆ. ಒಂದೇ ಕತೆಯನ್ನು 'ಗೆಳೆಯರಿಬ್ಬರು' ಬರೆಯುತ್ತಾರೆ. ಅಂತೂ, ತನ್ನದು- ಪರರದು ಎಂಬ ವ್ಯತ್ಯಾಸವನ್ನಾಗಲಿ, ತಾರತಮ್ಯವನ್ನಾಗಲಿ, ಭೇದಭಾವನೆಯನ್ನಾಗಲಿ, ಈ ತರುಣ ಬರಹಗಾರರು ಗಮನಿಸದೆ, ಕರ್ತವ್ಯವನ್ನು ನೆರವೇರಿಸಿಯೇ ತೀರುವ, ಸದ್ಬುದ್ಧಿಯಿಂದ, ತಮ್ಮ ಕೈಲಾದ ಸೇವೆಯನ್ನು ಸಾಹಿತ್ಯಶಾರದೆಂಬು ಪದತಲದಲ್ಲಿ ಸಲ್ಲಿಸುತ್ತಿದ್ದಾರೆ- ಎಂಬುದು, ನಿರ್ವಂಚನೆಯಿಂದಲೂ, ನಿರ್ಯೋಚನೆಯಿಂದಲೂ, ಒಪ್ಪಿಕೊಳ್ಳಲೇಬೇಕಾದ ಮಾತು ಎಂದು, ಇಲ್ಲಿ ನಾನು ಒತ್ತಿಒತ್ತಿ ಬರೆಯುದಿರಲಾರೆ ! ಸಾಕಷ್ಟು ಶಕ್ತಿ ತಮಗಿಲ್ಲವೆಂದು ಹಿಂದುಳಿಯದೆ, 'ಬಂದದ್ದೆಲ್ಲವೂ ಬರಲಿ–ಗೋವಿಂದನ ದಯೆಯೊಂದಿರಲಿ', ಎಂಬ ಸದ್ಧೈರ್ಯದಿಂದ, 'ಸಾಹಿತ್ಯಸಮರರಂಗ'ಕ್ಕೆ ಕಣ್ಮುಚ್ಚಿ ಧುಮ್ಮಿಕ್ಕುತ್ತಿರುವುದು, ತೀರ ಸಾಹಸದ ಮಾತೇ ಆಗಿದೆ; ಹಾಗೂ, ಈ 'ಬಂಟತನ'ದ 'ಎಂಟೆರ್ದೆ'- ಮೆಚ್ಚತಕ್ಕ ಅಚ್ಚರಿಯ ವಿಚಾರವೇ ಆಗಿದೆ......

ನಮ್ಮ ಕವಿಗಳ ಕುರಿತೂ, ಕವಿತೆಗಳ ವಿಚಾರವಾಗಿಯೂ, ನಾನು ಹೇಳಬೇಕಿಲ್ಲವೆಂದೇ ಅನ್ನಿಸುತ್ತದೆ. ಏಕೆಂದರೆ, 'ಗದ್ಯ ಕೆಟ್ಟು ಉಂಟಾದ ಪದ್ಯ'ಗಳನ್ನು ತಾನೇ ಅವರು ರಚಿಸುತ್ತಿರುವುದು? ಪ್ರಾಸಗಳ ತ್ರಾಸ, ಭಾವಗಳ ಬಂಧನ, ವಿಚಾರಗಳ ವೈಶಿಷ್ಟ್ಯ, ಇವು ಯಾವುದರ ಅಡೆತಡೆ ವಿಘ್ನವಿಡ್ಡೂರಗಳೂ ಅಲ್ಲಿ ನಡೆಯುವಾಗ ತಡೆಯುವುದಿಲ್ಲ. ನಿರರ್ಗಳವಾಗಿ, ನಿರ್ಭಯವಾಗಿ, ನಿರ್ದಯವಾಗಿ, ನಿರಾತಂಕವಾಗಿ, ಶಬ್ದಸಾಗಾರವೊಂದು ಭೋರ್ಗರೆದರೆ ಮುಗಿಯಿತು........ ಸರಿ,..........

ಸಾಕು, ಇಲ್ಲಿಗೆ, ನನ್ನೀ ಅಲ್ಪಪ್ರ–ಬಂಧವನ್ನು ಕೊನೆಗಾಣಿಸೋಣವೆಂದು ನಾನು ಆಶಿಸುತ್ತೇನೆ. ಆದರೆ, ಅದೇ, 'ತರುಣಸಂಪ್ರದಾಯ'ಕ್ಕೆ ನಾನೂ ಹೊರಗಾಗಬಾರದೆಂಬು ದರಿಂದ, 'ಈ ಬರಹವು ಯಾರನ್ನೂ ಉದ್ದೇಶಿಸಿ ಬರೆದದ್ದಲ್ಲ, ಇದು ಕೇವಲ ನನ್ನ ಸ್ವಂತ ಕಲ್ಪನೆಯದ್ದು. (ಮೂಲಕೃತಿಕಾರರ ಹೆಸರನ್ನು ಹಾಕದಿರುವುದರಿಂದ!) (ತಿಳಿದಿರಲಿ!)' ಎಂದು ಇಲ್ಲಿಯೇ ನಮೂದಿಸಿಬಿಡುತ್ತೇನೆ. ಜೈ ಹಿ-

ಓಹ್ ! ಮರೆತೆ- 'ಅಂಧತಮಸ್ಸಿನ ಅಡಿಗೆಯ ಮನೆಯಲಿ' ಕೆಡೆಯಲ್ಪಟ್ಟಿರುವ, 'ಅರ್ಧಸಮಾಜ'ವಾಗಿರುವ, ಮಹಿಳೆಯರ ಕುರಿತು ಏನೂ ಹೇಳಲಿಲ್ಲವಲ್ಲಾ! ಮಹಿಳೆಯರು ಎಂದರೆ–ಮಹಿಳೆಯರಲ್ಲ; ಮಹಿಳಾ ಬರಹಗಾರರು; ಅರ್ಥಾತ್ 'ಬರಹಗಾರ್ತಿ'ಯರು. ಹೌದು, ಬರಹ ಗಾ–ರ್ತಿ–ಯ–ರು ! ಈ, 'ಬರಹ' ಎಂಬ ಪದದ ಉತ್ತರಾರ್ಧವಾಗಿ ಈ 'ಗಾತಿ' ಎಂಬ ಎರಡಕ್ಷರದ ಶಬ್ದ ಸೇರಿದೊಡನೆ- ಆಹ್ ಓದುವುದಕ್ಕೆ, ಕೇಳುವುದಕ್ಕೆ, ಹೇಳುವುದಕ್ಕೆ, (ಬರೆಯುವುದಕ್ಕಂತೂ......!) ಅಬ್ಬ! ಆದೆಷ್ಟು ಆನಂದವೋ..... ರೂಪಿಸಲು ನನಗೆ

ಶಬ್ದಗಳೇ ದೊರೆಯವು. ಅತಿಶಯ ಆನಂದ !–ಆನಂದಾತಿಶಯ ! ಅತಿಶಯವಲ್ಲದೆ ಮತ್ತೇನು? ಪತ್ರಿಕೆಗಳನ್ನು ಕಂಡಾಕ್ಷಣ 'ವೃದ್ಧಾದಿ ಆರ್ಥಡಕ್ಸ್ ಪೀಪಲ್' ವಾರ ಭವಿಷ್ಯದ ಪುಟವನ್ನು ಹರಿದು ನುಂಗುವುದಕ್ಕಿಂತಲೂ ತೀಕ್ಷ್ಣವಾಗಿ ಮತ್ತು ತೀವ್ರವಾಗಿ, ತಕ್ಷಣ ತರುಣವೃಂದ ಕಣ್ಣೋಡಿಸುವುದು– 'ಮಹಿಳಾ ವಿಭಾಗ'ಕ್ಕೆ ಯಾವ ಮಿಸ್..... ಅಥವಾ ಕುಮಾರಿ...... ಕಾಣಸಿಗುತ್ತಾಳೆ ಎಂಬ ಉತ್ಸುಕತೆಯಿಂದ. ಸಿಕ್ಕಿಯೂ ಸಿಗುತ್ತಾರೆನ್ನಿ. (ಆದರೆ ಪಾಪ –ಐವತ್ತೆಂಟು ವರ್ಷ ಪ್ರಾಯದ ಆ ವೃದ್ಧ ಸಂಪಾದಕಮಹಾಶಯನೇ, 'ಕುಮಾರಿ ರೋಹಿಣಿ'ಯೋ 'ಮಿಸ್ ಚಂದ್ರಾ'ಳೋ ಆಗಿ ಬರೆದಿರುವುದೆಂದು ಅವರಿಗೇನು ಗೊತ್ತು ! ಪಾಪ !)

ಇರಲಿ, ಈ ವಿಚಾರ ಇಲ್ಲೇಕೆ ಬಂತೆಂದರೆ– ಇಂದಿನ ಪತ್ರಿಕೆಗಳಲ್ಲಿ ಬರಹಗಾರ್ತಿಯರ ಲೇಖನಗಳೂ ಇರುತ್ತವೆಂಬುದನ್ನು ತಿಳಿಸುವುದಕ್ಕಾಗಿ ನಮೂದಿಸಿದೆನಷ್ಟೇ. ಇರುತ್ತವೆ ಮಾತ್ರವಲ್ಲ– ಈ 'ಗಾರ್ತಿ'ಯರ ಬರಹವಿಲ್ಲವೆಂದರೆ, ಆ ಪತ್ರಿಕೆ ಮಾರಾಟವಾಗುವುದರಲ್ಲಿಯೂ ಇಲ್ಲವೆಂದು ಹೇಳಬಹುದು. ಪತ್ರಿಕೆಯ ಶೋಭೆ ಈ 'ಗಾರ್ತಿ'ಯರಿಂದ ಸಿಂಗರಿಸಲ್ಪಟ್ಟು ಬರಬೇಕೆಂದಿರುವಾಗ, 'ಲೇಖನಗಳಿಲ್ಲದೆ ಶೋಭೆಯಿಲ್ಲ, ಶೋಭೆಯಿಲ್ಲದೆ ಮಾರಾಟವಿಲ್ಲ' ಎಂದಾಗುವುದು ಸ್ವಾಭಾವಿಕ ಇರಲಿ, ಈ, 'ಗಾರ್ತಿ'ಯರ ಬರಹ ಎಷ್ಟು ನೀರಸವಾಗಿರಲಿ– ತಪ್ಪಾಗಿರಲಿ, ಅಸಂಬದ್ಧವೇ ಇರಲಿ, ಸಂಪಾದಕ ಹಾಗೂ ವಾಚಕವೃಂದದಿಂದ ಆನಂದದಿಂದ ಸು–ಸ್ವಾಗತಿಸಲ್ಪಡುತ್ತಿದೆ!

ಹಾಗೆಂದು, ಈ ಬರಹಗಾರ್ತಿಯರೆಲ್ಲರೂ ಅಪಕ್ವಕೃತಿಗಳನ್ನೇ ರಚಿಸುವರೆಂದು ನನ್ನ ಆಪಾದನೆಯೇನೂ ಇಲ್ಲ. ತಮ್ಮ 'ಸ್ವಾನುಭವ' ದಿಂದ ತಿಳಿದುಕೊಂಡ ಸಂಗತಿಗಳನ್ನು ಸ್ತ್ರೀಸಹಜವಾದ, ಮೃದುಮಧುರ ಶೈಲಿ, ನಯವಿನಯಭಾವ, ಸ್ನಿಗ್ಧಮುಗ್ಧಸೌಂದರ್ಯ. ಆಕರ್ಷಣೀಯ ಬೆಡಗು ಬಿನ್ನಾಣಗಳೊಂದಿಗೆ ಸಂಮಿಶ್ರಗೊಳಿಸಿ, ಹೃದಯಾನಂದಕರವಾಗಿ ಆಪ್ಯಾಯಮಾನಕರವಾಗಿ, ಆಹ್ಲಾದಕರವಾಗಿ, ಸುಂದರ ರೀತಿಯಿಂದ ಕೃತಿಸುತ್ತಾರೆಂಬುದು ನಿರ್ವಿವಾದದ ಮಾತೆಂಬುದನ್ನು ತೆರೆದ ಹೃದಯದಿಂದ ಒಪ್ಪಿಕೊಳ್ಳಲು ನಾನು ಆನಂದದಿಂದ ಉಬ್ಬಿಹೋಗುತ್ತೇನೆ.– ಆದರೆ, ಅದೇ 'ಕುಮಾರಿ'ಯರೇ, ತಮ್ಮ 'ಸ್ವಾನುಭವ'ದಿಂದಲೇ ಬರೆದ, 'ನನ್ನ ದಾಂಪತ್ಯಜೀವನದ ಕೆಲವು ನೆನಪು'ಗಳನ್ನೋ, 'ವಿವಾಹಿತ ಮಹಿಳೆಯ ಕರ್ತವ್ಯ'ವನ್ನೋ, 'ಸೊಸೆಯ ಸೌಭಾಗ್ಯ'ವನ್ನೋ ಓದಲು ನಾನು ಅಚ್ಚರಿಪಡದಿರಲು ಸಾಧ್ಯವಿಲ್ಲ ತಾನೆ?...... (ನಮ್ಮ ಸೋದರಿಯರ ಕುರಿತು ಇಷ್ಟು ಸಾಕಲ್ಲವೇ)......

ಸರಿ, ಇನ್ನು ಕೊನೆಯದಾಗಿ, ಹತ್ತರೊಂದಿಗೆ ಹನ್ನೊಂದಾಗಿರುವ, 'ನನ್ನ ಹಣೆಬರಹ'ದಲ್ಲೂ, 'ಪಾಲಿಗೆ ಬಂದ ಪಂಚಾಮೃತ'ದ ಸವಿಯನ್ನಿಷ್ಟು ನಿಮಗೂ

ಹಂಚಿಬಿಟ್ಟು ವಿರಮಿಸುತ್ತೇನೆ:- ಈ 'ಬರಹಗಾರರ ಹಣೆಬರಹ' ಎಂದು ನಾನು ಎತ್ತಿಕೊಂಡಿರುವ ವಸ್ತುವೇ ಹಿಂದೆ, ಮಾನ್ಯ ಲೇಖಕರೊಬ್ಬರಿಂದ, ಹಲವಾರು ಪುಟಗಳ ಲಘು ಪ್ರಬಂಧವೊಂದವೊಂದಕ್ಕೆ ಒಪ್ಪಿಸಲ್ಪಟ್ಟುದೇ ಆಗಿದೆ. ಅದರಲ್ಲಿಯೂ, ಲೇಖಕರ ಕಷ್ಟ ಸುಖಗಳ ವಿಚಾರವಾಗಿಯೇ ಆ ನಿಬಂಧವೂ ಇತ್ತೆಂದು ಹೇಳುವಾಗ- ಈ ವಿಚಾರವನ್ನಿಲ್ಲಿ, ನಮೂದಿಸಲೇಬೇಕಾಗಿ ಬಂದ ಪ್ರಸಂಗವು, ನಿಜವಾಗಿಯೂ ನನಗೆ ವ್ಯಸನದಾಯಕವಾದುದೆಂದು ಬರೆಯಲೇಬೇಕಾಗಿ ಬಂದುದು, ನನ್ನ 'ಹಣೆಬರಹ'ವಲ್ಲವೆ?'

# ಜನಪ್ರಿಯ

'ಜನಪ್ರಿಯ' ಎಂಬುದು ಸುಪ್ರಸಿದ್ಧ ವ್ಯಕ್ತಿಯೊಬ್ಬನ ಗುಪ್ತನಾಮವಲ್ಲ; ಅಥವಾ ಗುಪ್ತವ್ಯಕ್ತಿಯೊಬ್ಬನ ಸುಪ್ರಸಿದ್ಧ ನಾಮವೂ ಅಲ್ಲ. ನಾಲ್ಕಾರು ಜನರಿಗೆ ಬೇಕಾದ, ಹತ್ತಾರುಮಂದಿಯೊಡನೆ ಸೇರಿರುವ, ನೂರಾರು ವ್ಯಕ್ತಿಗಳಿಗೆ ಪರಿಚಯವುಳ್ಳ, ಸಾವಿರಾರು ಜೀವಿಗಳಿಗೆ ಹೆಸರು ಗೊತ್ತಿರುವಂಥ 'ಮಹಾನುಭಾವ'ರನ್ನು ಕರೆಯುವ 'ರೂಢನಾಮ'- 'ಜನಪ್ರಿಯ' ಎಂದು, ಅಷ್ಟೇ. ಜನಪ್ರಿಯನು ಒಂದಲ್ಲ ಒಂದು ವಿಧದಲ್ಲಿ ಜನಜಂಗುಳಿಯ ಮನೆಮಾತಾದ ಮಹಾನುಭಾವನಾಗಿರುತ್ತಾನೆ. ಜೀವನ ರಂಗಸ್ಥಳದ ಎಲ್ಲ ಸಂದಿ ಗೊಂದಿಗಳಲ್ಲಿಯೂ, ಆಯಾಯ ಜಾಗಕ್ಕೆ-ಆಯಾಯ ಸ್ಥಿತಿಗತಿಗಳಿಗೆ ತಕ್ಕಂತೆ ಅನುರೂಪರಾದ ಜನಪ್ರಿಯರನ್ನು ಕಾಣುತ್ತೇವೆ. ಸಾಮಾನ್ಯವಾಗಿ ಕಾಲೇಜ್ [ವಿದ್ಯಾರ್ಥಿ] ಜೀವನದ ನಡುವೆ ಇವರ ದರ್ಶನ ತೀರ ಸುಲಭಸಾಧ್ಯವೂ, ಅತ್ಯಧಿಕ ಸಂಖ್ಯಾಬಲ ವುಳ್ಳದ್ದೂ ಆಗಿರುತ್ತದೆ ಬುದ್ಧಿ ಬಲಿತಿರದಿದ್ದರೂ, ದೇಹ ಬಲಿತ, ಚಿಗುರು ಮೀಸೆ ಕುಡಿಯೊಡೆಯುವ ಕಾಲದ, ಕಾಲೇಜ್ ಮಾತೆಯ ಪುಣ್ಯಗರ್ಭದಿಂದಾವಿರ್ಭವಿಸಿದ, ಹೊಸಹುರುಪಿನ, ಬಿಸಿನೆತ್ತರಿನ, ತರುಣ ಜನಪ್ರಿಯನೊಬ್ಬನ ಚಿತ್ರವನ್ನು ಕೊಡುವುದಾದರೆ- ಈ ಪರಿಯಾಗಿ ನಿರೂಪಿಸಬಹುದು:

"ಅದೋ, ಅದೇ ಕಾಲೇಜ್ ವೇದಿಕೆ. ಅಂದವಾಗಿ ಅಲಂಕರಿಸಲ್ಪಟ್ಟ ಸುಂದರ ಸಭಾಂಗಣವಿದು. ನೋಡಲ್ಲಿ, ಓ ಅಲ್ಲಿ. ವೇದಿಕೆಗೆ ಕಿಂಚಿದ್ದೂರದಲ್ಲಿ ಖದ್ದರಿನ ಶರಟು, ನೆಹರೂ ವೇಸ್ಟ್‌ಕೋಟ್ ಧರಿಸಿ ನಗುನಗುತ್ತ, ಮೆಲು ಮಾತಿನ, ಕುಲುಕುಲು ನಗುವಿನ ಹೊನಲನ್ನು ಹರಿಸುತ್ತಿದ್ದಾನಲ್ಲ- ಆಂ, ಆತನೇ ನಮ್ಮ ಜನಪ್ರಿಯ ಕ್ರಾಪ್- ಅಸ್ತವ್ಯಸ್ತವಾಗಿದೆ; ಪರವಾಗಿಲ್ಲ. ಧರಿಸಿದ ಬಟ್ಟೆ- ಖಾದಿ ತಾನೆ? ಓ, ಕೊಂಚ 'ಮಣ್ಣಲಿನ'ವಾದರೂ ಅಂಥಾ ಆಕ್ಷೇಪಣೀಯವೇನೂ ಅಲ್ಲ. ದಿಟ್ಟಿಸುತ್ತಿರುವುದು, ಆ 'Ladies only (ಮಹಿಳೆಯರು ಮಾತ್ರ) ಎಂಬ ಬೋರ್ಡಿನ ಸನಿಹವನ್ನೇನೋ ನಿಜ. ಆದರೂ, ತೋರಿಕೆ- ಕಾರ್ಯಕಲಾಪಗಳಲ್ಲಿ ತೀರ ಸಮ್ಮಿಳಿತವಾಗಿರುವಂತೆಯೇ

"ಸಾಮಾನ್ಯವಾಗಿ ಊರಿನಲ್ಲಿ ಯಾವ ಸಭೆ ಸಮ್ಮೇಳನವೇ ಜರುಗಲಿ ಜನಪ್ರಿಯ ಒಮ್ಮೆ ಸಂದರ್ಶಕವಿರದಿರಲಾರ. ಸಭೆ ಆರಂಭವಾಗಲು ಇನ್ನೇನು ಕೇವಲ ಐದೇ ನಿಮಿಷಗಳಿವೆ ಎನ್ನುವಾಗ, ಇನ್ನೇನು ಅಧ್ಯಕ್ಷರು ಬಂದೇಬಿಟ್ಟರು ಎಂದು ಸಭಿಕರು ದಾರಿ ಕಾಯುತ್ತಿರುವ ಸುಮುಹೂರ್ತದಲ್ಲಿ ಆಗಮನವಾಗುತ್ತದೆ- ರಾಯರ ಸವಾರಿ. ನಿಧಾನವಾಗಿ, ವಿಧಾಯಕವಾಗಿ, ಕರವಸ್ತ್ರದಿಂದ, ಮೋರೆಯ ಸುರಿಯದ ಬೆವರನ್ನು ಒರೆಸುತ್ತ, ಎಲ್ಲರ ಕಂಗಳಿಗೆ ಕಂಗೊಳಿಸುತ್ತ, ದಿಟ್ಟತನದಿಂದ ಬಂದುಮುಟ್ಟುತ್ತಾನೆ. ಅಷ್ಟರಲ್ಲಿ ಹತ್ತಾರು ಪರಿಚಿತ ಮೊಗದಾವರೆಗಳ ಹೊರಳುನಗು ಇವನೆಡೆಗೆ ಹೊರಳುವುದು. ಕೈಗಳು ಅರ್ಧ ಮೇಲೇರಿ, 'ನಮಸ್ತೇ', 'ಹಲ್ಲೋ', ಇತ್ಯಾದಿ ನುಡಿಗಳ ಮಿದುನಡೆಯೊಂದಿಗೆ ಹಿಂದುಳಿಯುವುವು. 'ಹಲ್ಲೋ,' 'ಇದೇ ಬಂದೆ', 'O. K', 'ನಮಸ್ತೆ' ಇತ್ಯಾದಿ ಹೇಳುತ್ತ, ಮೆಲ್ಲುಲಿಯುಲ್ಲಿ, ಅನಿವಾರ್ಯ ಕಾರಣಗಳಿದ್ದರೂ, ಹೇಗೋ ಬಿಡುವು ಮಾಡಿಕೊಂಡು ಸಭೆಗೆ ಬಂದೆನೆಂದು, ಪ್ರತ್ಯಕ್ಷ ಸೂಚಿಸದೆ, ಸೂಚ್ಯವಾಗಿ ತಿಳಿಸುತ್ತಾನೆ. ಅಂತೂ, ಎಲ್ಲರಿಗೂ ಕಾಣಿಸುವಂತೆ ಸಭೆಗೆ ಹಾಜರಾಗುವುದು ಜನಪ್ರಿಯನ ಸತ್ಸಂಪ್ರದಾಯ. ಸಭೆ ಆರಂಭವಾಗಿ, ಕಾರ್ಯಕ್ರಮಗಳಲ್ಲಿ ಶ್ರೋತೃವೃಂದ ತಲ್ಲೀನವಗುವಷ್ಟರೊಳಗಾಗಿ -ಕೇವಲ ಹತ್ತೇ ಹತ್ತು ನಿಮಿಷಗಳೊಳಗಾಗಿ- ರಾಯರ ಸವಾರಿ ತೆರಳಿರುತ್ತದೆ, ದೂರ, ಬಹುದೂರ !

"ಪ್ರಖ್ಯಾತ ಸಾಹಿತಿಯೋ, ಜನಮೆಚ್ಚುಗೆಯ ಮುಖಂಡನೋ ಅಥವಾ ಇನ್ನಾವ ಸುಟ್ಟಸುಡುಗಾಡ ಪ್ರಸಿದ್ಧಾಂಕಿತ ಮಹಾನುಭಾವನೋ -ಯಾವನು ಬೇಕಾದರೂ ಬರಲಿ- ಅವರ ಜೊತೆಗೆ ಜನಪ್ರಿಯನಿದ್ದೇ ಇರುವ ! ಹೇಗೋ ಏನೋ, ಅವರ ಬರುವಿಕೆ, ಕಾರ್ಯಕ್ರಮಗಳ ವಿವರ ಪ್ರತಿಯೊಂದೂ ಇವನಿಗೆ ಕರತಲಾಮಲಕ ! ಬರಿಯ ಬಾಯುಪಚಾರದಿಂದ ಆಗಬಹುದಾದ ಎಲ್ಲ ಸಹಕಾರ, ಸಹಾಯ, ಸೇವೆ- ಇತ್ಯಾದಿಗಳನ್ನು ಸಲ್ಲಿಸಲು ಮರೆಯುವುದಿಲ್ಲ. ಆಗಾಗ, ಬೇಕೆಂತಲೇ, 'ಓ! ನಮಗೀಗ ಕ್ಲಾಸಿತ್ತು, ಊಂ, ಇರಲಿ, ಪರವಾಗಿಲ್ಲ' ಎಂದು ಹೇಳುತ್ತಿರುತ್ತಾನೆ. ಅವರು 'ಛೆ,ಛೆ, ಹೀಗೆಲ್ಲ ಮಾಡಿಕೊಂಡು ತೊಂದರೆ ವಹಿಸಿಕೊಳ್ಳಬೇಡಿ, ಕ್ಲಾಸಿಗೇಕೆ ಚಕ್ಕರ್ ಹೊಡೆಯುತ್ತೀರಿ? ಹೋಗಿ, ಕ್ಲಾಸ್ ಮುಗಿಸಿಕೊಂಡು ಬನ್ನಿ' ಎಂದು ಹೇಳುವುದಕ್ಕುತ್ತರವಾಗಿ, ಥಟ್ಟನೆ, 'ಛೇ- ಹಾಗಂದರೇನು, ಕ್ಲಾಸೇನು ದಿನಾ ಇದ್ದದ್ದೆ ಗೋಳು. ಆದರೆ ನೀವು?' ಎಂದು ಅವರ ತಲೇಗೇನೇ ತಣ್ಣೀರೆರಚುತ್ತಾನೆ !

"ಸಾರ್ವಜನಿಕ ಸೇವಾಕ್ಷೇತ್ರದಲ್ಲಿ ಜನಪ್ರಿಯನ ಸಹಾಯ ಮಹತ್ವ (ಪೂರಿತ)ವಾದುದು- ಕೊಡುಗೈಯದು. ಯಾವ ಸಂಸ್ಥೆಯ ಸಹಾಯಾರ್ಥವೇ ಆಗಿರಲಿ- ಚಂದಾ ಬೇಡಲು ಬನ್ನಿ, ಮುಕ್ತಹಸ್ತದಿಂದ, ಎದ್ದು ಕಾಣುವ ಅಂಕೆಗಳಿಂದ ಅಲಂಕರಿಸುತ್ತಾನೆ ನಿಮ್ಮ ಆ ನಿವೇದನಾಪತ್ರವನ್ನು (List ನ್ನು) ಹಣ ಸಲ್ಲಿಸಲು

ಮಾತ್ರ, 'ಈಗಲೇ ಕೊಡಲೋ- ಅಲ್ಲ, ಆಮೇಲೆ ಕೊಟ್ಟುಬಿಡಲೋ' ಎಂದುಪಚರಿಸಿ, 'ನೀವು, ಮತ್ತೆ, ಸಂಜೆಗೆ ಈ ಕಡೆ ಬರುತ್ತೀರಿ ತಾನೆ? ಆಗ ಕೊಟ್ಟುಬಿಡುವೆ, ದಯವಿಟ್ಟು ಇಸುಕೊಂಡು ಹೋಗುವಿರಂತೆ, ಆಂ, ಮರೆತುಗಿರೆತು ಬಿಡಬೇಡಿ ಮತ್ತೆ' ಎಂದು ಹೇಳುತ್ತಾನೆ. ಆನಂತರ, ಆ ಸಂಜೆಯಂತೂ, ಜನಪ್ರಿಯನ ಭೇಟಿ ಆಗುವುದಿಲ್ಲ, ಮಾತ್ರವಲ್ಲ, ನೂರಾರು ಕಾರ್ಯಗೌರವಗಳುಳ್ಳ ಅವರ ಭೇಟಿ ಮತ್ತೆ ಸು-ದೀರ್ಘ ಅವಧಿಯ ತನಕವೂ ನಿಮಗಾಗುವುದೇ ಇಲ್ಲ- ಅರ್ಥಾತ್ ಆ ಹಣದ ಬಗ್ಗೆ ನಿಮಗೆ ಮರವೆಯಾಗುವವರೆಗೂ ಅನ್ನಿ ! ಒಂದು ವೇಳೆ ಕಂಡೇಬಿಟ್ಟಿರಿ ಎಂದಿಟ್ಟುಕೊಳ್ಳಿರಿ, ಆದರೂ ಕೇಳಿ ಬಿಡಲಿಕ್ಕಾಗುತ್ತದೆಯೇ ಏಕಾಏಕಿ? ಜನಪ್ರಿಯನಲ್ಲವೆ?..... 'ಬೆನಿಫಿಟ್ ಶೋ'ವಿನ ಟಿಕೆಟ್ ಮಾರಲು ನೀವಾತನ ಬಳಿಗೆ ತೆರಳುವಿರ? ತುಂಬ ಸಂತೋಷ. ನೂರು ಹುರಿದುಂಬುವ ಮಾತುಗಳಿಂದ ನಿಮ್ಮನ್ನು ಶ್ಲಾಘಿಸಿ (ತಾನೂ ಅಷ್ಟು ನಿಮ್ಮ ಶ್ಲಾಘನೆಯನ್ನು ಗಿಟ್ಟಿಸಿಕೊಂಡು) ಉಚ್ಚಸ್ಥಾನದ ಒಂದು ಟಿಕೆಟ್ಟನ್ನೇ ತೆಗೆದುಕೊಳ್ಳುವುದಾಗಿ ಹೇಳುತ್ತಾನೆ. ಇನ್ನೇನು, ನೀವು ಟಿಕೆಟ್ ಹರಿದುಕೊಡುವಿರಿ ಎನ್ನುವಷ್ಟರಲ್ಲಿ, 'Oh ! ನಿಮ್ಮ Show ನಾಡದು ಭಾನುವಾರ ತಾನೆ? ಪ್ರಭಾದಲ್ಲಿ?' ಎಂದು ಹೇಳಿ, 'Oh I am very sorry, ಆಗ್ಲೆ ಕೊಡ್ತೇನಂತ ಅಂದ್ಬಿಟ್ಟಿದ್ದಾರಲ್ರೀ- ಆ ನಮ್ಮ ಇವರು ಒಂದು ಟಿಕೆಟ್? ಅವರ ಕೈಯಿಂದ್ಲೇ ತಗೋತೀನಿ ಅಂತ ಪ್ರಾಮಿಸ್ ಮಾಡಿಬಿಟ್ಟಿದ್ದೀನಿ' ಎಂದು ಹಲ್ಲು ಬಿಟ್ಟು ನಗು ಅಳು ಶುರು ಮಾಡುತ್ತಾನೆ. 'ಪರವಾಯಿಲ್ಲ, ಅವರಿಂದಾದ್ರೇನು, ನಮ್ಮಿಂದಾದ್ರೇನು, ಮುಖ್ಯ ತಾವೊಂದು ಟಿಕೆಟ್ ತೊಗೊಳ್ಳೋದು ತಾನೇ. ಹಾಗಾದರೆ ನಾವಿನ್ನು ಬರ್ತೇವೆ' ಎಂದು ನೀವು ಹೊರಡಲೇಬೇಕಾಗುತ್ತದೆ- ಗತ್ಯಂತರವಿಲ್ಲದೆ !

"ರಾಜಕೀಯದಲ್ಲಿ ಪಳಗಿದ ಕೈಯಾದರೂ, ಯಾವ ಪಕ್ಷ ಪಂಗಡದ ಪ್ರಭಾವಕ್ಕೂ ಒಳಗಾಗಿರುವವನಲ್ಲ ನಮ್ಮ ಜನಪ್ರಿಯ !, ಯಾವ ಧೋರಣೆಗೂ, ತನ್ನನ್ನು ಕೊಚ್ಚಿಕೊಂಡು ಹೋಗಲು ಆತ ಬಿಟ್ಟವನಲ್ಲ. ಆದರೆ ಎಲ್ಲ ಪ್ರವಾಹಗಳಲ್ಲಿಯೂ ಈಸಿ ಬಂದವನೇ. ಆತನದೊಂದು ವೈಶಿಷ್ಟ್ಯ: ಒಳ್ಳೆಯದನ್ನು ಯಾರೇ ಸಾಧಿಸಲಿ- ಬಾಯಿ ತುಂಬ ಹೊಗಳುತ್ತಾನೆ, ಪಕ್ಷ ಪಂಗಡದ ಭೇದವೆಣಿಸದೆ. ಕೆಟ್ಟಕೆಲಸ ಮಾಡಿದಾಗ ಮಾತ್ರ, 'ಹೋಗಲಿ, ಅವರವರ ಖರ್ಮ ಅವರವರಿಗೆ, ನಮಗೇಕೆ ಅವರ ಪಾಪದ, ಪಂಚಾಯಿತಿಕೆ' ಎಂದು ತಾತ್ಸಾರವೇದಾಂತವನ್ನು ಉಸುರುತ್ತಾನೆ. ಎಲ್ಲ ಮುಖಂಡರ ಪರಿಚಯವೂ ಈತನಿಗಿರುತ್ತದೆ. ಅವರಿಗೂ ತನ್ನನ್ನು ತುಂಬ ಗೊತ್ತು ಎಂದು ಹೇಳುವುದೂ ಇದೆ. 'ಪಕ್ಷ ಪಂಗಡಗಳು ಪ್ರಾಮುಖ್ಯವಲ್ಲ. ನ್ಯಾಯವು ಪವಿತ್ರವಾದುದು, ಸತ್ಯವು ಶ್ರೇಷ್ಠವಾದುದು, ಎಂಬುದೇ ಜನಪ್ರಿಯನ ಜನಪ್ರಿಯ ಸೊಲ್ಲು. (ಈ ಸೊಲ್ಲಿಗೆ ಸೋಲಿಲ್ಲ. ರಾಜಕೀಯದಲ್ಲಿ ಬೈಯದೆ ಉಳಿದವ ಬದುಕಬಲ್ಲ ಎಂಬ ಸೊಲ್ಲು ಅವನಿಗೆ ತುಂಬ ಚೆನ್ನಾಗಿ ಗೊತ್ತಿದೆ.)

"ಸಾಹಿತ್ಯದ ಬಗೆಗೆ ಜನಪ್ರಿಯನು ವಹಿಸುವ ಧೋರಣೆ, ಅತ್ಯಂತ ಮಹತ್ವವಾದುದು. ಸಾಹಿತ್ಯದಲ್ಲಿ ವಿಶೇಷ ಪರಿಶ್ರಮ- ಅನುಭವಗಳಿಲ್ಲವಾದರೂ, ಅದರ ಬಗ್ಗೆ ಆತನಿಗಿರುವ ಮಮತೆ ಮೇರೆಯುರಿಯುದುದೇನೇ; ಅಮೋಘವಾದುದೇನೇ; ಅದ್ಭುತವಾದುದೇನೇ. ತಾನು ಬರಹಗಾರನಲ್ಲ, ಬರೆಯಲು ಮನಸ್ಸು ಮಾಡಿಲ್ಲ, ಆದ್ದರಿಂದ ಆ ವಿಚಾರದಲ್ಲಿ ಹೆಚ್ಚೇನೂ ತನಗರಿಯದು ಎಂದು ಒಪ್ಪಿಕೊಳ್ಳುತ್ತ, 'ಆದರೂ ನೋಡಿ, ಈ ರೀತಿಯಾಗಿ ಮಾತ್ರ ಯಾರೂ ಬರೆಯಬಾರದು, ಎಂದು ಘಂಟಾಘೋಷವಾಗಿ ಅಭಿಪ್ರಾಯಪಡುತ್ತಾನೆ. 'ಈ ರೀತಿಯಾಗೆಲ್ಲ ಬರೆಯುವ ಬದಲು ನನ್ನಂತೆ ತಣ್ಣಗಿರುವುದೇ ಲೇಸು' ಎಂದೂ ಹೇಳುತ್ತಾನೆ. ಕೆಲವೊಮ್ಮೆ ಸ್ಫೂರ್ತಿ ತೀರ ಉಕ್ಕಿ, ಮಿತಿ- ಮತಿ- ಮೀರಿದಾಗ 'ಇಂತಹದನ್ನೆಲ್ಲ ಬರೆಯಲೇನು ಮಹಾ? ಎಷ್ಟು ಬೇಕಾದರೂ ಬರೆಯಬಲ್ಲೆ ನಾನೂ, ಆದರೆ- ಬೇಡ ಅಷ್ಟೆ' ಎಂದೆಲ್ಲ ಗಳಹುವುದೂ ಇದೆ. (ಹೀಗೆ ಸಾಹಿತ್ಯದಲ್ಲಿ ಬಗೆಯಿಲ್ಲದೆ ಬೈದು ಭದ್ರವಾದ ಸ್ಥಾನ ದೊರಕಿಸಿಕೊಳ್ಳಬಲ್ಲ ಗುಟ್ಟನ್ನು ಚೆನ್ನಾಗಿ ಅರಿತನ- ಜನಪ್ರಿಯ !)

"ಭಾಷಣದಲ್ಲಿ ಮಾತ್ರ-ಅದ್ಭುತ ಪಾಂಡಿತ್ಯ ಈ ಮಹಾನುಭಾವನಿಗೆ, ತನ್ನ ಕಂಚಿನಂಥ ಕಂಠದ ಕುರಿತು ಅತೀವ ಅಭಿಮಾನ. ಮೈಕಿನ ಮುಂದೆ, ಮೂರು ಮಾರು ದೂರವೇ ನಿಲ್ಲುತ್ತಾನೆ. ಮೈಕು ಇಲ್ಲದೇ ಇದ್ದರೂ ಕೂಡಾ, ನಿಮ್ಮೆಲ್ಲರ ಕಿವಿ ಕಿವುಡಾಗುವಂತೆ ಕಿರುಚಬಲ್ಲೆ, ಹಾಗೆ ಉಸುರುವ ಸಾಮರ್ಥ್ಯವಿದೆ ತನ್ನ ಗಂಟಲಿಗೆ ಎಂದು ಮೈಕಿನ ಮುಂದೆ ನಿಂತಿದ್ದರೂ ಪ್ರದರ್ಶಿಸಿಬಿಡುತ್ತಾನೆ. ಭಾಷಣ ಬಿಗಿಯಲು ಮುಂದಾದರೆ ಸರಿ- 'ಪಟುಭಟರಾರ್ಭಟೆ ಕೇಳುವುದು'.... ಈ ಭಾಷಣ ಭೀಷಣನಿಗೆ, ವ್ಯಾಕರಣನಿಯಮ, ಭಾಷಾಶಾಸ್ತ್ರಗಳೆಲ್ಲ ಕೇವಲ ಕಸ, ಮಾತು ಮಾತ್ರವೇ ರಸ. ಅರ್ಥವೇನಾದರೂ-ಇರಲಿ, ಅದು ಮಾಡಿಕೊಳ್ಳುವವರ ಭಾಗ್ಯವೆಂದು ತನ್ನಮಟ್ಟಿನ ಭಾಷಣಿಸುವ ಕರ್ತವ್ಯವನ್ನು ಕಾಯಾವಾಚಾ ಮನಸಾ ಗಂಭೀರನಾಗಿ ಸಾಗಿಸುತ್ತಾನೆ.

"ತಾನು ಭಾಷಣ ಮಾಡಿದ ಸಭೆಯ ಸವಿವರವಾದ ಸುದೀರ್ಘ ವರದಿ ಪತ್ರಿಕೆಗಳಲ್ಲಿ ಬಂದೇ ತೀರುವಂತೆ ಸಶ್ರಮ ಪ್ರಯತ್ನಗಳನ್ನು ಕೈಗೊಳ್ಳುವುದೊಂದು ಜನಪ್ರಿಯನ ಅಭ್ಯಾಸ (Hobby). ಸಭೆಯ ವ್ಯವಸ್ಥಾಪಕರಿಗೆ, 'ಛೇ, ಇಂತಹ ಸಭೆಯ ವರದಿ ಪೇಪರಿಗೆ ಕಳುಹಿಸದಿದ್ದರೆ ಹೇಗೆ? ತುಂಬ ಅನ್ಯಾಯ, ಸಂಘದ ಹೆಸರು ಕಾರ್ಯಕ್ರಮ ನಾಲ್ಕು ಜನರಿಗೆ ತಿಳಿಯಬೇಡವೆ?' ಎಂದು ಅವರ ಮನವೊಲಿಸುತ್ತಾನೆ; ಅವರಿಂದಲೇ ವರದಿ ಪೇಪರಿಗೆ ಕಳುಹಿಸಲ್ಪಡುವಂತೆ ಮೇಲ್ತನಿಖೆ- ಉಸ್ತುವಾರಿ ನೋಡಿಕೊಳ್ಳುತ್ತಾನೆ. ತಾನಾಗಿಯೇ ಕಳುಹಿಸಿಕೊಡುವ ಸಂಪ್ರದಾಯವೇ ಹೆಚ್ಚು ಬಳಕೆ ಈತನಿಗೆ. ಇಷ್ಟು ಒತ್ತಾಯಪೂರ್ವಕವಾಗಿ ವರದಿಸಲು ವರಾತ ಹಚ್ಚಿದ್ದರಿಂದ ಸ್ವಾಭಾವಿಕವಾಗಿ, ವರದಿಸುವಾಗ ಇವನ ಹೆಸರಿಗೆ ತುಸು ಹೆಚ್ಚು

ಪ್ರಧ್ಯಾನ್ಯತೆ, ಇವನ ಭಾಷಣದ ಬಗ್ಗೆ ತುಸು ಅಧಿಕ ವಿವರ ಬರೆದೇ ಬರೆಯುತ್ತಾರೆಂಬ ಅಂಶ ಜನಪ್ರಿಯನಿಗೆ ಚೆನ್ನಾಗಿಗೊತ್ತಿದೆ !

"ಯಾವುದಾದರೊಂದು ಹೊಸ ಪತ್ರಿಕೆ ಹೊರಟಿತೆಂದು ತಿಳಿದರೆ ಸರಿ, ಜನಪ್ರಿಯನ ಶುಭಸಂದೇಶ ಕೂಡಲೇ ತಲಪಿತೆಂದೇ ತಿಳಿಯಬೇಕು. 'ತುಂಬ ಋಣಿಗಳು' ಎಂದು, ಉಚಿತ ಸಂಚಿಕೆಯೊಂದು ಆ ಬಡಪಾಯಿ ಪತ್ರಿಕೆಗಳವರಿಂದ ದೊರೆಯಲು, 'ಕೈಲಾದ ಸೇವೆ ಸಲ್ಲಿಸಬೇಕೆಂದಿದ್ದೇನೆ, ಆ ಆಸೆ ಎಷ್ಟರ ತನಕ ಸಾಧ್ಯವಾಗಬಹುದೋ' ಎಂದಿತ್ಯಾದಿಯಾಗೆಲ್ಲ ಬರೆದು, 'ಹಾಳಾದ ಈ ಓದಿನೆಡೆಯಲ್ಲಿ, ಪರೀಕ್ಷೆಗಳ ಪೆಡಂಭೂತಗಳೆಡೆಯಲ್ಲಿ, ಕಾಲೇಜು, ಕರ್ಣಾಟಕ ಸಂಘ, ಸಾಹಿತ್ಯ ಸಂಘ- ಅದು, ಇದು ಎಂದು ನೂರಾರು ತಾಪತ್ರಯಗಳೆಡೆಯಲ್ಲಿ ಏನೂ ಸಾಧ್ಯವಾಗುವಂತಿಲ್ಲ. ಹಾಯ್!' ಎಂದು ವ್ಯಸನ ಸೂಚಿಸಿ ಬರೆಯುತ್ತಾನೆ. ತೀರ ಆತ್ಮೀಯತೆಯ ಈ ಪತ್ರವನ್ನು ಕಂಡು, ಅಲ್ಲಿ ಇಲ್ಲಿ ಆಗೀಗ ಅಷ್ಟಿಷ್ಟು ಇವರ ಬಗ್ಗೆ ಕೇಳಿ ಬಲ್ಲ ಅವರು, ಇವರಿಗೆ ಸಂಚಿಕೆಗಳನ್ನು ಉಚಿತವಾಗಿ ಕಳುಹಿಸುತ್ತಲೇ ಇರುತ್ತಾರೆ. ಮುಂದೆ ಸಹಾಯ ಮಾಡುವ ಭರವಸೆ ಆಗಾಗ ಶ್ರೀಯುತರೂ ನೀಡುತ್ತಲೇ ಇರುತ್ತಾರೆ......

"ಹತ್ತಾರು ಜನರಿಗೆ ನೂರಾರು ಕೆಲಸಗಳನ್ನು ಮಾಡಿಕೊಡುವ ಭರವಸೆ ನೀಡುತ್ತಾನಾದರೂ, ಅವೆಲ್ಲವನ್ನೂ-ಹೋಗಲಿ ಅವುಗಳಲ್ಲೊಂದನ್ನಾದರೂ ಪೂರೈಸುವುದೆಂಬುದು ಇಲ್ಲ. ಹೇಳಿದ ಹೊತ್ತಿಗೆ ಸರಿಯಾಗಿ ಯಾರನ್ನೂ, ಯಾವತ್ತೂ ಭೇಟಿಯಾಗುವ ಪದ್ಧತಿಯನ್ನೇ ಇಟ್ಟಿಲ್ಲ. ಆಕಸ್ಮಿಕವಾಗಿ ಹೋಗಿ ಕಂಡುಬರುವುದೇ ಪದ್ಧತಿ. ಪತ್ರಗಳಿಗಂತೂ ಉತ್ತರ ಕೊಡುವ ಹವ್ಯಾಸ ಇಲ್ಲವೇಇಲ್ಲ. ಅವರೇ ಬೇಸರದಿಂದ ಬರೆಯುವುದನ್ನು ನಿಲ್ಲಿಸುತ್ತಾರೆ. ಅನಂತರ ಒಂದು ದಿನ ವಿನಾಕಾರಣವಾಗಿಯೇ ಆದರೂ ಮರ್ಮಸ್ಪರ್ಶಿಯಾಗುವಂತೊಂದು ನಾಲ್ಕೇ ನಾಲ್ಕು ಮಾತಿನ ಪತ್ರ ಬರೆಯುತ್ತಾನೆ. "ಹೀಗೆಲ್ಲ ನೀನೂ ಸಿಟ್ಟಾದರೆ ಹೇಗೆ? ಯಾರು ಯಾರಿಗೋ ಅಗತ್ಯ ಬರೆಯಲೇಬೇಕಿತ್ತು, ಅದಕ್ಕೆ ಬಿಡುವಿಲ್ಲದೆ ಕುಳಿತಿದ್ದೇನೆನ್ನುವಾಗ? ನಿನಗೆ? ಹೇಗೂ ನಿನ್ನನ್ನು ಸಮಾಧಾನಪಡಿಸ ಬಲ್ಲೆನೆಂಬ ಆತ್ಮೀಯ ಭರವಸೆ ಇತ್ತೆಂತಲೇ ವಿಳಂಬಿಸಿದೆ ಉತ್ತರಿಸಲು. ಇದನ್ನು ನೀನು ತಿಳಿದುಕೊಳ್ಳುವಿಯೆಂದು ನನಗೆ ಗೊತ್ತು" ಎಂದು ಸಮ್ಮೋಹನಾಸ್ತ್ರವನ್ನೇ ಪ್ರಯೋಗಿಸುತ್ತಾನೆ.

"ಓದಿನಲ್ಲಿ ಜನಪ್ರಿಯನು ಹಿಂದೆ, ಆದರೂ, ಪಾಸಾಗುವ ದಾರಿ ಆತನಿಗೆ ಹ್ಯೇಗೋ ಕಂಡುಬಿಟ್ಟಿರುತ್ತದೆ. ಅಕಸ್ಮಾತ್ ಫೈಲಾದರೂ ಅದನ್ನೇನೂ ಹಿರಿದಾಗಿ ಗಣಿಸುವುದಿಲ್ಲ ಆತ; ಆ ಬಗ್ಗೆ ನಿಶ್ಚಿಂತೆ. "ಆಂ ಇವರಂತೆಲ್ಲ ಓದಿದರೆ 100ಕ್ಕೆ 100 ಮಾರ್ಕ್ಸ್ ತೆಗೆಯಲಿಕ್ಕಿಲ್ಲವೆ? ಇಷ್ಟೆಲ್ಲ ಓದಿ ಪ್ಯಾಸಾಗುವುದೇನು ಮಹ? ಓದದೆ-

ಫೈಲಾದರೆ ನಷ್ಟವಿಲ್ಲ, ಪ್ಯಾಸಾದರೆ ಅದ್ಭುತಸಾಧನೆ ತಾನೇ"…. ಎಂದು ಹೇಳುವುದು ಅವನ ಅಭ್ಯಾಸ.

"ಸಾಮಾನ್ಯ ಜೀವನದಲ್ಲಿ ತೀರ ಸರಳಜೀವಿ ಜನಪ್ರಿಯ. ತಾನಾಗಿ ಕಾಫಿಗೆ ಗೆಳೆಯರನ್ನು ಕರೆದರೂ ಅವರಿಂದಲೇ ಬಿಲ್ಲಿನ ಹಣ ಸಲ್ಲಿಸಲ್ಪಡುವಂತೆ ಮಾಡುತ್ತಾನೆ. ಅವರಾಗಿ ಕರೆದರಂತೂ ಕೇಳುವುದೇ ಬೇಡವಷ್ಟೆ? ಒತ್ತಾಯಪೂರ್ವಕವಾಗಿಯಾದರೂ ಅವರಿಂದ ಕಾಫಿ ಗಿಟ್ಟಿಸುವ ಚೈತನ್ಯ ಈತನಿಗಿದೆ. ಗರ್ವದ ಗಂಧವೂ ಇಲ್ಲದೆ ಸದಾ ಹಸನ್ಮುಖಿಯಾಗಿ, ಚಿಂತೆಗಳ ನಡುವೆ ಇದ್ದೂ ಇಲ್ಲದಂತೆ ಇರುತ್ತಾನೆ ಜನಪ್ರಿಯ. ತಾನು ಗೆಳೆಯರಿಗಾಗಿ, ಗೆಳೆಯರು ತನಗಾಗಿ ಎಂಬ ನಾಣ್ಣುಡಿಯನ್ನು ನಿಷ್ಠಾಪೂರ್ವಕವಾಗಿ ನಂಬಿ, ಅದರ ಉತ್ತರಾರ್ಧವನ್ನೇ ಅನುಷ್ಠಾನಕ್ಕೆ ತರುವ ಎದೆಗಾರ. ತನ್ನ ಗೆಳೆಯರ ಬಗ್ಗೆ ಅತ್ಯಂತ ಅಭಿಮಾನ ಆತನಿಗೆ– ಇಂತಹ ಗೆಳೆಯರು ತನಗಿದ್ದಾರಲ್ಲ ಎಂದು. ತನ್ನ ಅಭಿಮಾನಕ್ಕಾಗಿ, ತಾನು ಕೊಡುವ ತೊಂದರೆಗಳೆಲ್ಲವನ್ನೂ ಸಹಿಸಬಲ್ಲರವರೆಂಬುದು ಅವನ ಸ್ವಕೀಯ ಸಿದ್ಧಾಂತ. ಹೇಗಿದ್ದರೂ ಜನಪ್ರಿಯನಲ್ಲವೆ? 'ಭಯಂಕರ ಪ್ರಾಣಿ ಈತ; ಸಹವಾಸ ಯಾವಾಗಲೂ ನಷ್ಟದ ಬಾಬ್ತೇ' ಎಂದು ತಿಳಿದಿದ್ದರೂ ಕೂಡ ಸ್ನೇಹಿತರು ಇವನ ಕೈ ಬಿಡುವುದಿಲ್ಲ. ಅವರನ್ನು, ಗಟ್ಟಿಯಾಗಿ, ನುಣುಚಿಕೊಳ್ಳದಂತೆ ಹಿಡಿದಿರುತ್ತಾನೆ ಜನಪ್ರಿಯ. ಜನಪ್ರಿಯನ ಜನಪ್ರಿಯತೆಯ ಗುಟ್ಟು ಅಲ್ಲಿದೆ !"

# ಹಳ್ಳಿ ಶಾಲೆ

ಹಳ್ಳಿಗಾಡು, ಹಳ್ಳಿವೈದ್ಯ, ಹಳ್ಳಿಶಾಲೆ ಇತ್ಯಾದಿ ಶಬ್ದಗಳಿಗೆಲ್ಲ ಸುಪ್ರಸಿದ್ಧ ನಿಘಂಟು ಕರ್ತರಾದ ಶ್ರೀಮಾನ್ ಶಿವಪ್ಪಶಾಸ್ತ್ರಿಗಳ ಸರಿಗನ್ನಡ ಅ(ನ್ವ)ರ್ಥ ಕೋಶದಲ್ಲಿ ಸ್ಥಾನದೊರಕಿದೆ ಎನ್ನುವಾಗ ಹಳ್ಳಿಗೆ ಒಳ್ಳೆಯ ಪುರಸ್ಕಾರ ದೊರೆತ ಹಾಗಾಯಿತು. ಹಳ್ಳಿಯ ಸಾಂಸ್ಕೃತಿಕ ಕೇಂದ್ರವೇ "ಹಳ್ಳಿಶಾಲೆ".... ಇಲ್ಲಿ 'ಹಳ್ಳಿಶಾಲೆ' ಎಂದು Particular ಆಗಿ Point out ಮಾಡಿ ತೋರಿಸಬೇಕಾದ ಪ್ರಮೇಯವೇನು ಬಂತು ಎಂದರೆ, ಪೇಟೆಯಲ್ಲಿ, ಶಾಲೆಗಳಿಗೆ ಯಾವುದೇ ರೀತಿಯ ಸ್ಥಾನಮಾನಗಳಿಲ್ಲವಾದರೂ, ಹಳ್ಳಿಯಲ್ಲಿ ಹೆಚ್ಚಿನ ಪ್ರಾಶಸ್ತ್ಯವಿದೆ, ಪ್ರಾಮುಖ್ಯತೆಯಿದೆ ಎಂದು ತೋರಿಸಿಕೊಡಲಿಕ್ಕೆ ಇರಲಿ. ಪೇಟೆ ಶಾಲೆಯೆಂದರೆ, ತಂಟಲು ಮಾರಿ ಹುಡುಗರೂ, ಅವರ ದಾಂಧಲೆಯೂ, (ಇದೇ ವಿಷಯದ ಮೇಲೆ ತ್ರೈಮಾಸಿಕ ಪರೀಕ್ಷೆಯಲ್ಲಿ, ನಿಮಗೆ ಗೊತ್ತಿದ್ದ ಯಾವುದಾದರೊಂದು ವಿಷಯದ ಕುರಿತು ಪುಟ್ಟ ಪ್ರಬಂಧವೊಂದನ್ನು ಬರೆಯಿರಿ ಎಂಬ ಪ್ರಶ್ನೆಗೆ ಉತ್ತರವಾಗಿ ಪ್ರಬಂಧಿಸಿದ್ದೆನೆನ್ನಿ.) ಬಡಪಾಯಿ ಮೇಷ್ಟ್ರಗಳು, ಯಾಂತ್ರಿಕ ಕಾರ್ಯಕ್ರಮ– ಇವಿಷ್ಟರಲ್ಲಿಯೇ ಮುಗಿದು ಬಿಡುತ್ತದೆಯಾದರೂ, ಹಳ್ಳಿಶಾಲೆ ಎಂದರೆ ಮಾತ್ರ–ಥೇಟ್ ಹಳ್ಳಿಶಾಲೆಯೇ. ಶಾಲೆಯ ವರ್ಚಸ್ಸು ಪ್ರಭಾವ, ಕಾರುಬಾರುಗಳೆಲ್ಲ ಊರಮೇಲೆ ಅಪ್ರತಿಮವಾದುವು, ಪ್ರಭಾವಯುತವಾದುವು; ಅದ್ವಿತೀಯವಾದುವು ಹಾಗೂ ಅಮೋಘವಾದುವು ಮತ್ತು ಅದ್ಭುತವಾದುವು. ಆದ್ದರಿಂದಲೇ, "ಶಾಲೆ ಹಳ್ಳಿಯ ಕಣ್ಣು" ಎಂಬ ನಾಣ್ಣುಡಿ ಸಾರ್ಥಕವಾದ ಮಾತೇ ಆಗಿದೆ. ನಿಜವಾಗಿ ಹೇಳುವುದಾದರೆ, ಶಾಲೆ, ಹಳ್ಳಿಯ ಚೇತನಸ್ಥಾನ ('ಹೃದಯಂ ಚೇತನಸ್ಥಾನಂ' ಎಂದು ಸುಶ್ರುತಾಚಾರ್ಯರ ಶ್ರುತಿ ಇರಲಿ, ನಾವು ಕಣ್ಣನ್ನು ಚೈತನ್ಯಮಯ ಅಂಗವೆಂದು ಪರಿಗಣಿಸುವ) ಶಾಲೆಯು ಹಳ್ಳಿಯ ಸಾರ್ವಜನಿಕ ಕಾರ್ಯಕಲಾಪಗಳ ರಂಗಮಂಟಪ; ಚಟುವಟಿಕೆಗಳ ಕೇಂದ್ರ. ಹಳ್ಳಿಯಲ್ಲಿ ನಡೆದ ಯಾವುದೇ ಒಂದು ವಿಶೇಷದ ಸಂಗತಿಯಾದರೂ, ಅದು ಊರವರಿಗೆ ಸಿಕ್ಕಬೇಕಿದ್ದರೆ, ಶಾಲೆಯಲ್ಲಿ ಮೊತ್ತ ಮೊದಲು ಸಾಕಷ್ಟು ಜಗಿಯಲ್ಪಡಲೇಬೇಕು. (ಅನಂತರ, ವೃದ್ಧಾಧ್ಯಾಪಕರು ಉಗುಳುವ ಎಲೆ ಅಡಿಕೆಯ ಕೆಂಪುರಸದೊಂದಿಗೆ ರಂಗುರಂಗಾಗಿ ಊರವರಪಾಲಿಗದು ಕಾಣಿಸಬೇಕು) ಊರಲ್ಲಿ ಒಂದು ಸತ್ಯನಾರಾಯಣ ಪೂಜೆಯೋ, ತಾಳಮದ್ದಳೆಯೋ–

ಹತ್ತುಸಮಸ್ತರ ಸೇರುವಿಕೆಯಿಂದ ನಡೆಯಬೇಕಾದರೆ, ಅಲ್ಲಿಗೆ, ಶಾಲೆಯ ಬೆಂಚುಗಳು ಸಾಗದೆ ನಿರ್ವಾಹವಿಲ್ಲ. ಭೂತದ ಕೋಲಗಳು, ಪಂಜುರ್ಲಿಯ ವರ್ಷಾವಧಿಯ ಧರ್ಮನೇಮ, ಬೇಸಿಗೆಯ ಬಯಲಾಟಗಳು, ಮಳೆಗಾಲದ ಉತ್ಸವಗಳಾದ ಕೋಳಿ ಕಟ್ಟಗಳೇ ಮೊದಲಾದ, ಊರವರ ಸೇರುವಿಕೆಯಿಂದಾಗತಕ್ಕ ಸಾರ್ವಜನಿಕ ಕಾರ್ಯಕ್ರಮಗಳೆಲ್ಲವೂ ನಡೆಯುವುದಿಲ್ಲರೆ, ಆ ಜಾಗ ಶಾಲಾವತಾರವೇ; ಆಟದ ಅಂಗಣವೆ ಆ ಅತ್ಯಮೂಲ್ಯ ತಾಣ. ಸಂಜೆ-ಮುಸ್ಸಂಜೆಗಳಲ್ಲಿ ನಡೆಯುವ, ಊರಿನ, ಮುಂಡಾಸಿನ ಮುಖಂಡರ, ಪಂಚ್ಯಾತಿಗೆ (ಬೋರ್ಡಿನ) ಅನುದಿನದ ಸಾಮಾನ್ಯ ಸಭೆಗಳು ಶಾಲೆಯೊಳಗೇರ್ಪ ಡುವುದು ಸಂಪ್ರದಾಯ. ಶಾಲೆಯೆದುರಿಗೆ ಗದ್ದೆಯೊಂದಿದ್ದಿದ್ದರೆ, ಕೋಣಗಳ ಓಟವೂ ನಡೆದೇ ಬಿಡುತ್ತಿತ್ತು ಎನ್ನುವುದರಲ್ಲಿ ಸಂದೇಹವಿಲ್ಲ. (ದುರ್ದೈವ ವಶಾತ್ ನಮ್ಮ ಶಾಲೆಯ ಮುಂದಿರುವುದು, ಮೂರಡಿ ರಸ್ತೆ-ಅದೂ, ಮೈಸೂರಿನ ನೂರಡಿರಸ್ತೆಯನ್ನು ಮೂದಲಿಸುವಂತೆ- ಇದರಲ್ಲಿ ಈಗೀಗ ಸೈಕಲ್ ಓಟದ ಸ್ಪರ್ಧೆಗಳನ್ನು ಏರ್ಪಡಿಸಿ, ಸ್ವಲ್ಪದ್ದರಲ್ಲಿ ಸ್ವಾರಸ್ಯವನ್ನು ನಮ್ಮೂರವರು ಸವಿಯುತ್ತಿದ್ದಾರೆ.) ಹೇಗೂ ಇರಲಿ; ಹಳ್ಳಿಶಾಲೆ ಎಂದರೆ, ಹಳ್ಳಿಯ ಸಾಮಾಜಿಕ ವ್ಯವಹಾರಗಳ ಕೇಂದ್ರ ಎಂದು ಹೇಳಲು ಅಡ್ಡಿಯಿಲ್ಲವಷ್ಟೆ?

ಈ ಎಲ್ಲ ಗುಣಗಳ ಗಣಿಯಾಗಿ, ಸೌಕರ್ಯಶಿರೋಮಣಿಯಾಗಿ ರಾರಾಜಿಸುತ್ತಿರುವ ನಮ್ಮೂರ ಹಳ್ಳಿಶಾಲೆಯ ವಿಚಾರ ಒಂದಿಷ್ಟು ತಿಳಿಸಬೇಕೆಂದು ನನಗೊಂದು ಆಸೆಯುಂಟಾಗಿದೆ; ಆದರೆ, ಬಾಯಿಬಿಟ್ಟು ಅದನ್ನೆಲ್ಲ ಹೇಳುವಂತಿಲ್ಲ- ಬೈದು, ಬೈದೇ ನಮಗೆಲ್ಲ, ಅದೂ ಇದೇ ಹಳ್ಳಿ ಶಾಲೆಯಲ್ಲಿಯೇ ಕಲಿಸಿದ್ದಾರಲ್ಲ, ನದಿಮೂಲ, ಋಷಿಮೂಲ, 'ಗುರು ಮೂಲ'ಗಳನ್ನು ಹೇಳಬಾರದು. ಕೇಳಬಾರದು ಎಂದು. ತೀರ ಗುಟ್ಟಾಗಿಯೇ ಉಳಿಸಬೇಕಿರುವ ಈ ಸಮಾಚಾರವನ್ನು ನಾನು ನನ್ನ ಹೃದಯದ ನೆಲಮಾಳಿಗೆಯಲ್ಲಿ ಭದ್ರವಾಗಿ ಬಚ್ಚಿಡುವುದೂ ವಿಫಲ. ಏಕೆಂದರೆ, Open Heart ಎಂಬ ನನ್ನ ತೆರೆದ ಹೃದಯದಲ್ಲಿ, ಅದು ನಿಮಗೆ ತಾನೇ ತಾನಾಗಿಯಾದರೂ ಕಾಣಿಸದಿರುವುದಿಲ್ಲ. (ಶರ್ಟಿನ ಗುಂಡಿ ಹಾಕದೆ Open Heart ಆಗಿದೆ ನನ್ನದು !) ಆದ್ದರಿಂದ, ಪ್ರಪಂಚಕ್ಕೆಲ್ಲ ಸುಲಭವಾಗಿ ಕಾಣಬಹುದಾದ ಈ 'ತೆರೆದ ಹೃದಯದ ಮರೆಯ ಮುಚ್ಚ'ನ್ನು (Secreat of the open heart) ನಿಮ್ಮಿಂದ ಮರೆಮಾಚಿ, ಯಾವ ಮಹಾಸೌಭಾಗ್ಯ ಸಾಧಿಸಬೇಕಾಗಿದೆ ಹೇಳಿ? ಬಂದದ್ದೆಲ್ಲವು ಬರಲಿ, ಕೇಳುವ ಜನವೊಂದಾದರು ಇರಲಿ, ಅಷ್ಟೇ ಸಾಕು ಎಂದು, ವಿರಿಸುತ್ತೇನೆ. ಕೇಳಿ:

ಮಹಾಕವಿ ಎಂದು ಇಂಗ್ಲೀಷ್ ಜನಾಂಗದವರಿಂದ 'ಸೈ' ಎನ್ನಿಸಿಕೊಂಡ (ನಮ್ಮವರಂತೆ 'ಜೈ' ಅಲ್ಲ !) ಗೋಲ್ಡ್‌ಸ್ಮಿಥನು ತನ್ನ 'ಡೇಸರ್ಟ್ 'ವಿಲ್ಲೇಜ್' ಎಂಬ ಅಮರ ಕಾವ್ಯದಲ್ಲಿ ಹೇಳಿರುವಂತೆ- ಆ ಕಾವ್ಯ ಅಮರ ಕಾವ್ಯವಾದುದು ಹೇಗೆಂದು

ತಿಳಿಯಲು ನೀವು ಕುತೂಹಲಪಡುವಿರಲ್ಲವೇ, ಕೇಳಿ. ನನ್ನ, ಯಸ್.ಯಸ್.ಯಲ್.ಸಿ ಕ್ಲಾಸಿನ, ಪಠ್ಯಪುಸ್ತಕದಲ್ಲಿ ಆ ಕಾವ್ಯದೊಂದು ಭಾಗವಿತ್ತು. ಪಾಠರೂಪವಾಗಿ ಅದನ್ನು ವಿವರಿಸಿ, ವಿವರಿಸಿ ಬೆವರಿಸಿಕೊಂಡರೂ ಕೊನೆಗೂ, ನನ್ನ ತಲೆಯೊಳಗೆ ಅದನ್ನು ನುಗ್ಗಿಸಲಾರದೆ ಸೋತು, ಹಣ್ಣಾಗಿ, ಸುಣ್ಣವಾಗಿ, ಸಣ್ಣಗಾಗಿ, 'ಹೊಡೆದಲ್ಲಿ ಹೋಗದಿದ್ದರೆ, ಹೋದಲ್ಲಿ ಹೊಡೆಯುವ' ಗಾಡಿಯಾಳಿನ (ಸು) ಸೂತ್ರಕ್ಕೆ ಶರಣಾಗಿ ಸುಸ್ತ್ ಎಂದು ಸ್ವಸ್ಥ ಕುಳಿತುಬಿಟ್ಟಿದ್ದರು, ನಮ್ಮ ಸನ್ಮಾನ್ಯ ಪ್ರ.ಪ್ರ. ಪುಟ್ಟಯ್ಯ ಮಾಸ್ತರರು. ಸತ್ಯವನ್ನು ಒಪ್ಪಿಕೊಳ್ಳುವುದಾದರೆ, ಅವರ ಆ ಒಂದು ಪಾಠ (ಅದೊಂದೇ ಅಲ್ಲ, ಇತರ ಪಾಠಗಳೂ ಸಹ) ಕಿಂಚಿತ್ತೂ ಅರ್ಥವಾಗಲೇ ಇಲ್ಲ; ಎಳ್ಳಿನ ಏಳನೇ ಒಂದಂಶದಷ್ಟಾದರೂ ತಿಳಿಯಲಿಲ್ಲ. ಇದಕ್ಕಾಗಿ ಅಂದು ತುಂಬ ದುಃಖವುಂಟುಮಾಡಿ ಕೊಂಡಿದ್ದರೂ, ಇಂದು ನಾನು ಸಂತೋಷಪಡುತ್ತಿದ್ದೇನೆ. ಏಕೆಂದರೆ, ಅಂದು ಏನೇನೂ ಅರ್ಥವಾಗದ ಕಾರಣವೇ. ಆ ಕಾವ್ಯವಿಂದು ಅಮರ ಕಾವ್ಯವಾಗಿದೆ. ಒಂದುವೇಳೆ, ಅಷ್ಟೊ ಇಷ್ಟೊ ಅರ್ಥವಾಗಿ ಬಿಡುತ್ತಿದ್ದರೆ, ಅಷ್ಟನ್ನು ಪರೀಕ್ಷೆಗಾಗಿ ಓದಿ, ಪರೀಕ್ಷೆ ಮುಗಿದೊಡನೆ ಬಿಡುವ ಉಷ್ ಎಂಬ ಬಿಸಿಯುಸಿರಿನೊಂದಿಗೇ ಮರೆತುಬಿಟ್ಟು ನಿಶ್ಚಿಂತನಾಗಿಬಿಟ್ಟರೆ, ಆ ಕಾವ್ಯ ಸತ್ತುಹೋದಂತೇ ಅಲ್ಲವೇ? ಆದ್ದರಿಂದ, ಅಂದದು ಅರ್ಥವಾಗಿಲ್ಲ ಎಂಬುದರಿಂದ, ಇಂದಿಗೂ ಮರೆತು ಹೋಗಿಲ್ಲ ಎಂದೇ ಅಮರ ಕಾವ್ಯವೆಂದು ಹೇಳುತ್ತೇನೆ. ಇಂತಹ ಅಮರಕಾವ್ಯದಲ್ಲಿ ಆ ಕವಿ ಹೇಳಿದ್ದಾನೆ: 'Beyond the yon, near the hill ಎಂದು ಇತ್ಯಾದಿ........ ಅದನ್ನೇ ಕನ್ನಡದ ಕನ್ನಡಿಯಲ್ಲಿ ನೋಡಿದರೆ, ದಾರಿಯ ಹಿಂದಕೆ, ಗುಡ್ಡದ ಮುಂದಕೆ– ಛೇ, ತಪ್ಪಿದೆ, ಗುಡ್ಡದ ಮುಂದಕೆ। ದಾರಿಯ ಹಿಂದಕೆ। ನಿಂದಿದೆ ನಮ್ಮೊ । ಹಳ್ಳಿಯ ಶಾಲೆ॥ ಎಂಬ ಪ್ರತಿಬಿಂಬ ಕಾಣಿಸುತ್ತದೆ. ಇದೇ Style ನಲ್ಲಿ ನಮ್ಮೂರ ಹಳ್ಳಿಶಾಲೆಯೂ ಇದೆ ಎಂಬುದರಿಂದ, ಆ ಕವಿವರ ಗೋಲ್ಡ್‌ಸ್ಮಿಥನು ನಮ್ಮೂರ ಈ ಶಾಲೆಯನ್ನು ಕಂಡೇ, ಆ ಕಾವ್ಯ ಬರೆದನೋ ಎಂದು ನನಗೊಂದು ಸಂಶಯ ಬರುತ್ತದೆ. ಅಪೂರ್ವವಲ್ಲದ ಈ ಅನುಮಾನವನ್ನು ಆಮೂಲಾಗ್ರವಾಗಿ ಪರಿಶೋಧಿಸಿದರೆ, ಪ್ರಾಚೀನ, ಪ್ರಾಕ್ತನ, ಸಂಶೋಧನಾ.... (ದಿ) ಬಿರುದುಗಳು ದೊರಕಲೂ–ಬಹುದು, ಅದಂತಿರಲಿ.

ನಮ್ಮೂರ ಹಳ್ಳಿಶಾಲಾ ಕಟ್ಟೋಣವು– ಕಟ್ಟೋಣ ಎನ್ನುವುದು ಸಣ್ಣ ಮಾತಾಯಿತು, ಭವ್ಯಭವನವು– ಗುಡ್ಡದ ಮುಂದಕೆ, ದಾರಿಯ ಹಿಂದಕೆ ನಿಂದಿದ್ದು, ಅತ್ಯಂತ ಸುಂದರವಾಗಿ, ರಾಮಣೀಯಕವಾಗಿ, ಮನಮೋಹಿಸುವ ಚೆಲುವಿನ, ಬೆಡಗು ಗೂಡಾಗಿದೆ. ನಮ್ಮೂರ ಶಾಲೆಯಲ್ಲೇ ಸೇರುವ ತಾಳಮದ್ದಳೆಗಳ ಮಹಾ ಅರ್ಥ ದಾರಿಗಳ ವಾಕ್ಸರಣಿಯ ವಿಲಾಸ ವೈಭವದಲ್ಲುಸುರುವುದಾದರೆ: 'ಇಂಪಿನ, ತಂಪಿನ, ಪೆಂಪಿನ ಕೆಂಪು ಕೆಮ್ಮಣ್ಣಿನ ಸೊಂಪಾದ ಬಯಲಲ್ಲಿದೆ' ಪ್ರಪಂಚದಲ್ಲಿ

ಎಂಟನೆಯ ವೈಚಿತ್ರ್ಯವಿದೆಯೆಂದು ನಿರ್ಣಯವಾಗುವಾಗ, ಪ್ರಥಮ ಪ್ರಾಧಾನ್ಯತೆಯನ್ನು ನಮ್ಮೀಶಾಲೆ ಪಡೆಯಲರ್ಹವಾಗಿದೆ ಎಂಬ ನಂಬಿಕೆ ನನಗಿದೆ. ಮಹಾಕವಿ ಕಾಳಿದಾಸನು, ತನ್ನ ಅಮೋಘಕೃತಿಯಾದ 'ಶಾಕುಂತಳ'ದಲ್ಲಿ ಹೇಳಿರುವಂತೆ (ಸ್ವರ್ಗದ ಸೌಂದರ್ಯವೂ, ಮರ್ತ್ಯದ ಮಾಧುರ್ಯವೂ ಒಂದೆಡೆ ಸೇರಿದ್ದರೆ, ಅದು ಶಕುಂತಳೆಯಲ್ಲಿ ಎಂಬಂತೆ) ಹಂಚಿನ ಛಾವಣಿಯ ಮಾಧುರ್ಯವೂ, ಹುಲ್ಲಿನ ಹೊದಿಕೆಯ ಸೌಂದರ್ಯವೂ ಒಂದೆಡೆ ಸೇರಿದ್ದರೆ, ಅದು ನಮ್ಮೂರಿನ ಈ ಹಳ್ಳಿಶಾಲೆಯಲ್ಲಿ. ಗೋಡೆಯೂ ಅರ್ಧಾಂಶ ಕಲ್ಲಿನ ರಚನೆಯಾದರೆ, ಉಳಿದದ್ದು ಮಣ್ಣಿನ ಸೃಷ್ಟನೆ. ನೆಲ-ಕೂಡಾ ಹಾಗೆಯೇ; ಸ್ವಲ್ಪ ಭಾಗ ಸಿಮೆಂಟ್ ಹಾಕಿ, ಉಳಿದ ಜಾಗ ಸೆಗಣಿ ಸಾರಿಸಿದೆ.

ಈ ಪರಿಯ ಸುಸಜ್ಜಿತ ಸೌಧ ನಮ್ಮ ಶಾಲೆ. ಮೊದಮೊದಲು, ಕೋದಂಡ, ಪರಂಗಿಮಣೆ, ಉಬ್ಬೆಗಳಿಗಾಗಿ ಜಸವಡೆದ ಐಗಳ್ ಮಠವಾಗಿ ನಮ್ಮ ಶಾಲೆ ಇತ್ತಂತೆ. ಆದರೆ, ಇಂದು ಇಲ್ಲಿ ಪ್ರಸಿದ್ಧವಾಗಿರುವ ರಿಂಗ್ ಟೆನ್ನಿಸ್, ಕೇರಂ, ಫುಟ್‌ಬಾಲ್, ಕ್ರಿಕೆಟ್‌ಗಳು ಇದೊಂದು ಮೀಡಿಯಂ ಮಿಡ್ಲ್‌ಸ್ಕೂಲ್ ಎಂದು ಘಂಟಾಘೋಷವಾಗಿ ಸಾರುತ್ತಿವೆ. ಐಗಳೆಲ್ಲ ಮೈಗಳ್ಳರೆಂದೆನಿಸಿಕೊಂಡನಂತರ, (ಕಾಲನಿರ್ಣಯ ಬೇಕಾದರೆ, ಶ್ರೀ ಕಾರಂತರ ಮರಳಿಮಣ್ಣಿಗೆಯನ್ನು ಓದಿ.) ಹಾಯರ್ ಟ್ರೈಂಡ್ ಅಧ್ಯಾಪಕರೊಬ್ಬರು ಇಲ್ಲಿಗೆ ಬಂದು ಹಾಯಾಗಿ ಬೀಡುಬಿಟ್ಟು, ನಮ್ಮೂರಿಗೂ ಇಂಗ್ಲೀಷ್ ದಾನಮಾಡುವ ಪುಣ್ಯವನ್ನಷ್ಟು ಕಟ್ಟಿಕೊಂಡರು; ಅದಕ್ಕೂ ಮಿಕ್ಕಿ, ಐಗಳ ಪರಂಗಿಮಣೆಗಳ ಶಿಕ್ಷೆಗೊಳಗಾಗಿ ನರಕ ಯಾತನೆ ಪಡುತ್ತಿದ್ದ ಮಕ್ಕಳ ಬಂಧ ವಿಮೋಚನೆಗೆ ಕಾರಣೀ (ಕ) ಭೂತರಾಗಿ ಸತ್ಪುಣ್ಯ ಕಟ್ಟಿಕೊಂಡು ಶ್ಲಾಘನೆಗೊಳಗಾದರು. ದಿನವಿಡೀ ಕೈಯಲ್ಲಿ ಬೆತ್ತ ಹಿಡಿದುಕೊಂಡೇ, ಆ ಅಧಿಕಾರದಂಡದ ಬಲ ಬೆಂಬಲಗಳಿಂದಲೇ (ಬೆಂಬಲ=ಏಟು ತಿಂದು ಸಹಿಸಿಕೊಳ್ಳಲು ಮಕ್ಕಳಿಗಿರುವ ಗಟ್ಟಿಯಾದ ಬೆನ್ನಿನ ಬಲ) ಶಾಲೆ ನಡೆಸುತ್ತಿದದ ಇವರ ಪೆಟ್ಟಿನ ರುಚಿಯುಂಡ ವಿದ್ಯಾರ್ಥಿಗಳು ಇವರಿಗೆ "ಪೆಟ್ಟುಮಾಸ್ತರರು" ಎಂದು ನಾಮಕರಣ ಮಾಡಿದರು. ಈ ಹೆಸರು ಎಷ್ಟು ಚೆನ್ನಾಗಿ ಒಪ್ಪುತ್ತದೆ ಎಂದರೆ, ಈಗ, ಊರಿನವರಿಗೆಲ್ಲರಿಗೂ, ಪೆಟ್ಟು ಮಾಸ್ತರರು ಎಂದೇ ಗೊತ್ತು ವಿನಃ ಅವರ ನಿಜನಾಮಧೇಯವೇ ಮರೆತು ಹೋಗಿದೆ. ಈ ಸ್ವತಹ ಅವರಿಗೂ ನೆನಪಿಲ್ಲವಂತೆ ! ಹೀಗೆ ಸಾರ್ಥಕವಾಗಿದೆ ಈ ಅನ್ವರ್ಥನಾಮ.

ಕೆಲವು ಸಮಯದ ಹಿಂದೆ ಸ್ವಾರಸ್ಯವಾದ ಒಂದು ಘಟನೆ ನಡೆಯಿತು; ಯಾವುದೋ ಒಂದು ಅಗತ್ಯಕ್ಕಾಗಿ ಶ್ರೀಮರ್ಾ ಪೆಟ್ಟು ಮಾಸ್ತರರು ಒಂದು ತಿಂಗಳ ರಜೆ ಪಡಕೊಂಡಿದ್ದರು. ಅವರ ಬದಲಿಗೆ, ಹೊಸಬರೊಬ್ಬರು ಬಂದರು. ದುರ್ದೈವವಶಾತ್ ಅವರ ಹೆಸರು, "ಐಗಳ್ ಮಾಸ್ತರ ರೆಂಬುದಾಗಿತ್ತು ! 'ಐಗಳ್' ಎಂಬ ಹೆಸರು ಕೇಳಿದೇ ತಡ, 'ಇವರು ನಮಗೆ ಬೇಡ' ಎಂದು- ವರಾತಹಿಡಿದು

ಅವರನ್ನು ಶಾಲೆಗೆ ಬರಲು ಬಿಡಲೇ ಇಲ್ಲ ಹುಡುಗರು ! ಅಂತೂ, ಹಳೆಯ ಐಗಳಿಗಿಂತ ಹೊಸ ಪೆಟ್ಟು ಮಾಸ್ತರರೇ ಜನಪ್ರಿಯವಾದರು.

ಹೀಗೆ ನಮ್ಮೂರಿಗೆ ಶಾಲೆಯಾಯಿತು; ಮಾಸ್ತರರಾದರು, ವಿದ್ಯಾರ್ಥಿಗಳೂ ಆದರು. ವರ್ಷಕಳೆಯುವುದು- ಪಾಸಾಗುವುದು ಇವೆಲ್ಲ ಸ್ವಾಭಾವಿಕವಾಗಿ ಸಂಭವಿಸಿದುವು. ನನ್ನಂತಹ ಕೇವಲ ಕೆಲವೇ ಮಂದಿ ಮಹಾಮೇಧಾವಿಗಳನ್ನುಳಿದು, ಇತರರೆಲ್ಲರೂ ವರುಷ ವರುಷ ಮೇಲ್ತರಗತಿಗೆ ಓಡುತ್ತಾ ಕೊನೆಗೊಮ್ಮೆ, 'ಎಲ್ಲವೂ ಮುಗಿಯಿತಲ್ಲಾ, ಹ್ಯಾ, ಈ ಸ್ಕೂಲೇ' ಎಂದು ವ್ಯಥಾತೀತರಾಗಿ ಮರುಗಿ, ಕರಗಿ, ಕಣ್ಣೀರ್ಕರೆದು, ಹೊಟ್ಟೆಯ ಹುಳುಕನ್ನೆಲ್ಲ ಹೊರಗೆಡಹುತ್ತಿದ್ದ, ಕೊನೆಯ 'ಸೋಷಿಯಲ್ ಗ್ಯಾದರ್', (ಬೀಳ್ಕೊಡೆಗೆ ಎಂದು ಕನ್ನಡದಲ್ಲಿ ಹೇಳುತ್ತಾರಲ್ಲ ಅದೇ, ಇಂಗ್ಲೀಷ್ ಉಡುಗೆಯಲ್ಲಿ!) ನ್ನು ನೋಡಿ ಪೂರ್ವಾಪರ ವಿಚಾರಿಸಿ, 'ನಿಧಾನವೇ ಪ್ರಧಾನ'ವೆಂಬ ಮಾತಿಗೆ ಪ್ರಾಮುಖ್ಯತೆ ಕೊಟ್ಟು, ಕ್ಲಾಸ್‌ಕ್ಲಾಸಿನಲ್ಲಿಯೂ, ಮೂರು ಮೂರು ವರುಷಗಳಿಗಿಂತ ಕಮ್ಮಿಯಿಲ್ಲದಂತೆ ಕಾಲ ಕಳೆದ ಅನುಭವ ನಮ್ಮದು; ಹಲವಾರು ನಮಗಿಂತ ಜೋರಾಗಿ ಓಡಿ ಓಡಿ ತುದಿ ಮುಟ್ಟಿದರು. ನಾವೂ ಸಾವಧಾನವಾಗಿಯಾದರೂ ಗುರಿಗೆ ತಲಪದಿರಲಿಲ್ಲವೆನ್ನಿ' ಆಗ ಅನುಭವದಿಂದಲೇ ನಾವು ಕಲಿತು, ಈಗ ಹೇಳುವಗಾದೆ; 'ವೇಗವಾಗಿ ಓಡುವ ಮೊಲಕ್ಕಿಂತಲೂ ನಿಧಾನವಾಗಿ ನಡೆಯುವ ಆಮೆಯೇ! ಶ್ರೇಷ್ಟ' ಗಾದೆ ಅನುಭವದ ಕುಲಿಮೆಯಲ್ಲಿ ಕಾಯ್ದು ಬಂದ ಚಿನ್ನದ ಚೂರು. ಈ ಅದಂತಿರಲಿ.

ನಮ್ಮ ಶಾಲೆಯಲ್ಲಿ ಒಟ್ಟು ಎಂಟು ಕ್ಲಾಸುಗಳು. ಈ ಪೈಕಿ, 1, 2, 3 ಇವು ತೀರ ಹೀನಾಯದವು. 6, 7, 8 ಇವು ಮಹತ್ವವಾದುವು. ಆದರೆ ನಾನು ಹೇಳುವುದಾದರೆ 4, 5 ನೇ ಕ್ಲಾಸುಗಳೇ ಅತ್ಯಂತ ಶ್ರೇಷ್ಠವಾದವು. ಸಾಮಾನ್ಯವಾಗಿ 6, 7, 8 ನೇ ಕ್ಲಾಸಿನ ವಿದ್ಯಾರ್ಥಿಗಳೇ 1, 2, 3 ನೇ ಕ್ಲಾಸಿನ ಮಕ್ಕಳಿಗೆ ಪಾಠಮಾಡುವ ಸಂಪ್ರದಾಯ. ಮಾಸ್ತರರ ಪಾಠ ಆ 4–5 ನೇ ಕ್ಲಾಸುಗಳಿಗೆ ಮಾತ್ರ, ಹೇಗೂ ಇರಲಿ. ನಾನು 1 ನೇ ಕ್ಲಾಸ್ ಎಂದು ಹೇಳಿ 3 ನೇ ಕ್ಲಾಸಿನಲ್ಲಿ ಕುಳಿತಿರುತ್ತಿದ್ದೆ. ನಮಗೆ (ಈ ಹೀನಾಯವಂತೀಯರಿಗೆ) ಚಾಪೆಯ ಮೇಲೆ ಕುಳಿತುಕೊಳ್ಳ ಬೇಕಿತ್ತು. ಮೇಲಿನ ಕ್ಲಾಸಿನವರಂತೆ ಬೆಂಚ್, ಡೆಸ್ಕುಗಳಿರಲಿಲ್ಲ. ನಮ್ಮ ಮಾಸ್ತರಿಗಂತೂ ಅಷ್ಟೇ, ಚಿಕ್ಕದೊಂದು ಸ್ಟೂಲೇ ಸಿಂಹಾಸನವಾಗುತ್ತಿತ್ತು. ಅಪ್ಪಿ ತಪ್ಪಿ ಪೆಟ್ಟುಮಾಸ್ತರರು ವರುಷಕ್ಕೊಮ್ಮೆಯೋ ಆರು ತಿಂಗಳಿಗೊಮ್ಮೆಯೋ ಬಂದು ಒಂದೆರಡು ಪಾಠಗಳನ್ನು ಮಾಡುತ್ತಿದ್ದರು. ಆಗ ಮಾತ್ರ, ಈ ಚಾಪೆ, ಸ್ಟೂಲುಗಳನ್ನೇ ಎದುರಿಗೆ ಇರಿಸಿ, 'ಬಾ, ಪುರುತಿ ಬಾ, ಚಾಪೆ ಇದೆ, ಮಣಿಯಿದೆ (ಸ್ಟೂಲಿದೆ) ಕುಳಿತುಕೋ' ಎಂಬ ಕತೆಯನ್ನು ಹೇಳುತ್ತಿದ್ದರು. ನಮ್ಮ ಶಾಲೆಯ ಅರ್ಧಹಂಚಿನ ಅರ್ಧಹುಲ್ಲಿನ ಛಾವಣಿಯ ಕೆಳಗೆ

ನಿಂತೇ ನಾವೆಲ್ಲ, 'ಹಂಚಿನ ಮಾಡು ಒಳ್ಳೇದೋ, ಹುಲ್ಲಿನ ಮಾಡು ಒಳ್ಳೇದೋ-' ಎಂದು ವಾಗ್ವರ್ಧಕ ಸಭೆಗಳಲ್ಲಿ ಚರ್ಚಿಸುತ್ತಿದ್ದೆವು.

ಶಾಲೆಯ ನಾಲ್ಕು ನಿಟ್ಟಿನ ಗೋಡೆಗಳ ಮೇಲೆ ನೋಟ ಬೀರಿದರೆ ಅನೇಕಾನೇಕ ಚಿತ್ರ ವಿಚಿತ್ರ ಪಟಗಳನ್ನು ಕಾಣಬಹುದು. ಸಕಲ ಫಲ ವಸ್ತುಗಳ, ಪ್ರಾಣಿ ಪಕ್ಷಿಗಳ ಬಣ್ಣ ಬಣ್ಣದ ಚಿತ್ರಗಳಿವೆ. ವರ್ಷದ ಸರಾಸರಿ ಮಳೆಯ 'ಪಟ್ಟಿ', ರಜಾದಿನಗಳ 'ಲೆಖ್ಖ' ಎಂದು ಅವಸರದಲ್ಲಿ ಒಂದರ ಶಬ್ದ ಇನ್ನೊಂದಕ್ಕೆ ತಬ್ಬಿಬ್ಬಾಗಿ ಬರೆಯಲ್ಪಟ್ಟಕೆಲವು ತೂಗುಪಟ್ಟಿಗಳೂ ಎಂದು ಹೇಳುವ ಹಾಗಿಲ್ಲ ಪೂರ್ವ ಪಶ್ಚಿಮಗಳ ಸಂಗಮ ಕ್ಷೇತ್ರವೇ ಅದು. ಹಳ್ಳಿಯ ಸಚೇತನಸ್ಥಾನ; ದಿಗಂತವ್ಯಾಪಿ ಕೀರ್ತಿಪ್ರಕೀರ್ತಿತ, ಸರ್ವ ವಿಧಗಳಿಂದಲೂ ಸುಪ್ರಸಿದ್ಧವಾದುದೇ- ಎಂಬುದರಿಂದಲೇ, ನಾನೆನ್ನುತ್ತೇನೆ. ಹಳ್ಳಿ 'ಶಾಲೆ- ಒಳ್ಳೆಯ ಶಾಲೆ' ಎಂದು. ನೀವೂ ದನಿಗೂಡಿಸುವಿರಲ್ಲವೆ?

**ಜಯ್ ಹಿಂದ್ !**

# ಮೊದಲ ದಿವಸದ ಲತ್ತೆ

ವ್ಯಾಪಾರವಿರಲಿ, ಉದ್ಯೋಗವಿರಲಿ, ವಿವಾಹವಿರಲಿ– ಮೊದಲ ದಿವಸ ಪ್ರಾಮುಖ್ಯವಾದುದು. ಅದರಲ್ಲೂ ಪ್ರೈವೇಟ್ ಪ್ರಾಕ್ಟೀಸಿಗೆ ತೊಡಗುವ ಪೊಸ ವೈದ್ಯನಿಗಂತೂ ಮೊದಲ ದಿವಸದ 'ಬೋಣಿ'ಯ ಪ್ರಾಮುಖ್ಯತೆ ಅಷ್ಟಿಷ್ಟಲ್ಲ. 'ಒಂದೊಂದು ಕ್ಲಾಸಿನಲ್ಲೂ ಎರಡೆರಡು ಸಪ್ಲಿಮೆಂಟರಿ (ಪರೀಕ್ಷೆ) ಕಟ್ಟುತ್ತಿದ್ದ– ತುಂಬಾ ತಿಳುವಳಿಕೆಯಿರಬೇಕು' ಅಂತ ಕೆಲವರೂ, 'ಮೊದಲೇ ತಲೆಹರಟೆ; ಗೀಚುಗೂಳಿ; ಈಗ ನೋಡಿನ್ನು– ಪೆನ್ನು ಹಿಡಿದು ಇಂಜೆಕ್ಷನ್ ಚುಚ್ಚಿ, ಸಿರೆಂಜ್ ಹಿಡಿದು ಹೆಸರು ಬರೆಯುವ 'ಕಮಾಲ್' ನಡೆಯಲಿದೆ' ಎಂದು ಇನ್ನು ಕೆಲವರೂ ಒಳಗೊಳಗೇ ಮಾತಾಡಿಕೊಳ್ಳುತ್ತಿದ್ದುದು ನನಗೆ ತಿಳಿದರೂ ಲಕ್ಷ್ಯಗೊಡದೆ, ಊರಲ್ಲಿ ಚಿಕಿತ್ಸಾಲಯ ತೆರೆಯುವ ನಿರ್ಧಾರ ಮಾಡಿದೆ. ಎಷ್ಟಾದರೂ ಹುಟ್ಟೂರಲ್ಲವೆ?

ನಮ್ಮೂರು ಒಂದು ಹಳ್ಳಿ. ಕರಾವಳಿಯ ಕರೆಗೂ ಮಲೆನಾಡ ಸೆರಗಿಗೂ ನಡುವೆ ನಗರದಿಂದ ದೂರವಾಗಿ, ಕಾಡುಗುಡ್ಡದ ಕಣಿವೆಯಾಗಿದ್ದು, ಗಿಡಬರಮಳ್ಳಿ– ಕ್ಷಮಿಸಿ, ಗಿಡಮರಬಳ್ಳಿಗಳಿಂದಲೂ, ಹೊಲಮನೆ ತೋಟಗಳಿಂದಲೂ, ತೋಡು ಹಳ್ಳ ಪಳ್ಳಗಳಿಂದಲೂ, ಕುಮೇರಿ ಕಾಪಿಕಾಡು ಕೊಳಂಜಿಗಳಿಂದಲೂ, ದಟ್ಟಿಗೆ ಗುಡಿಸಲು ಕೊಟ್ಟಿಗೆಗಳಿಂದಲೂ, ಮನೆ ಬಿಡಾರ ಗುಡಾರಗಳಿಂದಲೂ ಕೂಡಿದ ಒಂದು ಕೊಂಪೆ– ನಿಜವಾಗಿ ಹೇಳಬೇಕಾದರೆ ಕುಗ್ರಾಮ! ಊರ ಹೊರಗೆ ಮಾರಿಗುಡಿ; ಅದರಾಚೆಗೆ ಗುಡ್ಡದ ಹಿಂದಕ್ಕೆ– ರಸ್ತೆಯ ಮುಂದಕೆ– ಛೆಛೆ ತಪ್ಪಿದೆ, ಕ್ಷಮಿಸಿ, ರಸ್ತೆಯ ಹಿಂದಕೆ, ಗುಡ್ಡದ ಮುಂದಕೆ ಪ್ರಾಥಮಿಕ ಶಾಲೆ; ಪಕ್ಕದಲ್ಲಿ 'ಜೈ ಹನುಮಾನ್ ವ್ಯಾಯಾಮ ಮಂದಿರ.' ಎರಡು ಪೋಟೆಲುಗಳು, ಅಂಗಡಿಗಳು, 'ಭಂಡಸಾಲೆ' ಎಂಬ ದಿನಸಿನ ಅಂಗಡಿ, ಬಟ್ಟೆ ವಿಕ್ರಯ ಶಾಲೆ ಮತ್ತು ಪೋಸ್ಟಾಫೀಸ್– ಪೋಸ್ಟ್‌ಮಾಸ್ಟರು, ಟೈಲರು, ಜರ್ನಲಿಸ್ಟ್, ಮನಿಲೆಂಡರು ಮತ್ತು 'ಆರ್ಟಿಸ್ಟ್ ಕಂಬೈಂಡ್' ಆದಂಥ ಬಾಬು ಪೈಗಳು! ಬಣ್ಣದ ಕುಂಚ ಹಿಡಿದು ಎಂಥ ವರ್ಣಚಿತ್ರ ಬಿಡಿಸಿದರೂ ತಮ್ಮ ಕುಲದೇವರಾದ ಹನುಮಂತರಾಯನ ಮುಖದ ವರ್ಚಸ್ಸನ್ನು ತಪ್ಪದೆ ಕಾಣಿಸುವ ಮಹಾನ್ ಕಲಾವಿದರು ನಮ್ಮ ಪೈ ಮಹಾಶಯರು! ಅವರು ಯಕ್ಷಗಾನ ಭಾಗವತರು ಬೇರೆ! ಅಲ್ಲದೆ ಚತುರ್ಭಾಷಾ ಪಂಡಿತರು.

ಬೋರ್ಡ್ ಬರೆಸಿದ್ದಾಯಿತು

ಸ್ಥಳೀಯ ಕಲಾಪ್ರತಿಭೆಯನ್ನು ಕಡೆಗಣಿಸಿದ ಅಪವಾದ ಬರಬಾರದೆಂದು ಮುಂಜಾಗ್ರತೆವಹಿಸಿ 'ಕಲಾಕುಂಜ'ದ ಬಾಬು ಪೈಗಳ ಕುಂಚದಿಂದಲೇ 'ಬೋರ್ಡ್' ಬರೆಯಿಸಲು ನಿರ್ಧರಿಸಿ 35 ರೂಪಾಯಿಗಳನ್ನು ಮುಂಗಡವಾಗಿಯೇತೆತ್ತೇ. ಆಸ್ಪತ್ರೆ ಪ್ರಾರಂಭಿಸುವ ದಿವಸ ಬಹಳ ದೂರವಿಲ್ಲದ್ದರಿಂದ 'ಜರೂರಾಗಿ ಬೋರ್ಡ್ ಪೈಂಟಾಗಬೇಕು' ಎಂದು ವಿನಂತಿಸಿಕೊಂಡೆ. "ಆ ಸಂಗ್ತಿ ಬಿಡಿ ಡಾಕ್ಟ್ರೇ, 'ಶಾಪ್ ಓಪನಿಂಗ್'ಗೆ ಸರಿಯಾಗಿ 'ಬೋರ್ಡ್' ಹಾಜರ್ ಮಾಡಿದರೆ ಸಾಕಲ್ಲವೋ ನಿಮಗೆ?" ಎಂದು ದೃಢ ಆಶ್ವಾಸನೆ ನೀಡಿದರು ಪೈಗಳು. ನಿಶ್ಚಿಂತನಾಗಿ ನಾನು ಇತರ ವ್ಯವಸ್ಥೆಗಳತ್ತ ಗಮನಹರಿಸಿದೆ.

ಆಶ್ವಾಸನೆಯಂತೆಯೇ ನಡೆದುಕೊಂಡರು ಪೈಗಳು.

ಒಂದು ಶುಭವಾರ, ಶುಭದಿವಸ, ಶುಭನಕ್ಷತ್ರ, ಶುಭಕರಣ, ಶುಭ ಮುಹೂರ್ತದಲ್ಲಿ, ರಾಹುಕಾಲ ಕಳೆದ ಮೇಲೆ, ಗುಳಿಗಕಾಲ ಬರುವುದಕ್ಕೆ ಮುಂಚಿತವಾಗಿ ಪುರೋಹಿತ ಶಂಕರಶಾಸ್ತ್ರಿಗಳೂ, ಪಂಚಾಂಗದ ಪರಮೇಶ್ವರ ಜೋಯಿಸರೂ, ಬೆರಳುಮಡಿಸಿ, ಗುಣಿಸಿ, ಆಕಾಶನೋಡಿ, ನೆಲಕ್ಕೆ ಬಾಗಿ, ತಲೆ ಅಲ್ಲಾಡಿಸಿ, ಹಸಿರು ನಿಶಾನೆ ಬೀಸಿದ ಕೂಡಲೇ, ಶಾಲಾಬಾಲಕದಿಂದ 'ಗಜಮುಖನೆ ಗಣಪತಿಯೇ ನಿನಗೆ ಸದಾ ವಂದನೆ' ಎಂಬ ಪ್ರಾರ್ಥನೆ, ಧನ್ವಂತರಿ ಪೂಜೆ, ಲಕ್ಷ್ಮೀ ಸರಸ್ವತಿ ಮಂಗಳಾರತಿ, ಪ್ರಸಾದ ವಿನಿಯೋಗ (ಅನಂತರ ಕಾಫಿ- ಚಹ, ಉಪ್ಪಿಟ್ಟು, ಲಾಡು, ಪಾನ್‌ಬೀಡ, ಸಿಗರೇಟು ವಿತರಣೆ) ಇತ್ಯಾದಿತ್ಯಾದಿಗಳೆಲ್ಲ ಸಾಂಗವಾಗಿ ನೆರವೇರುತ್ತಿರಲು. ಮಟಮಟ ಮಧ್ಯಾಹ್ನ 12 ಗಂಟೆ ಠಣ್ ಅಂತ ಹೊಡೆಯುತ್ತಿರಲು, ಪೈಂಟರ್ ಪೈ ಮಹಾಶಯರು ಹಸೀ ಪೈಂಟಿನ ಹೊಸಾ ಬೋರ್ಡನ್ನು ಸ್ವತಃ ತಂದದ್ದಲ್ಲದೆ, ಗೋಡೆಗೊಂದು ಮೊಳೆಹೊಡೆದು (ಬೆರಳಿಗೆ ಸ್ವಲ್ಪ ಗಾಯ ಮಾಡಿಕೊಂಡು) ತೂಗಹಾಕಿಯೇ ಬಿಟ್ಟರು! ಆಸ್ಪತ್ರೆ ಉದ್ಘಾಟನೆಯಾಯಿತೆಂದು ಸಭಿಕರೂ ಚಪ್ಪಾಳೆ ತಟ್ಟಿದ್ದರು!!!

ಬೋರ್ಡಿನತ್ತ ದೃಷ್ಟಿಹಾಯಿಸಿ ಪ್ರೇಕ್ಷಕರು ಒಬ್ಬೊಬ್ಬರಾಗಿ ಮುಸುಮುಸು ನಗತೊಡಗಿದರು. ಅವರನ್ನು ನೋಡಿ ಮಕ್ಕಳು ಜೋರಾಗಿ ನಕ್ಕರು. ವೃದ್ಧರು ನಾಸಿಪುಡಿ ಏರಿಸುವ ನೆಪ ಮಾಡಿ ಕರವಸ್ತ್ರದ ಮರೆಯಿಂದ ನಕ್ಕರು; ಯುವಕರು ಬಿಸಿಲಿನ ಝಳದಿಂದ ಮರೆಯಾಗಲು ಗೋಡೆ ಕಡೆಗೆ ಮುಖ ತಿರುಗಿಸಿ ನಕ್ಕರು. ಒಟ್ಟಿನ ಮೇಲೆ ಸಾಂಕ್ರಾಮಿಕ ಜಾಡ್ಯದಂತೆ ನಗು ಕ್ಷಣಾರ್ಧದಲ್ಲಿ ಹಬ್ಬಿತು ! ಸಂಗತಿ ಏನೆಂದು ತಿಳಿದುಕೊಳ್ಳಲು ನಾನೂ ಬೋರ್ಡನ್ನು ಪರಿಶೀಲಿಸಿದೆ: ನಮ್ಮ ಪಂಡಿತವರೇಣ್ಯ ಕಲಾವಿದ ಮಹಾಶಯರು ಸುಂದರವಾದ ಕುಂಬಳಕಾಯಿಗಾತ್ರದ

ಅಕ್ಷರಗಳಲ್ಲಿ **'ಧನ್ವಂತರಿ ಚಿಕಿತ್ಸಾಲಯ'** ಎಂದು ಬರೆದು, ಗೋಕರ್ಣದಲ್ಲಿ ಕಲಿತ ತಮ್ಮ ವ್ಯಾಕರಣದ ಸಂಧೀ- ವಿಗ್ರಹ ಸಾಮರ್ಥ್ಯವನ್ನು ಸಾರ್ಥಕಗೊಳಿಸಿಬಿಟ್ಟಿದ್ದರು..... ಎಲ್ಲರ ಜತೆಗೆ ನಾನೂ ನಗತೊಡಗಿದೆ- ವಿಧಿಯಿಲ್ಲದೆ!

ಅಷ್ಟುಹೊತ್ತಿಗೆ ನಮ್ಮ ಕಂಪೌಂಡರು ಮಣಿ ಒಳಗಿನಿಂದ ಒಂದು ಗೋಣಿಚೀಲವನ್ನು ತಂದು, ಹಸಿ ಬಣ್ಣದ ಬೋರ್ಡಿನ ಮೇಲೆ ಬಿಸಿಲು ಮರೆಮಾಲೆಂದು ಮುಚ್ಚಿದ. ಅಂತೂ, ಇಂತೂ ಪ್ರಾರಂಭವಾಯಿತು- ನಮ್ಮೂರಿನಲ್ಲಿ ನನ್ನ ಸ್ವಂತ ದವಾಖಾನೆ!

**ಮೊದಲ ಗಿರಾಕಿ**

ಮಧ್ಯಾಹ್ನ ಕಳೆಯಿತು; ಅಪರಾಹ್ನ ಬಂತು; ಅದೂ ಕಳೆದು ಸಂಜೆ ಕಾಲಿಟ್ಟಿತು. 'ಆಸ್ಪತ್ರೆ ಪ್ರಾರಂಭವಾದ ಹಾಗೇ ಅಲ್ಲವೆ?' ಎಂದು ಅವರಿವರು ಬಂದು ಕುಳಿತು ಮಾತಾಡಿಸಿ, ದೇವರ ಪಟಗಳ ಸರಣಿಯ ಗೋಡೆಗಳನ್ನೂ, ಕಪಾಟು ತುಂಬಿದ ಔಷಧ ಸೀಸೆಗಳನ್ನೂ, ಇನ್ನಿತರ ಸಲಕರಣೆಗಳನ್ನೂ ನೋಡಿ, "ಭೇಷ್" ಎಂದು ತಲೆಯಲ್ಲಾಡಿಸಿ "ಬಹಳ ಸಾಮಾನು ತರಿಸಿದ್ಧೀರಿ" ಎಂದು ಶಹಭಾಸ್‌ಗಿರಿ ಕೊಟ್ಟು "ಇಷ್ಟು ರೂಪಾಯಿ ದಂಡ ಮಾಡಿದ. ಬೆಪ್ಪು ತಕ್ಕಡಿ" ಎಂದು ನನ್ನ ಭೋಳೇತನಕ್ಕೆ ಮನಸ್ಸಿನಲ್ಲಿಯೇ ನಗುತ್ತ ಹೋದರು. ಮೊದಲನೇ ದಿವಸ, ರಾಹುಕಾಲ, ಗುಳಿಗಕಾಲ ಎಲ್ಲ ತಪ್ಪಿಸಿಯೇ ಶಾಸ್ತ್ರೋಕ್ತ ಪೂಜೆ ಪುನಸ್ಕಾರ ನಡೆಸಿಯೇ ಪ್ರಾರಂಭಮಾಡಿದರೂ 'ಬೋಣಿ' ಮಾಡುವುದಕ್ಕೆ ಒಬ್ಬ ರೋಗಿಯೂ ಬರಲಿಲ್ಲವಲ್ಲ ಎಂದು ಪಿಚ್ಚೆನ್ನಿಸಿತು. "ರಾತ್ರಿ ಬಾಗಿಲು ಮುಚ್ಚುವವರೆಗೂ ಟೈಮಿದೆಯಲ್ಲಾ ಸಾರ್- ಬಂದೇ ಬರುತ್ತಾರೆ" ಎಂದು ಆಶಾವಾದಿಯ ಹಾಗೆ ಧೈರ್ಯಹೇಳಿದ ಕಂಪೌಂಡರ್ ಮಣಿ........ ಕತ್ತಲೂ ಆಯಿತು; ರೋಗಿಯ ಸುಳಿವೇ ಇಲ್ಲ!

ದೀಪ ಬೆಳಗಿಸಿದ್ದೂ ಆಯಿತು. ಗಮಗಮ ಸುವಾಸನೆಬೀರುವ 'ರಾಮಲೀಲಾ ಅಗರಬತ್ತಿ' ಹಚ್ಚಿ ಗೋಡೆಯ ಸಂದಿಗೆ ತುರುಕಿ, ಕರ್ಪೂರ ಉರಿಸಿ ಸಾಲುಪಟಗಳ ದೇವರುಗಳಿಗೆ ಆರತಿ ಮಾಡಲು ಮಣಿ ಪ್ರಾರಂಭಿಸುತ್ತಿದ್ದಂತೆಯೇ, ಹೆಡ್ ಮಾಸ್ತರ್ ಮಹದೇವ ಶಾಸ್ತ್ರಿಗಳು ಆಸ್ಪತ್ರೆಯ ಮೆಟ್ಟಲೇರಿ ಬಂದರು. 'ನೋಡಿದಿರಾ ನನ್ನ ಭವಿಷ್ಯವಾಣಿ' ಎಂಬ ಹಾಗೆ ಮೌನವಾಗಿ, ಒಂದು ಓರೆ ನೋಟಬೀರಿ ಕಂಪೌಂಡಿಂಗ್ ರೂಮಿನೊಳಕ್ಕೆ ಹೋದ ಕಂಪೌಂಡರ್. "ಯಾರಿಗೆ ಔಷಧಿ ಮಾಷ್ಟ್ರೇ" ಎಂದು ನಾನೇ ಮೊದಲು ಮಾತಾಡಿಸಿದೆ.

"ನಮ್ಮ ಹುಡುಗಿ ಸುಂದರಿ ಇದ್ದಾಳಲ್ಲವ್ರೋ ಡಾಕ್ಟರೇ, ಅವಳಿಗೆ ಸ್ವಲ್ಪ ಸೌಖ್ಯ ಇಲ್ಲಾಂತ ಕಾಣುತ್ತದೆ..... ಈಗ ನಾಲ್ಕು ದಿವಸದಿಂದ ಶಾಲೆಗೆ 'ಅಪ್‌ಸೆಂಟ್'- ಅಂತ ಇವತ್ತು ಹಾಜರಿ ಪುಸ್ತಕ ನೋಡಿದಾಗ ಕಂಡಿತು. ನಮ್ಮ ಮನೆಯಲ್ಲಿ ಇದೊಂದು ದೊಡ್ಡಪೀಡೆ- ಏನಾದರೂ ಗಂಡಸರಿಗೆ ಹೇಳುವುದಿಲ್ಲ ಈ ಹೆಂಗಸರು: ತಮ್ಮ ಬುದ್ಧಿವಂತಿಕೆ ಖರ್ಚು ಮಾಡಿ ಮೂಲಿಕೆ ಮಾಡುವವರೇ....." ಇತ್ಯಾದಿ ಇತ್ಯಾದಿ ಗೃಹಪುರಾಣವನ್ನೇ ಬಿಚ್ಚಿದರು ಪುಣ್ಯಾತ್ಮ!

"ವಾಂತಿಗೀಂತಿ ಏನಾದರೂ?" ವಿಷಯಕ್ಕೆ ನೇರವಾಗಿ ಎಳೆದು ತರಲು ಪ್ರಯತ್ನಿಸಿದೆ.

"ಛೆ, ಛೆ, ಅಂಥಾದ್ದೇನೂ ಇರಲಿಕ್ಕಿಲ್ಲ ಬಿಡಿ- ಅದೆಲ್ಲ 'ಕೂಲಂಕಶ' ನಾನು ವಿಚಾರಿಸಿಲ್ಲಾಂತ ಹೇಳುವ....... ಹುಡುಗಿ ಮಾತ್ರ ಹೊಟ್ಟೆಯ ಮೇಲೆ ಕೈ ಹಿಡಿದುಕೊಂಡು ಅಳುತ್ತಿತ್ತು ನೋಡಿ......." ರೋಗಿಯ ನರಳಾಟದ ನಿಜಚಿತ್ರವನ್ನು ತನ್ನ ಮೋರೆಯ ಮೇಲೆ ಪ್ರದರ್ಶಿಸಿದರು ಮಾಸ್ಟರ್ ಮಹಾಶಯರು.

"ಜ್ವರ?"

"ಜ್ವರಗಿರ ಏನೂ ಇರಲಿಕ್ಕಿಲ್ಲ- ಮೈ ಮಾತ್ರ ಸೊಲ್ಪ ಬೆಚ್ಚಗಿದೆ ಅಂತ ಅವಳ ಅಜ್ಜಿ ಹೇಳುತ್ತಿದ್ದಳು." ಎಂದು ರಾಗವೆಳೆದರು.

"ನೀವು ಸ್ವತಃ ನೋಡಿಕೊಂಡು ಬರಬಾರದಿತ್ತೇ?" ಅಂತ ಆಕ್ಷೇಪಿಸಬೇಕೆಂದು ನಾಳಿಗೆಯ ತುದಿವರೆಗೆ ಬಂತು- ಆದರೂ, ಕುಟುಂಬ ನಿಯಂತ್ರಣ ಆಪರೇಶನ್ ಮಾಡಿಕೊಳ್ಳುವ ಮೊದಲು ಹುಟ್ಟಿದ ಏಕಮಾತ್ರ ಕುಮಾರ ಕಂಠೀರವನಂತೆ 'ಬೋಣಿ'ಗೆ ಬಂದ (ಮೊದಲ) ಗಿರಾಕಿಯನ್ನು ಎದುರುಹಾಕಿಕೊಳ್ಳಲು ಇಷ್ಟಪಡದೆ, ಆಸೆಯನ್ನು ಅದುಮಿಕೊಂಡೆ.

"ಹೋಗಲಿ ಬಿಡಿ; ಸ್ವಲ್ಪಮಟ್ಟಿಗೆ ಜ್ವರ ಬಂದರೂ ಅಷ್ಟೆ, ಬಾರದಿದ್ದರೂ ಅಷ್ಟೆ- ಮಕ್ಕಳ ಮೈ ಸ್ವಲ್ಪ ಬಿಸಿಯಾಗಿಯೇ ಇರುವುದು ಸ್ವಾಭಾವಿಕ" ಎಂದು ಅವರ ಚರ್ಯೆಯನ್ನು ನಾನೇ ಸಮರ್ಥಿಸಿದೆ.

**ಕಂಪೌಂಡರ್, ಕಂಪೌಂಡರ್, ಈ ಕಂಪೌಂಡರ್!**

ರೋಗಿಯ ವಯಸ್ಸು, ಹೆಸರು, ವಿಳಾಸ ಮೊದಲಾದ ನಾನಾ ತಪಶೀಲುಗಳನ್ನು ವಿವರವಾಗಿ ಕೇಳಿಕೊಂಡು ಪುಸ್ತಕ (O.P.ರಿಜಿಸ್ಟರ್)ದ ಮೊದಲ

ಪುಟದಲ್ಲಿ ಸಮೂದಿಸಿದೆ ನಿಧಾನವಾಗಿ; 'ಏನು ಔಷಧಿ? ಏನೇನು ಪಥ್ಯ? ಎಂತೆಂತಹ ಪಾನೀಯ; ಎಷ್ಟೆಷ್ಟು ಗಂಟೆಗೆ'..... ಎಲೆಲಾ– ಎಷ್ಟೊಂದು ಅಡ್ಡ ಸುಂಗುವ ಪ್ರಶ್ನೆಗಳು ಎದುರಾಗುತ್ತವೆ? 'ಮಕ್ಕಳಿಲ್ಲದಿದ್ದರೆ ಒಂದೇ ಚಿಂತೆ, ಇದ್ದರೆ ನೂರೊಂದು ಚಿಂತೆ' ಎನ್ನುವ ಹಾಗೆ ಈತನಕ 'ಪೇಶೆಂಟ್ ಬರಲಿಲ್ಲ' ಎಂಬ ಒಂದೇ ಚಿಂತೆಯಿದ್ದರೆ, ಈಗ ಪೇಶೆಂಟ್ ದೊರಕಿದಾಗ ನೂರೊಂದು ಸಮಸ್ಯೆಗಳು ಏಕಾಏಕಿ ಪ್ರತ್ಯಕ್ಷವಾಗಬೇಕೆ! ಸಾಲದ್ದಕ್ಕೆ ಮೊದಲ ದಿನದ ಮೊದಲ ಗಿರಾಕಿ! ಶತಾಯಗತಾಯ– ಏನಾದರೂ ಮಾಡಿ, ಆಕಾಶಪಾತಾಳ ಒಂದು ಮಾಡಿಯಾದರೂ, 'ಠಮ್ಮನೆ ಗುಣವಾಗುವ' ಹಾಗೆ ಮದ್ದು ಕೊಡಬೇಕು...... "ಮಣೀ, ಏ ಮಣೀ" ಎಂದು ಗಟ್ಟಿಯಾಗಿ ಕರೆದೆ– ಮೇಜಿನ ಮೇಲಿದ್ದ ಕರೆಗಂಟೆಯನ್ನು ಎರಡು ಬಾರಿ ಬಾರಿಸಿದರೂ· ಕಂಪೌಂಡರ್ ಹಣಿಕಿಹಾಕದ್ದರಿಂದ. ಉಹುಂ– ಮಣಿಯ ಸುಳಿವೇ ಇಲ್ಲ.... ಕಂಪೌಂಡಿಂಗ್ ರೂಮಿನಲ್ಲೇ ಏನು– ಆಸ್ಪತ್ರೆಯ ಆವರಣದಲ್ಲೇ ಮಣಿ– ಕಂಪೌಂಡರ್ ಮಹಾಶಯ ಪತ್ತೆಯಿಲ್ಲ! ಐನ್‌ಟೈಮಿನಲ್ಲಿ– ರೋಗಿಗೆ ಔಷಧಿ ಕೊಡಬೇಕಾಗಿರುವ ಹೊತ್ತಿನಲ್ಲಿ ಪರಾರಿ ! "ಎಲ್ಲಿ ಹರಟೆಹೊಡೆಯುತ್ತ ಕುಳಿತಿದ್ದಾನೆಯೋ ಈ ತಿರುಗಾಡಿ.... ಕೆಲಸವಿರುವಾಗ ಮಂಗಮಾಯ! ಈಗ ಯಾರು ಬಾಟಲಿ ತೊಳೆಯಬೇಕು, ಮಾತ್ರೆ ಕಟ್ಟಿಕೊಡಬೇಕು, ಮಿಕ್ಸ್‌ಚರ್ ತಯಾರು ಮಾಡಬೇಕು? ಕು? ...ಕು?.... ಘಟಿಂಗ; ಬೇಜವಾಬ್ದಾರಿ ಮನುಷ್ಯ" ಎಂದು ಮುಂತಾಗಿ ಕಂಪೌಂಡರನನ್ನು ಮನಸ್ಸಿನಲ್ಲೇ ಶಪಿಸುವುದಕ್ಕೆ ಮೊದಲಿಟ್ಟೆ.

ಮಾಸ್ತರು ಇನ್ನೂ ನಿಂತೇ ಇದ್ದರು.

"ಸ್ವಲ್ಪಹೊತ್ತು, ಒಂದು ಐದು ಮಿನಿಟು ಕುಳಿತುಕೊಳ್ಳಿ ಮಾಷ್ಟ್ರೇ. ಮಣಿ ಎಲ್ಲಿಯೋ ಹೊರಗೆ ಹೋಗಿದ್ದಾನೆ– ಬಂದ ಕೂಡಲೇ ಔಷಧಿಕೊಟ್ಟು ಬಿಡುತ್ತಾನೆ." ಎಂದು ನಮ್ರ ವಿನಂತಿ ಸಲ್ಲಿಸಿದೆ. ನಾನು ವಿದ್ಯಾರ್ಥಿಯಾಗಿ ಆರನೇ ಕ್ಲಾಸಿನಲ್ಲಿ ಕಲಿಯುತ್ತಿದ್ದಾಗ, ಮನೆಲೆಕ್ಕದಲ್ಲಿ ತಪ್ಪುಮಾಡಿದ್ದಕ್ಕೆ ಕ್ಲಾಸಿನಿಂದ ಹೊರಗೆ ಹಾಕಿ, ಮಗ್ಗಿ ಬಾಯಿಪಾಠ ಬಾರದ್ದಕ್ಕೆ ಬೆಂಚುಮೇಲೆ ನಿಲ್ಲಿಸಿದ್ದು ನೆನಪಾಗಿ ಒಳಗಿಂದೊಳಗೆ ಒಂದು ಕ್ಷಣ ಹರ್ಷವಾಯಿತು – ಆದರೂ....

ಕಂಪೌಂಡರು ಬರಲಿಲ್ಲವೆಂದು ಗಿರಾಕಿಯನ್ನು– ಅದರಲ್ಲಿಯೂ ಮೊದಲದಿವಸದ 'ಬೋಣಿ' ಗಿರಾಕಿಯನ್ನು ಎಷ್ಟು ಹೊತ್ತು ಕಾದು ಕುಳ್ಳಿರಿಸಬಹುದು? ಸರಿ– 'ನಾನೇ ಕೊಟ್ಟು ಬಿಡುತ್ತೇನೆ' ಎಂದು ಹೇಳಿಕೊಂಡು ಒಳಗಿನ ಕೋಣೆಗೆ– ಕಂಪೌಂಡಿಂಗ್ ರೂಮಿಗೆ ಹೋದೆ. ಕಪಾಟಿನಲ್ಲಿದ್ದ 'ಪಾಕೆಟ್ ಬುಕ್ ಆಫ್ ಕ್ವಿಕ್ ಪ್ರಿಸ್‌ಕ್ರಿಪ್ಷನ್' ತೆರೆದು ಪುಟ ಮಗುಚಿದೆ; ಔಷಧಿಗಳ ಹೆಸರನ್ನು ಗುರುತಿಸಿ ಕೊಂಡು ಮಾತ್ರೆಗಳನ್ನು ತೆಗೆದಿರಿಸಿದೆ– ಈಗೀಗ ಈ 'ವಂಡರ್ ಡ್ರಗ್ಸ್'ಗಳಿಗೆ ರಿಯೇಕ್ಷನ್,

ಡ್ರಗ್ ರೆಸಿಸ್ಟೆನ್ಸ್, ಅಲರ್ಜಿ ಹೆಚ್ಚುತ್ತಿದೆ; ನನ್ನ ಮೊದಲ ರೋಗಿಗೇ ಅಂತಹ ದುರ್ದೆಸೆ ಪ್ರಾಪ್ತವಾದರೆ ನನ್ನ ಗತಿಯೇನು ಎಂದು ಗಾಬರಿಯಾಯಿತು. ಸರಿ, ಶತಶತಮಾನ ಗಳಿಂದ ನಡೆದು ಬಂದ ಆಯುರ್ವೇದ ಔಷಧಿಗಳನ್ನು ಕೊಟ್ಟುಬಿಟ್ಟರೆ ಹ್ಯಾಗೆ ಎಂದು ನನಗೆ ನಾನೇ ಪ್ರಶ್ನಿಸಿಕೊಂಡೆ; ಈ ಆಧುನಿಕ ಯುಗದಲ್ಲಿ ಆ ಕಡುಪಥ್ಯ, ಅನುಪಾನ ಯಾರ ಕೈಯ್ಯಲ್ಲಾಗುತ್ತದೆ ಮಾಡಲಿಕ್ಕೆ?... ಮನೆಮದ್ದು– ಮೂಲಿಕಯನ್ನೇ ನಂಬಿದರೆ...... ಛೆ, ಅದಕ್ಕಾದರೆ, ನನ್ನ ಹತ್ತಿರ, ವೈದ್ಯಕೀಯ ಕಾಲೇಜಿಗೆ ಮಣ್ಣುಹೊತ್ತು, ಡಿಗ್ರಿ ತೆಕ್ಕೊಂಡು, ಬೋರ್ಡ್ ಹಚ್ಚಿ ಶಾಪ್ ತೆರೆದ ಡಾಕ್ಟರ್ ಹತ್ತಿರ ಬರಬೇಕೆ ಅವರು?......

ಅಷ್ಟರಲ್ಲಿ ಪುನುಗುಬೆಕ್ಕಿನಂತೆ ಮುದುರಿಕೊಂಡು ಹಿಂಬಾಗಿಲಿನಿಂದ ಒಳ ಹೊಕ್ಕ ಮಣಿ. “ಎಲ್ಲಿಗೆ ಹೋಗಿದ್ದೆ ಇಷ್ಟುಹೊತ್ತು?– ಪಾಪ, ಮಾಷ್ಟ್ರು ಅರ್ಧ ಗಂಟೆಯಿಂದ ಕಾದಿದ್ದಾರೆ; ಬೇಗ ಔಷಧಿ, ಮಾತ್ರೆ ಎಲ್ಲ ತೆಗೆದುಕೊಟ್ಟು ಬಿಡು” ಎಂದು ಹೊರಗಿದ್ದ ಮಾಸ್ತರರಿಗೆ ಕೇಳಿಸುವಷ್ಟು ಗಟ್ಟಿಯಾಗಿ ಹೇಳಿದೆ.

ಐದು ನಿಮಿಷದಲ್ಲಿ ಮಾಸ್ತರರ ಕೈಗೆ ಔಷಧಿ ತುಂಬಿದ ಸೀಸೆ, ಮಾತ್ರೆಯ ಪೊಟ್ಟಣ ಎಲ್ಲವನ್ನೂ ನೀಟಾಗಿ ಚೀಟಿಹಚ್ಚಿ ತಂದುಕೊಟ್ಟ ಮಣಿ, “ಥ್ಯಾಂಕ್ಸ್ ಡಾಕ್ಟ್ರೇ” ಎಂದು ಹೇಳಿ, ಹಣ ತೆತ್ತು, ಮಾಸ್ತರು ಬೀಳ್ಕೊಟ್ಟರು.

“ಯಾವ ಸಂಗತಿಯನ್ನೂ ನಾಳೆ ಬೆಳಿಗ್ಗೆ ತಿಳಿಸಿ” ಎಂದು ವಿನಂತಿಸಿದೆ. “ಬೆಳಗ್ಗೆ ಒಂಭತ್ತು ಗಂಟೆಗೆ ದವಾಖಾನೆ ತೆರೆಯುತ್ತೇನೆ” ಎಂದು ಷರಾ ಬರೆದೆ. ಇಂದಿನ ಮಟ್ಟಿಗೆ ಕೆಲಸ ಮುಗಿಯಿತು ಎಂದು ಮಣಿ ದವಾಖಾನೆಯ ಬಾಗಿಲುಮುಚ್ಚಿ, ಬೀಗ ಹಾಕಿದ. “ಗ್ಯಾಸ್ಟ್ರೋ ಇಂಟೆಸ್ಟೈನಲ್ ಇನ್‌ಫೆಕ್ಶನ್ ಛಾಪ್ಟರನ್ನು ಮನೆಯಲ್ಲಿ ಓದಿಬಿಡಬೇಕು” ಎಂದು ಮನಸ್ಸಿನಲ್ಲೇ ನಿರ್ಧರಿಸಿಕೊಂಡು, ಈಗತಾನೇ ರೋಗಿಗೆ ಕೊಟ್ಟಿದ್ದ ಔಷಧಿ– ಆಯುರ್ವೇದ, ಅಲೋಪತಿ, ಹೋಮಿಯೋಪತಿ ಎಲ್ಲ ವೈದ್ಯ ಶಾಸ್ತ್ರಗಳ ಗ್ರಂಥಗಳಲ್ಲೂ ಹೇಳಿದ್ದ ಔಷಧಿಗಳನ್ನು ಕಂಬೈಂಡ್‌ಮಾಡಿ ತಯಾರಿಸಿ ನೀಡಿದ ಸಂಯುಕ್ತ ಚಿಕಿತ್ಸೆಯ ಬಗ್ಗೆ ಮೆಲುಕು ಹಾಕುತ್ತ ಮನೆಯ ಕಡೆಗೆ ಹೆಜ್ಜೆಹಾಕಿದೆ. ‘ನಾಳೆ ಸ್ವಲ್ಪ ಮಟ್ಟಿಗಾದರೂ ಗುಣ ಕಾಣಿಸದಿರಲಿಕ್ಕಿಲ್ಲ ಆ ಮಗುವಿಗೆ’ ಎಂದು ರೋಗಿಯ ‘ನಸೀಬಿ’ನ ಮೇಲೆ ಭರವಸೆ ಇರಿಸಿದೆ.

ಮರುದಿನ ಮುಂಜಾನೆ ಎಂಟಕ್ಕೇ ಆಸ್ಪತ್ರೆಗೆ ಹಾಜರಾದೆ. ಮಾಸ್ತರ ಮಗುವಿಗೆ ಹೇಗಿದೆಯೋ ರಾತ್ರಿ ಏನಾಗಿದೆಯೋ ಎಂಬ ಕಾತರ..... ರೋಗ ವಿಷಮಿಸಿ, ಡಿಹೈಡ್ರೇಶನ್, ಆಲಿಗ್ಯೂರಿಯ, ಎನ್ಯೂರಿಯ, ಎಸಿಡೋಸಿಸ್, ಡಿಲೀರಿಯಂ, ಸರ್‌ಕ್ಯುಲೇಟರಿಕೊಲ್ಯಾಪ್ಸ್– ಒಂದೇ, ಎರಡೇ– ಎಷ್ಟೊಂದು ಮೊಸಳೆಗಳು ಬಾಯಿತೆರೆದು ಕಾದಿದ್ದಾವೇನೋ ಆ ರೋಗಿಯನ್ನು ಕಬಳಿಸಿಬಿಡಲು, ಪಾಪ!....

ಅಲ್ಲಾ, ಈ ಮಾಸ್ತರು, ತಿಳಿದವರು, ವಿದ್ಯಾವಂತರು, ಇವರು ಕೂಡ ಹೀಗೆ ಮಾಡೋದೇ –ಥೇಟ್ ಹಳ್ಳಿ ಪೆದ್ದಂಭಟ್ಟರ ಹಾಗೆ!..... ಕಾಯಿಲೆ ಪ್ರಾರಂಭವಾದ ಕೂಡಲೇ ಔಷಧಿಗೆ ಬರುವುದು ಬಿಟ್ಟು, ಕೈ ಮೀರಿ ಹೋಗುವಷ್ಟು ಜೋರಾಗುವ ತನಕ ಮೂರು ಮೂರು ದಿವಸ ತಣ್ಣಗೆ ಕುಳಿತು, ಅಖೈರಿಗೆ ಡಾಕ್ಟರ ಹತ್ತಿರ ಬಂದು 'ಏಳು ಕೂರು' ಮಾಡುವುದು....... ಯಾವಾಗ ಈ ಜನರಿಗೆಲ್ಲ 'ಕಾಮನ್‌ಸೆನ್ಸ್' ಬರುತ್ತದೋ ಏನೋ ದೇವರಿಗೆ ಗೊತ್ತು!

ಸರಿಯಾಗಿ 9 ಗಂಟೆಗೆ ಮಣಿ ಹಾಜರಾದ– ಯಾವುದೋ ಸಿನೆಮಾ ಗೀತೆಯ ಸೊಲ್ಲೊಂದನ್ನು ಒಳದನಿಯಲ್ಲಿ ಗುಣಗುಣಿಸಿಕೊಂಡು. ಅವನಿಗೇನು ತಲೆಬಿಸಿ– 'ಬಂದಪುಟ್ಟ, (ಔಷಧಿಕಟ್ಟಿ) ಕೊಟ್ಟ ಪುಟ್ಟ, ಹೋದ ಪುಟ್ಟ' ಎನ್ನುವ ಸುಖಪುರುಷ! 'ಜಗವೆಲ್ಲ ನಗುತಿರಲಿ, ಜಗದಳುವು ನನಗಿರಲಿ'– ಯಾವ ಕೆಟ್ಟ ಮುಹೂರ್ತದಲ್ಲಿ ಕವಿ ಹಾಡಿದನೋ ಏನೋ!

ಗಂಟೆ 10 ಹೊಡೆಯಿತು. ಶಾಸ್ತ್ರಿಗಳು ಬಂದಾರು, ಕಾಯಿಲೆಯಿದ್ದ ಮಗುವಿನ ದೇಹಸ್ಥಿತಿ ಹೇಗಿದೆ ಎಂದು ಹೇಳಿಯಾರು; ಔಷಧಿ ಬದಲಿಸಿ ಕೊಟ್ಟೇನು ಎಂದು ಲೆಕ್ಕಹಾಕಿ ಕುಳಿತ ನಾನು, ಕುಳಿತೇ ಇದ್ದೇ. ಗಂಟೆ ಹನ್ನೊಂದಾಯಿತು; ಹನ್ನೆರಡೂ ಕಳೆಯಿತು. ಶಾಲೆಬಿಟ್ಟು ಮನೆಗೆ ಹೋಗುವಾಗ ಬರಬಹುದೆಂದು ಸಾಂತ್ವನ ಮಾಡಿಕೊಂಡೆ.... ಸಂಜೆಯಾಯಿತು, ಶಾಲೆಬಿಟ್ಟ ಗಂಟೆಯೂ ಕೇಳಿಸಿತು, ಹುಡುಗರು ಗದ್ದಲಮಾಡಿಕೊಂಡು ಮನೆಗೆ ಓಡತೊಡಗಿಯೂ ಆಯಿತು. ಮಾಸ್ತರು ಮಾತ್ರ ಸುಳಿಯಲಿಲ್ಲ. ಕತ್ತಲಾಯಿತು.

ಈ ನಡುವೆ ಹೆಡ್‌ಮಾಸ್ತರು ಶಾಲೆಗೆ ಬಂದಿರಲಿಲ್ಲ ಎಂಬ ಕಿರುವದಂತಿ ಕಿವಿಗೆಬಿದ್ದಾಗ– ಎದೆ ಧಸಕ್ ಎಂದಿತು.! ಹಾಗಾದರೆ..... ಹಾಗಾದರೆ..... ಹೋಯಿತು, ನನ್ನ ಮೊದಲ ಕೇಸು ಕೈ ಬಿಟ್ಟು ಹೋಯಿತು. ಒಂದು ಸಿಂಪಲ್ ಕೇಸು– ವಾಸಿ ಮಾಡಲಿಕ್ಕಾಗದೆ ಹೋಯಿತು– ಕೈಗುಣ ಚೆನ್ನಾಗಿಲ್ಲ ಎಂದು ಹೇಳುವಂತಾಯಿತಲ್ಲ– ಎಂದು ಖಿನ್ನವಾದೆ. Bad Luck! ಅಳುವುದೊಂದೇ ಬಾಕಿ ಅಷ್ಟೆ.

ನಾನು ಅತ್ತರೂ ಬಿಟ್ಟರೂ ಕಾಲಕ್ಕೆ ಯಾತರ ಹಂಗು? ದಿವಸದ ಮೇಲೆ ದಿವಸ ಸರಿಯುತ್ತಿತ್ತು. ಕ್ಯಾಲೆಂಡರಿನಲ್ಲಿ 'ಮುಂದಿನ ತಿಂಗಳ ಪುಟ' ಬಂತು ಎನ್ನುವಾಗ, ಒಂದು ಮಧ್ಯಾಹ್ನ ಅಪರೂಪದ ನೆಂಟರಂತೆ ದಿಢೀರನೆ ಚಿತ್ತೈಸಿದರು ಪೌರೋಹಿತ್ಯಕ್ಕೆ ಹೋಗಿದ್ದ ರಾಮಚಂದ್ರ ಶಾಸ್ತ್ರಿಗಳು– ನಮ್ಮ ಹೆಡ್ ಮಾಸ್ತರ್ ಮಹದೇವ ಶಾಸ್ತ್ರಿಗಳ ಪೂಜ್ಯ ಪಿತೃ ಮಹಾಶಯರು. ಕೈಯ್ಯ ಹನೆಕೊಡೆ, ಹೆಗಲ ಮೇಲಿನ ಅಕ್ಕಿ ತೆಂಗಿನಕಾಯಿ ಮಾರಾಪು (ಗಂಟು), ಕಾಲಿಗೆ ಲಾಳ ಬಡಿದ ಟೈರಿನ ಮೆಟ್ಟು (ಎಕ್ಕಡ), ಧಾರಾಕಾರವಾಗಿ ಸುರಿಯುತ್ತ ಮೈತೋಯಿಸುವ ಬೆವರು ಸಮೇತ ಚಿತ್ತೈಸಿ

ಸುಖಾಸೀನರಾದರು [illegible] ಹಿಡಿದುಕೊಂಡಿದ್ದ ಅಡಿಕೆ ಹಾಳೆಯ ಬೀಸಣಿಗೆಯಿಂದ ಬರಬರನೆ [illegible] ಮಾಡಿಕೊಳ್ಳುತ್ತ, ಯೋಗಕ್ಷೇಮ. ಬಿಸಿಲಬೇಗೆ, ಮಳೆಬೆಳೆಗಳ ಭವಿಷ್ಯ [illegible] ಸಾಂಪ್ರತಗಳಾದ ನಂತರ "ಹ್ಯಾಗೆ ನಡೆದಿದೆ? ಗಿರಾಕಿ. ಮದ್ದು, ಹಣ ಗಿಣ–ಎಲ್ಲ ಸಸೂತ್ರ ಉಂಟಲ್ಲವೋ? ಅಡಚಣೆ ಏನೂ ಇಲ್ಲವಲ್ಲ?" ಎಂದು ಆತ್ಮೀಯವಾಗಿ ಪ್ರಶ್ನೆ ಹಾಕಿ ವಿಚಾರಿಸಿದರು.

ನಾನು ಬರಿಯ ಮುಗುಳ್ನಗೆಯ ಉತ್ತರದಿಂದ ಕರ್ತವ್ಯ ಪೂರೈಸಿದೆ. ಮತ್ತೇನು ತಾನೇ ಮಾಡಬಲ್ಲೆ?.... ಕೊನೆಗೊಮ್ಮೆ ಧೈರ್ಯಮಾಡಿ ಕೇಳಿಯೇಬಿಟ್ಟೆ: "ಮತ್ತೆ ಶಾಸ್ತ್ರಿಗಳೆ, ಆಹೊತ್ತು ಪುತ್ತೂರಿನ ಬಲರಾಮ ಡಾಕ್ಟ್ರ ಔಷಧಿ ಮಾಡಿಸಿದ್ರಿ ಅಂತ ಕಾಣುತ್ತದೆ?"

"ಹ್ಯೇಂ? ಎಂಥಾ ಮಾತು ಹೇಳುತ್ತಿದ್ದೀ?" ಎಂದು ಕುಳಿತ ಕುರ್ಚಿಯಿಂದ ಎರಡಡಿ ಜಿಗಿದರು ತಾತಯ್ಯ. "ಹತ್ತು ಸರ್ಜನರಿಗೆ ಸಮ ನಮ್ಮ ಡಾಕ್ಟ್ರು ಅಂತ ಹೋದಲ್ಲಿ ಬಂದಲ್ಲಿ ಹೇಳಿಬಿಟ್ಟಿದ್ದೇನೆ ನಾನು! ಯಾವ ಡಾಕ್ಟ್ರಿಗೆ ಯಾಕೆ ಕರೆಸಬೇಕು? ಮಣ್ಣಾಂಗಟ್ಟಿ! ನಮ್ಮಪುಳ್ಳಿ (ಮೊಮ್ಮಗಳು) ಕೂಸಿಗೆ ನಾಲ್ಕು ದಿನದಿಂದ ಹೊಟ್ಟೆಕಟ್ಟಿದೆ ಅಂತ ಕೂಗಿಕೊಂಡು ಹೊರಳಿ ಕಂಗಾಲಾಗಿದ್ದರೆ– ಒಂದೇ ಡೋಸ್, ನಿನ್ನ ಆಸುಪತ್ರೆ ಮದ್ದು, ಮಣಿ ಕಂಪೌಂಡರಿಗೆ ಹೇಳಿ ನೀನೇ ಕೊಡಿಸಿಕೊಟ್ಟದ್ದು– ಒಂದೇ ಸಾರಿ ಕುಡಿಸಿದ್ದೇ ಸೈ; ಭುರುಭುರು ಅಂತ 'ಹೊರಕ್ಕಡೆ' (ಪಾಯಿಖಾನೆ) ಮಾಡಿದ್ದೇ ಮಾಡಿದ್ದು ಮಾರಾಯ ಆ ಹುಡುಗಿ– ನಾಲ್ಕು ದಿವಸದ ಸ್ಟಾಕ್ ಛಟ್ಟ್ ಆಗಿ ಕರುಳು ಸ್ವಚ್ಛವಾಯಿತು. ಕೈಗುಣ ಅಂದರೆ ನಿನ್ನದೇ ನೋಡು– ಸಾಕ್ಷಾತ್ ಧನ್ವಂತರಿಯ ಅವತಾರವೇ ಸೈ" ಎಂದು ಘೋಷಿಸಿದರು ಶಾಸ್ತ್ರಿಗಳು!

ನನ್ನ ತಲೆ ಗಿರ್ರನೆ ತಿರುಗಿತು. ವಿಸ್ಮಿತನಾಗಿ ಕಣ್‌ಕಣ್ ಬಿಡುವ ಸರದಿ ನನ್ನದೀಗ. ಭೇದಿ ನಿಲ್ಲಿಸಲಿಕ್ಕೆಂದು ಸ್ಟ್ರಾಂಗ್, 'ಕಂಬೈಂಡ್' ಮೆಡಿಸಿನ್ ಕೊಟ್ಟರೆ ಹೊಟ್ಟೆ ಕ್ಲೀನ್ ಆಗುವ ಹಾಗೆ ಪಾಯಿಖಾನೆಯಾಗಿ ರೋಗಿಯನ್ನು ವಾಸಿಮಾಡಿದ ನನ್ನ ಕೈಗುಣದ ಗುಣಗಾನ ಕೀರ್ತಿಯನ್ನು ಕೇಳಿ ದಂಗಾದೆ! ಆಸ್ಪತ್ರೆ, ಬೋರ್ಡ್, ಔಷಧಿ ಕಪಾಟು, ಗೋಡೆಯ ಮೇಲಿನ ಫೋಟೋಗಳು, ಗಿಡ– ಬರ– ಮಳ್ಳೀ– ಅಲ್ಲಲ್ಲ, ಗಿಡ–ಮರ–ಬಳ್ಳಿ ಎಲ್ಲ ಗಿರ್ರನೆ ತಿರುಗತೊಡಗಿದವು, ದೊಂಬರಾಟದ ತಿರುಗು ತೊಟ್ಟಿಲಿನಂತೆ.... ಕುಳಿತಲ್ಲೇ ಕಣ್ಣುಮುಚ್ಚಿಕೊಂಡೆ...

ನನಗೆ ಎಚ್ಚರವಾದಾಗ ಶಾಸ್ತ್ರಿಗಳು ಹೊರಟುಹೋಗಿದ್ದರು. ಕಂಪೌಂಡರು ಮಣಿ ಒಂದು ಗ್ಲಾಸ್ ನಿಂಬೆಹಣ್ಣಿನ ಪಾನಕ ತಂದುಕೊಟ್ಟ, ಅದನ್ನು ಹೀರಿದ ಮೇಲೆ "ಏನು ವೈವಾಟಿದು?" ಎಂದು ಅವನನ್ನೇ ಕೇಳಿದೆ.

"ಅದರಲ್ಲೆಲ್ಲಾ ಪ್ರೈವಾಟೇನಿಲ್ಲ ಸಾರ್. ಬೆಳಿಗ್ಗೆ ಮನೆಯಿಂದ ಹೊರಟು ಬರುವಾಗ ಮಾಷ್ಟ್ರಮನೆಯ ಅಂಗಳದಲ್ಲಿ ಹುಡುಗರೆಲ್ಲ ಸಾಲಾಗಿ ಕುಕ್ಕರು ಗಾಲಿನಲ್ಲಿ ಕುಳಿತಿದ್ದುದನ್ನು ಕಂಡಿದ್ದೆ. ಸುಂದರಿಗೆ ಇವತ್ತೂ ಇಲ್ಲ- ಇವಳದ್ದು ಓನ್‌ವೇ ಟ್ರಾಫಿಕ್ ಅಂತ ದೊಡ್ಡ ಹುಡುಗರು ಮಾತಾಡಿಕೊಳ್ಳುತ್ತಿದ್ದುದನ್ನು ಕೇಳಿದ್ದೆ ಸಾರ್....

"ಮತ್ತೆ ಆ ಮಹದೇವ ಶಾಸ್ತ್ರಿ ಮಾಷ್ಟ್ರು ಬಾಟ್ಲಿ ಹಿಡದುಕೊಂಡು ಬಂದದ್ದು ನೋಡುತ್ತೇ, ಆಸ್ಪತ್ರೆಯಲ್ಲಿ ಹರಳೆಣ್ಣೆ ಸ್ಟಾಕ್ ಇಲ್ಲಾಂತ ನೆನಪಾಯಿತು- ಹಾಗೇ ಹಿಂಬಾಗಿಲಿನಿಂದಲೇ ಹೋಗಿ ವಿಠಲ ಶಾನುಭಾಗರ ಕಟ್ಲೇರಿ ಅಂಗಡಿಯಿಂದ ಒಂದು ಬಾಟಲಿ ಬೋಸಿಲ್ ಕಂಪೆನಿಯ ರುಚಿಯಿಲ್ಲದ, ವಾಸನೆಯಿಲ್ಲದ ಬಣ್ಣವಿಲ್ಲದ ಕ್ಯಾಸ್ಟರ್ ಆಯಿಲ್ ಹಿಡಿದುಕೊಂಡು ಬಂದೆ. ಅದರಿಂದ ಅರ್ಧ ಔನ್ಸ್‌ನಷ್ಟು ತೆಗೆದು ಎರಡು ಚಮ್ಚ ಬಣ್ಣದ ಆರೆಂಜ್ ಜ್ಯೂಸ್‌ನಲ್ಲಿ ಕಲಸಿ ಸೀಸೆ ತುಂಬಿಸಿ ಕೊಟ್ಟೆ; ಜತೆಗೆ ಎರಡು ಶುಂಠಿ ಪೆಪ್ಪರ್‌ಮೆಂಟ್ ಪುಡಿಮಾಡಿ ಚೀಟಿಕಟ್ಟಿಕೊಟ್ಟೆ ಸಾರ್ ಅಷ್ಟೇ" ಎಂದು ಹಲ್ಲು ಕಿರಿದ, ನಮ್ಮ ಕಂಪೌಂಡರ್ ಮಣಿ- ಲಫಂಗ!

# ವೈದ್ಯನ ವ್ಯಾಧಿಗೆ ಕಂಪೌಡರ ಚಿಕಿತ್ಸೆ

ನಾಲ್ಕುವರ್ಷ ಕಾಲೇಜಿಗೆ ಮಣ್ಣು ಹೊತ್ತು, ಫಸ್ಟ್‌ಕ್ಲಸ್‌ನಲ್ಲಿ ಪಾಸ್ ಮಾಡಿ, ಒಂದು ವರ್ಷದ 'ಹೌಸ್‌ಸರ್ಜನ್' ತರಬೇತಿಯನ್ನೂ ಮುಗಿಸಿಕೊಂಡು, ಹೆಸರಿನ ಮುಂದೆ ಡಿಗ್ರಿಯ ನಾಲ್ಕು ಅಕ್ಷರಗಳನ್ನು ತಗಲಿಸಿಕೊಂಡು, ಬೋರ್ಡ್ ಹಚ್ಚಿ, ಶಾಪ್‌ತೆರೆದು ಅದೇ ತಾನೇ ಪ್ರಾಕ್ಟೀಸ್ ಪ್ರಾರಂಭಿಸಿದ್ದೆ. ವಿದ್ಯಾವಂತರು– ಮುಖ್ಯವಾಗಿ ವೈದ್ಯರು ಹಳ್ಳಿಗಳತ್ತ ಹಣಿಕಿ ಕೂಡ ನೋಡರು ಎಂಬುದಾಗಿ ಟೀಕಿಸುವ ಬಡಾ-ಭೋಟಾ ಪುಢಾರಿಗಳಿಂದ ಹಿಡಿದು ದೇಶದ ಪ್ರಧಾನಿಯವರೆಗೆ ಎಲ್ಲರಿಗೂ ಸವಾಲ್ ಹಾಕಿದಂತೆ, "ಇಲ್ಲಿ ನೋಡಿ, ಪ್ರತ್ಯಕ್ಷ ಹಳ್ಳಿಗೆ– ಅದರಲ್ಲೂ ಹುಟ್ಟೂರಿಗೇ ಹಿಂತಿರುಗಿಬಂದು ನೆಲಸಿದ್ದನ್ನು ಕಣ್ಣಬಿಟ್ಟು ನೋಡಿಕೊಳ್ಳಿ" ಎಂದು ಬಾಯಿಬಿಟ್ಟು ಹೇಳದಿದ್ದರೂ ಆತ್ಮಸಂತೋಷದಿಂದ ಬೀಗಿ ಸಂತೃಪ್ತಿಯ ಉಸಿರುಬಿಡುತ್ತಿದ್ದೆ. ಹಳ್ಳಿಯೂರು; ಬಡಜನರು; ಅಜ್ಞಾನ. ಆಲಸ್ಯ, ಅನಾನುಕೂಲತೆಗಳ ತವರು. ನಾಟಿವೈದ್ಯ, ಮಂತ್ರವಾದ, ತಾಯಿತ, ಹರಕೆ, ಮೂಲಿಕೆಗಳನ್ನು ತಲೆತಲಾಂತರದಿಂದ ನಂಬಿಕೊಂಡು ಬಂದ ಸಂಪ್ರದಾಯಶರಣರು– ಹೀಗಾಗಿ ಪ್ರಾಕ್ಟೀಸು ಅರ್ಥಾತ್ ಸಂಪಾದನೆ– ಅಷ್ಟಕ್ಕಷ್ಟೇ. ಆದರೇನಂತೆ? 'ಗ್ರಾಮೋದ್ಧಾರ, ಜನತಾ ಜನಾರ್ದನ ಸೇವೆ, ಬಡವರ ಬಾಗಿಲಿಗೇ ಧನ್ವಂತರಿ'ಯಂತಹ ಮಹತ್ತರ ಸ್ವಪ್ನಗೋಪುರಗಳ ಮುಂದೆ– ಇವೆಲ್ಲ ಯಾವ ಮಹತ್ವದ ವಿಷಯಗಳು?

"ಹೊಸ ಡಾಕ್ಟರದ್ದು ಹಸ್ತಗುಣ ಅಷ್ಟೇನೂ ಕೆಟ್ಟದ್ದಾಗಿ ಕಾಣಿಸಿಲ್ಲ– ಆದರೂ ಟ್ರೀಟ್‌ಮೆಂಟ್‌ಗೆ ಅಂತಂದ್ರೆ "ಏಕಾಏಕಿ' ಧೈರ್ಯ ಬರುವುದಿಲ್ಲ ಮಾರಾಯ್ರೇ....... ಇನ್ನೂ ನಾಲ್ಕು ದಿನ ಕಾದರೆ ಗೊತ್ತಾದೀತು– ಯಾರಿಗಾದರೂ ಏನಾದರೂ 'ಹೆಚ್ಚು ಕಡಿಮೆ' ಆದದ್ದು. "ಅನಂತರ ನಾವೂ ಧೈರ್ಯಮಾಡಬಹುದು ಚಿಕಿತ್ಸೆಗೆ ಅವರ ಹತ್ತಿರ ಹೋಗಲು" ಅಂತ ಕೆಲವರು ಕುತೂಹಲ ತೋರಿಸ್ತಿದ್ದಾರೆ ಎಂಬುದಾಗಿ ಸಿ.ಐ.ಡಿ. ವರದಿ ತಂದ ಕಂಪೌಂಡರ್ ಮಣಿ. "ಬಹಳ ಜನ ಬರುವುದಿಲ್ಲ ಏನಿಲ್ಲ– ಅದಕ್ಕೇ ಇರಬೇಕು ಪ್ರತಿಯೊಬ್ಬರನ್ನೂ– ಚಿಕಿತ್ಸೆ ಮಾಡಿಸಲಿ, ಬಿಡಲಿ, ಒಂದೊಂದು ಗಂಟೆ 'ನೋಡೋದು!' ಸಣ್ಣಸಣ್ಣ ಕಾಯಿಲೆಗೂ ಇದೇನು ಸ್ವಾಮೀ– ಪರೀಕ್ಷೆ ಮಾಡಿ ಪುಸ್ತಕದಲ್ಲಿ ಹೆಸರು ವಿಳಾಸ ಎಲ್ಲ ಬರೆದುಕೊಂಡು ಔಷಧಿ ಕೊಡುವುದು

ಅಂದ್ರೆ- ರಾಮರಾಮ, ಇದೆಂತಹ ಕ್ರಮ ಸ್ವಾಮೀ, ನಾವು ಎಲ್ಲಿಯೂ ನೋಡದ್ದು; ಕೇಳದ್ದು!" ಎಂದು ಒಬ್ಬರು ನನಗೆ ಕೇಳಿಸುವಂತೆಯೇ ಟೀಕಿಸಿದರು.

"ಇಷ್ಟು ಕಮ್ಮಿ ಛಾರ್ಜು ತೆಗೆದುಕೊಂಡು ಇನ್ನು ಅದೆಷ್ಟು ಒಳ್ಳೆಯ ಮದ್ದು ಕೊಡಬಹುದು ಸ್ವಾಮೀ, ನೀವೇ ಹೇಳಿ. 'ಮೆಡಿಸಿನ್ನು'ಗಳ ರೇಟ್ ಗೊತ್ತಿಲ್ಲದ ಮನುಷ್ಯ- ವಿಚಿತ್ರ ರಾಯರೆ, ಈ ಧನ್ವಂತರಿಯ ಸಂಗತಿ" ಎಂಬುದಾಗಿ ಇನ್ನೊಬ್ಬರು ಆತಂಕ ವ್ಯಕ್ತಪಡಿಸಿದರು. "ವಿಚಿತ್ರ ಏನು ಬಂತು ರಾಯರೆ ಅದರಲ್ಲಿ? ನಿಮಗೆ ಗೊತ್ತಿಲ್ಲ ಒಳಗಿನಗುಟ್ಟು- ಮೆಡಿಕಲ್ ಕಂಪೆನಿಗಳಿಂದ ಮಸ್ತ್ ಫ್ರೀಸ್ಯಾಂಪಲ್ಲು ಗಿಟ್ಟಿಸಿಕೊಂಡದ್ದಕ್ಕೇ ಈ ದಾನಶೂರಕರ್ಣತನ: ಎಂಬುದು ಮೂರನೆಯವರ ಸಮಜಾಯಿಷಿ. "ಮಾತುಕತೆ ಬಹಳ ಕಮ್ಮಿ; ಹಾಳುಹರಟೆ, ಪಟ್ಟಾಂಗ, ಗಪ್ಪಾಸು- ಇಲ್ಲವೇ ಇಲ್ಲ. ಒಂದು ಇಸ್‌ಪೇಟು, ಹೋಗಲಿ- ಕಾಫಿ ಸಿಗರೇಟಿನ ಚಟ ಸಹ ಇಲ್ಲ! ಇಷ್ಟು 'ಡಿಗ್ನಿಫೈಡ್' ಆಗಿ ಕುಳಿತರೆ ಹೇಗೆ ನಡೆಯಬೇಕು ಹೇಳಿ- ಡಾಕ್ಟರು ಅಂತಂದ್ರೆ ಸ್ವಲ್ಪಮಟ್ಟಿಗಾದರೂ 'ಸೋಶಿಯೇಬಲ್' ಆಗಿರಬೇಕು ಎಂದು ಆಪ್ತ ಸಲಹೆ ನೀಡಿಯೇ ಬಿಟ್ಟರು ಇನ್ನೊಬ್ಬ ಮಹಾನುಭಾವರು!

"ನಿಮಗೆ ಗೊತ್ತಿಲ್ಲ ಡಾಕ್ಟ್ರೇ- ನನ್ನ ಮಾತು ಕೇಳಿ ಸ್ವಲ್ಪ; ನಿಮ್ಮ ಒಳ್ಳೇದಕ್ಕೇ ಹೇಳುತ್ತೇನೆ, ಇಲ್ಲವಾದರೆ ನನಗೇನು ಹೆಗಲ ಮೇಲೆ ಮರ ಬಿದ್ದಿದೆಯೋ?... ಎರಡು ಸಾರಿ ತಪ್ಪಿ ಮೂರನೇ ಸರ್ತಿ ಕೆಮ್ಮಿದರೆ ಟಿಬಿ; ರಾತ್ರಿ ಉಚ್ಚೆ ಬಂದರೆ ಡಯಾಬಿಟಿಸ್; ಜ್ವರ ನೂರೊಂದು ಡಿಗ್ರಿ ದಾಟಿದರೆ ಟೈಫಾಯ್ಡ್; ಊಟಕ್ಕೆ ಮೊದಲು ಡೇಕರಿಕೆ ಬಂದರೆ ಅನರಕ್ಸಿಯಾ; ಊಟದ ನಂತರ ತೇಗಿದರೆ ಗ್ಯಾಸ್ಟ್ರೈಟಿಸ್; ಗಂಟಲ್ಲಿ ತುರಿಕೆ ಎದ್ದರೆ ಕ್ಯಾನ್ಸರ್; ಹೆಗಲಲ್ಲಿ ನೋವೆಂದರೆ ಹಾರ್ಟ್ ಟ್ರಬಲ್; ಕಣ್ಣು ಮಂಜಾದರೆ ಬ್ಲಡ್‌ಪ್ರೆಶರ್; ಕಿವಿಯೊಳಗೆ ಗುರುಗುರೆಂದರೆ ಅಲರ್ಜಿ- ಅಂತ ಗಾಬರಿ ಹುಟ್ಟಿಸುವ ಹೆಸರು ಹೇಳಿಬಿಡಬೇಕು ಮಹಾರಾಯರೇ- ಅಂದರೇನೇ ಈ ಊರಿನ ಅಸಾಮಿಗಳು ದುಡ್ಡು ಬಿಚ್ಚುತ್ತಾರೆ! ಮತ್ತೆ- ಆರು ಮಾತ್ರೆ, ಮೂರು ಡೋಸು ಮಿಕ್ಸ್‌ಚರು ಎಂಟಾಣೆಗೆ ಮಾರುತ್ತ ಕೂತರೆ ಯಾವ ಕಾಲಕ್ಕೆ ಸ್ವಾಮೀ ನೀವು ಗಳಿಸುವುದು? ಲಕ್ಷ್ಮೀ ಕಟಾಕ್ಷಕ್ಕೆ ಈಗಿನಿಂದಲೇ ಸ್ವಲ್ಪ ಪ್ರಯತ್ನ ಸುರುಮಾಡಿ ಸಾರ್" ಎಂದು ಕಳಕಳಿಯಿಂದ ವಿನಂತಿಸಿಕೊಂಡರು ಮಗದೊಬ್ಬರು. "ಏನು ಡಾಕ್ಟ್ರು ಸ್ವಾಮೀ ನೀವು? ನಿಮ್ಮಹತ್ರ ಮುದುಕರಿಗೆ ಒಂದು ಧಾತುಪುಷ್ಟಿಯ ಲೇಹ ಇಲ್ಲ! ಬಾಣಂತಿಯರಿಗೆ ನವಜೀವನಕಲ್ಪ, ಕುರೂಪಿಯನ್ನು ಮನ್ಮಥನಂತೆ ಮಾಡುವ ಮದನಮಂಜರಿ, ಮಕ್ಕಳಿಗೆ ಬೇಗ ಹಲ್ಲು ಉದುರುವ ದಂತಮರ್ದನ, ಮುದುಕರಿಗೆ ನೆತ್ತರುಬಲ ಹೆಚ್ಚಿಸುವ ರಕ್ತವರ್ಧಿನಿ.... ಊಹುಂ ಏನಿದೆ ಅಂತ ನಿಮ್ಮ ಹತ್ರ ಬರಬೇಕು ಸ್ವಾಮೀ? ಹೇಳಿ ಕೇಳಿ ಎರಡಿಂಜಕ್ಷನ್, ಮಾತ್ರೆ, ಮಿಕ್ಸ್ಚರ್! ಇಷ್ಟರಿಂದಲೇ ನಿಮ್ಮ ಕೈಗೆ ಜೀವ ಒಪ್ಪಿಸಿ 'ಔಷಧಿ' ಮಾಡಿಸಬೇಕೂ ಅಂದ್ರೆ ಏನು... ಬೇಕಾದರೂ

ಹೇಳಿ– ಧೈರ್ಯವೇ ಬರೋದಿಲ್ಲ" ಎಂದು ಹಜಾಮರ ರಾಮಪ್ಪ ನನ್ನ ಕ್ರಾಪ್ ಕಟ್ಟುಮಾಡುವಾಗಲೆಲ್ಲ ಶಂಖವೂದುತ್ತಲೇ ಇದ್ದ.– "ಆ ಸೀನಯ್ಯ ಕಂಪೌಂಡ್ರು ನೋಡಿ. ನೀವು ಏನು ಕೇಳಿದ್ರೆ ಆ ಮದ್ದು, ಟಾನಿಕ್ ರೆಡಿ; ಅದಕ್ಕೇ ಜನ ಅಲ್ಲಿಗೆ ಬೆಲ್ಲ ತೂಗುವಲ್ಲಿಯ ನೊಣಗಳ ಹಾಗೆ ಮುತ್ತುತ್ತಾರೆ." ಎಂದು ಒಗ್ಗರಣೆ ಬೇರೆ ಹಾಕುತ್ತಿದ್ದ.

ಹೀಗೆಯೇ ಕಾಲ ಸಾಗುತ್ತಿತ್ತು ಮುಂದೆ ಮುಂದೆ; ತಿಂಗಳು ಕಳೆದವು ಹಿಂದೆ ಹಿಂದೆ. ನಾನು ಪ್ರತಿದಿನವೂ ಮುಂಜಾನೆ ತಪ್ಪದೆ ಒಂಭತ್ತು ಗಂಟೆಗೆ ಹಾಜರಿ ಕೊಟ್ಟು, ಶಾಪಿನಲ್ಲಿ ಕುಳಿತುಕೊಂಡು, 'ಗಿರಾಕಿಗಳು' ಬರುವುದನ್ನೇ ಎದುರು ನೋಡುತ್ತಾ ಕಾಲ ತಳ್ಳುತ್ತಿದ್ದೆ. ಆಗೊಮ್ಮೆ ಈಗೊಮ್ಮೆ 'ಸಣ್ಣಪುಟ್ಟ ರೋಗಿಗಳು' ಬರುತ್ತಿದ್ದರು. 'ಇಂವಂನ ಹಂಸ್ತ ಒಂದು ಡೊಂಸು ಭೇಂದಿ ಎಂಣೆ ಕೊಂಡ್ರಿ' (ಇವನ ಹಸ್ತ ಒಂದು ಡೋಸು ಭೇದಿ ಎಣ್ಣೆ ಕೊಡಿರಿ) ಎಂದು ಪಟೇಲ ಕುಂಞಂಣ ಭಂಟರು ಚೀಟಿ ಕಳುಹಿಸಿದರೊಮ್ಮೆ. (ಪ್ರತಿ ಅಕ್ಷರದ ನಂತರ ಒಂದು ಸೊನ್ನೆ ಸೇರಿಸುವುದು ಅವರ ಅಭ್ಯಾಸಬಲ!) ಜಂತಿನಪುಡಿ, ಹಲ್ಲುನೋವಿನ ಮಾತ್ರೆ, ಜ್ವರದ ಮಿಕ್ಸ್‌ಚರು, ಹೊಟ್ಟೆನೋವಿನ ಪೌಡರು 'ಅದು ಇದು ಅಂತ ಗಿರಾಕಿಗಳು– ಹೆಚ್ಚಿನವರು ಬಾಕಿ ಕುಳವಾರುಗಳು– ಆಗೊಮ್ಮೆ, ಈಗೊಮ್ಮೆ ಭೇಟಿ ಕೊಡುತ್ತಿದ್ದರು ಎನ್ನಿ......

ನೋಡಿ ನೋಡಿ ಕಂಪೌಂಡರಿಗೆ ಬೇಸರ ಬಂದಿರಬೇಕು– ಒಂದು ದಿನ ಹೇಳಿದ, "ಸಾರ್, ನನಗೆ ನಾಲ್ಕುದಿನ ರಜೆಬೇಕು. ಧರ್ಮಸ್ಥಳಕ್ಕೆ ಹೋಗಿ ಬರುತ್ತೇನೆ– ಹಾಗೇ ನಿಮ್ಮ ಲೆಕ್ಕದಲ್ಲಿ ಒಂದು 'ಹಣ್ಣು ಕಾಯಿ ಮಾಡಿಸಿಕೊಂಡು ಬರುತ್ತೇನೆ ಸಾರ್."

ಮಣಿಯ ಈ ದಿಢೀರ್ ದೈವಭಕ್ತಿಯ ಗುಟ್ಟು ನನಗೆ ಗೊತ್ತು: ಅವನಿಗೆ ಯಕ್ಷಗಾನ ಬಯಲಾಟ ನೋಡುವ ಹುಚ್ಚು; ಅದರಲ್ಲೂ ಧರ್ಮಸ್ಥಳ ಮೇಳದ ಪ್ರಸಂಗವೆಂದರೆ ಪಂಚಪ್ರಾಣ. ಈ ವರ್ಷ ಮೇಳ ಸಾಗರ ಪ್ರಾಂತ್ಯದಲ್ಲೂ ಗಟ್ಟದ ಮೇಲೂ ತಿರುಗಾಟ ನಡೆಸಿದ್ದು ಪತ್ತನಾಜೆ ಬಂತು ಎಂದು 'ಪೆಟ್ಟಿಗೆ ಸಹಿತ' ಈಗ ಧರ್ಮಸ್ಥಳಕ್ಕೆ ಹಿಂದಿರುಗುತ್ತಿರಬೇಕು– ಕಡೆಯ 'ಸೇವೆಯಾಟ' ಆಡಿ ಹೆಜ್ಜೆ ಬಿಚ್ಚಿ ಇರಿಸಲು........ ಹುಂ, ಹೋಗಿ ಬರಲಿ– ಒಂದು ಆಟವನ್ನಾದರೂ ನೋಡಿ ತೃಪ್ತಿಪಟ್ಟುಕೊಳ್ಳಲಿ; ಇಲ್ಲಾದರೂ ಬೆಟ್ಟಕಡಿಯುವಂತಹ ಕೆಲಸವೇನೂ ಇಲ್ಲವಲ್ಲ ಎಂದುಕೊಂಡು ನಾನು ಸಮ್ಮತಿ ಸೂಚಿಸಿದೆ.

"ಹಣ್ಣು ಕಾಯಿ ಎಲ್ಲ ನೀನೇ ಬೇಕಾದರೆ ಮಾಡಿಸಿಕೋ– ನನಗೆ ಅದರಲ್ಲೆಲ್ಲ ನಂಬಿಕೆಯಿಲ್ಲ" ಎಂದೇ ಬಿಗುವಾಗಿ.

ಬೇಸಿಗೆ ಕಾಲ ಕೊನೆಯಾಗುತ್ತಿತ್ತು; ಮಳೆಗಾಲ ಇಣುಕುತ್ತಿತ್ತು; ಮೇ ತಿಂಗಳ ಅಖೇರಿ. 'ನಾಲ್ಕು ದಿನ ರಜ' ಎಂದು ಹೊರಟುಹೋದ ಮಣಿ. ಹತ್ತುಹನ್ನೆರಡು ದಿನಗಳಾದರೂ ನಾಪತ್ತೆ ! ತಿರುಕುಳಿ ಮನುಷ್ಯ– ಮೊದಲಿನಿಂದಲೂ ಹೀಗೆಯೇ. ಎಲ್ಲೂ ಒಂದೇ ಕಡೆ, ಒಂದೇ ಉದ್ಯೋಗ ಎನ್ನುವ ಜಾಯಮಾನವೇ ಅಲ್ಲ ಅವನದು ಎಂದು ಗೊಣಗಿಕೊಂಡು ಸುಮ್ಮನಾದೆ.

ಮತ್ತೆರಡು ದಿನ ಕಳೆಯಿತು. ಇದ್ದಕ್ಕಿದ್ದ ಹಾಗೆಯೇ ಒಂದು ಸಂಜೆ ಬಸ್ಸಿನಿಂದ ಬಂದಿಳಿಯಿತು ನಮ್ಮ ಮಣಿರಾಯನ ಸವಾರಿ! ಮೈ ತುಂಬ ಕೋಟು, ಸ್ವೆಟರು. ಶಾಲು, ಸಕಲಾತಿ, ಮಫ್ಲರು, ಮಂಕಿಕ್ಯಾಪ್, ರುಮಾಲು ಸಹಿತ, ಶ್ಯ..... ಶ್ಯ....ಷ್ಟೀ ಎಂದು ಹಲ್ಲು ಕಟಕಟ ಕಡಿಯುತ್ತ, ಥರಥರ ನಡುಗುತ್ತ, 'ಉಶ್ಯಪ್ಪಾ, ಉಳ್ಳಪ್ಪಾ, ಅಯ್ಯಪ್ಪಾ' ಎಂದು ನರಳುತ್ತ, ಮೈ ಜೋಲಿ ಹೊಡೆಯುತ್ತ, ಘೊಕ್ ಘೊಕ್ಕ್ ಎಂದು ಕೆಮ್ಮುತ್ತ...ತ್ತ....ತ್ತ– ಅಂತೂ ಆಸ್ಪತ್ರೆಯ ಹೊಸ್ತಿಲ ಮೇಲೆ ಬಂದು ಕುಸಿದ!

ನನಗೆ ಕೊಂಚ ಅನುಮಾನ ಬಂತು. "ಏನು ಸಂಗತಿ?" ಎಂದು ಕುತೂಹಲದಿಂದ ವಿಚಾರಿಸಿದೆ. "ಇಂಬ್ಳುಸಾ.... ದೆಹಡಿ..... ಶ್ಯ ಶ್ಯ....ದೆಮ್ಮು..... ಜ್ವರಾ....ಶ್ಯ ಶ್ಯ..." ಬಹಳ ಕಷ್ಟರಿಂದ ಉತ್ತರಿಸಿದ ಮಣಿ.

"ಬಾ, ಒಳಗೆ ಬಾ" ಎಂದು ಹೇಳಿದೆ. ಮಣಿ ಮಾತ್ರ ಅಲ್ಲಿಂದ ಕದಲಲಿಲ್ಲ. ಕೊನೆಗೆ ನಾನೇ ಎದ್ದು ಹೋಗಿ, ಅವನನ್ನು ಹಿಡಿದೆಬ್ಬಿಸಿ, ಭುಜದ ಆಧಾರ ಕೊಟ್ಟು, ಒಳಗೆ ಕರೆದೊಯ್ದು, ಪರೀಕ್ಷಾ ಮಂಚದ ಮೇಲೆ ಮಲಗಿಸಿದೆ.

ಜ್ವರ ನೂರನಾಲ್ಕು ಡಿಗ್ರಿ ಫೆರನ್‌ಹ್ಯಾಟ್– ಮೈ ಕೆಂಡದಂತೆ ಕಾಯುತ್ತಿತ್ತು.

"ಎಷ್ಟು ದಿನವಾಯ್ತು?" ಎಂದು ಕೇಳಿದ್ದಕ್ಕೆ "ದೆನ್‌ದೆಯಿಂದ ಸಾ" ಎಂದು ಒರಲಿದ. ಸರಿ– ಇನ್‌ಫ್ಲೂಯೆಂಜಾ ಎಂದುಕೊಂಡು ಒಂದು ಇಂಜೆಕ್ಷನ್ ಚುಚ್ಚಿ, ಎರಡು ಮಾತ್ರೆ ನುಂಗಿಸಿ, ಒಂದು ಡೋಸ್ ಮಿಕ್ಸ್‌ಚರ್ ಕುಡಿಸಿದೆ. ಅನಂತರ ಒಂದು ಗ್ಲಾಸು ಬಿಸಿ ಕಾಫಿ ತರಿಸಿಕೊಟ್ಟೆ.... ಹದಿನೈದು ನಿಮಿಷಗಳಲ್ಲಿ ಅಲ್ಲೇ, ಎಗ್ಸಾಮಿನೇಶನ್ ಟೇಬಲ್ ಮೇಲೇ ಗೊರಕೆ ಹೊಡೆಯತೊಡಗಿದ ಮಣಿ ಮಹಾಶಯ!

ಎರಡು ಮೂರು ದಿವಸಗಳಲ್ಲಿ ರೋಗವಿಮುಕ್ತನಾಗಿ ಚೇತರಿಸಿಕೊಂಡ ಮಣಿ. ನಾಲ್ಕನೆಯ ದಿನ ಮೆಲ್ಲಗೆ ಎದ್ದು ಹೋಟೆಲುವರೆಗೆ ಪಾದ ಬೆಳೆಸಿದ. ಐದನೇ ದಿವಸ 'ಹೇರ್‌ಕಟ್' ಮಾಡಿಸಿಕೊಂಡು, ಸ್ನಾನ ಪೂರೈಸಿ, ಇಸ್ತ್ರಿ ಮಾಡಿದ ಬಟ್ಟೆ ತೊಟ್ಟುಕೊಂಡು ಹೊರಬಿದ್ದ.

"ಉಷ್! ಏನು ವೀಕ್‌ನೆಸ್ ಇದು ಅಂತೀರಿ.... ಅಬ್ಬಬ್ಬಾ– ಡಾಕ್ಟ್ರು ಅಷ್ಟು ಒದ್ದಾಡಿ ಕಷ್ಟಪಟ್ಟಿದ್ದಿಲ್ಲಾಂದ್ರೆ ನಾನು ಸತ್ತೇಹೋಗುತ್ತಿದ್ದೆನೇನೋ! ಎಂಥಾ ಜ್ವರ,

ಏನು ಕಥೆ ! ಸಂದು ಸಂದು ಬಾವು, ಕೀಲು ಕೀಲು ಗರಗಸದಿಂದ ಸೀಳಿದ ಹಾಗೆ ನೋವು ಸ್ವಾಮೀ; ತಲೆಯೋ– ಅಕ್ಕಿಮುಡಿ ಹೊತ್ತುಕೊಂಡಷ್ಟು ಭಾರ; ಮೈ ಅಂದರೆ ಕೆಂಡ, ಕೆಂಡ!.... ನರಕಯಾತನೆ ಸ್ವಾಮೀ, ಅದು ನರಕಯಾತನೆ...... ಹ್ಯಾಗೊ ಏನೋ ಆಯುಸ್ಸು ಗಟ್ಟಿ ಇದ್ದದ್ದಕ್ಕೇ ಇರಬೇಕು– ಆಸ್ಪತ್ರೆ ಹತ್ತಿರ ಬಸ್ಸಿನಿಂದ ಇಳಿಯುವ ಬುದ್ಧಿ ಬಂದಿರಬೇಕು.... ಆಸ್ಪತ್ರೆ ಬಾಗಿಲು ಹಿಡಿದುಕೊಂಡು ಹೊಸ್ತಿಲಮೇಲೆ ಕುಳಿತದ್ದೊಂದು ಗೊತ್ತು ನನಗೆ– ಮತ್ತೆ ಮೂರು ದಿನ ಈ ಕಡೆ 'ಗೋಚರ'ವೇ ಇಲ್ಲ.... ಪಾಪ, ಡಾಕ್ಟ್ರು, ದೇವ್ರಂಥವರು; ಅಲ್ಲೇ ಮಂಚ ತರಿಸಿ ಹಾಕಿ, ಟ್ರೀಟ್‌ಮೆಂಟ್ ಕೊಟ್ಟು, ಹೊತ್ತುಹೊತ್ತಿಗೆ ಔಷಧಿ, ಹಾಲು, ಮುಸುಂಬಿ ರಸ ಕುಡಿಸಿದರೂ ಅಂತ– ನಾನು ಬದುಕಿ ಉಳಿದೆ! ನಿಜವಾಗಿ ನನಗಿದು ಎರಡನೇ ಜನ್ಮ! ನಮ್ಮ ಡಾಕ್ಟರು ಅಂತ ಹೊಗಳುವುದಲ್ಲ– ಸಾಕ್ಷಾತ್ ಧನ್ವಂತರಿ ಸ್ವಾಮೀ, ಸಾಕ್ಷಾತ್ ಧನ್ವಂತರಿ! ಎರಡಿಂಜೆಕ್ಷನ್ ಮಾತ್ರೆ, ಮಿಕ್ಸ್‌ಚರ್– ಕಾಯಿಲೆ ಅಂಥಾ ಭಯಂಕರ ಕಾಯಿಲೆ, 'ಫುಸ್' ಅಂತ ಗಾಳಿಗೇ ಹಾರಿಹೋಯಿತು ನೋಡಿ! ಇವರ ಸಮಾನ ನಿಮ್ಮ ಯಾವ ಎಫ್.ಆರ್.ಸಿ.ಯಸ್ಸೂ ಇಲ್ಲ, ಎಂ.ಡೀನೂ ಇಲ್ಲ! ಕೈಗುಣಾ ಅಂದ್ರೆ ಇದು."

ಹೀಗೆ ಪೇಟೆಯ ಪ್ರತಿಯೊಂದು ಅಂಗಡಿಯಲ್ಲಿಯೂ ಅರ್ಧರ್ಧ ಗಂಟೆ 'ಹರಿಕತೆ' ಮಾಡಬೇಕು ಈತ. "ಹೌದೇ? ಹಾಗೇನು..... ಡಾಕ್ಟ್ರು 'ಪಡಪ್ಪೋಶಿ' ಅಲ್ಲಅಂತ ನಂಬಿಕೆ ಇತ್ತು. ಆದ್ರೆ ಇಷ್ಟು 'ಹುಶಾರು' ಅಂತ ಗೊತ್ತಿರಲಿಲ್ಲ!– ಹ್ಞೂಂ." ಎಂದು ಅವರು ಉತ್ತರಿಸಬೇಕು. "ಛೇ! ಡಾಕ್ಟ್ರು ಅಂದ್ರೆ ಏನು ಕೇಳ್ತೀರಿ? ನಮ್ಮ ಡಾಕ್ಟ್ರು ಫಸ್ಟ್‌ಕ್ಲಾಸ್, ಫಸ್ಟ್ ಎ–ಒನ್. ಎಂದು ಇವನು ಮತ್ತೆ ತಾರೀಫ್ ಮಾಡಬೇಕು. "ಹೌದು ಹೌದು" ಎಂದು ಅವರು ತಲೆತೂಗಬೇಕು!

ಕೀರ್ತನಕಾರ ಮತ್ತು ಶ್ರೋತೃಗಳ ನಡುವಣ ಈ ಸಲ್ಲಾಪ, ಉಭಯ ಕುಶಲೋಪರಿ ಗಂಟೆಗಂಟೆಗಳ ಕಾಲ ನಾಲ್ಕಾರು ದಿನ ಸಾಗಿಯೇ ಸಾಗಿತು. ಅಷ್ಟರಲ್ಲಿ ಪ್ರಚಂಡ ಆರ್ಭಟೆಯಿಂದ ಮಳೆಗಾಲ ಪ್ರಾರಂಭವಾಯಿತು! ಹಗಲಿರುಳು ಭೇದವಿಲ್ಲದೆ ಸಿಡಿಲು, ಮಿಂಚು, ಬಿರುಗಾಳಿ, ಗುಡುಗುಗಳ ಹಿಮ್ಮೇಳದೊಂದಿಗೆ ಮುಂಗಾರಿನ ಮಳೆ ಧಾರಾಕಾರವಾಗಿ ಸುರಿಯಿತು! ಊರಿಗೆ ಊರೇ ನೀರಲ್ಲಿ ನೆನೆಯಿತು. ನಾಲ್ಕು ದಿನಗಳ ಕಾಲ ಸತತ ಮಳೆ ಸುರಿದೇ ಸುರಿಯಿತು. ಬಾವಿಗಳೆಲ್ಲ ತುಂಬಿಕೊಂಡವು; ಕೆರೆ ಕಟ್ಟೆಯೊಡೆದವು; ಹಳ್ಳಗಳು ಸೊಕ್ಕಿದವು; ತೊರೆಗಳು ಉಕ್ಕಿದವು. ಮುಸಲಧಾರೆಯ ಮಳೆಗೆ ರಸ್ತೆ ಕರಗಿಹೋಯಿತು; 'ಸಬ್‌ಮರ್ಜಿಬಲ್ ಬ್ರಿಜ್' ನೀರೊಳಗೆ 'ಮರ್ಜ್' ಆಯಿತು. 'ಎಪ್ರೋಚ್‌ರೋಡು' 'ಡಿಸೆಪ್ಪಿಯರ್' ಆಯಿತು– ಕೊನೆಗೊಮ್ಮೆ ಶೀಲನದಿಯ ಸೇತುವೆ ಕೂಡಾ ಕುಸಿದುಬಿಟ್ಟಿತು! ಇನ್ನೇನು ಹೇಳಬೇಕು! ನಮಗಿನ್ನು ಕನಿಷ್ಠ ಮೂರು ತಿಂಗಳ ಕಾಲ ದ್ವೀಪಾಂತರ ವಾಸವೇ ಸರಿ!

ಮೂರನೇ ದಿನ ನಸುಕಿನಿಂದ–

ಬಾಟಲಿ ಹಿಡಿದುಕೊಂಡು ಜನ ಬರತೊಡಗಿದರು. ಊರವರು, ಪರವೂರವರು, ದೂರದವರು, ಹತ್ತಿರದವರು, ನೆರೆಕರೆಯವರು, ಬೇರೆ ಗ್ರಾಮದವರು, ಕೆಳಬೈಲಿನವರು, ಮೇಲು ಮೂಲೆಯವರು, ಗುಡ್ಡದ ಆಚೆಯವರು, ನದಿಯ ಈಚೆಯವರು– ಒಟ್ಟಿನ ಮೇಲೆ ಸುತ್ತುಮುತ್ತಲ ಹತ್ತೆಂಟು ಮೈಲು ಫಾಸಲೆಯಲ್ಲಿ ಎಲ್ಲೆಲ್ಲಿ ಮನೆಗಳಿದ್ದಾವೆಂಯೋ ಅಲ್ಲಿಂದೆಲ್ಲ ಜನರು ಬರತೊಡಗಿದರು; ಮಕ್ಕಳನ್ನೆತ್ತಿಕೊಂಡು, ಹೆಂಗಸರನ್ನು ನಡೆಸಿಕೊಂಡು, ಮುದುಕರನ್ನು ಹೊತ್ತುಕೊಂಡು ಬಂದರು; ಕೈಯ್ಯಲ್ಲಿ ಬಾಟಲಿ ಹಿಡಿದುಕೊಂಡು ಬಂದರು. ಕಿಸೆಯಲ್ಲಿ ಸೀಸೆ ತುಂಬಿಸಿಕೊಂಡು ಬಂದರು. ಮುಂಜಾನೆ ನಸುಕು ಹರಿಯುವುದಕ್ಕೂ ಮುಂಚಿನಿಂದಲೇ ತೊಡಗಿದರೆ, ಮಧ್ಯಾಹ್ನವೂ ಬಿಡದೆ, ಸಂಜೆ ಹೊತ್ತು ಕಂತಿದ ಮೇಲೆ ಮಧ್ಯರಾತ್ರಿಯ ತನಕವೂ ಬಂದೇ ಬಂದರು! ಕೆಲವರು ಕೆಮ್ಮುತ್ತ, ಕೆಲವರು ಛಳಿನಡುಗುತ್ತ, ಕೆಲವರು ವಾಂತಿಮಾಡುತ್ತ ಬಂದರು! ಕೆಲವರಿಗೆ ತಲೆನೋವು; ಕೆಲವರಿಗೆ ಎದೆಬೇನೆ; ಕೆಲವರಿಗೆ ಸಂದು ಸಂದು ಸೆಳೆತ– ಜತೆಗೆ ಜ್ವರ. ಪ್ರತಿಯೊಬ್ಬರಿಗೂ ಜ್ವರ! ಜ್ವರ, ಜ್ವರ, ಜ್ವರ!... ಇಂಜೆಕ್ಷನ್, ಮಾತ್ರೆ, ಮಿಕ್ಸ್‌ಚರ್– ಪುರುಸೊತ್ತೇ ಇಲ್ಲ.... ಎಲ್ಲಿ ನೋಡಲಿ ರೋಗಿಗಳು; ಯಾರು ಕೇಳಿದರೂ ಔಷಧಿ!

ಏಕ್‌ದಂ ನಾನು ಸುಪ್ರಸಿದ್ಧ ಡಾಕ್ಟರಾಗಿ ಬಿಟ್ಟಿದ್ದೆ! ನಾಲ್ಕಾರು ವಾರಗಳಲ್ಲಿ, ಫ್ಲೂದಯದಿಂದ ಜೋರಾಗಿ, ಭರ್ಜರಿ ನಡೆಯಿತು ದಂಧೆ.

ಕೊನೆಗೊಂದು ದಿನ ನನಗೂ ಜ್ವರ ಬಂತು; ಫ್ಲೂವಿಗೆ ಯಾತರ ಕರುಣೆ?

"ಧರ್ಮಸ್ಥಳಕ್ಕೆ ಹಣ್ಣುಕಾಯಿ ಮಾಡಿಸುತ್ತೇನೆ ಅಂದರೆ ಬೇಡ ಅಂದು ಬಿಟ್ರಿ– ಅದಕ್ಕೇ ನಿಮಗೆ ಜ್ವರ ಬಂದದ್ದು. ಈಗಲಾದರೂ ಮಂಜುನಾಥ ಸ್ವಾಮಿಯ ಹೆಸರಿಗೆ 5 ಪಾವಲಿ 'ಮಣಿಯಾರ್ಡರ್' ಮಾಡಿಬಿಟ್ಟರೆ ಎಲ್ಲವೂ ಸರಿಹೋಗುತ್ತೆ" ಎಂದು ಮಣಿ ಸಲಹೆ ಇತ್ತ.

ಫ್ಲೂ ಸಂತ್ರಸ್ತರಿಗೆ ಇಂಜೆಕ್ಷನ್ ಚುಚ್ಚುವುದರಿಂದ ತೊಡಗಿ, ಇಂತಿಷ್ಟು ಹೊತ್ತಿಗೆ ಇಂಥಾ ಮಾತ್ರೆ ಇಷ್ಟು ಮಿಕ್ಸ್‌ಚರ್, ಇಟ್ಟು ನೀರು ಸೇರಿಸಿ ತಕ್ಕೊಳ್ಳಬೇಕು; ಹೀಗೆ ಪಥ್ಯದ ಸಾಬಕ್ಕಿ ಗಂಜಿ ತಯಾರಿಸಬೇಕು; ಹೀಗೆ ಮುಸುಂಬಿ ರಸಕ್ಕೆ ಗ್ಲೂಕೋಸ್ ಕಲಸಬೇಕು, ಕು, ಕು ಎಂದು ವಿವರಿಸಿ, ಸಮಜಾಯಿಸಿ, ಒಪ್ಪಿಸಿ, ಸೈ ಅನ್ನಿಸಿದ ಪ್ರವೀಣ ನಮ್ಮ ಕಂಪೌಂಡರ್ ಮಣಿ. ರೋಗಿಗಳಿಗೆ ಅವನೆಂದರೆ ಅಚ್ಚುಮೆಚ್ಚು; ನಂಬಿಕೆ; ವಿಶ್ವಾಸ; ಧೈರ್ಯ; ಅವನ ಮಾತು ವೇದವಾಕ್ಯ!

ಅವನ ಸಲಹೆಗಳೆಂದರೆ ವರಪ್ರಸಾದ.... ಎಲ್ಲೋ ಒಂದು ಬಾರಿ ನಾನೇ ಕೈಯಾರೆ ಔಷಧಿ ತೆಗೆದುಕೊಟ್ಟೆನೆಂದರೆ– ದುರ್ದಾನ ಹಿಡಿದ ಬಡಬ್ರಾಹ್ಮಣನಂತೆ ಹರಳೆಣ್ಣೆ ಕುಡಿದ ಮೋರೆ ಹಾಕಿಕೊಂಡು ಏನೋ ನೆವದಿಂದ ಒಳಕ್ಕೆ ಹೋಗಿ ಕಂಪೌಂಡರ ಮುಂದೆ ಆ ಔಷಧಿಗಳನ್ನಿಟ್ಟು, 'ಇದು ಈ ಔಷಧಿ– ಮಾತ್ರೆ ಎಲ್ಲ

ಡಾಕ್ಟ್ರೇ ಕೊಟ್ಟಿದ್ದು; ಆದ್ರೂ 'ಬರಾಬರಿ' ಉಂಟೋ ಅಂತ ಒಮ್ಮೆ ನೋಡು ಮಹಾರಾಯಾ! ಡಾಕ್ಟ್ರಿಗೆ ಬಹಳ 'ರಶ್'; ಅಷ್ಟು ಜನ ಪೇಶಂಟ್ಸ್ ಸುತ್ತುಗಟ್ಟಿ ಇರುವಾಗ- ಗಡಿಬಿಡಿಯಲ್ಲಿ ಏನಾದರೂ 'ಗಲ್ತಿ' ಆಗಿದೆಯೋ ಏನೋ- ಒಮ್ಮೆ ನೀನು ನೋಡಿದರೇನೇ (ನಮಗೆ ಸಮಾಧಾನ)- ಎಂದು ತೋರಿಸಿ. "ರೈಟ್. ರೈಟ್, ಎಲ್ಲ ಕರೆಕ್ಟೇ; ಸರಿಯಾಗಿದೆ" ಎಂಬುದಾಗಿ ಕಂಪೌಂಡರು ಸರ್ಟಿಫಿಕೇಟ್ ಕೊಟ್ಟ ನಂತರವೇ ಔಷಧಿಯ 'ಬಿಲ್' ಪಾವತಿ ಮಾಡುವಷ್ಟು ಮಟ್ಟಿಗೆ ರೋಗಿಗಳ ವಿಶ್ವಾಸಗಳಿಸಿ "ಎಕ್ಸ್‌ಪರ್ಟ್" ಆಗಿರುವ ಕಂಪೌಂಡರನ ಹಿತೋಪದೇಶವನ್ನು ಏಕಾಏಕಿ ಹ್ಯಾಗೆ ತೆಗೆದು ಹಾಕಲಿ?

ಆದರೂ, ನೋಡೋಣ ಅಂತ ಒಂದು ರಾಮಬಾಣ ಎಸೆದೆ! "ಮತ್ತೆ ನಿನಗೆ ಹ್ಯಾಗೆ ಬಂತು ಫ್ಲೂ? ಅದ್ರಲ್ಲೂ ನೀನು ಧರ್ಮಸ್ಥಳಕ್ಕೆ ಯಾತ್ರೆ ಹೋಗಿ ಹಿಂದಿರುಗುವಾಗ ದಾರಿಯಲ್ಲೇ ಶುರುವಾಯಿತಲ್ಲಾ?"

ಕಣ್ಣು ಮಿಟುಕಿಸಿದ ಮಣಿ.

"ಅದೊಂದು ಗುಟ್ಟು ಸಾರ್. ಸ್ವತಃ ನೀವು ಬಾಯಿಬಿಟ್ಟು ಕೇಳಿದ್ದೀರಿ ಅಂತ ಮಾತ್ರ ಹೇಳುತ್ತಿದ್ದೇನೆ- ಇಲ್ಲಾಂದ್ರೆ ಯಾರ ಮುಂದೂ ಬಾಯಿ ಬಿಡುತ್ತಿರಲಿಲ್ಲ- ದೇವರಾಣೆಗೂ ಇದುವರೆಗೆ ಹೇಳಿಲ್ಲ; ಇನ್ನು ಮುಂದೆಯೂ ಹೇಳುವುದಿಲ್ಲ...... ನಾನು ಹೋದದ್ದು ಧರ್ಮಸ್ಥಳಕ್ಕೂ ಅಲ್ಲ- ಮಣ್ಣೂ ಅಲ್ಲ. ಮಣಿಪಾಲದಲ್ಲಿ "ಫ್ಲೂ ರಿಸರ್ಚ್" ಮಾಡ್ತಾ ಇದ್ದಾರಲ್ಲ- ಅಮೇರಿಕದ ಡಾಕ್ಟರುಗಳು ಬಂದು; ಅವರ ಹತ್ರ ಹೋಗಿ ಸುಳ್ಳು ಹೆಸರು, ಅಡ್ರೆಸ್ ಕೊಟ್ಟು ಜ್ವರದ ಅಣು ನುಂಗಿ 'ಇನ್‌ಕಿಬೇಟ್' ಮಾಡಿಸಿಕೊಂಡೆ. ಜ್ವರ ಶುರುವಾಗುತ್ಲೂ- ಅವರ ಕಣ್ಣು ತಪ್ಪಿಸಿ ಗಾಡಿಬಿಟ್ಟೆ ಅಲ್ಲಿಂದ! ಬಸ್‌ಹತ್ತಿ ಸೀದಾ ಇಲ್ಲಿಗೆ ಬಂದೆ.... ಮುಂದಿನದೆಲ್ಲಾ ನಿಮಗೆ ಗೊತ್ತೇ ಇದೆ- ಜನರಿಗೆ ಅದ್ಭುತ ಕಣ್ಣಿಗೆ ಕಂಡಿತು; ನಿಮ್ಮ ಚಿಕಿತ್ಸೆಯಿಂದ ನನಗೆ ಗುಣವಾಗಿ, ಫ್ಲೂ ಊರು ತುಂಬ ಹಬ್ಬಿತು ! ನಿಜ ಸಾರ್- ಮಂಜುನಾಥನ ಆಣೆಗೂ ಇದು ನಿಜ ಸಾರ್" ಎಂದ.

ಈಗ ನಿಜವಾಗಿ ಮೈ ಬೆವರಿತು ನನಗೆ!

